# ವಿದ್ವಜ್ಜೀವಿತ



…ಂಕಟಸುಬ್ಬಯ್ಯ ಗೌರವಗ್ರಂಥ

ಸಂಪಾದಕ : ಡಾ. ಪಾದೇಕಲ್ಲು ವಿಷ್ಣು ಭಟ್ಟ

# ವಿದ್ವಜ್ಜೀವಿತ

[ಪ್ರೊ. ಜಿ. ವೆಂಕಟಸುಬ್ಬಯ್ಯ ಗೌರವಗ್ರಂಥ]



ಸಂಪಾದಕ

ಡಾ. ಪಾದೇಕಲ್ಲು ವಿಷ್ಣು ಭಟ್ಟ




ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ

ಎಂಜಿಎಂ ಕಾಲೇಜು, ಉಡುಪಿ – 576 102

ವಿದ್ವಜ್ಜೀವಿತ – ಪ್ರೊ. ಜಿ. ವೆಂಕಟಸುಬ್ಬಯ್ಯ ಗೌರವಗ್ರಂಥ, ಸಂಪಾದಕ : ಡಾ. ಪಾದೇಕಲ್ಲು ವಿಷ್ಣು ಭಟ್ಟ, 'ಧಾತ್ರಿ', ಆತ್ರಾಡಿ – 576107 (ದೂ. 0820–2544536); ಪ್ರಕಾಶಕರು : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ ಕಾಲೇಜು, ಉಡುಪಿ – 576102 (ದೂ. 0820 – 2521159)

ಪ್ರಥಮ ಪ್ರಕಾಶನ: ಫೆಬ್ರವರಿ 2011 ಪುಟ : 18 + ೩೫೪

Vidvajjeevitha – A collection of articles, Prof. G. Venkatasubbaiah Felicitation Volume, Editor : Dr. Padekallu Vishnu Bhat, Dhathri, Athradi, Udupi – 576107 (Ph: 0820-2544536); Pub: Rashtrakavi Govind Pai Samshodhana Kendra, MGM College, Udupi – 576102, Karnataka (ph: 0820 – 2521159)

First Impression Feb 2011

**Price : ₹ 210=00** (Rupees Two hundred and ten only)

**ISBN 81–86668–69–1**



**ಸಾಹಿತ್ಯ ಸಲಹಾ ಸಮಿತಿ**

**ಡಾ. ಪಾದೇಕಲ್ಲು ವಿಷ್ಣು ಭಟ್ಟ**
**ಡಾ. ಮಹಾಬಲೇಶ್ವರ ರಾವ್**
**ಡಾ. ಎನ್. ತಿರುಮಲೇಶ್ವರ ಭಟ್**
**ಪ್ರೊ. ಮುರಳೀಧರ ಉಪಾಧ್ಯ, ಹಿರಿಯಡಕ**
**ಪ್ರೊ. ಹೆರಂಜೆ ಕೃಷ್ಣ ಭಟ್ಟ**



ಮುಖಪುಟಚಿತ್ರ : ಎಚ್. ಕೃಷ್ಣ ಭಟ್

ವಿನ್ಯಾಸ : ಡಾ. ಬಾ. ನಾ. ಶಾಂತಪ್ರಿಯ

ಅಕ್ಷರವಿನ್ಯಾಸ : ಸವಿತಾಶಾಂತಪ್ರಿಯ, ಉಡುಪಿ

ಮುದ್ರಣ : ವಿಶ್ವಾಸ್ ಪ್ರಿಂಟ್ಸ್, ಚಾಮರಾಜಪೇಟೆ, ಬೆಂಗಳೂರು – 560018



# ಪ್ರಕಾಶಕರ ಮಾತು

ರಾಷ್ಟ್ರಕವಿ ಗೋವಿಂದ ಪೈ ಅವರ ಹೆಸರಿನಲ್ಲಿರುವ ನಮ್ಮ ಸಂಶೋಧನ ಕೇಂದ್ರವು ಕನ್ನಡ ಭಾಷೆ - ಸಂಸ್ಕೃತಿ, ತುಳು ಭಾಷೆ - ಸಂಸ್ಕೃತಿ ಮತ್ತು ತತ್ಸಂಬಂಧೀ ವಿಷಯಗಳ ಸಂಶೋಧನೆ ಹಾಗೂ ಜ್ಞಾನಪ್ರಸಾರದ ಕೆಲಸವನ್ನು ಬಹಳ ವರ್ಷಗಳಿಂದ ಮಾಡಿಕೊಂಡು ಬಂದಿದ್ದು ಈ ಸಂಬಂಧವಾಗಿ ಹಲವಾರು ಗ್ರಂಥಗಳನ್ನು ಈಗಾಗಲೇ ಪ್ರಕಟಿಸಿದೆ. ಆ ಸಾಲಿನಲ್ಲಿ ಇದೊಂದು ಗೌರವಗ್ರಂಥ ಇದೀಗ ಸೇರ್ಪಡೆಗೊಂಡಿದೆ. ಇದು ಗೌರವಗ್ರಂಥವಾದರೂ ಇದರೊಳಗಿನ ಲೇಖನಗಳು ವಿಮರ್ಶೆ, ಸಂಶೋಧನೆ, ನಿಘಂಟುರಚನೆ, ಗ್ರಂಥಸಂಪಾದನೆ ಇತ್ಯಾದಿ ವಿದ್ವತ್ಕಾರ್ಯಗಳನ್ನೇ ಅಧಿಕರಿಸಿವೆಯೆಂಬುದನ್ನು ಗಮನಿಸಬೇಕು. ಇದರೊಳಗೆ ಯಾವುದೇ ವ್ಯಕ್ತಿಪೂಜೆ, ಹೊಗಳಿಕೆ ಇತ್ಯಾದಿಗಳಿಲ್ಲದೆ ಸಾಹಿತ್ಯ-ಸಂಶೋಧನ-ಸಂಸ್ಕೃತಿಯ ವಿಷಯಗಳೇ ಇರುವಂತೆ ಯೋಜಿಸಲಾಗಿದೆ. ಈ ಗೌರವಗ್ರಂಥವು ಕನ್ನಡದ ವಿದ್ವಾಂಸರ ಸಾಲಿನಲ್ಲಿ ಸರ್ವವೃದ್ಧರೆಂದು ಗೌರವಿಸಬಹುದಾದ ಹಿರಿಯರ ಹೆಸರಿನಲ್ಲಿದೆಯೆಂಬುದು ನಮ್ಮ ಸಂಶೋಧನ ಕೇಂದ್ರಕ್ಕೂ ನಮ್ಮ ಪರಿಸರಕ್ಕೂ ಹೆಮ್ಮೆಯ ವಿಷಯವಾಗಿದೆಯೆಂಬುದನ್ನು ಮೊದಲಾಗಿ ನಿರೂಪಿಸಬೇಕಿದೆ.

ಕನ್ನಡದ ಹಿರಿಯ ವಿದ್ವಾಂಸ, ನಿಘಂಟುಕಾರ, ಪ್ರಾಧ್ಯಾಪಕ, ಪ್ರೊ. ಜಿ. ವೆಂಕಟಸುಬ್ಬಯ್ಯನವರನ್ನು 2010ನೇ ಇಸವಿಯ ದಶಂಬರದಲ್ಲಿ ನಡೆಯುವ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಮಂಡಲಿಯು ಸರ್ವಾನುಮತದಿಂದ ಆಯ್ಕೆ ಮಾಡಿದೆ ಎಂಬ ವಾರ್ತೆಯು ಪತ್ರಿಕೆಗಳಲ್ಲೂ ಇತರ ಮಾಧ್ಯಮಗಳಲ್ಲೂ ಬಂದಾಗ ಕರ್ನಾಟಕದ ಸಾಹಿತ್ಯಾಸಕ್ತರಾದ ಮಹನೀಯರು ಸಹಜವಾಗಿಯೇ ಸಂತೋಷಗೊಂಡರು. ಏಕೆಂದರೆ, ಕಳೆದ ಹಲವಾರು ವರ್ಷಗಳಿಂದ ಈ ಹಿರಿಮೆಯ ಸ್ಥಾನಕ್ಕೆ ಅವರ ಹೆಸರು ಸೂಚಿತವಾಗುತ್ತಲೇ ಬಂದಿದ್ದರೂ ಅನ್ಯಾನ್ಯ ಕಾರಣಗಳಿಂದ ಹಿಂದಕ್ಕೆ ಸರಿಯುತ್ತಿತ್ತು. ಎಷ್ಟೋ ವರ್ಷಗಳ ಹಿಂದೆಯೇ ಅವರು ಈ ಗೌರವವನ್ನು ಪಡೆಯಬೇಕಾಗಿದ್ದರೂ ಅವರು ಎಂದೂ ಅದನ್ನು ನಿರೀಕ್ಷಿಸಿದವರಾಗಲೀ ಬಯಸಿದವರಾಗಲೀ ಅಲ್ಲವೇ ಅಲ್ಲ. ಅವರಿಗಿಂತ ವಯಸ್ಸಿನಲ್ಲಿ ಕಿರಿಯರಾದ ಹಲವರು ಸಾಹಿತಿಗಳು ಸಮ್ಮೇಳನಾಧ್ಯಕ್ಷತೆಯ ಗೌರವವನ್ನು ಪಡೆದ ಅನಂತರ ಈ ಮಾಗಿದ ವಯಸ್ಸಿನಲ್ಲಿ ವೆಂಕಟಸುಬ್ಬಯ್ಯನವರು ಅದನ್ನು ಸ್ವೀಕರಿಸಲು ಒಪ್ಪಿಕೊಂಡಿರುವುದು ನಿಜವಾಗಿ ಅವರ ವ್ಯಕ್ತಿತ್ವದ ಹಿರಿಮೆ.

ಕಿರಿಯರಾದವರಿಗೆ ಜ್ಞಾನಪೀಠ ಪ್ರಶಸ್ತಿ ಮೊದಮೊದಲು ಬಂದು ಕೆಲವು ವರ್ಷಗಳ ಅನಂತರ ಹಿರಿಯರಾದ ಮಾಸ್ತಿಯವರಿಗೆ ಆ ಪ್ರಶಸ್ತಿನೀಡಿಕೆಯ ವಿಷಯ ಪ್ರಕಟವಾದಾಗ ಅವರಿಗೆ ಏನೆನ್ನಿಸುವುದೆಂಬ ಕುರಿತು ಪತ್ರಿಕಾಕರ್ತರು ಪ್ರಶ್ನಿಸಿದರಂತೆ. ಅದಕ್ಕೆ ಮಾಸ್ತಿಯವರು "ಮನೆಯೊಳಗಿನ ಕಿರಿಯರಿಗೆಲ್ಲ ಸಿಹಿತಿಂಡಿಯನ್ನು ಹಂಚಿದ ಮೇಲೆ ಹಿರಿಯರು ಸ್ವೀಕರಿಸುವುದು ಪದ್ಧತಿ. ಅದರಲ್ಲಿಯೇ ಅವರಿಗೆ ನಿಜವಾದ

ಸಂತೋಷ ಸಮಾಧಾನಗಳಿವೆ. ನಿಜವಾಗಿ ತಾವು ಸಿಹಿತಿಂಡಿಯನ್ನು ಸ್ವೀಕರಿಸು- ವುದಕ್ಕಿಂತಲೂ ಹೆಚ್ಚು ಸಂತೋಷವು ಎಳೆಯರು ಅದನ್ನು ಸ್ವೀಕರಿಸಿ ಸಂತೋಷ- ಪಟ್ಟಾಗ ಉಂಟಾಗುತ್ತದೆ" ಎಂಬರ್ಥದ ಮಾತನ್ನು ಹೇಳಿದ್ದರಂತೆ. ಪ್ರಾಯಶಃ ಪ್ರಸ್ತುತ ೯೮ರ ಹರೆಯದಲ್ಲಿರುವ ಮಾಗಿದ ಮನಸ್ಸಿನ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಇಂತಹದೇ ಮಾತನ್ನು ಹೃತ್ಪೂರ್ವಕವಾಗಿ ಹೇಳುವರೆಂಬುದರಲ್ಲಿ ಸಂದೇಹವಿಲ್ಲ. ಪ್ರಾಯಶಃ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ ಅತ್ಯಂತ ಹಿರಿಯರಾದ ಸಾಹಿತಿಯೆಂದು ನಾವು ವೆಂಕಟಸುಬ್ಬಯ್ಯನವರನ್ನು ಪರಿಗಣಿಸಬಹುದಾಗಿದೆ. 2010ರ ದಶಂಬರದಲ್ಲಿ ನಡೆಯಲು ಉದ್ದೇಶಿಸಿದ ಸಾಹಿತ್ಯಸಮ್ಮೇಳನ ಕಾರಣಾಂತರಗಳಿಂದ ಮುಂದೂಡಲ್ಪಟ್ಟು ಇದೀಗ 2011ರ ಫೆಬ್ರವರಿಯಲ್ಲಿ ನಡೆಯುವುದೆಂದು ನಿಶ್ಚಿತವಾಗಿದೆ.

ಪ್ರೊ. ವೆಂಕಟಸುಬ್ಬಯ್ಯನವರು ಅವರ ತಾರುಣ್ಯದ ಕಾಲದಿಂದಲೂ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಸಂಪರ್ಕವನ್ನಿರಿಸಿಕೊಂಡವರು. ಅದರ ಕಾರ್ಯದರ್ಶಿ- ಗಳಾಗಿ ಕೆಲವು ಕಾಲ, ಅಧ್ಯಕ್ಷರಾಗಿ ಕೆಲವು ಕಾಲ ದುಡಿದ ಅನುಭವ ಅವರದು. ಎಲ್ಲದಕ್ಕಿಂತ ಹೆಚ್ಚಾಗಿ, ಕನ್ನಡ ಸಾಹಿತ್ಯ ಪರಿಷತ್ತು ಕೈಗೊಂಡ – ನಮ್ಮ ಕನ್ನಡ ಭಾಷೆಯ ದೃಷ್ಟಿಯಿಂದ ಅತ್ಯಂತ ಮುಖ್ಯವಾದ – ನಿಘಂಟುಯೋಜನೆಯಲ್ಲಿ ಅವರು ತಮ್ಮನ್ನು ತಾವು ತೊಡಗಿಸಿಕೊಂಡು ಮಾಡಿದ ಭಾಷಾಕೈಂಕರ್ಯ ಸರ್ವಜನಾ- ದರಣೀಯವಾದುದು. ಕನ್ನಡ ನಿಘಂಟುಯೋಜನೆ ಮತ್ತು ಪ್ರೊ. ಜಿ. ವೆಂಕಟಸುಬ್ಬಯ್ಯ – ಇವೆರಡು ಅಭಿನ್ನವಲ್ಲವೆಂಬಂತೆ ಇಂದು ಕನ್ನಡಿಗನಿಗೆ ತೋರುತ್ತಿದೆ. ಅವರ ಈ ವಿಶಿಷ್ಟವಾದ ಭಾಷಾಸೇವೆ ಚಿರಸ್ಥಾಯಿಯಾಗಿ ಗುರುತಿಸಲ್ಪಡುವಂತಹದೆಂಬುದರಲ್ಲಿ ಸಂದೇಹವಿಲ್ಲ. ಇಂತಹ ಹಿರಿಯರಿಗೆ ಒಂದು ವಿಶಿಷ್ಟವಾದ ಮಾನ್ಯತೆ ಬಂದಾಗ ಅವರನ್ನು ನಮ್ಮ ಮಿತಿಯೊಳಗೆ ಗೌರವಿಸುವ ಅಭಿಪ್ರಾಯದಿಂದ ಮೂಡಿದ ಕೃತಿ ಈ **ವಿದ್ವಜ್ಜೀವಿತ** ಎಂಬ ಗೌರವಗ್ರಂಥ.

ಪ್ರೊ. ವೆಂಕಟಸುಬ್ಬಯ್ಯನವರಿಗೆ ಅಧ್ಯಕ್ಷತೆಯ ಗೌರವ ಪ್ರಕಟವಾದ ಕೂಡಲೆ ನಮ್ಮ ಸಂಶೋಧನ ಕೇಂದ್ರದಲ್ಲಿ ನಾವು ಕೆಲವರು ಸಮಾಲೋಚಿಸಿ ಈ ಗ್ರಂಥದ ಕಲ್ಪನೆಯನ್ನು ಮಾಡಿಕೊಳ್ಳಲಾಯಿತು. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ- ಕೇಂದ್ರಕ್ಕೂ ವೆಂಕಟಸುಬ್ಬಯ್ಯನವರಿಗೂ ನಿಕಟವಾದ ಸಂಬಂಧವಿದೆ. ನಮ್ಮ ಕೇಂದ್ರದಲ್ಲಿ ತುಳುನಿಘಂಟು ಯೋಜನೆಯೆಂಬ ದೊಡ್ಡ ಮಟ್ಟದ ಭಾಷಾಸಾಹಸ ನಡೆದಿತ್ತು. ಆ ಸಂದರ್ಭದಲ್ಲಿ ಅವರ ಅನುಭವ ಮತ್ತು ನಿಘಂಟು ವಿಷಯದಲ್ಲಿ ತರಬೇತಿ ನೀಡುವ ಪರಿಣತಿಯನ್ನು ನಮ್ಮಲ್ಲಿ ಸದುಪಯೋಗಪಡಿಸಿಕೊಳ್ಳಲಾಗಿದೆ. ನಮ್ಮ ಕೇಂದ್ರದೊಂದಿಗೆ ಎಷ್ಟೋ ಕಾಲದಿಂದ ಅವರ ಹಾರ್ದಿಕ ಸಂಬಂಧ ನಡೆದುಬಂದಿದೆ. ನಮ್ಮಲ್ಲಿ ಸ್ಥಾಪಿತವಾದ ಸೇಡಿಯಾಪು ಕೃಷ್ಣ ಭಟ್ಟರ ಹೆಸರಿನ ದತ್ತಿನಿಧಿಯಿಂದ ಅವರಿಗೆ 'ಸೇಡಿಯಾಪು ಪ್ರಶಸ್ತಿ'ಯನ್ನು 1999ರಲ್ಲಿ ನೀಡಿ ಗೌರವಿಸಲಾಗಿದೆ. ಅಲ್ಲದೆ 2010ರಲ್ಲಿ ಪ್ರೊ. ಟಿ. ಕೇಶವ ಭಟ್ಟರ ಹೆಸರಿನ ಪ್ರಶಸ್ತಿಯನ್ನೂ ಅವರಿಗೆ ನೀಡಿ ಗೌರವಿಸಲಾಗಿದೆ. ಮೊದಲ ಪ್ರಶಸ್ತಿಯನ್ನು

ಸ್ವೀಕರಿಸಲು 1999ರಲ್ಲಿ ಅವರು ಉಡುಪಿಗೆ ಆಗಮಿಸಿ ನಮ್ಮನ್ನು ಸಂತೋಷ ಪಡಿಸಿದ್ದರು. ಹನ್ನೊಂದು ವರ್ಷಗಳ ಅನಂತರ ಮುಪ್ಪಿನಲ್ಲಿ ಅವರು ದೂರಪ್ರಯಾಣ-ವನ್ನು ಕೈಬಿಟ್ಟುದರಿಂದ ಬೆಂಗಳೂರಿನ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಭವನ-ದಲ್ಲಿ ಕಾರ್ಯಕ್ರಮವನ್ನು ಏರ್ಪಡಿಸಿ ಈ ಗೌರವವನ್ನು ಅವರಿಗೆ ನೀಡಲಾಯಿತು. ಹೀಗೆ ನಮ್ಮ ಕೇಂದ್ರದ ಪ್ರಶಸ್ತಿಗಳನ್ನು ಸ್ವೀಕರಿಸಿದ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಆ ಕೃತಜ್ಞತೆಯ ಮೂರ್ತ ರೂಪವೇ ಈ ಗೌರವಗ್ರಂಥ.

ನಮ್ಮ ಸಂಶೋಧನ ಕೇಂದ್ರ ಮಾತ್ರವಲ್ಲದೆ ಕನ್ನಡ ಕರಾವಳಿಯ ವಿವಿಧ ಸಂಘಸಂಸ್ಥೆಗಳೊಡನೆ, ವಿದ್ವಾಂಸರೊಡನೆ, ಹಿರಿಯರೊಡನೆ ಪ್ರೊ. ವೆಂಕಟಸುಬ್ಬಯ್ಯ ಅವರಿಗೆ ಘನಿಷ್ಠವಾದ ಸಂಬಂಧವಿದೆ. ಈ ಕಾರಣದಿಂದ ದಕ್ಷಿಣ ಕನ್ನಡ, ಉಡುಪಿ ಮತ್ತು ಕಾಸರಗೋಡು ಜಿಲ್ಲೆಯ ವಿದ್ವಾಂಸರಿಂದ ಲೇಖನಗಳನ್ನು ಪಡೆದುಕೊಂಡು ಈ ಗೌರವಗ್ರಂಥವನ್ನು ಸಿದ್ಧಪಡಿಸಬೇಕೆಂದು ಚಿಂತಿಸಲಾಯಿತು. ಈ ಗೌರವಗ್ರಂಥದಲ್ಲಿ ಪ್ರೊ. ವೆಂಕಟಸುಬ್ಬಯ್ಯನವರ ಎಲ್ಲ ಕೃತಿಗಳ ಪರಿಚಯ ಮತ್ತು ವಿಸ್ತೃತವಾದ ಸಂದರ್ಶನ ಇರಬೇಕೆಂದು ಯೋಜಿಸಲಾಯಿತು. ಮತ್ತು ಈ ಪುಸ್ತಕ ಪ್ರಕಾಶನದ ಕುರಿತು ಸಂಶೋಧನ ಕೇಂದ್ರದ ಕಾರ್ಯಕಾರಿ ಮಂಡಳಿಯ ಅನುಮತಿಯನ್ನು ಪಡೆಯಲಾಯಿತು. ಹೃತ್ಪೂರ್ವಕ ಅನುಮತಿಯನ್ನಿತ್ತ ಕಾರ್ಯಕಾರಿ ಮಂಡಳಿಯ ಅಧ್ಯಕ್ಷ ಶ್ರೀ ಟಿ. ಮೋಹನದಾಸ ಪೈ ಅವರಿಗೆ ವಂದನೆಗಳು.

ಮೂರು ಜಿಲ್ಲೆಗಳ ಮುಖ್ಯ ಲೇಖಕರನ್ನು ಸಂಪರ್ಕಿಸಿ ವೆಂಕಟಸುಬ್ಬಯ್ಯನವರ ಕೃತಿಗಳ ಕುರಿತು ಸವಿಮರ್ಶ ಪರಿಚಯಲೇಖನಗಳನ್ನು ಪಡೆದು ಸಂಕಲಿಸಿ ಸಂಪಾದಿಸುವ ಹೊಣೆಯನ್ನು ನಮ್ಮ ಸಂಶೋಧನ ಕೇಂದ್ರದ ಕಾರ್ಯಕಾರಿ ಮಂಡಳಿಯ ಸದಸ್ಯರೂ ಹಿರಿಯಡಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರೂ ಈ ರೀತಿಯ ಸಂಪಾದನಕಾರ್ಯದಲ್ಲಿ ಸಾಕಷ್ಟು ಪೂರ್ವಾನುಭವ-ವುಳ್ಳವರೂ ಆದ ಡಾ. ಪಾದೇಕಲ್ಲು ವಿಷ್ಣು ಭಟ್ಟರಿಗೆ ವಹಿಸಿಕೊಡಲಾಯಿತು.

ಈ ರೀತಿಯಲ್ಲಿ ಪುಸ್ತಕವೊಂದನ್ನು ಸಿದ್ಧಪಡಿಸುವ ವಿಷಯವನ್ನು ಬೆಂಗಳೂರಿಗೆ ಹೋಗಿ ವೆಂಕಟಸುಬ್ಬಯ್ಯ ಅವರನ್ನು ಭೇಟಿ ಮಾಡಿ, ಅವರಿಗೆ ವಿಷಯ ತಿಳಿಸಿ ಅವರ ಅನುಮತಿಯನ್ನು ಪಡೆಯುವ ಕೆಲಸವನ್ನು ಸಂಶೋಧನಕೇಂದ್ರದ ನಿರ್ದೇಶಕನ ನೆಲೆಯಲ್ಲಿ ನಾನು ನಿರ್ವಹಿಸಬೇಕಾಯಿತು. ಈ ವಿಷಯವನ್ನು ತಿಳಿಸಿದಾಗ ಅವರಿಗೆ ತುಂಬ ಸಂತೋಷವಾಯಿತು ಮತ್ತು ಪ್ರೋತ್ಸಾಹದ ಮಾತುಗಳನ್ನು ಆಡಿ ನಮ್ಮನ್ನು ಹುರಿದುಂಬಿಸಿದರು. ಶತಮಾನದ ಅಂಚಿನಲ್ಲಿರುವ ಅವರು ಈ ರೀತಿ ಉತ್ಸಾಹದಿಂದ ಇರುವುದನ್ನು ನೋಡಿ ಈ ಕೆಲಸವನ್ನು ಮಾಡಲು ನಮಗೆ ಇನ್ನಷ್ಟು ಹುರುಪು ಉಂಟಾಯಿತು. ನಮ್ಮ ಕಡೆಯಲ್ಲಿ ಅಲಭ್ಯವಾದ ಅವರ ಕೆಲವು ಪ್ರಕಟನೆಗಳನ್ನು ಅವರಿಂದಲೇ ಪಡೆದುಕೊಂಡು ಅವರ ವಿಸ್ತೃತ ಸಂದರ್ಶನಕ್ಕಾಗಿ ದಿನನಿರ್ಣಯ ಮಾಡಿಕೊಂಡು ಹಿಂದಿರುಗಿದೆ.

ದಿನಾಂಕ 8-12-2010ರಂದು ಅವರ ಸಂದರ್ಶನಕ್ಕಾಗಿ ಅವರೇ ದಿನನಿಗದಿ ಮಾಡಿಕೊಟ್ಟಾಗ ಸಂತೋಷದಿಂದಲೇ ಆ ಸಂದರ್ಶನವನ್ನು ಪೂರೈಸಿಕೊಂಡು

ಬಂದೆವು. ಸಂದರ್ಶನದ ಅನಂತರ ಹಲವು ವಿಷಯಗಳನ್ನು ದೂರವಾಣಿ ಮೂಲಕವೂ ಅವರು ಹೇಳಿದ್ದು ಅವೆಲ್ಲವನ್ನು ಸಂದರ್ಶನಲೇಖನದಲ್ಲಿ ಸಂಪಾದಕರು ನಿರೂಪಿಸಿ ಸಂದರ್ಶನದ ಪೂರ್ಣಪಾಠವನ್ನು ಅವರಿಗೆ ಕಳುಹಿಸಿಕೊಟ್ಟು ಅದಕ್ಕೆ ಅವರ ಒಪ್ಪಿಗೆಯನ್ನು ಪಡೆದಿರುತ್ತಾರೆ. ಆ ವಿಸ್ತೃತ ಸಂದರ್ಶನ ಈ ಗ್ರಂಥದ ಒಂದು ಮುಖ್ಯ ಭಾಗವಾಗಿದೆಯೆಂದು ನಾನು ತಿಳಿಯುತ್ತೇನೆ. ಸಂದರ್ಶನವನ್ನು ದಾಖಲು ಮಾಡಿದ ಡಾ. ತಿರುಮಲೇಶ್ವರ ಭಟ್ಟ, ಸಲಹಾ ಸಮಿತಿಯ ಸದಸ್ಯರು ಇವರಿಗೆ ನಾವು ಅಭಾರಿಗಳು.

ಈ ಗೌರವಗ್ರಂಥವು ಈ ಹಿರಿಯ ಮಹನೀಯರಿಗೆ ಕರಾವಳಿ ಕರ್ನಾಟಕದ ಸಾಹಿತ್ಯಾಸಕ್ತ ಕನ್ನಡಿಗರ ಕಾಣಿಕೆ. ಈ ಸಂಪುಟವನ್ನು ಸಿದ್ಧಪಡಿಸುವಲ್ಲಿ ಲೇಖನ ಸಹಕಾರವನ್ನು ನೀಡಿದ ಎಲ್ಲ ವಿದ್ವದ್ಬಂಧುಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ಕೃತಿಯನ್ನು ಸಂಪಾದಿಸಿ ಇದಕ್ಕೆ ಸೊಗಸಾದ ಸ್ವರೂಪವನ್ನು ನೀಡಿದ ಮಿತ್ರರಾದ ಡಾ. ಪಾದೇಕಲ್ಲು ವಿಷ್ಣು ಭಟ್ಟರಿಗೆ ಕೃತಜ್ಞತೆಗಳನ್ನು ಹೇಳಲೇಬೇಕಾಗಿದೆ. ಸಂಶೋಧನ ಕೇಂದ್ರದ ಎಲ್ಲ ಚಟುವಟಿಕೆಗಳಲ್ಲೂ ಅವರ ಸಹಕಾರ ಇದ್ದೇ ಇರುವುದನ್ನು ಇಲ್ಲಿ ಹೇಳಲು ಸಂತೋಷವೆನಿಸುತ್ತದೆ. ಕೃತಿಯ ಅಕ್ಷರಸಂಯೋಜನೆ ಮಾಡಿದ ಶ್ರೀಮತಿ ಸವಿತಾ ಶಾಂತಪ್ರಿಯ ಇವರಿಗೆ ಮತ್ತು ಕೃತಿಯನ್ನು ಅಂದವಾಗಿ ಮುದ್ರಿಸಿದ ಭಾರತ್ ಪ್ರೆಸ್, ಉಡುಪಿ ಇವರಿಗೆ ವಂದನೆಗಳು.

– ಪ್ರೊ. ಹೆರಂಜೆ ಕೃಷ್ಣ ಭಟ್ಟ

# ವಿಷಯಾನುಕ್ರಮ



* * * * *



# ಪ್ರಸ್ತಾವನೆ

ಕರ್ನಾಟಕದ ಹಿರಿಯ ವಿದ್ವಾಂಸರೂ ನಿಘಂಟುಕಾರರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ ಬೆಂಗಳೂರಿನಲ್ಲಿ ನಡೆಯಲಿರುವ ಎಪ್ಪತ್ತೇಳನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದ ಗೌರವವನ್ನು ನೀಡುವುದೆಂಬ ನಿರ್ಣಯವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಮಂಡಳಿಯು ಅವಿರೋಧವಾಗಿ ತೆಗೆದುಕೊಂಡು ಅವರು ಮಾಡಿದ ಕನ್ನಡಭಾಷಾಸೇವೆಯನ್ನು ಪುರಸ್ಕರಿಸುತ್ತದೆಂಬ ವಾರ್ತೆ ಮಾಧ್ಯಮಗಳಲ್ಲಿ ಪ್ರಕಟಗೊಂಡಾಗ ಕನ್ನಡ ನಾಡಿನ ಸಾವಿರಾರು ಸಾಹಿತ್ಯಾಸಕ್ತ-ಭಾಷಾಧ್ಯಯನಾಸಕ್ತ ಮಹನೀಯರು ಸಂತೋಷಗೊಂಡಿದ್ದರು. 'ಎಂದೋ ಅವರಿಗೆ ಸಲ್ಲಬೇಕಾಗಿದ್ದ ಗೌರವ ಈಗಲಾದರೂ ಸಂದಿತಲ್ಲ' ಎಂದು ಸಮಾಧಾನಪಟ್ಟರು. ಹಾಗೆ ಸಂತೋಷಪಟ್ಟ ಕನ್ನಡಿಗರಲ್ಲಿ ನಾನೂ ಒಬ್ಬ. ಆದರೆ ಅದೇ ಸಂದರ್ಭದಲ್ಲಿ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರದಿಂದ ಅವರಿಗೊಂದು ಗೌರವಗ್ರಂಥವನ್ನು ಸಿದ್ಧಪಡಿಸಿ ಸಮರ್ಪಿಸುವುದೆಂದೂ ಕರಾವಳಿಯ ಸಾಹಿತ್ಯಾಸಕ್ತರ ಪರವಾಗಿ ಈ ಕೆಲಸ ನಡೆಯಬೇಕೆಂದೂ ನಿಶ್ಚಯಿಸಲ್ಪಟ್ಟು ಆ ಕೃತಿಸಂಪಾದನೆಯ ಹೊಣೆಯನ್ನು ನಾನು ವಹಿಸಬೇಕೆಂದೂ ನಿಶ್ಚಯವಾದಾಗ, ಮೊದಲು ಆದ ಸಂತೋಷದೊಂದಿಗೆ ಹೊಣೆಗಾರಿಕೆಯೂ ಬಂತು. ಇದು ವಿದ್ವತ್ಸೇವೆಯ ಇನ್ನೊಂದು ಅವಕಾಶವೆಂಬ ನೆಲೆಯಲ್ಲಿ ಈ ಗ್ರಂಥದ ಸಂಪಾದನೆಯ ಹೊಣೆಯನ್ನು ವಹಿಸಿಕೊಂಡೆ.

ಪ್ರೊ. ವೆಂಕಟಸುಬ್ಬಯ್ಯನವರು ಅಖಿಲಕರ್ನಾಟಕದಲ್ಲಿ ಸಾಹಿತ್ಯ ಮತ್ತು ಭಾಷಾಧ್ಯಯನ ಕ್ಷೇತ್ರಗಳಲ್ಲಿ ಪರಿಚಿತರು, ಮಾನ್ಯರು. ಅವರ ಜೀವನದ ಹೆಚ್ಚಿನ ವರ್ಷಗಳನ್ನು ಬೆಂಗಳೂರಿನಲ್ಲಿ ಕಳೆದರೂ ಕರಾವಳಿಕರ್ನಾಟಕದ ಸಂಪರ್ಕ ಅವರಿಗೆ ವಿಶೇಷವಾಗಿತ್ತು. ಇಲ್ಲಿಯ ವಿದ್ವಾಂಸರ ಮತ್ತು ಸಂಘಸಂಸ್ಥೆಗಳ ಜೊತೆಗೆ ಅವರು ನಿಕಟವಾಗಿದ್ದರು. ಶತಮಾನದ ಅಂಚಿನ ವಯೋಮಾನದಲ್ಲಿರುವ ಅವರು ಈಗಲೂ ಆ ಸಂಪರ್ಕಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಅವರು ಇರಿಸಿಕೊಂಡ ಈ ಪ್ರೀತಿಗಾಗಿ ಸಿದ್ಧಗೊಳ್ಳುವ ಈ ಗ್ರಂಥವನ್ನು ಕರಾವಳಿಕರ್ನಾಟಕದ ಮುಖ್ಯವಾಗಿ ಉಡುಪಿ, ದಕ್ಷಿಣಕನ್ನಡ ಮತ್ತು ಕಾಸರಗೋಡು ಜಿಲ್ಲೆಯ ಲೇಖಕರಿಂದಲೇ ಲೇಖನಗಳನ್ನು ಸಂಗ್ರಹಿಸುವ ಮೂಲಕ ಸಿದ್ಧಪಡಿಸಿ ನಮ್ಮ ಪ್ರೀತಿಗೌರವಗಳನ್ನು ವ್ಯಕ್ತಪಡಿಸಬೇಕೆಂದು ತೀರ್ಮಾನಿಸಲಾಯಿತು ಮತ್ತು ವೆಂಕಟಸುಬ್ಬಯ್ಯನವರ ಹೆಚ್ಚಿನ ಎಲ್ಲ ಕೃತಿಗಳ ವಿಮರ್ಶಾತ್ಮಕ ಅವಲೋಕನವನ್ನು ಈ ಗ್ರಂಥವು ಹೊಂದಿರಬೇಕೆಂದೂ ಅದರೊಂದಿಗೆ ಅವರ ಅಭಿಪ್ರಾಯ - ಅನುಭವಗಳನ್ನು ಅರಿಯುವಂತಹ ಬರಹ-ವಿರಬೇಕೆಂದೂ ಯೋಚಿಸಲಾಯಿತು. ಆ ಪ್ರಕಾರ ಈ ಗ್ರಂಥ ಸಿದ್ಧಗೊಂಡಿದೆ. ಈ ಗ್ರಂಥಕ್ಕೆ ಕರಾವಳಿಯ ಲೇಖಕ ಮಹನೀಯರು ಉತ್ತಮ ಸ್ಪಂದನ ನೀಡಿದ್ದಾರೆಂದು ಸಂತೋಷದಿಂದ ಹೇಳಬಯಸುತ್ತೇನೆ.

ಕರಾವಳಿ ಕರ್ನಾಟಕದ ಜನತೆಯೊಂದಿಗೆ ಮತ್ತು ಸಂಘಸಂಸ್ಥೆಗಳೊಡನೆ ತಮ್ಮ ಸಂಬಂಧಗಳ ಕುರಿತಾಗಿಯೂ ಕನ್ನಡದ ಇಂದಿನ ಸ್ಥಿತಿಗತಿಗಳ ಕುರಿತಾಗಿಯೂ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಅಭಿಪ್ರಾಯಗಳನ್ನು ದಾಖಲಿಸಿ ಅವುಗಳನ್ನು ಸಂದರ್ಶನ ಲೇಖನದ ರೂಪದಲ್ಲಿ ಈ ಗ್ರಂಥದಲ್ಲಿ ಅಳವಡಿಸಿಕೊಳ್ಳಬೇಕೆಂದು ಯೋಜಿಸಲಾಯಿತು. ಆ ಪ್ರಕಾರ ಅವರಲ್ಲಿ ಕೇಳಿಕೊಂಡಾಗ ಸಂತೋಷದಿಂದ ಒಪ್ಪಿ ಸಂದರ್ಶನಕ್ಕೆ ಅವಕಾಶವನ್ನು ಕೊಟ್ಟು ಅದರ ಲಿಖಿತಸ್ವರೂಪವನ್ನು ಓದಿ ತಿದ್ದುಪಡಿಗಳನ್ನು ಹೇಳಿ ಒಪ್ಪಿಗೆ ಕೊಟ್ಟುದಲ್ಲದೆ ಈ ಸಂದರ್ಶನದ ವಿಷಯದಲ್ಲಿ ತುಂಬ ಸಂತೋಷವನ್ನೂ ಅವರು ವ್ಯಕ್ತಪಡಿಸಿದ್ದಾರೆ. ಗೌರವಗ್ರಂಥಕ್ಕೆ ಒಪ್ಪಿಗೆ ನೀಡಿದ್ದಲ್ಲದೆ ಸಂದರ್ಶನಕ್ಕೂ ಅವಕಾಶಕೊಟ್ಟುದುದಕ್ಕಾಗಿ ಸಂಪಾದಕೀಯ ಮಂಡಳಿಯ ವತಿಯಿಂದ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಸುಮಾರು ನಲುವತ್ತು ಮುದ್ರಿತ ಪುಟಗಳಷ್ಟು ವಿಸ್ತರಿಸಿರುವ ಈ ಸಂದರ್ಶನಲೇಖನವು ಒಂದು ರೀತಿಯಲ್ಲಿ ಸಾಕಷ್ಟು ದೊಡ್ಡ ದಾಖಲೆಯೆಂದೇ ಹೇಳಬಹುದಾಗಿದೆ. ಅದರೊಂದಿಗೆ ಕರಾವಳಿಯ ವಿದ್ವಾಂಸರಲ್ಲೊಬ್ಬರಾದ ಪ್ರೊ. ಎ. ವಿ. ನಾವಡರು ಕೆಲವು ವರ್ಷಗಳ ಹಿಂದೆ ಸಂದರ್ಶನಮಾಡಿ ಸಿದ್ಧಪಡಿಸಿದ ಪೂರ್ವ ಪ್ರಕಟಿತ ಸಂದರ್ಶನಲೇಖನವೊಂದು ಈ ಸಂದರ್ಶನಕ್ಕೆ ಪೂರಕವಾಗಬಹುದೆಂಬುದ-ರಿಂದ ಅದನ್ನೂ ಈ ಗ್ರಂಥದಲ್ಲಿ ಅಳವಡಿಸಿಕೊಳ್ಳಲಾಗಿದೆ. ಆ ಎರಡು ಸಂದರ್ಶನ ಲೇಖನಗಳು ಗ್ರಂಥದ ಒಂದು ಮುಖ್ಯಭಾಗವಾಗಿರುವುದಲ್ಲದೆ ವೆಂಕಟಸುಬ್ಬಯ್ಯನವರ ಹಲವಾರು ಅಭಿಪ್ರಾಯಗಳನ್ನು ಅವರ ಮಾತುಗಳಲ್ಲೇ ನಿರೂಪಿಸುವುದರಿಂದ ಅವರನ್ನು ನಿಕಟವಾಗಿ ತಿಳಿದುಕೊಳ್ಳಬಯಸುವವರಿಗೆ ತುಂಬ ಅನುಕೂಲವಾಗುತ್ತದೆ. ಹೀಗೆ ಅವರ ಕೃತಿಗಳ ಸಮೀಕ್ಷೆ ಮತ್ತು ಸಂದರ್ಶನರೂಪದಲ್ಲಿ ಗ್ರಂಥವಿರಬೇಕೆಂಬುದು ಸ್ಥೂಲಯೋಜನೆಯಾಗಿತ್ತು. ಅವರ ಬರವಣಿಗೆಯ ವಿಸ್ತಾರವನ್ನು ಆಧರಿಸಿಕೊಂಡು ಲೇಖನಗಳನ್ನು ವಿವಿಧ ಭಾಗಗಳಲ್ಲಿ ಅಳವಡಿಸಿಕೊಳ್ಳಲಾಯಿತು.

* * * * *

ಈ ಗ್ರಂಥದ ಮೊದಲಭಾಗ 'ಕೃತಿಸರಣಿ'. ಪ್ರೊ. ವೆಂಕಟಸುಬ್ಬಯ್ಯನವರು ಸಾಹಿತ್ಯಾಸ್ವಾದನೆ, ಸಾಹಿತ್ಯವಿಮರ್ಶೆ, ಸಾಹಿತ್ಯಪರಿಚಯ, ಕನ್ನಡಕ್ಕಾಗಿ ದುಡಿದ ಮಹನೀಯರ ಪರಿಚಯ, ಶಿಕ್ಷಣ ಮತ್ತು ಸಾಮಾಜಿಕ-ಸಾಂಸ್ಕೃತಿಕ ವಿಷಯಗಳ ಚಿಂತನ - ಇತ್ಯಾದಿ ವಿಷಯಗಳಲ್ಲಿ ಬರೆದ ಪುಸ್ತಕಗಳ ಸಮೀಕ್ಷೆ ಈ ಭಾಗದಲ್ಲಿದೆ.

ಎರಡನೆಯ ಭಾಗ 'ನಿಘಂಟುಲೋಕ' ಇದರಲ್ಲಿ ಅವರು ಬರೆದ ಎರಡು ಪುಸ್ತಕಗಳು ಮತ್ತು ಅವರು ಸಂಪಾದಿಸಿದ ಹಲವು ನಿಘಂಟುಗಳ ಪರಿಚಯಾತ್ಮಕ ಸಮೀಕ್ಷೆಗಳಿವೆ. ಪ್ರೊ. ವೆಂಕಟಸುಬ್ಬಯ್ಯನವರು ಕನ್ನಡ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ, ಉತ್ತಮ ವಾಗ್ಮಿಯಾಗಿ ತುಂಬ ಕೆಲಸಮಾಡಿದ್ದಾರೆ. ಆದರೆ ಕರ್ನಾಟಕದ ಜನತೆ ಅವರನ್ನು ಗೌರವಿಸುವುದು ನಿಘಂಟುಕಾರರೆಂಬುದಾಗಿಯೇ. ಆ ಕೆಲಸವನ್ನು ಅವರು ಹಲವಾರು ವರ್ಷಗಳ ಕಾಲ ತಪಸ್ಸಿನಂತೆ ನಡೆಸಿಕೊಂಡು

ಬಂದವರು. ಹಲವು ವೈವಿಧ್ಯಪೂರ್ಣವಾದ ನಿಘಂಟುಗಳನ್ನು ಅವರು ಕನ್ನಡಕ್ಕೆ ನೀಡಿದವರು. ಆದುದರಿಂದ ಈ ಭಾಗ ಸಾಕಷ್ಟು ಪುಷ್ಟವಾಗಿಯೇ ಇದೆ. ನಿಘಂಟು-ಕ್ಷೇತ್ರದಲ್ಲಿ ಅವರ ಕೊಡುಗೆಯ ಸಮಗ್ರಪರಿಚಯ ಈ ವಿಭಾಗದಲ್ಲಾಗುತ್ತದೆ. ಇಲ್ಲೇ ಹೇಳಬೇಕಾದ ಒಂದು ಮಾತಿದೆ : ಅವರ ಕೃತಿಗಳ ಪಟ್ಟಿಯೊಂದನ್ನು ಅನುಬಂಧದಲ್ಲಿ ನೀಡಲಾಗಿದೆ. ಅದರೊಳಗೆ 'ಪತ್ರಿಕಾಪದಕೋಶ'ವೂ ಒಂದು. ಅದು ಒಂದು ವಿಶಿಷ್ಟ ಪಾರಿಭಾಷಿಕ ಪದಕೋಶ. ಆದರೆ ಆ ಕೃತಿಯನ್ನು ಈ ಸಮೀಕ್ಷೆಯೊಳಗೆ ಸೇರಿಸಿ-ಕೊಳ್ಳದಿರುವಂತೆ ಅವರು ಸೂಚಿಸಿದ್ದಾರೆ. ಅದಕ್ಕೆ ಮುಖ್ಯ ಕಾರಣವೆಂದರೆ ಆ ಕೃತಿಯ ಕರಡಚ್ಚುಗಳನ್ನು ಸರಿಯಾಗಿ ತಿದ್ದದಿರುವುದು ಮತ್ತು ಹಾಗೆ ತಿದ್ದಲು ಅವರಿಗೆ ಅವಕಾಶನೀಡದೆ ಅವಸರದಲ್ಲಿ ಪುಸ್ತಕವನ್ನು ಪ್ರಕಟಿಸಿರುವುದು. ಅವರ ಸಂಪಾದಕತ್ವ-ದಲ್ಲಿ ಹೊರಬಂದ ಕೃತಿಯೇ ಆದರೂ ಅದು ಶುದ್ಧವಾಗಿ ಹೊರಬಂದಿಲ್ಲವೆಂಬ ವಿಷಯದಲ್ಲಿ ಅವರಿಗಿರುವ ಬೇಸರ ಈ ಮಾತಿನಲ್ಲಿ ವ್ಯಕ್ತವಾಗಿದೆ. ಈ ವಿಭಾಗದ ಕೊನೆಗೆ 'ಕನ್ನಡಕೋಶವಿಸ್ತಾರ' ಎಂಬ ವಿಸ್ತೃತ ಸೂಚಿಯನ್ನು ಅಳವಡಿಸಲಾಗಿದ್ದು ಕೋಶಗಳಲ್ಲಿ ಆಸಕ್ತರಾದವರಿಗೆ ಅದು ಹೆಚ್ಚಿನ ಮಾಹಿತಿಯನ್ನು ನೀಡಬಹುದು. ಈ ರೀತಿಯ ಕೋಶಸೂಚಿ ಈಗಾಗಲೇ ರಚಿತವಾದುದು ಪ್ರಸ್ತುತ ಸಂಪಾದಕನ ಗಮನಕ್ಕೆ ಬಂದಿರುವುದಿಲ್ಲ.

ಮೂರನೆಯ ವಿಭಾಗ 'ಸಾಹಿತ್ಯಸಂಪಾದನೆ'. ಅವರು ಗ್ರಂಥಸಂಪಾದನೆಯ ಕ್ಷೇತ್ರದಲ್ಲಿ ಮಾಡಿದ ಕೆಲಸಗಳು ಇಲ್ಲಿಯ ಲೇಖನಗಳಲ್ಲಿ ಸಮೀಕ್ಷಿತವಾಗಿವೆ. ನಿಘಂಟು ಸಂಪಾದನೆ ಮತ್ತು ಗ್ರಂಥಸಂಪಾದನೆ ಎಂಬ ಎರಡು ಸಂಪಾದನಕ್ಷೇತ್ರಗಳು ಪರಸ್ಪರ ಪೂರಕವೇ ಆದರೂ ವಿಭಿನ್ನರೀತಿಯಲ್ಲಿ ಕೆಲಸ ಮಾಡಬೇಕಾದ ಕ್ಷೇತ್ರಗಳೂ ಹೌದೆಂದು ಹೇಳಬಹುದು. ನಿಘಂಟುಸಂಪಾದನೆಯೆಂಬುದು ನಿಘಂಟುರಚನೆಯೇ ಆದರೂ ನಿಘಂಟುರಚಕನನ್ನು ಸಂಪಾದಕನೆಂದೇ ಗುರುತಿಸಲಾಗುತ್ತದೆ. ಆದರೆ ಗ್ರಂಥಸಂಪಾದಕ ಅದರ ರಚಕನಲ್ಲ. ಪ್ರೊ. ಜಿ. ವೆಂಕಟಸುಬ್ಬಯ್ಯನವರು ಗ್ರಂಥಸಂಪಾದನೆಯ ಕ್ಷೇತ್ರದಲ್ಲೂ ಕೆಲಸ ಮಾಡಿದ್ದಾರೆ. ಈ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸಗಳನ್ನು ಮೂರು ಗುಂಪುಗಳಲ್ಲಿ ನೋಡಬಹುದು. ೧) ಪ್ರಾಚೀನ ಗ್ರಂಥಗಳ ಸಂಪಾದನೆ, ೨) ಪ್ರಾಚೀನ ಗ್ರಂಥಗಳ ಸಂಗ್ರಹ, ೩) ಆಧುನಿಕ ಲೇಖನಗಳ ಸಂಕಲನ-ಸಂಪಾದನೆ. ಈ ಮೂರರಲ್ಲೂ ಸಂಪಾದಕನಾದವನು ಸ್ವಲ್ಪ ವಿಭಿನ್ನವಾಗಿ ಕೆಲಸ ಮಾಡಬೇಕಾಗುತ್ತದೆ. ಆದರೆ ಮೂರು ವಿಧಾನಗಳಲ್ಲೂ ಸಮಾನವಾಗಿರು-ವಂತಹುದೆಂದರೆ ವಿಸ್ತೃತವಾದ ಪ್ರಸ್ತಾವನೆಯನ್ನು ಬರೆಯುವುದು. ಪ್ರೊ. ಜಿ. ವೆಂಕಟಸುಬ್ಬಯ್ಯನವರ ಹಿರಿಯ ಸಮಕಾಲೀನರು ಮತ್ತು ಸಮಕಾಲೀನರು ಹಲವರು ಪ್ರಾಚೀನ ಗ್ರಂಥಗಳ ಸಂಪಾದಕರಾಗಿ ಪ್ರಸಿದ್ಧರು. ಅಂತಹ ಹಲವರ ಬಗೆಗೆ ವೆಂಕಟಸುಬ್ಬಯ್ಯನವರು ಲೇಖನಗಳನ್ನೂ ಬರೆದಿದ್ದಾರೆ. ಅವರಿಗೆ ಈ ಕ್ಷೇತ್ರದಲ್ಲಿ ಹೆಚ್ಚಿನ ಆಸಕ್ತಿಯಿದೆ. ಆದರೆ ನಿಘಂಟುರಚನೆಯಂತಹ ಹೊಣೆಗಾರಿಕೆಯಿಂದಾಗಿ ಪ್ರಾಚೀನಗ್ರಂಥಗಳ ಸಂಪಾದನೆಗೆ ಬೇಕಾದ ಸಮಯಾವಕಾಶ ಅವರಿಗೆ ಲಭ್ಯವಾಗಿಲ್ಲವೆನ್ನಬಹುದು. ಅವರು ಸಂಪಾದಿಸಿದ ಹಳೆಯ ಕೃತಿಯೆಂದರೆ

'ನಾಗರಸನ ಭಗವದ್ಗೀತೆ'. ಅವರಿಂದ ರಚಿತವಾದ/ಸಂಪಾದಿತವಾದ ಕೃತಿಗಳ ಪಟ್ಟಿಯಲ್ಲಿ ಈ ಕೃತಿಯ ಹೆಸರಿದ್ದರೂ ಅದರ ಬಗೆಗೆ ಲೇಖನವನ್ನು ಬರೆಯಬಾರದೆಂದು ಅವರು ಸೂಚನೆ ನೀಡಿದ್ದರು. ಏಕೆಂದರೆ ಸಂಪಾದಿತಗ್ರಂಥದಲ್ಲಿ ಮುಖ್ಯಭಾಗವಾದ ಪ್ರಸ್ತಾವನೆಯನ್ನು ಬರೆಯುವ ಮೊದಲೇ ಆ ಕೃತಿಯ ಪಾಠ ಮಾತ್ರವನ್ನು ಅದರ ಪ್ರಕಾಶಕರು ಪ್ರಕಟಿಸಿದ್ದರಂತೆ. ಪ್ರಕಾಶಕರಿಗೆ ವಿಸ್ತೃತವಾದ ಪ್ರಸ್ತಾವನೆಯ ಮಹತ್ತ್ವ ತಿಳಿದಿರಲಿಲ್ಲ. ಪ್ರಸ್ತಾವನೆ ಬರೆಯದುದರಿಂದ ಈ ಗ್ರಂಥದ ಸಂಪಾದಿತರೂಪದ ಮಹತ್ತ್ವ ಕಡಮೆಯಾಯಿತೆಂದು ಸಂಪಾದಕರು ತಿಳಿದರು. ಪತ್ರಿಕಾಪದಕೋಶದ ಬಗೆಗೆ ವೆಂಕಟಸುಬ್ಬಯ್ಯನವರು ಹೇಳಿದ ಮಾತುಗಳನ್ನೂ ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬೇಕು. (ನಾಗರಸನ ಭಗವದ್ಗೀತೆ ಸಂಪಾದಿತವಾಗಿ ಪ್ರಕಟಗೊಂಡಿದೆ. ಸಂ. ಎಸ್. ಎಸ್. ಕೋತಿನ, ಪ್ರ. ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1991) ಎರಡನೆಯ ವಿಭಾಗದಲ್ಲಿ ಪ್ರೊ. ವೆಂಕಟ-ಸುಬ್ಬಯ್ಯನವರು ಕೆಲಸ ಮಾಡಿದ್ದು ಅದರಲ್ಲಿ ಹಳಗನ್ನಡ ಮತ್ತು ನಡುಗನ್ನಡ ಕೃತಿಗಳ ಸಂಗ್ರಹ ಸೇರಿದೆ. ಈ ಸಂಗ್ರಹಗಳಲ್ಲಿ ಕೆಲವು ಬಹಳಕಾಲ ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡುತ್ತಿದ್ದುದನ್ನು ಇಲ್ಲಿ ದಾಖಲಿಸಬೇಕಾಗಿದೆ. ಈ ಸಂಗ್ರಹಗ್ರಂಥಗಳಿಗೆ ಬರೆದ ವಿಸ್ತಾರವಾದ ಪ್ರಸ್ತಾವನೆಗಳನ್ನು ಗಮನಿಸಿದರೆ ಗ್ರಂಥಸಂಪಾದನೆಯಲ್ಲಿ ಪ್ರಸ್ತಾವನೆಗೆ ಅವರು ನೀಡಿದ ಮಹತ್ತ್ವವನ್ನು ತಿಳಿಯಬಹುದಾಗಿದೆ. ಮೂರನೆಯ ವಿಭಾಗದಲ್ಲಿ ಮೂರು ಕೃತಿಗಳು ಬೆಂಗಳೂರಿನ ಜಯರಾಮಸೇವಾ ಮಂಡಳಿಯವರ ಪ್ರಕಟನೆಗಳಾಗಿದ್ದು ಅವುಗಳನ್ನು ಪ್ರಸ್ತುತಗ್ರಂಥದಲ್ಲಿ ಸಮೀಕ್ಷಿಸಲಾಗಿದೆ. ಕರ್ನಾಟಕ ಏಕೀಕರಣ ಗ್ರಂಥವನ್ನು ಗಮನಿಸಿದಾಗ ಇದು ಇನ್ನೂ ದೊಡ್ಡದಾಗಿರುತ್ತಿದ್ದರೆ ಹೆಚ್ಚು ಮಾಹಿತಿಗಳು ದೊರಕುತ್ತಿದ್ದವಲ್ಲವೇ ಎನಿಸುವುದು ಖಚಿತ.

ಈ ಗ್ರಂಥದ ನಾಲ್ಕನೆಯ ಭಾಗ 'ಅನುವಾದ'. ಪ್ರೊ. ವೆಂಕಟಸುಬ್ಬಯ್ಯ-ನವರು ಒಳ್ಳೆಯ ಅನುವಾದಕರೆಂದು ಪರಿಗಣಿತರಾದವರು. ನವದೆಹಲಿಯ ಸಾಹಿತ್ಯ ಅಕಾಡೆಮಿಗಾಗಿ ಅವರು ಹಲವಾರು ಕೃತಿಗಳನ್ನು ಅನುವಾದಿಸಿ ನೀಡಿದ್ದಾರೆ. ಆದರೆ ಅವರ ಅನುವಾದಕೌಶಲದ ಪರಿಚಯ ನೀಡುವುದಕ್ಕಾಗಿ ಇಲ್ಲಿ ಮೂರು ಲೇಖನಗಳು ಮಾತ್ರ ಇವೆ. ಅವು ಮೂರು ತೆರನಾದ ಕೃತಿಗಳ ಅನುವಾದಗಳು. ಒಂದು ಮಕ್ಕಳಿಗಾಗಿ ಬರೆದ ಪರಿಚಯಾತ್ಮಕ ಕೃತಿಸರಣಿ. 'ಇದು ನಮ್ಮ ಭಾರತ'. ಇನ್ನೊಂದು ಜೀವನ-ಕೃತಿ-ಸಮೀಕ್ಷಾತ್ಮಕವಾದ 'ಶ್ರೀಶಂಕರಾಚಾರ್ಯರು'. ಇನ್ನೊಂದು ಕೇವಲ ಚಿಂತನವನ್ನಾಧರಿಸಿದಂತಹುದು – ಜೆ. ಕೃಷ್ಣಮೂರ್ತಿಯವರ ಉಪನ್ಯಾಸಗಳ ಸಂಕಲನ. ಈ ಮೂರನ್ನೂ ಅವರು ಇಂಗ್ಲೀಷಿನಿಂದ ಅನುವಾದಿಸಿದ್ದಾರೆ. ಈ ಮೂರು ಲೇಖನಗಳಲ್ಲಿ ಅವರ ಅನುವಾದ ಕೌಶಲವು ಪೂರ್ಣವಾಗಿ ಪರಿಚಯಕ್ಕೆ ಬರುವಂತಿದೆ.

ಗ್ರಂಥದ ಇನ್ನೊಂದು ಭಾಗ 'ಸಂದರ್ಶನ'. ಆ ಲೇಖನಕ್ಕೆ ಪೂರ್ವಭಾವಿ-ಯಾಗಿ ಹೇಳಿದ ಮಾತುಗಳನ್ನು ಗಮನಿಸಬೇಕೆಂದು ವಿನಂತಿ. ಸಂದರ್ಶನದಲ್ಲಿ ಅವರು ವ್ಯಕ್ತಪಡಿಸುವ ಅಭಿಪ್ರಾಯಗಳು ಅವರ ಮಾಗಿದ ಅನುಭವಗಳ

ಹಿನ್ನೆಲೆಯುಳ್ಳ ಮಾತ್ರವಲ್ಲ. ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಗೊಂಡ ಮೇಲೆ ಅವರು ಆಡುತ್ತಿರುವ ಮಾತುಗಳು – ಎಂಬುದರಿಂದಲೂ ಇವುಗಳಿಗೆ ಮಹತ್ತ್ವವಿದೆ. ಅವರಲ್ಲಿ ವ್ಯಕ್ತಪಡಿಸಿದ ಕೆಲವು ಅಭಿಪ್ರಾಯಗಳನ್ನು ಅವರು ಈಗಾಗಲೇ ಬೇರೆಡೆಗಳಲ್ಲಿ ಬರೆದ ಲೇಖನಗಳಲ್ಲಿ ಪ್ರಕಟಿಸಿದ್ದುಂಟು. ಸಂದರ್ಶನದಲ್ಲಿ ಹೆಸರಿಸಿದ ವ್ಯಕ್ತಿಗಳಲ್ಲಿ ಕೆಲವರ ಬಗೆಗೆ ವ್ಯಕ್ತಿಚಿತ್ರರೂಪದ ಲೇಖನಗಳನ್ನೂ ಅವರು ಬರೆದುದುಂಟು. ಆದರೂ ಅವನ್ನೆಲ್ಲ ನೆನಪಿನಿಂದ ಉಲ್ಲೇಖಿಸಿದ್ದರಲ್ಲಿ ಮತ್ತು ಹೇಳಬೇಕಾದುದನ್ನು ಖಚಿತವಾಗಿ ಹಾಗೂ ನಿಸ್ಸಂಕೋಚವಾಗಿ ಹೇಳಿದುದರಲ್ಲಿ ಮಹತ್ತ್ವವಿದೆ. ಅವರ ನೆನಪಿನ ಶಕ್ತಿ ಅದ್ಭುತವಾದುದು. ಸರಸಸಂಭಾಷಣನಿಪುಣರಾದ ಅವರು ಸಾಹಿತ್ಯ ಮತ್ತು ಶಾಸ್ತ್ರವಿಷಯಗಳಿಗೆ ಸಂಬಂಧಿಸಿ ಎಷ್ಟು ಹೊತ್ತು ಮಾತಾಡಿದರೂ ಕೇಳುಗರಲ್ಲಿ ಮೊದಲುಂಟಾದ ಕುತೂಹಲ ಆಸಕ್ತಿಗಳು ಹಾಗೆಯೇ ಮುಂದುವರಿಯುವಂತೆ ಮಾತನ್ನು ಬಳಸಬಲ್ಲವರು. ಈ ಎಲ್ಲ ಗುಣಗಳು ಸಂದರ್ಶನಲೇಖನದಲ್ಲಿ ಸ್ಪಷ್ಟವಾಗಿವೆ.

* * * * *

ಈ ಗ್ರಂಥದಲ್ಲಿ ವೆಂಕಟಸುಬ್ಬಯ್ಯನವರ ಎಲ್ಲ ಕೃತಿಗಳ ಸಮೀಕ್ಷೆಯನ್ನು ಉದ್ದೇಶಿಸಲಾಗಿತ್ತಾದರೂ ಅದು ಸಾಧ್ಯವಾಗಲಿಲ್ಲ. ಹಿಂದೆಯೇ ಹೇಳಲಾದಂತೆ ಒಂದೆರಡು ಕೃತಿಗಳ ಸಮೀಕ್ಷೆಯನ್ನು ಅವರೇ ಬೇಡವೆಂದರು; ಇನ್ನು ಕೆಲವನ್ನು ನಮಗೆ ಸಮೀಕ್ಷಿಸಲಾಗಲಿಲ್ಲ. ಆದರೆ ಅವರ ಮುಖ್ಯಕೃತಿಗಳೆಲ್ಲ ಈ ಕೃತಿಯಲ್ಲಿ ಸಮೀಕ್ಷಿಸಲ್ಪಟ್ಟಿವೆಯೆಂಬುದನ್ನು ಗಮನಿಸಬೇಕು. ಇಲ್ಲಿಯ ಲೇಖಕರಲ್ಲಿ ಹಿರಿಯ ವಿದ್ವಾಂಸರಿಂದ ತೊಡಗಿ ತರುಣ ಸಂಶೋಧಕರವರೆಗೆ ಇದ್ದಾರೆ. ಇವರೆಲ್ಲರೂ ತಮಗೆ ನೀಡಲಾದ ಪುಸ್ತಕದ ವಿಷಯಕ್ಕೆ ನ್ಯಾಯಸಲ್ಲಿಸಿರುವುದು ಮಾತ್ರವಲ್ಲ ವೆಂಕಟಸುಬ್ಬಯ್ಯನವರ ಮೇಲೆ ತಮ್ಮ ಗೌರವವನ್ನು ದಾಖಲಿಸಿದ್ದಾರೆ. ಈ ಗೌರವವಿರುವುದರಿಂದಲೇ ಲೇಖನಗಳ ಸಂಪಾದನೆ ನನಗೆ ಸುಲಭವಾಯಿತೆನ್ನ-ಬಹುದು. ಹೆಚ್ಚಿನ ಲೇಖನಗಳಲ್ಲಿ ಸಂಪಾದಕನ ನೆಲೆಯಲ್ಲಿ ಕೈಯಾಡಿಸಿಲ್ಲ. ಕೆಲವು ಲೇಖನಗಳನ್ನು ಅಲ್ಪ ಸ್ವಲ್ಪ ಅಂದಗೊಳಿಸುವ ಮತ್ತು ಕೆಲವು ಮಾಹಿತಿಗಳನ್ನು ಸೇರಿಸಿ ಸರಿಪಡಿಸುವ ಕೆಲಸವನ್ನು ಮಾಡಲಾಗಿದೆ. ಕನ್ನಡ ನಿಘಂಟು ಸಂಪುಟಗಳ ಬಗೆಗೆ ಒಂದೇ ಲೇಖನವಿದೆ. ಆದರೆ 'ಇಗೋ ಕನ್ನಡ' ಎಂಬುದು ಹೊಸ ಕಲ್ಪನೆಯ 'ಸಾಮಾಜಿಕ ನಿಘಂಟು' ಆದುದರಿಂದ ಮೂರು ಸಂಪುಟಗಳ ಬಗೆಗೆ ಬರೆಯಲು ಮೂವರನ್ನು ಕೇಳಿಕೊಳ್ಳಲಾಯಿತು. ಆ ಮೂವರಲ್ಲಿ ಒಬ್ಬರು ಸಂಸ್ಕೃತ ವಿದ್ವಾಂಸರು; ಒಬ್ಬರು ವಿಶ್ರಾಂತ ಕನ್ನಡ ಪ್ರಾಧ್ಯಾಪಕರು; ಒಬ್ಬರು ಇಂಗ್ಲಿಷ್ ಪ್ರಾಧ್ಯಾಪಕರು. ವಿಭಿನ್ನ ದೃಷ್ಟಿಕೋನಗಳಿಂದ ಈ ವಿಷಯವನ್ನು ಗಮನಿಸಲೆಂದು ಈ ರೀತಿ ಪ್ರಯತ್ನಿಸಲಾಯಿತು.

ಈ ಲೇಖನಗಳೊಳಗೆ ಪುಸ್ತಕಸಮೀಕ್ಷೆಯನ್ನು ಮಾಡಿದವರು ಅಲ್ಲಲ್ಲಿ ಪ್ರೊ. ವೆಂಕಟಸುಬ್ಬಯ್ಯನವರ ಮಾತುಗಳನ್ನು ಉದ್ಧರಿಸಿದ್ದುಂಟು. ಸಂದರ್ಶನದಲ್ಲಿ ಸ್ಪಷ್ಟವಾಗಿ ಅವರ ಮಾತುಗಳೇ ಇವೆ. ಆದರೂ ಈ ಪುಸ್ತಕದ ವಿಭಾಗಗಳನ್ನು ಗುರುತಿಸುವ ವಿಭಾಜಕ ಪುಟಗಳಲ್ಲಿ ಮತ್ತು ಅವಕಾಶವುಳ್ಳ ಇತರ ಕಡೆಗಳಲ್ಲಿ ಅವರ ಕೆಲವು ಅಭಿಪ್ರಾಯಗಳನ್ನು ಉದ್ಧರಿಸಿ ನೀಡಲಾಗಿದೆ. ಈ ಉದ್ಧರಣೆಗಳನ್ನು ಶಾಸ್ತ್ರವಿಷಯವಿಶ್ಲೇಷಣೆಯಲ್ಲಿ ಅವರ ಮುಖ್ಯ ಕೃತಿಯಾದ 'ಕನ್ನಡ ನಿಘಂಟು ಪರಿವಾರ' ಎಂಬುದರಿಂದ ಆಯ್ದುಕೊಳ್ಳಲಾಗಿದೆ.

* * * * *

ವೆಂಕಟಸುಬ್ಬಯ್ಯನವರಿಗೆ ಸಂಬಂಧಿಸಿದ ಒಂದು ನೆನಪನ್ನು ಇಲ್ಲಿ ಹಂಚಿಕೊಳ್ಳಬಯಸುತ್ತೇನೆ. ಹೆಬ್ರಿಯಲ್ಲಿ ನಾನು ಉಪನ್ಯಾಸಕನಾಗಿ ಹಾಗೂ ಪ್ರಾಂಶು- ಪಾಲನಾಗಿದ್ದ ಕಾಲದಲ್ಲಿ ಅಂಬಾತನಯ ಮುದ್ರಾಡಿಯವರೂ ನಾನೂ ಕನ್ನಡದ ಚಟುವಟಿಕೆಗಳಲ್ಲಿ ಒಟ್ಟಾಗಿರುತ್ತಿದ್ದೆವು. ಅವರು ಅಧ್ಯಾಪಕರಾಗಿದ್ದ ಪ್ರಾಥಮಿಕ ಶಾಲೆಯಲ್ಲಿ ನಮ್ಮ ಮಕ್ಕಳೂ ವಿದ್ಯಾಭ್ಯಾಸ ಮಾಡಿದುದರಿಂದ ನಾನು ಅಲ್ಲಿಗೆ ಆಗಾಗ ಹೋಗುತ್ತಲೇ ಇದ್ದೆ. ಅವರು ನಿವೃತ್ತರಾದ ಸಂದರ್ಭದಲ್ಲಿ ನಾವಿಬ್ಬರು ಸೇರಿಕೊಂಡು ಕನ್ನಡ ನಿಘಂಟುಕ್ಷೇತ್ರಕ್ಕೆ ಸಂಬಂಧಿಸಿದಂತೆ ಏನಾದರೂ ಕೆಲಸ ಮಾಡೋಣವೆಂದು ಯೋಜನೆ ಹಾಕಿದೆವು. ನಾನು ತುಳುನಿಘಂಟುಯೋಜನೆಯಲ್ಲಿ ಒಂದಷ್ಟು ಸಮಯ ಸಹಾಯಕ ಸಂಪಾದಕನಾಗಿ ಡಾ. ಯು. ಪಿ. ಉಪಾಧ್ಯಾಯರ ಕಿರಿಯ ಸಹೋದ್ಯೋಗಿಯಾಗಿ ಕೆಲಸಮಾಡಿದ್ದರಿಂದ ನಿಘಂಟುರಚನೆಯ ಕುರಿತಾದ ಅನುಭವ ನನಗಿತ್ತು. ನಿವೃತ್ತಿಯ ಕಾರಣದಿಂದ ಅಂಬಾತನಯರಿಗೆ ಒಂದಿಷ್ಟು ವಿರಾಮ ಸಿಕ್ಕಬಹುದೆಂದು ನಿರೀಕ್ಷಿಸಿದೆವು. ಕನ್ನಡದಲ್ಲಿರುವ ಅನ್ಯದೇಶ್ಯಗಳನ್ನು ಗುರುತಿಸಿ ಅವುಗಳನ್ನು ಆಧರಿಸಿ ನಿಘಂಟುಗಳು ಸಿದ್ಧವಾಗಿಲ್ಲದ ಕಾರಣ ಅದನ್ನೇ ನಿಶ್ಚಯಿಸಿದೆವು ಮತ್ತು ಸಾಹಿತ್ಯ ಪರಿಷತ್ತು ಪ್ರಕಟಿಸಿ ಪೂರೈಸಿದ ಎಂಟು ಸಂಪುಟಗಳ ಕನ್ನಡ ನಿಘಂಟುವನ್ನು ಆಕರಸಾಮಗ್ರಿಯಾಗಿ ಬಳಸೋಣವೆಂದು ನಿಶ್ಚಯಿಸಿದೆವು. ಅಂಬಾತನಯರು ಅಧ್ಯಯನಕ್ಕಾಗಿ ಮೊದಲ ಸಂಪುಟವನ್ನು ನಮ್ಮಲ್ಲಿಂದ ತಮ್ಮ ಮನೆಗೆ ಸಾಗಿಸಿ ಸಮೀಕ್ಷಿಸತೊಡಗಿದರು. ಅದೇ ಸಂದರ್ಭದಲ್ಲಿ ಯಾವುದೋ ಕಾರಣದಿಂದ ಅವರೂ ನಾನೂ ಒಟ್ಟು ಸೇರಿ ಬೆಂಗಳೂರಿಗೆ ಹೋಗುವ ಸಂದರ್ಭ ಒದಗಿಬಂತು. ಆಗ ಬೆಂಗಳೂರಿನಲ್ಲಿ ವೆಂಕಟಸುಬ್ಬಯ್ಯನವರನ್ನು ಕಂಡು ಈ ವಿಷಯವನ್ನು ತಿಳಿಸಿಬರುವ ಉದ್ದೇಶದಿಂದ ಅವರ ಮನೆಗೆ ಹೋದೆವು. ಅಲ್ಲಿ ಅವರ ಜೊತೆಗೆ ಮಾತಾಡುತ್ತಾ ಅನ್ಯದೇಶ್ಯಗಳ ನಿಘಂಟು ತಯಾರಿಸುವ ವಿಷಯವನ್ನು ಪ್ರಸ್ತಾವಿಸಿದೆವು. ಆಗ ಆ ನಿಘಂಟುವನ್ನು ತಾವೇ ಸಿದ್ಧ ಮಾಡುತ್ತಿರುವುದಾಗಿ ಅವರು ತಿಳಿಸಿದರು. ಅನಂತರ ಆ ನಿಘಂಟು 'ಎರವಲು ಪದಕೋಶ' ಎಂಬ ಹೆಸರಿನಲ್ಲಿ ಹೊರಬಂತು. ಈಗ ಕನ್ನಡ ಭಾಷೆಯೊಳಗೆ

ಬಳಕೆಯಲ್ಲಿರುವ ಅನ್ಯಭಾಷಾಶಬ್ದಗಳ ಅರ್ಥಗಳನ್ನು ಕೊಡುವ ಅಧಿಕೃತ ನಿಘಂಟು ಇದುವೇ ಆಗಿದೆ. (ಕನ್ನಡ ಭಾಷೆಯಲ್ಲಿರುವ ಅರೇಬಿಕ್ ಮತ್ತು ಪರ್ಶಿಯನ್ ಭಾಷೆಯ ಪದಗಳನ್ನೂ ಕುರಿತು ಮದರಾಸು ವಿಶ್ವವಿದ್ಯಾನಿಲಯದಲ್ಲಿ ಡಾ. ಎ. ಶಂಕರ ಕೆದಿಲಾಯ ಅವರು ಪಿಎಚ್.ಡಿ. ಅಧ್ಯಯನವನ್ನು ನಡೆಸಿದ್ದರು. ಅದು ಅದೇ ವಿಶ್ವವಿದ್ಯಾನಿಲಯದಿಂದ Foreign Loan Words in Kannada ಎಂಬ ಹೆಸರಿನಲ್ಲಿ ಪ್ರಕಟಗೊಂಡಿದೆ. ಕನ್ನಡದ ಅನ್ಯಭಾಷಾಶಬ್ದಗಳನ್ನು ನಿಘಂಟುರೂಪದಲ್ಲಿ ಒಟ್ಟುಮಾಡಬೇಕೆಂಬ ಅಭಿಪ್ರಾಯ ನನ್ನಲ್ಲಿ ಮೂಡಲು ಈ ಪುಸ್ತಕವೇ ಪ್ರೇರಣೆಯಾಗಿದೆ.)

ಪ್ರೊ. ವೆಂಕಟಸುಬ್ಬಯ್ಯ ಅವರಲ್ಲಿ ಮಾತಾಡಿದಾಗ ಅವರು ಎರವಲು ಪದಕೋಶವನ್ನು ಸಿದ್ಧಪಡಿಸುವುದು ತಿಳಿದುಬಂದ ಮೇಲೆ ನಾವು ಆ ಕೆಲಸವನ್ನು ಬಿಟ್ಟುಬಿಟ್ಟೆವು. ಅವರಾದರೂ ಈ ಕೋಶಕ್ಕೆ ಆಕರಸಾಮಗ್ರಿಯಾಗಿ ಇರಿಸಿಕೊಂಡುದು ಪ್ರಕಟಿತ ಕನ್ನಡ ಬೃಹನ್ನಿಘಂಟು ಮತ್ತು ಅದಕ್ಕಾಗಿ ಸಂಗ್ರಹಿಸಲಾದ ಇತರ ಮಾಹಿತಿ- ಗಳನ್ನೇ ಆಗಿದೆ. ನಿಜವಾಗಿ ಈಗ ಪೂರೈಸಲಾಗಿರುವ ಕನ್ನಡ ಬೃಹತ್‌ನಿಘಂಟುವನ್ನು ಆಕರಸಾಮಗ್ರಿಯನ್ನಾಗಿರಿಸಿಕೊಂಡು ಬೇರೆ ಬೇರೆ ವಿಧಗಳ ವಿವಿಧ ನಿಘಂಟುಗಳನ್ನು ತಯಾರಿಸುವ ಅವಕಾಶಗಳು ಹಾಗೆಯೇ ಇವೆ. ಅಂತಹ ನಿಘಂಟುರಚನೆಗೆ ಮಾದರಿಯನ್ನು 'ಎರವಲುಪದಕೋಶ' ಸಿದ್ಧಪಡಿಸುವ ಮೂಲಕ ಅವರೇ ಹಾಕಿಕೊಟ್ಟಿದ್ದಾರೆ. ಅಲ್ಲದೆ ಇನ್ನೊಂದು ದೃಷ್ಟಿಯಿಂದ ನೋಡುವುದಾದರೆ ನಿಘಂಟು ಸಂಪುಟಗಳು ಪೂರ್ಣವಾಗಿ ಹೊರಬರುವ ಮೊದಲೇ ಪ್ರಕಟಗೊಂಡಿದ್ದರೂ 'ಸಂಕ್ಷಿಪ್ತ ಕನ್ನಡ ನಿಘಂಟು' ಎಂಟು ಸಂಪುಟಗಳ ಬೃಹತ್‌ನಿಘಂಟುವಿನ ಮರಿಯೇ ಹೌದು.

* * * * *

ಪ್ರೊ. ವೆಂಕಟಸುಬ್ಬಯ್ಯನವರಿಗೆ 'ಸಾಹಿತ್ಯಜೀವಿ' ಎಂಬ ಹೆಸರಿನಲ್ಲಿ ಒಂದು ಅಭಿನಂದನ ಗ್ರಂಥವನ್ನು ಸಮರ್ಪಿಸಲಾಗಿತ್ತು. ಅನಂತರ 'ಶಬ್ದಸಾಗರ' ಎಂಬ ಹೆಸರಿನ ಇನ್ನೊಂದು ದೊಡ್ಡ ಗಾತ್ರದ ಕೃತಿಯನ್ನು ಸಂಪಾದಿಸಿ ಅಭಿನಂದನ ಸಮಾರಂಭವೊಂದರಲ್ಲಿ ಸಮರ್ಪಿಸಲಾಯಿತು (1994). ಈ ಪುಸ್ತಕವು 1999ರಲ್ಲಿ ಪುನರ್ಮುದ್ರಿತವಾಯಿತು. ಸಾಹಿತ್ಯಜೀವಿ ಮತ್ತು ಶಬ್ದಸಾಗರ ಈ ಎರಡೂ ಶೀರ್ಷಿಕೆಗಳು ಅವರ ಸಾಹಿತ್ಯಸೇವೆ ಮತ್ತು ನಿಘಂಟುರಚನೆಯ ಹಿನ್ನೆಲೆಯಿಂದ ಅವರಿಗೆ ಅನ್ವಯಿಸುವಂತಹವಾಗಿವೆ. ಶಬ್ದಸಾಗರವು ಅನಂತರ ಸಮರ್ಪಿಸಲಾದ ಕೃತಿಯಾದುದರಿಂದ ಅದರೊಳಗಿನ ಲೇಖನಗಳ ಪಟ್ಟಿಯನ್ನು ಆಸಕ್ತರ ಉಪಯೋಗಕ್ಕಾಗಿ ಈ ಗ್ರಂಥದ ಅನುಬಂಧದಲ್ಲಿ ನೀಡಲಾಗಿದೆ.

ಪ್ರೊ. ವೆಂಕಟಸುಬ್ಬಯ್ಯನವರು ಬೆಂಗಳೂರಿನ ಪರಿಸರದಲ್ಲಿ ಮತ್ತು ಸಾಹಿತ್ಯ ವಲಯದಲ್ಲಿ 'ಜೀವಿ' (ಜಿ.ವಿ.) ಎಂದೇ ಪ್ರಸಿದ್ಧರಾದುದರಿಂದ 'ಸಾಹಿತ್ಯಜೀವಿ' ಎಂಬ

ಹೆಸರನ್ನು ಅವರ ಅಭಿನಂದನ ಗ್ರಂಥಕ್ಕೆ ಇಡಲಾಗಿತ್ತು. ಇದು ಉಚಿತವಾಗಿಯೇ ಇದೆ. ಪ್ರಸ್ತುತ ಕೃತಿಗೆ 'ವಿದ್ವಜ್ಜೀವಿತ' ಎಂಬ ಹೆಸರನ್ನಿರಿಸಲಾಗಿದ್ದು ಸಾಹಿತ್ಯ ಮತ್ತು ಶಾಸ್ತ್ರಕ್ಷೇತ್ರಗಳಲ್ಲಿ ಅವರಗಿರುವ ವಿದ್ವತ್ತೆಯನ್ನು ಗುರುತಿಸುವ ಉದ್ದೇಶ ಇದರೊಳಗಿದೆ. ಜೀವಿತ ಎಂದರೆ ಜೀವನ ಎಂದು ಒಂದು ಅರ್ಥವಾದರೆ ಜೀವನದಲ್ಲಿ ಸಾಧಿಸಿದ ಕಾರ್ಯಗಳು ಅಥವಾ ಮಾಡಿದ ಸಾಧನೆಗಳು ಎಂಬುದು ಇನ್ನೊಂದು ಅರ್ಥ. ಈ ವಿದ್ವಾಂಸರು ಜೀವನದಲ್ಲಿ ಸಾಧಿಸಿದುದರ ಬಗೆಗೆ ಇಲ್ಲಿಯ ಲೇಖನಗಳು ವಿವರಿಸುತ್ತವೆಂಬುದರಿಂದ ಈ ಹೆಸರು ಔಚಿತ್ಯವನ್ನು ಪಡೆಯುತ್ತದೆ. ಜೀವಿತ ಶಬ್ದದೊಳಗೆ ಜೀವಿ ಎಂಬುದು ಸೇರಿಯೇ ಇರುವುದನ್ನು ಕನ್ನಡಿಗರು ಗಮನಿಸ-ಬಹುದಾಗಿದೆ. ಅಭಿನಂದನಗ್ರಂಥಗಳಲ್ಲಿ ವ್ಯಕ್ತಿವಿಚಾರವಾಗಿ ಬಹಳಷ್ಟು ಲೇಖನಗಳು ಇರುವುದು ಸಾಮಾನ್ಯವಾದ ಪದ್ಧತಿ. ಇದು ಗೌರವಗ್ರಂಥ. ಗೌರವಗ್ರಂಥವು ಅಭಿನಂದನೆಯನ್ನು ಒಳಗೊಂಡೇ ಇದೆ. ಆದರೂ ಇಲ್ಲಿ ವ್ಯಕ್ತಿಜೀವನಕ್ಕಿಂತಲೂ ಸಾಧನೆಯ ಮೇಲೆ ಹೆಚ್ಚಿನ ಗೌರವ ನೀಡುವ ಧೋರಣೆಯಾದುದರಿಂದ ಅಭಿಮಾನಿಗಳ ಬರಹವೆಂಬ ವಿಭಾಗವೇ ಇಲ್ಲಿರುವುದಿಲ್ಲ. ಅವರ ಸಾಧನೆ ಸಂಪೂರ್ಣವಾಗಿ ದಾಖಲಾಗಬೇಕೆಂಬುದಷ್ಟೇ ಇಲ್ಲಿಯ ಉದ್ದೇಶ.

* * * * *

ಈ ಕೃತಿಯ ಸಂಪಾದನೆಯ ಹೊಣೆಗಾರಿಕೆಯನ್ನು ಸಂತೋಷದಿಂದಲೇ ವಹಿಸಿಕೊಂಡ ವಿಷಯವನ್ನು ಹಿಂದೆ ಹೇಳಲಾಗಿದೆ. ಸಂದರ್ಶನದ ಕಾರಣವನ್ನಿರಿಸಿ-ಕೊಂಡು ಅವರ ಮನೆಗೆ ಹೋಗಿ ಸಂಭಾಷಿಸುವ ಮತ್ತು ನಮ್ಮ ಪರಿಸರದ ಮುಖ್ಯ-ಲೇಖಕರನ್ನೆಲ್ಲ ಸಂಪರ್ಕಿಸಿ ಲೇಖನಗಳನ್ನು ಪಡೆದು ಅವುಗಳ ಕರಡಚ್ಚುಗಳನ್ನು ತಿದ್ದುವ ಕಾರಣವೂ ಸೇರಿದಂತೆ ಎರಡೆರಡು ಬಾರಿ ಓದುವ ಸಾಹಿತ್ಯಾಧ್ಯಯನದ ಲಾಭ ನನಗಾದುದು ದೊಡ್ಡ ಪ್ರಯೋಜನವೆಂದು ನಾನು ಭಾವಿಸಿದ್ದೇನೆ. ಸಂಪಾದನದ ಹೊಣೆಗಾರಿಕೆಯನ್ನು ವಹಿಸಿಕೊಟ್ಟ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರಕ್ಕೆ ಕೃತಜ್ಞತೆಗಳು ಸಲ್ಲುತ್ತವೆ.

– ಪಾದೇಕಲ್ಲು ವಿಷ್ಣು ಭಟ್ಟ



# ವಿದ್ವಜ್ಜೀವಿತ



## ಭಾಗ – ಒಂದು



## ಕೃತಿಸರಣಿ

ಪ್ರೊ. ಜಿ. ವೆಂಕಟಸುಬ್ಬಯ್ಯನವರ ಸ್ವಂತ ಕೃತಿಗಳ ಸಮೀಕ್ಷೆ



ಭಾರತದಲ್ಲಿ ಭಾಷೆಯನ್ನು ಕುರಿತ ವ್ಯಾಸಂಗವು ಬಹು ಪ್ರಾಚೀನಕಾಲದಿಂದಲೂ ನಡೆದುಬಂದಿದೆ. ವೇದಗಳ ಕಾಲದಿಂದಲೇ ಭಾಷೆಯ ಅಧ್ಯಯನ ಮೊದಲಾಯಿತೆನ್ನಬೇಕು. ವೈದಿಕನಿಘಂಟು ವೇದಗಳಲ್ಲಿ ಬರುವ ಕ್ಲಿಷ್ಟಶಬ್ದಗಳ ಅರ್ಥವನ್ನು ವಿವರಿಸುತ್ತದೆ. ಯಾಸ್ಕನು ತನ್ನ ನಿರುಕ್ತದಲ್ಲಿ ಶಬ್ದಗಳ ವ್ಯುತ್ಪತ್ತಿಯನ್ನು ನಿರ್ಧರಿಸಲು ಪ್ರಯತ್ನಪಟ್ಟಿದ್ದಾನೆ. ಸಂಸ್ಕೃತವೇ ನಮ್ಮ ದೇಶದ ಅತಿಪ್ರಾಚೀನವಾದ ಭಾಷೆಯಾದುದರಿಂದ ಅದರ ಪ್ರಭಾವವು ಇತರ ಎಲ್ಲ ಭಾಷೆಗಳ ಮೇಲೆ ಅಗಾಧವಾಗಿ ಆಗಿದೆ. ಆದುದರಿಂದ ಕನ್ನಡ ಮುಂತಾದ ದೇಶಭಾಷೆಗಳ ವಿದ್ವಾಂಸರು ಆಯಾ ಭಾಷೆಗಳ ವ್ಯಾಕರಣವನ್ನು ರಚಿಸುವಾಗ ಸಂಸ್ಕೃತದ ವ್ಯಾಕರಣದ ವಿಧಾನವನ್ನೇ ಅನುಸರಿಸಿದರು. ಅಷ್ಟೇ ಅಲ್ಲ, ಎಲ್ಲ ಭಾಷೆಗಳೂ ಸಂಸ್ಕೃತಜನ್ಯವಾದ ಭಾಷೆಗಳು ಎಂದು ತೀರ್ಮಾನಿಸಿಬಿಟ್ಟರು. ಕೆಲವರು ಕನ್ನಡದ ವ್ಯಾಕರಣಕಾರರು ಕನ್ನಡ ವ್ಯಾಕರಣವನ್ನು ಸಂಸ್ಕೃತಭಾಷೆಯಲ್ಲಿಯೇ ರಚಿಸಿದರು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

# ಸಮಯ-ಸಂದರ್ಭ-ಸನ್ನಿವೇಶ

ಪ್ರೊ. ಪಿ. ಶ್ರೀಕೃಷ್ಣ ಭಟ್

ನಿಘಂಟುತಜ್ಞ, ಭಾಷಾವಿಜ್ಞಾನಿ, ಘನವಿದ್ವಾಂಸ, ಶ್ರೇಷ್ಠ ಪ್ರಾಧ್ಯಾಪಕ ಹೀಗೆ ಹಲವಾರು ನೆಲೆಗಳಲ್ಲಿ ಖ್ಯಾತರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರ ೫೮ ಬಿಡಿಬರಹಗಳ ಸಂಕಲನ 'ಸಮಯ-ಸಂದರ್ಭ-ಸನ್ನಿವೇಶ'. ಅವರು ಬೇರೆ ಬೇರೆ ಕಾಲ, ಸಂದರ್ಭ, ಸ್ಥಳಗಳಲ್ಲಿ ಮಾಡಿದ ಭಾಷಣಗಳ, ಬರೆದ ವಿಮರ್ಶಾತ್ಮಕ ಬರಹಗಳ, ವಿವಿಧ ಕೃತಿಗಳಿಗೆ ಬರೆದ ಮುನ್ನುಡಿಗಳ, ಕೆಲವು ಕೃತಿಗಳ ಕುರಿತು ಬರೆದ ಪರಿಚಯ ಲೇಖನಗಳ ಸಂಗ್ರಹವಿದು. ಹಿರಿಯ ವಿದ್ವಾಂಸರೊಬ್ಬರ ವಿಸ್ತೃತವಾದ ಹಾಗೂ ಆಳವಾದ ವ್ಯಾಸಂಗವನ್ನು, ಆಸಕ್ತಿಯ ವೈವಿಧ್ಯವನ್ನು ಪಾಂಡಿತ್ಯದ ಅಗಾಧತೆಯನ್ನು, ಅವರ ಸ್ನೇಹಪರತೆಯನ್ನು, ಸಾಹಿತ್ಯಸಂಸ್ಕೃತಿಯ ಸಂವರ್ಧನೆಗಾಗಿ ಅವರು ನೀಡುವ ಪ್ರೋತ್ಸಾಹವನ್ನು ತಿಳಿಯಪಡಿಸುವಲ್ಲಿ ಈ ಕೃತಿ ಸಮರ್ಥವಾಗಿದೆ. ಲೇಖಕರೇ ಹೇಳಿಕೊಂಡಿದ್ದಾರೆ: 'ಒಂದು ಕಾಲ, ಒಂದು ಸಂದರ್ಭ, ಒಂದು ಸ್ಥಳ ಇವುಗಳು ಒಟ್ಟಾದಾಗ ನಾನು ಅನೇಕ ಲೇಖನಗಳನ್ನು ಬರೆದದ್ದುಂಟು; ಅನೇಕ ಭಾಷಣಗಳನ್ನು ಮಾಡಿದ್ದುಂಟು. ಇವೆಲ್ಲವೂ ಎಲ್ಲೆಲ್ಲೋ ದಾಖಲಾಗಿದ್ದುದೂ ನಿಜ. ಅನೇಕ ಯುವಕ ಯುವತಿಯರು ರಚಿಸಿದ ಪ್ರಥಮಕೃತಿಗಳಿಗೆ ಪ್ರೋತ್ಸಾಹ-ದಾಯಕವಾದ ಮುನ್ನುಡಿಗಳನ್ನು ಬರೆದುಕೊಟ್ಟದ್ದೂ ಉಂಟು. ಇವುಗಳಲ್ಲಿ ಶೇಕಡಾ ಐವತ್ತರಷ್ಟು ನನ್ನ ಬಳಿ ಇಲ್ಲ. ಕೆಲವು ದೊರಕಲೇ ಇಲ್ಲ. ಹೀಗೆ ಅಕಸ್ಮಾತ್ ದೊರಕಿದ ಕೆಲವನ್ನು ಇಲ್ಲಿ ಕೂಡಿಸಿ ಪ್ರಕಾಶಪಡಿಸಿದ್ದೇನೆ'. [ಲೇಖಕನ ಅರಿಕೆ : ಪು ೧೧೧] ಈ ಹಿನ್ನೆಲೆಯಲ್ಲೇ ಈ ಸಂಕಲನವನ್ನೂ ಕಾಣಬೇಕು. ಇಲ್ಲಿರುವ ಲೇಖನಗಳಿಗೆ ಯಾವ ಏಕಸೂತ್ರವೂ ಹೊಂದುವುದಿಲ್ಲ. ಏಕೆಂದರೆ ಪ್ರತಿಯೊಂದಕ್ಕೂ ಇರುವ ಹಿನ್ನೆಲೆ ಬೇರೆ ಬೇರೆ.

1949ರಿಂದ 2008ರವರೆಗೆ ಸುಮಾರು ೬೦ ವರ್ಷಗಳ ಕಾಲಾವಧಿಯಲ್ಲಿ ಪ್ರಕಟಗೊಂಡ ಲೇಖನಗಳು ಇಲ್ಲಿ ಸಂಕಲಿತವಾಗಿವೆ. ಪುಟಗಳ ವ್ಯಾಪ್ತಿಯ ದೃಷ್ಟಿಯಿಂದ ಕಡಮೆಯೆಂದರೆ ಒಂದು ಪುಟ [ಗಮಕ ಗೀತ ರೂಪಕ], ಹೆಚ್ಚೆಂದರೆ ೨೪ ಪುಟಗಳ [ಕನ್ನಡ ಮನಸ್ಸು-ಸಾಹಿತಿಯ ಜವಾಬ್ದಾರಿ] ಬರಹಗಳು ಇಲ್ಲಿವೆ. ಕಾಲದ ದೃಷ್ಟಿಯಿಂದ ಅತಿ ಹಳೆಯ ಲೇಖನವೆಂದರೆ 'ಕವಿತಾವಿಹಾರ-ಷಟ್ಪದಿ' [ಜೀವನ, 1949],

ಇತ್ತೀಚೆಗಿನವೆಂದರೆ 'ಶಿಷ್ಟಜಾನಪದ', 'ಮಹಾಮಹೋಪಾಧ್ಯಾಯ ಡಾ. ಆರ್. ಸತ್ಯನಾರಾಯಣ ಅವರ ಸನ್ಮಾನದ ಭಾಷಣ' ಮತ್ತು 'ಪರಂಪರೆ' [2008].

ಈ ಸಂಕಲನದಲ್ಲಿರುವ ಬರಹಗಳನ್ನು ಸ್ಥೂಲವಾಗಿ ಭಾಷಣಗಳು, ಲೇಖನಗಳು, ಕೃತಿಗಳನ್ನು ಕುರಿತ ಪರಿಚಯಲೇಖನಗಳು, ಮುನ್ನುಡಿಗಳು ಮತ್ತು ಇತರ ಲೇಖನಗಳು ಎಂದು ವರ್ಗೀಕರಿಸಬಹುದು. ಮೂರು ಲೇಖನಗಳನ್ನು ಬಿಟ್ಟರೆ ಚುಕ್ಕಿ ಚಿತ್ರಕಾರ ಮೋಹನ್ ವರ್ಣೇಕರ್ (1999), ಶಾಸ್ತ್ರೀಯ? ಭಾಷೆಯಾಗಿ ಕನ್ನಡ (2006) ಮತ್ತು ಕನಕದಾಸರ ಮಾರ್ಗ (2007) ಉಳಿದೆಲ್ಲ ಲೇಖನಗಳ ಸಂದರ್ಭ ಮತ್ತು ಅವು ಪ್ರಕಟಗೊಂಡ ಬಗೆಗೆ ನಮೂದುಗಳಿವೆ. ೫೭ ಲೇಖನಗಳ ಪ್ರಕಟನೆಯ ವರ್ಷಗಳನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ. 'ಕನ್ನಡ ಪದನಿಧಿ – ಕನ್ನಡದ ಥೆಸಾರಸ್' ಎಂಬ ಲೇಖನ ಪ್ರಕಟವಾದ ವರ್ಷವನ್ನು ನಮೂದಿಸಲಾಗಿಲ್ಲ.

**ಭಾಷಣಗಳು:**

ಪ್ರೊ. ಜಿ. ವೆಂಕಟಸುಬ್ಬಯ್ಯನವರು ಒಳ್ಳೆಯ ಮಾತುಗಾರರು. ಈ ಸಂಕಲನ-ದಲ್ಲಿರುವ ಅವರ ಹತ್ತು ಭಾಷಣಗಳಲ್ಲಿ ಒಂದು ರಾಷ್ಟ್ರೀಯ ಸಮ್ಮೇಳನದ ಅಧ್ಯಕ್ಷ ಭಾಷಣ [ಕನ್ನಡ ಮನಸ್ಸು – ಸಾಹಿತಿಯ ಜವಾಬ್ದಾರಿ] ಮತ್ತೊಂದು ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣ [ನನ್ನ ತಾಲ್ಲೂಕಿನ ಮೊದಲ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ]. ಉಳಿದುವು ಪುಸ್ತಕ ದಿನಾಚರಣೆ, ನಾಡಹಬ್ಬ, ಉಪಾಧ್ಯಾಯರ ಸಮ್ಮೇಳನ, ಸನ್ಮಾನಸಮಾರಂಭ ಮುಂತಾದುವುಗಳಲ್ಲಿ ಸಂದ-ರ್ಭೋಚಿತವಾಗಿ ಮಾಡಿದ ಭಾಷಣಗಳು. ಸಮಯ, ಸಂದರ್ಭಗಳಿಗನುಸರಿಸಿ ನಿಶ್ಚಿತ ಮಿತಿಯೊಳಗೆ ನಡೆದ ಭಾಷಣಗಳು. ಅವರ ವ್ಯಾಪಕವಾದ ವ್ಯಾಸಂಗ ಮತ್ತು ಲೋಕಾನುಭವ ಅವರ ಭಾಷಣಗಳುದ್ದಕ್ಕೂ ಪ್ರತಿಬಿಂಬಿತವಾಗುತ್ತವೆ.

'ಕನ್ನಡ ಮನಸ್ಸು–ಸಾಹಿತಿಯ ಜವಾಬ್ದಾರಿ' ಇದು ಆಳ್ವಾಸ್ ನುಡಿಸಿರಿ-2007ರಲ್ಲಿ ಮಾಡಿದ ಅಧ್ಯಕ್ಷ ಭಾಷಣ. ಈ ಸಂಕಲನದ ಒಂದು ಮಹತ್ತ್ವದ ಲೇಖನವಿದು. 'ಕನ್ನಡ ಮನಸ್ಸು–ಸಾಹಿತಿಯ ಜವಾಬ್ದಾರಿ' ಎಂಬ ಚೌಕಟ್ಟಿನೊಳಗೆ ನಡೆಯುವ ಆ ಸಮಾರಂಭಕ್ಕೆ ಕಳಶವಿಟ್ಟಂತೆ ಈ ಭಾಷಣವಿದೆ. 'ಕನ್ನಡ ಮನಸ್ಸು' ಎಂದರೇನೆಂಬುದನ್ನು ನಿರ್ದಿಷ್ಟಗೊಳಿಸಿ, ಅದು ಸಾಧಿತವಾಗುವ ಬಗೆಯನ್ನು ವಿಶದಪಡಿಸಿ, ಕನ್ನಡಸಂಸ್ಕೃತಿ ಬೆಳವಣಿಗೆಗೊಂಡ ರೀತಿಯನ್ನು ನಿರೂಪಿಸಿ, ಕನ್ನಡ ಮನಸ್ಸಿನ ವಿವಿಧ ಮುಖಗಳನ್ನು ಇಲ್ಲಿ ಅನಾವರಣಗೊಳಿಸಲಾಗಿದೆ. ಕೆ. ಎಸ್. ನರಸಿಂಹ ಸ್ವಾಮಿಯವರ 'ಚರಿತ್ರೆ ಮತ್ತು ಪ್ರಶ್ನಪತ್ರಿಕೆ' ಎಂಬ ಕವನವನ್ನು ಉದಾಹರಿಸಿ, ಚರಿತ್ರೆಯ ಲೇಖಕರು ನಮ್ಮ ಸಂಸ್ಕೃತಿಗೆ ಮಾಡಿದ ಅನ್ಯಾಯವನ್ನು ಬಹಳ ಮಾರ್ಮಿಕವಾಗಿ ಚಿತ್ರಿಸುವ ಆ ಕವನದ ಮೂಲಕ ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ.

'ಕನ್ನಡ ಮನಸ್ಸು' ಮನಸ್ಸು ಮಾಡಿದರೆ, ಏನನ್ನೂ ಫಲಪ್ರದವಾಗಿ ಮಾಡ-ಬಲ್ಲುದು ಎಂಬುದಕ್ಕೆ 'ನೀನಾಸಮ್' ಮಾಡಿದ ಸಾಧನೆಗಳ ವಿವಿಧ ಮುಖಗಳನ್ನು

ಪರಿಚಯಿಸಿದ್ದಾರೆ. 'ಒಂದು ವಿಶ್ವವಿದ್ಯಾಲಯವು ನೆರವೇರಿಸಬಹುದಾದ ಕಾರ್ಯಕ್ರಮವನ್ನು ಮಲೆನಾಡಿನ ಒಂದು ಮೂಲೆಯ ಹಳ್ಳಿಯಲ್ಲಿ ಏರ್ಪಡಿಸಿದ್ದಾರೆ ಎಂದರೆ ಎಂಥ ಸಾಮರ್ಥ್ಯವಿರಬೇಕು ಎಂಬುದು ಗೊತ್ತಾಗುತ್ತದೆ.' (ಪುಟ 217) ಎಂದು ಶ್ಲಾಘಿಸಿರುವುದು ಬರೀ ಪೊಗಳಿಕೆಗಾಗಿ ಅಲ್ಲ. ಅದು ಅಲ್ಲಿಯ ವಾಸ್ತವಿಕತೆಯನ್ನು ಗುರುತಿಸಿರುವುದಾಗಿದೆ. ಇಲ್ಲಿ ಉತ್ತಮಿಕೆಯನ್ನು ಗುರುತಿಸಿ ಮೆಚ್ಚಿಕೊಳ್ಳುವ ಪ್ರೊ. ಜಿ. ವಿಯವರ ಸಹೃದಯತೆಯೂ ವ್ಯಕ್ತವಾಗುತ್ತದೆ. ಅವರು ಉಲ್ಲೇಖಿಸಿದ ಮತ್ತೊಂದು ಸಂಸ್ಥೆ ಡಾ। ಎಚ್. ಸುದರ್ಶನ್ ಸ್ಥಾಪಿಸಿದ 'ವಿವೇಕಾನಂದ ಗಿರಿಜನಕಲ್ಯಾಣ ಕೇಂದ್ರ. 'ನೀನಾಸಮ್' ಸಂಸ್ಕೃತಿ, ಕಲೆಗಳಿಗೆ ಸಂಬಂಧಿಸಿದಂತೆ ಅಸಾಧಾರಣ ಕೊಡುಗೆ ನೀಡಿದರೆ, 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ' ಸಮಾಜಸೇವೆಯ ಕ್ಷೇತ್ರದಲ್ಲಿ ಅದ್ವಿತೀಯಸಾಧನೆ ಮಾಡಿದೆ. ಈ ಸಂಸ್ಥೆಗಳೆರಡೂ ಕನ್ನಡ ಮನಸ್ಸಿನ ಅಸಾಧಾರಣ-ಸಾಧನೆಗಳು ಎಂಬುದನ್ನು ಒತ್ತಿ ಹೇಳಿದ್ದಾರೆ. ಮುಂದುವರಿದು ತಾಯ್ನುಡಿಯ ಪ್ರೀತಿಯನ್ನು ಬೆಳೆಸುವುದು, ಪ್ರಾಥಮಿಕ ಶಾಲೆಗಳಲ್ಲಿ ಸಮರ್ಪಕವಾದ ಉಚ್ಚಾರಶಿಕ್ಷಣ ನೀಡುವುದು, ಕಿರಿಯರು ಹಿರಿಯರು ಎಂಬ ವ್ಯತ್ಯಾಸವಿಲ್ಲದೆ ಸರ್ವರೂ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳುವುದು, ಭಾಷಾಶುದ್ಧಿ, ಸಮೂಹಮಾಧ್ಯಮಗಳ ಜವಾಬ್ದಾರಿ – ಹೀಗೆ ಹತ್ತು ಹಲವು ವಿಷಯಗಳ ಬಗ್ಗೆ, ಕ್ಷ-ಕಿರಣ ಬೀರಿದ್ದಾರೆ. ಕೊನೆಯಲ್ಲಿ ತನ್ನ ಬಾಳಿಗೆಂದು ಹಿರಿಯರು ತಿಳಿಸಿದ ಸೂತ್ರವನ್ನು ಸಭೆಯ ಮುಂದಿಡುತ್ತಾರೆ.

'ನಾಡನ್ನು ಪ್ರೀತಿಸಿ – ಬಾಳು ಬೆಳ್ಳಿಯಾಗುತ್ತದೆ.
ಭಾಷೆಯನ್ನು ಪ್ರೀತಿಸಿ – ಬಾಳು ಬಂಗಾರವಾಗುತ್ತದೆ
ಬಾಳನ್ನೇ ಪ್ರೀತಿಸಿ – ಬದುಕು ಜೀವನ್ಮುಕ್ತವಾಗುತ್ತದೆ.' (ಪುಟ 228)

ಪ್ರೊ. ಜಿ. ವೆಂಕಟಸುಬ್ಬಯ್ಯನವರ ವ್ಯಕ್ತಿತ್ವ, ಧೋರಣೆಗಳು ಮತ್ತು ನಾಡುನುಡಿಯ ಬಗೆಗಿನ ಅವರ ಚಿಂತನೆಗಳನ್ನು ಈ ಸೂತ್ರದ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ.

ಶ್ರೀರಂಗಪಟ್ಟಣ ತಾಲ್ಲೂಕಿನ ಪ್ರಥಮ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷಭಾಷಣ ಈ ಸಂಕಲನದ ಮತ್ತೊಂದು ಮಹತ್ತ್ವಪೂರ್ಣವಾದ ಲೇಖನ (2006). ಶ್ರೀರಂಗಪಟ್ಟಣದ ಚಾರಿತ್ರಿಕ ಹಿನ್ನೆಲೆಯೊಂದಿಗೆ ಆರಂಭಗೊಳ್ಳುವ ಭಾಷಣದಲ್ಲಿ ಅಲ್ಲಿಯ ಸಾಹಿತ್ಯದ ಹಿನ್ನೆಲೆ, ಶಾಸನಸಂಪತ್ತು, ಮಂಡ್ಯ ಜಿಲ್ಲೆಯ ಇತಿಹಾಸ ಮುಂತಾದುವುಗಳನ್ನು ಹೇಳಿದ ಬಳಿಕ ಕನ್ನಡ ಸಾಹಿತ್ಯ ನಡೆದು ಬಂದ ದಾರಿಯನ್ನು ಸ್ಥೂಲವಾಗಿ ಅವಲೋಕಿಸುತ್ತಾರೆ. ಶಿಕ್ಷಣಕ್ಷೇತ್ರದಲ್ಲಿ ಕನ್ನಡ ಭಾಷೆಗಾಗು-ತ್ತಿರುವ ಅನ್ಯಾಯದತ್ತ ನಮ್ಮ ಗಮನಸೆಳೆದು, ಹಳಗನ್ನಡದ ಬಗೆಗಿನ ಅವಜ್ಞೆಗೆ ಸಮೂಹಮಾಧ್ಯಮಗಳು ತೋರುವ ಭಾಷಾಶುದ್ಧಿಯ ಬಗೆಗಿನ ಅಸಡ್ಡೆಗೆ ನೊಂದು ನುಡಿಯುತ್ತಾರೆ. ಭಾಷಾವಿಜ್ಞಾನಿ ಮತ್ತು ನಿಘಂಟುತಜ್ಞನ ಪ್ರಜ್ಞೆಯೂ ಇಲ್ಲಿ ಕೆಲಸ ಮಾಡುತ್ತದೆ. ಮನಬಂದಂತೆ ಬಳಸುವ 'ಈಕರಣ' ಪ್ರತ್ಯಯಗಳ ಮತ್ತು ಶಬ್ದಗಳ ಅಶುದ್ಧ ರೂಪಗಳ ಬಗ್ಗೆ ಎಚ್ಚರವಹಿಸುವಂತೆ ಒತ್ತಾಯಿಸುತ್ತಾರೆ.

ಸಾಹಿತ್ಯದ ಸಾಧನೆಗಳ ಬಗ್ಗೆ ಹೇಳುತ್ತಾ, 'ಸರಿ ತಪ್ಪುಗಳನ್ನು ಗುರುತಿಸಿ ವಿವೇಕದಿಂದ ಬದುಕುವ ವ್ಯವಹಾರ ಕೌಶಲವನ್ನು ಸಾಹಿತ್ಯ ತಂದು ಕೊಡುತ್ತದೆ' (ಪುಟ 204) ಎಂಬುದು ತಮ್ಮ ಅನುಭವವಾಗಿರುವುದಾಗಿ ಸ್ಪಷ್ಟಪಡಿಸುತ್ತಾರೆ. ಅವರು ತಮ್ಮ ಭಾಷಣದಲ್ಲಿ ಸಂದರ್ಭಕ್ಕೆ ತಕ್ಕಂತೆ ಹಿತವಚನಗಳನ್ನು ನುಡಿಯುತ್ತಾರೆ. ಪುಸ್ತಕ ದಿನಾಚಾರಣೆಯ ಸಂದರ್ಭದಲ್ಲಿ ವಾಚನದ ಮಹತ್ತ್ವವನ್ನು, ಸಂಸ್ಕೃತವಿದ್ವಾಂಸರ ಸಭೆಯಲ್ಲಿ ಸಂಸ್ಕೃತದ ಶಾಸ್ತ್ರಗ್ರಂಥಗಳನ್ನು ಕನ್ನಡಕ್ಕೆ ಅನುವಾದ ಮಾಡಬೇಕಾದ ಅಗತ್ಯವನ್ನು, ಉಪಾಧ್ಯಾಯರ ಸಮ್ಮೇಳನದಲ್ಲಿ ಕನ್ನಡ ಭಾಷಾಬೋಧಕನ ಅರ್ಹತೆ, ಶಿಕ್ಷಕನಿಗೆ ತನ್ನ ವೃತ್ತಿಯಲ್ಲಿರಬೇಕಾದ ಆಸಕ್ತಿ, ಪ್ರೇಮ ತೃಪ್ತಿ ಮತ್ತು ನೈತಿಕತೆಯ ಅಗತ್ಯವನ್ನು ಸಾರಿ ಹೇಳುತ್ತಾರೆ. ತಾವು ಕಣ್ಣಿಂದ ಕಂಡ, ಕಿವಿಯಾರೆ ಕೇಳಿದ ವಿಷಯಗಳನ್ನು ಸಾಂದರ್ಭಿಕವಾಗಿ ಮತ್ತು ಔಚಿತ್ಯಪೂರ್ಣವಾಗಿ ಉಲ್ಲೇಖಿಸುವುದ-ರಿಂದ ಅವರ ಭಾಷಣಗಳು ಕಳೆಕಟ್ಟುತ್ತವೆ.

**ಲೇಖನಗಳು:**

ಕೆಲವು ಸಾಂದರ್ಭಿಕ ಲೇಖನಗಳು (ಕುವೆಂಪು ಅವರಿಗೆ 'ರಾಷ್ಟ್ರಕವಿ' ಪ್ರಶಸ್ತಿ ಬಂದ ಸಂದರ್ಭ), ಸಂಭಾವನ ಹಾಗೂ ಸಂಸ್ಮರಣಗ್ರಂಥಗಳಿಗಾಗಿ ಬರೆದ ಲೇಖನ-ಗಳು, ಗ್ರಂಥಪರಾಮರ್ಶೆಯ ಬರಹಗಳು ಮೊದಲಾದ ಸುಮಾರು ಹತ್ತು ಲೇಖನಗಳು ಈ ವ್ಯಾಪ್ತಿಯಲ್ಲಿ ಬರುತ್ತದೆ.

ಕನ್ನಡದ ರಾಷ್ಟ್ರಕವಿ 'ಕುವೆಂಪು' (ಜೀವನ, 1962) ಒಂದು ಗಮನಾರ್ಹ ಲೇಖನ. ಪ್ರೊ. ಜಿ.ವಿ ಅವರು ರಾಷ್ಟ್ರಕವಿಗಳನ್ನು ಅತ್ಯಂತಸಮೀಪದಿಂದ ಕಂಡವರು. ಅವರ 'ಸ್ವರಚಿತ ಕವನವಾಚನ'ವನ್ನು ಕಂಡು, ಕೇಳಿ ಆಸ್ವಾದಿಸಿದವರು. ಕುವೆಂಪು ಸಾಹಿತ್ಯವನ್ನು ಅಮೂಲಾಗ್ರವಾಗಿ ಅಧ್ಯಯನಮಾಡಿದವರು. ಆದುದರಿಂದ ಅವರ ಲೇಖನದಲ್ಲಿ ಕುವೆಂಪು ಅವರ ಕುರಿತು, ಅವರ ಸಾಹಿತ್ಯದ ಕುರಿತು ಕುತೂಹಲಕರ-ವಾದ ವಿಷಯಗಳು ಬರುತ್ತವೆ. ಈ ಲೇಖನದಲ್ಲಿ ಕುವೆಂಪು ಅವರ ಸುದೀರ್ಘವಾದ ಸಾರಸ್ವತ ತಪಸ್ಸು, ಅವರ ವ್ಯಕ್ತಿತ್ವದ ಹಿರಿಮೆ, ಸಾಹಿತ್ಯದ ಸಮಸ್ತ ಪ್ರಕಾರಗಳಲ್ಲೂ ಕೃತಿ ರಚಿಸಿದ ಹಾಗೂ ಎಲ್ಲದರಲ್ಲೂ ಭವ್ಯತೆ ಸಾಧಿಸಿದ ಅವರ ಮಹಾಕಾರ್ಯವನ್ನು ಬಹಳ ಸೊಗಸಾಗಿ ಬಣ್ಣಿಸಿದ್ದಾರೆ.

'ಜೀವನದ ನೂರುಮುಖಗಳನ್ನು ಅಷ್ಟೇ ವಿವಿಧ ದೃಷ್ಟಿಕೋನಗಳಿಂದ ಕಂಡು ಅವೆಲ್ಲಕ್ಕೂ ತಮ್ಮ ಕಲ್ಪನೆಯ ಮಾಯೆಯನ್ನು ಬೀಸಿ ರಸಸ್ಯಂದಿಯಾಗಿಸಿ ಓದುಗರನ್ನು ನಗಿಸಿ, ಅಳಿಸಿ, ಕೆರಳಿಸಿ, ಸಮಾಧಾನಮಾಡಿ, ತೃಪ್ತಿಪಡಿಸಿ, ನಿರಾಶರನ್ನಾಗಿ ಮಾಡಿ, ಜೀವನದಲ್ಲಿ ಕಾಣುವ ಭವ್ಯತೆ, ವೀರ, ಸ್ಥೈರ್ಯ, ಕರುಣೆ, ಕನಿಕರ, ಸಂಸ್ಕೃತಿ ಮುಂತಾದ ಸಾವಿರಾರು ವಿಷಯಗಳನ್ನು ಪ್ರತಿಪಾದಿಸುವ ಈ ಕವಿ ಮಹಾಕವಿ-ಯೆನ್ನುವುದರಲ್ಲಿ ಏನಾಶ್ಚರ್ಯ! ಕನ್ನಡದ ಕೆಚ್ಚು ಇದು' (ಪುಟ 4) ಎಂಬ ವಿವರಣೆ ಕುವೆಂಪು ಅವರ ಹಿರಿಮೆಯನ್ನು ಎತ್ತಿ ತೋರಿಸುವುದರೊಂದಿಗೆ ಲೇಖಕರ ಶೈಲಿಯ ಸೊಗಸಿಗೂ ಕನ್ನಡಿಹಿಡಿಯುತ್ತದೆ.

'ಅಹಲ್ಯಾಪ್ರಸಂಗ–ವಿದ್ವತ್ಕವಿಯ ಸೃಷ್ಟಿ' (2003) ಇನ್ನೊಂದು ಗಮನ ಸೆಳೆಯುವ ಲೇಖನ. ಡಿವಿಜಿಯವರ 'ಶ್ರೀರಾಮಪರೀಕ್ಷಣಂ' ಗ್ರಂಥದಲ್ಲಿ 'ಅಹಲ್ಯೆಯ ಪ್ರಶ್ನೆ'ಯನ್ನು ಕುರಿತು ಡಿವಿಜಿ ಕಂಡುಕೊಂಡ ಉತ್ತರವನ್ನು ಈ ಲೇಖನದಲ್ಲಿ ಬಹಳ ಸೊಗಸಾಗಿ ಸಮೀಕ್ಷಿಸಲಾಗಿದೆ. 'ಕವಿತಾವಿಹಾರ–ಷಟ್ಪದಿ' (ಜೀವನ, 1949) ಎಂಬ ಮತ್ತೊಂದು ಲೇಖನದಲ್ಲಿ ಷಟ್ಪದಿಯ ಸೊಗಸನ್ನು, ಕನ್ನಡದಲ್ಲಿ ಷಟ್ಪದಿ ಬೆಳೆದು ಬಂದ ದಾರಿಯನ್ನು, ವಾರ್ಧಕಷಟ್ಪದಿಯಲ್ಲಿ ಕಾಣುವ ಗಾಂಭೀರ್ಯ–ವೈಭವಗಳನ್ನು, ರಾಘವಾಂಕ ಹಾಗೂ ಲಕ್ಷ್ಮೀಶನ ವಾರ್ಧಕಷಟ್ಪದಿಗಳ ಸ್ವಾರಸ್ಯವನ್ನು, ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ. ಮಿಕ್ಕೆಲ್ಲ ಲೇಖನಗಳೂ ಪ್ರೊ. ಜಿ. ವೆಂಕಟಸುಬ್ಬಯ್ಯನವರ ವೈದುಷ್ಯ, ವಿಮರ್ಶನದೃಷ್ಟಿ, ಸಜ್ಜನಿಕೆಗಳನ್ನು ತೆರೆದಿಡುತ್ತವೆ.

**'ಕೃತಿಪರಿಚಯ' ಲೇಖನಗಳು :**

ಸಿರಿಭೂವಲಯ, ಗೋಪಿಕೋನ್ಮಾದ, ವಚನರಾಮಾಯಣ, ಕನ್ನಡ ಹಸ್ತಪ್ರತಿ ಶಾಸ್ತ್ರ, ಕನ್ನಡ ಪದನಿಧಿ.... ಹೀಗೆ 'ಕೃತಿಪರಿಚಯ' ನೀಡುವಂಥ ಹದಿನಾರು ಲೇಖನಗಳು ಈ ಸಂಕಲನದಲ್ಲಿವೆ. ಆಯಾ ಕೃತಿಗಳ ಸ್ವರೂಪ, ಹಿನ್ನೆಲೆ, ಗುಣದೋಷ ವಿಚಾರಗಳು ಮುಂತಾದುವನ್ನು ಸರಳವಾದ ಶೈಲಿಯಲ್ಲಿ ಪರಿಣಾಮಕಾರಿಯಾಗಿ ನಿರೂಪಿಸುವ ಲೇಖನಗಳಿವು. 'ಗೋಪಿಕೋನ್ಮಾದ – ಒಂದು ವಿವರಣೆ' (2008) ಎಂಬ ಲೇಖನದಲ್ಲಿ 'ಗೋಪಿಕೋನ್ಮಾದ' ಪದದ ಕುರಿತಾದ ಜಿಜ್ಞಾಸೆ, ಸಂಸ್ಕೃತದ 'ಗೋಪಿಕೋನ್ಮಾದ' ಕಾವ್ಯದ ಸ್ವರೂಪ, ಹಿನ್ನೆಲೆ, ಆ ಕಾವ್ಯದ ಕನ್ನಡ ಅನುವಾದದ ಸೊಗಸು – ಎಲ್ಲವನ್ನೂ ಅತ್ಯಂತ ಸಮರ್ಥವಾಗಿ ವಿವರಿಸಲಾಗಿದೆ.

'ಕನ್ನಡ ಪದನಿಧಿ – ಕನ್ನಡದ ಥೆಸಾರೆಸ್' ಎಂಬ ಲೇಖನವು ಕನ್ನಡದ ಅಪೂರ್ವಕೃತಿಯೊಂದನ್ನು ಪರಿಚಯಿಸುತ್ತದೆ. ಈ ಲೇಖನದಲ್ಲಿ ಸಾಕಷ್ಟು ಹೊಸ ಮಾಹಿತಿಗಳನ್ನು ಕೊಡಲಾಗಿದೆ. 'Thesaurus' ಎಂಬ ಪದದ ಮೂಲವನ್ನು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಕಂಡುಕೊಂಡು, ಅದರ ಬಗೆಗಿನ ಹಲವಾರು ವಿವರಗಳನ್ನು ಮುಂದಿಡುತ್ತಾರೆ. 'Thesaurus ಲೇಖಕರಿಗೂ ಭಾಷಣಕಾರರಿಗೂ ಅಗತ್ಯವಾದ ಗ್ರಂಥ. ತಾನು ಏನೋ ಹೇಳಬೇಕಾಗಿದೆ, ಆದರೆ ತನ್ನ ಶಬ್ದ ಸಂಪತ್ತಿನಲ್ಲಿ ಅದಕ್ಕೆ ಸರಿಯಾದ ಶಬ್ದವು ದೊರಕುತ್ತಿಲ್ಲ. ಅಂಥ ವಿಚಿತ್ರವಾದ ಶಬ್ದವನ್ನು ಕ್ಷಣಮಾತ್ರದಲ್ಲಿ ನೀಡುವ ಗ್ರಂಥ ಅದು' (ಪುಟ: 109) ಎಂದು ಥೆಸಾರೆಸನ್ನು ಪರಿಚಯಿಸುತ್ತಾರೆ. ಥೆಸಾರೆಸ್ ಬೆಳೆದು ಬಂದ ಬಗೆ; ಸಂಸ್ಕೃತದಲ್ಲಿರುವ ಅಮರ–ಸಿಂಹನ ನಾಮಲಿಂಗಾನುಶಾಸನವು ಒಂದು ಪ್ರಾಚೀನ ಥೆಸಾರೆಸ್ ಆಗಿ ವಿದ್ವಾಂಸರಿಂದ ಗುರುತಿಸಲ್ಪಟ್ಟ ಬಗೆ ಎಲ್ಲವನ್ನೂ ಎಳೆ ಎಳೆಯಾಗಿ ಬಿಡಿಸಿ ಹೇಳುತ್ತಾರೆ. 'ಕನ್ನಡ ಪದನಿಧಿ'ಯ ಗುಣದೋಷಗಳನ್ನು ಎತ್ತಿ ತೋರಿಸುತ್ತಾರೆ. ನಿಘಂಟುತಜ್ಞ ಪ್ರೊ॥ ಜಿ. ವಿ.ಯವರ ಮಾಹಿತಿ ಸಂಗ್ರಹದ, ವಿಶ್ಲೇಷಣವಿಧಾನದ, ನಿರೂಪಣ ಸಾಮರ್ಥ್ಯದ ಮಿಂಚು ಮಿಂಚುವುದನ್ನು ಈ ಲೇಖನದಲ್ಲಿ ಕಾಣಬಹುದಾಗಿದೆ.

ಕೃತಿಗಳನ್ನು ಪರಿಚಯಿಸುವಾಗ ತಮಗೆ ಸರಿತೋರದುದನ್ನು ಮರೆಮಾಚದೆ ಹೇಳುತ್ತಾರೆ. ಒಪ್ಪಿಗೆಯಾದುದನ್ನು ಮುಕ್ತಕಂಠದಿಂದ ಶ್ಲಾಘಿಸುತ್ತಾರೆ. ಡಾ. ಎಂ. ಎಂ. ಕಲಬುರ್ಗಿಯವರ 'ಕನ್ನಡ ಹಸ್ತಪ್ರತಿಶಾಸ್ತ್ರ'ದ ಉತ್ತಮಾಂಶಗಳನ್ನು ಎತ್ತಿ ತೋರಿಸು-ತ್ತಾರೆ. 'ಅಟ್ಟವಣೆ' (ಪಂಪಭಾರತ ೧೧-೪೬) ಎಂಬ ಶಬ್ದದ ಅರ್ಥದ ಬಗ್ಗೆ, ಮೂಲದ ಬಗ್ಗೆ ಪುನರ್ವಿಮರ್ಶೆ ಮಾಡುವಂತೆ ಸೂಚಿಸುತ್ತಾರೆ. (ಪುಟ: ೯೫) ಅವರ ಮೆಚ್ಚಿಕೆಯ ಮಾತಿಗೆ ಒಂದು ಉದಾಹರಣೆಯನ್ನು ನೋಡಬಹುದು. 'ಈ ಗ್ರಂಥದ ವಿಶೇಷಗುಣವಿರುವುದು ಅವರ ಶೈಲಿಯಲ್ಲಿ. ಸರಳವೂ ಸುಂದರವೂ ಆಗಿರುವುದರ ಜತೆಗೆ ಈ ಲೇಖನಗಳು ನಿಷ್ಕೃಷ್ಟವಾದ ಅಭಿಪ್ರಾಯಗಳಿಂದ ಒಡಗೂಡಿದೆ. ಇದೇ ವಿಮರ್ಶನದ ಮುಖ್ಯ ಗುಣವಾಗಿರಬೇಕು. 'ಮುಚ್ಚಿಪೋದ ಕವಿಯುಂ ಕವಿಯೇ' ಎಂಬುದ ಎಷ್ಟು ಸತ್ಯವೋ ಹಾಗೆಯೇ 'ಮುಚ್ಚಿ ಪೇೞ್ವ ರಸಿಕಂ ತಾನೇಂ ರಸಿಕನೋ!' ಎಂಬ ಮಾತು ಸತ್ಯವೇ' (ಪುಟ: ೧೨೮) ಪ್ರೊ. ಜಿ. ವೆಂ. ಅವರ ಸರಳಶೈಲಿಗೂ ಇದೊಂದು ನಿದರ್ಶನ.

**ಮುನ್ನುಡಿಗಳು :**

ಈ ಸಂಕಲನದಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳಿಗೆ ಸೇರಿದ ವಿಭಿನ್ನ ಕೃತಿಗಳಿಗೆ ಬರೆದ ಒಟ್ಟು ಹದಿನೈದು ಮುನ್ನುಡಿಗಳಿವೆ. ಕವಿನಮನ (ಪ್ರವಾಸ ಕಥನ), ಅಂಬುರುಹದಳ (ಯಕ್ಷಗಾನ), ಕವಿ ಕಂಡ ಕವಿ (ಕವನಸಂಕಲನ), ಮುಕ್ತಮಣಿ ಮಾಲೆ (ಸುಭಾಷಿತಸಂಗ್ರಹ), ಮುಖವಾಡಗಳು (ಕಥಾಸಂಕಲನ), ಚಿಟ್ಟೆಸ್ವರ (ಪ್ರಬಂಧ ಸಂಕಲನ] – ಹೀಗೆ ವಿಭಿನ್ನ ಸಾಹಿತ್ಯಪ್ರಕಾರಗಳಿಗೆ ಸೇರಿದ ಹಲವಾರು ಕೃತಿಗಳಿಗೆ ಮುನ್ನುಡಿ ಬರೆದು ಪ್ರೋತ್ಸಾಹದ ಮಾತುಗಳನ್ನಾಡಿದ್ದಾರೆ. ಪ್ರತಿಯೊಂದು ಮುನ್ನುಡಿ-ಯಲ್ಲಿ ಅವರ ಅಧ್ಯಯನಶೀಲತೆ, ವ್ಯವಸ್ಥಿತವಾದ ಚಿಂತನೆ ಎದ್ದು ಕಾಣುತ್ತವೆ. ಆ ಕೃತಿ ರೂಪುಗೊಳ್ಳುವುದರ ಹಿನ್ನೆಲೆ, ಆ ಸಾಹಿತ್ಯಪ್ರಕಾರದ ಸ್ವರೂಪ, ಹುಟ್ಟು, ಬೆಳವಣಿಗೆಗಳ ಬಗ್ಗೆಯೂ ಅವರ ವಿವರಣೆ ಬರುತ್ತದೆ. ಗುಣದೋಷಗಳ ಸೂಚನೆ-ಗಳೊಂದಿಗೆ ಲೇಖಕರಿಗೆ ಪ್ರೋತ್ಸಾಹದಾಯಕವಾದ ಮಾತುಗಳನ್ನು ಬರೆಯುತ್ತಾರೆ. 'ಒಂದು ರಸಪ್ರವಾಸ' ಎಂಬ ಲೇಖನವು 'ಕವಿನಮನ' ಎಂಬ ಪ್ರವಾಸ ಕಥನಕ್ಕೆ ಅವರು ಬರೆದ ಮುನ್ನುಡಿ. ಇದು ಅವರ ಅರ್ಥವತ್ತಾದ ಮುನ್ನುಡಿಗಳಿಗೆ ಒಂದು ಒಳ್ಳೆಯ ನಿದರ್ಶನ. ಸಣ್ಣಕತೆಗಳ ಕುರಿತು ಬರೆಯುವಂತೆಯೇ, ಯಕ್ಷಗಾನದ ಕುರಿತೂ ಅವರು ಬರೆಯಬಲ್ಲರು. ಸುಭಾಷಿತಗಳ ಕುರಿತು ಬರೆಯುವಂತೆಯೇ ಸ್ತ್ರೀವಾದದ ಬಗ್ಗೆಯೂ ಬರೆಯಬಲ್ಲರು. ಯಾವುದೇ ಸಾಹಿತ್ಯ, ಕಲೆಯ ಕುರಿತು ಅಧ್ಯಯನ-ಪೂರ್ಣವಾಗಿ ಬರೆಯುವಲ್ಲಿ ಅವರು ಸಿದ್ಧಹಸ್ತರು ಎಂಬುದು ಈ ಸಂಕಲನದಿಂದ ಸಿದ್ಧವಾಗುತ್ತದೆ.

**ಇತರ ಲೇಖನಗಳು :**

ಚುಕ್ಕಿ ಚಿತ್ರಕಾರ ಮೋಹನ್ ವರ್ಣೇಕರ್ (1999), ಶಾಸ್ತ್ರೀಯ ? ಭಾಷೆಯಾಗಿ ಕನ್ನಡ (2006) ಮತ್ತು ಕನಕದಾಸರ ಮಾರ್ಗ (2007) ಇವು ಮೂರು ಸಂದರ್ಭ

ಸೂಚನೆಯಿಲ್ಲದ ಲೇಖನಗಳು. ಕನ್ನಡ ಲೇಖಕರ ಚಿತ್ರಗಳನ್ನು ಚುಕ್ಕಿಚಿತ್ರಗಳಲ್ಲಿ ಮೂಡಿಸುವವರು ಮೋಹನ್ ವರ್ಣೇಕರ್. ಅವರು ಬರಹಗಾರರೂ ಹೌದು. ನೂರು ಜನ ಕನ್ನಡದ ಸಾಹಿತಿಗಳನ್ನು ಚುಕ್ಕಿ ಚಿತ್ರಗಳಲ್ಲಿ ಮೂಡಿಸಿ ಒಂದು ಹೊತ್ತಗೆಯನ್ನು ಅವರು ಹೊರತಂದಿದ್ದಾರೆ. ಅವರು ನಿರ್ಮಿಸಿದ ಚುಕ್ಕಿಚಿತ್ರಗಳನ್ನು ಮಾತ್ರವಲ್ಲ, ಅವುಗಳ ಮಹತ್ತ್ವ ಮತ್ತು ಪ್ರಯೋಜನಗಳನ್ನು ಬಹಳ ಸಮರ್ಥವಾಗಿ ಈ ಲೇಖನದಲ್ಲಿ ಪ್ರತಿಪಾದಿಸಲಾಗಿದೆ.

'ಶಾಸ್ತ್ರೀಯ? ಭಾಷೆಯಾಗಿ ಕನ್ನಡ' ಎಂಬ ಲೇಖನವು ಗಾತ್ರದಲ್ಲಿ ಚಿಕ್ಕ-ದಾದರೂ (ಎರಡು ಪುಟಗಳು ಮಾತ್ರ) ಅತ್ಯಂತ ಮಹತ್ತ್ವದ ವಿಚಾರಗಳನ್ನು ಒಳಗೊಂಡ ಲೇಖನವಾಗಿದೆ. ಆಂಗ್ಲಭಾಷೆಯ 'Classical Language' ಎಂಬುದಕ್ಕೆ ಕನ್ನಡದಲ್ಲಿ ಸೂಕ್ತವಾದ ಪದ 'ಅಭಿಜಾತ ಭಾಷೆ'. ಹಾಗಾದರೆ 'ಶಾಸ್ತ್ರೀಯ ಭಾಷೆ' ಎಂಬ ಪದ ಆ ಜಾಗದಲ್ಲಿ ಹೇಗೆ ಬಂತು? ಎಂಬುದು ಪ್ರಶ್ನೆ. ಅದಕ್ಕೆ ಸೂಕ್ತವಾದ ವಿವರಣೆ ಈ ಲೇಖನದಲ್ಲಿದೆ. ಆದುದರಿಂದ ಅದಕ್ಕೆ ಚಾರಿತ್ರಿಕ ಮಹತ್ತ್ವವಿದೆ. ಕನ್ನಡ ಭಾಷೆಗೆ 'ಅಭಿಜಾತ ಭಾಷೆ' ಎಂಬ ಪದವಿಯ ಪ್ರಾಪ್ತಿಗಾಗಿ ಕನ್ನಡಿಗರು, ಕರ್ನಾಟಕ ಸರಕಾರ, ಕನ್ನಡ ಸಂಸದರು ಕೈಗೊಳ್ಳಬೇಕಾದ ಕಾರ್ಯಗಳ ಬಗ್ಗೆಯೂ ಈ ಲೇಖನದಲ್ಲಿ ಸೂಚನೆಗಳಿವೆ.

'ಕನಕದಾಸರ ಮಾರ್ಗ' ಎಂಬ ಲೇಖನದಲ್ಲಿ ದಾಸನಾಗಿ, ಕವಿಯಾಗಿ ಕಾಣಿಸಿಕೊಂಡ ಕನಕದಾಸನನ್ನು ಆತನ ಕೃತಿಗಳ ಮೂಲಕ ಕಾಣುವ ಪ್ರಯತ್ನ ಮಾಡಲಾಗಿದೆ. ಅವನ ಬದುಕನ್ನು, ವ್ಯಕ್ತಿತ್ವವನ್ನು ಮತ್ತು ಆತನ ಕೃತಿಗಳ ಮಹತ್ತ್ವ-ವನ್ನು ಅರ್ಥವತ್ತಾಗಿ ವಿವರಿಸಲಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಇದೊಂದು ಒಳ್ಳೆಯ ಲೇಖನಸಂಕಲನ. ಇದರಲ್ಲಿರುವ ಒಂದೊಂದು ಬರಹವೂ ಸಾಕಷ್ಟು ಮಾಹಿತಿಗಳನ್ನು ಒಳಗೊಂಡಿದೆ. ಪ್ರೊ. ಜಿ. ವೆಂಕಟಸುಬ್ಬಯ್ಯನವರ ಬಹುಶ್ರುತತ್ವವನ್ನು, ಸ್ನೇಹಶೀಲ ವ್ಯಕ್ತಿತ್ವವನ್ನು, ನಾಡು ನುಡಿಯ ಬಗೆಗಿನ ಅವರ ಕಾಳಜಿಯನ್ನು, ಅವರ ಸರಳಸುಂದರವಾದ ಶೈಲಿಯನ್ನು ಓದುಗರಿಗೆ ಮನವರಿಕೆಮಾಡಿಕೊಡುವಲ್ಲಿ ಈ ಸಂಕಲನ ನೂರಕ್ಕೆ ನೂರರಷ್ಟು ಸಮರ್ಥವಾಗಿದೆ ಎನ್ನುವುದರಲ್ಲಿ ಎರಡಭಿಪ್ರಾಯವಿಲ್ಲ.



# ‘ಕುಮಾರವ್ಯಾಸನ ಅಂತರಂಗ – ಯುದ್ಧ ಪಂಚಕದಲ್ಲಿ’ ಕೆಲವು ಅನಿಸಿಕೆಗಳು

ಅಮೃತ ಸೋಮೇಶ್ವರ

೭೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷರೂ ಕನ್ನಡವಾಙ್ಮಯವನ್ನು ಬಹುಮುಖವಾಗಿ ಸಂಪನ್ನಗೊಳಿಸಿದ ವಿದ್ವದ್ವ-ರೇಣ್ಯರೂ ಶತಮಾನದತ್ತ ಮುಖಮಾಡಿ ಮುನ್ನಡೆಯುತ್ತಿರುವ ಹಿರಿಯ ನಾಡೋಜರೂ ಆದ ಡಾ. ಜಿ. ವೆಂಕಟಸುಬ್ಬಯ್ಯನವರ ‘ಕುಮಾರವ್ಯಾಸನ ಅಂತರಂಗ-ಯುದ್ಧಪಂಚಕದಲ್ಲಿ’ – ಎಂಬ ಅಧ್ಯಯನಗ್ರಂಥದ ಬಗೆಗೆ ಇಲ್ಲಿ ಒಂದು ಪುಟ್ಟ ಸಮೀಕ್ಷೆಯನ್ನು ಮಾಡಲೆಳಸಲಾಗಿದೆ.

ಆದಿಕವಿ ವಾಲ್ಮೀಕಿಕೃತ ಶ್ರೀಮದ್ರಾಮಾಯಣ ಹಾಗೂ ವೇದವ್ಯಾಸಮಹರ್ಷಿ ಪ್ರಣೀತವಾದ ಶ್ರೀಮನ್ಮಹಾಭಾರತ – ಇವೆರಡು ಇತಿಹಾಸಾಂಶಗರ್ಭಿತ, ಪುರಾಣ-ರೂಪೀ ಮಹಾಕಾವ್ಯಗಳು ಭಾರತ ದೇಶದ ಸಂಸ್ಕೃತಿಪುರುಷನ ಉಭಯನೇತ್ರ-ಗಳಂತಿವೆ ಎಂಬುದು ಸರ್ವಶ್ರುತ. ಈ ಯುಗಮಹಾಕೃತಿಗಳ ಪ್ರಭಾವವು ಶತಮಾನ-ಗಳಿಂದ ಈ ದೇಶದ ಜನಜೀವನ ಹಾಗೂ ಸಾಹಿತ್ಯದ ಮೇಲಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

ಇವುಗಳಲ್ಲಿ ಪುರಾಣಸಹಜವೆನಿಸುವ ಅತಿಮಾನುಷ, ಅತಿರಂಜಿತ ವಿಚಾರಗಳು ಸಾಕಷ್ಟಿದ್ದರೂ, ಮಾನವ ಸಮುದಾಯದ ಅನೇಕ ವಿಲಕ್ಷಣ ವಿದ್ಯಮಾನಗಳು, ಮನೋಲೋಕದ ಜಟಿಲಸಂಕೀರ್ಣತೆಗಳು, ಲೌಕಿಕ, ಅನ್ಯಲೌಕಿಕ ವ್ಯಕ್ತಿಗಳ ಅಸಂಖ್ಯ-ಚರ್ಯೆಗಳು ಮಾನವಸ್ವಭಾವದ ರೂಪಕಗಳು, ಜನಾಂತರಂಗಕ್ಕೆ ಹೃದ್ಯವೆನಿಸತಕ್ಕ ವಿವಿಧ ರಸಭಾವಯುಕ್ತ ಸನ್ನಿವೇಶಗಳು, ಧಾರ್ಮಿಕಬೋಧೆಗಳು ಗಮನೀಯ ಪ್ರಮಾಣದಲ್ಲಿವೆ. ಹಾಗಾಗಿ ಈ ಮಹಾಕೃತಿಗಳು ಇತರ ಹಲವು ಪುರಾಣಗಳಿಗಿಂತ ಜನಮಾನಸಕ್ಕೆ ಹೆಚ್ಚು ಇಷ್ಟಕರವಾಗಿವೆ. ಅದು ಕಾರಣವೆ ಈ ಮಹಾಕಾವ್ಯಗಳನ್ನು ಆಧರಿಸಿ ಭಾರತದ ನಾನಾಭಾಷೆಗಳಲ್ಲಿ ಕಾಲಕಾಲಕ್ಕೆ ಕಾವ್ಯ, ನಾಟಕ, ಕಾದಂಬರಿ, ಕಥೆ, ಯಕ್ಷಗಾನ, ಗೀತರೂಪಕ ಇತ್ಯಾದಿ ಸೃಜನಶೀಲಕೃತಿಗಳಲ್ಲದೆ, ಭಾಷಾಂತರ, ರೂಪಾಂತರ, ವ್ಯಾಖ್ಯಾನ, ಅಧ್ಯಯನ, ವಿಮರ್ಶೆಗಳು ನಡೆಯುತ್ತಲೇ ಬಂದಿವೆ. ವಿದೇಶಗಳಲ್ಲಿ ಕೆಲವೆಡೆ ಈ ಮಹಾಕಾವ್ಯಗಳ ಕಥಾಂತರಗಳು ಪ್ರಚಲಿತವಾಗಿವೆ.

ಅಲ್ಲಿಯೂ ಅಧ್ಯಯನಗಳು ನಡೆಯುದುಂಟು. ಹೀಗೆ ನಿರಂತರವಾಗಿ ಸೃಷ್ಟಿಯಾಗುತ್ತ ಬಂದ ಗ್ರಂಥಸಂತತಿಗಳಿಗೆ ಮಿತಿಯೇ ಇಲ್ಲ. ಕನ್ನಡದಲ್ಲೂ ಈ ಸಂಬಂಧವಾದ ವಾಙ್ಮಯನಿರ್ಮಿತಿ ವಿಪುಲವಾಗಿಯೇ ಇದೆ.

ರಾಮಾಯಣದ ಸ್ವರೂಪ, ಜಾಯಮಾನಕ್ಕೂ, ಮಹಾಭಾರತದ ಸ್ವರೂಪ, ಜಾಯಮಾನಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಗಾತ್ರದಲ್ಲೂ ರಾಮಾಯಣಕ್ಕಿಂತ ಮಹಾ-ಭಾರತವು ತುಂಬ ಬೃಹತ್ತಾಗಿದ್ದು, ಕಥೆಯ ಪಾತಳಿಯು ಬಹಳಷ್ಟು ವಿಸ್ತಾರವಾಗಿದೆ. ಕಥನದ ಬೆಳವಣಿಗೆ ಬಹು ಸಂಕೀರ್ಣವಾಗಿದ್ದು, ಅದರ ಪಾತ್ರ ಪ್ರಪಂಚವು ಸಂಖ್ಯೆಯಲ್ಲೂ ವೈವಿಧ್ಯದಲ್ಲೂ ಅಸಾಧಾರಣವಾಗಿದೆ. ಪ್ರಪಂಚದ ಯಾವುದೇ ಪ್ರಾಚೀನಮಹಾಕಾವ್ಯವೂ ಈ ತೂಕದ್ದಲ್ಲ. ಮಾನವಸ್ವಭಾವದ ಬಹುತೇಕ ಮುಖಗಳು ಈ ಮಹಾಕೃತಿಯಲ್ಲಿ ಅನಾವರಣಗೊಂಡಿವೆ.

ಮಹಾಕವಿ ಕುಮಾರವ್ಯಾಸನ ದಶಪರ್ವಗಳ 'ಗದುಗುಭಾರತ'ವನ್ನು (ಕರ್ಣಾಟ ಭಾರತಕಥಾಮಂಜರಿ) ವಿಶೇಷತಃ 'ಯುದ್ಧಪಂಚಕಗಳನ್ನು' ಪ್ರೊ. ಜಿ. ವೆಂಕಟ-ಸುಬ್ಬಯ್ಯನವರು ಅಧ್ಯಯನಕ್ಕೆ ಎತ್ತಿಕೊಂಡು ಸವಿವರ ವ್ಯಾಖ್ಯಾನಗ್ರಂಥವೊಂದನ್ನು ಸಾಹಿತ್ಯಲೋಕಕ್ಕೆ ನೀಡಿ ಉಪಕರಿಸಿದ್ದಾರೆ. ಈ ಕೃತಿಯು ಏಳು ಅಧ್ಯಾಯಗಳಾಗಿ ವಿನ್ಯಸ್ತಗೊಂಡಿದೆ. ಕನ್ನಡದಲ್ಲಿ ಮಹಾಭಾರತಗಳು ಎಂಬ ಪ್ರಥಮ ಅಧ್ಯಾಯದಲ್ಲಿ, ಹಳಗನ್ನಡದಿಂದ ತೊಡಗಿ ಹೊಸಗನ್ನಡದ ವರೆಗಿನ ವ್ಯಾಪ್ತಿಯಲ್ಲಿ ಕನ್ನಡದಲ್ಲಿ ಮೂಡಿ ಬಂದ ವಿವಿಧ ಪದ್ಯರೂಪದ ಹಾಗೂ ಗದ್ಯರೂಪದ ಮಹಾಭಾರತಕೃತಿಗಳ, ಮಹಾಭಾರತ ಆಧಾರಿತ ನಾಟಕಾದಿ ಸೃಜನಶೀಲಕೃತಿಗಳ, ಹಾಗೂ ಮಹಾಭಾರತ ಸಂಬಂಧೀ ಸಮೀಕ್ಷಾಕೃತಿಗಳ ಕುರಿತಾದೊಂದು ವಿಹಂಗಮದರ್ಶನವಿದೆ. ಇಲ್ಲಿ ಮುಖ್ಯವಾಗಿ ಪಂಪಭಾರತ, ರನ್ನನ ಗದಾಯುದ್ಧ, ಕುಮಾರವ್ಯಾಸನ ಗದುಗುಭಾರತ, ಲಕ್ಷ್ಮೀಶನ ಜೈಮಿನಿಭಾರತ – ಈ ಕಾವ್ಯಗಳ ವೈಶಿಷ್ಟ್ಯಗಳ ಬಗೆಗೆ ತುಸು ಹೆಚ್ಚಿನ ವಿವರಗಳಿದ್ದು, ಉಳಿದ ಕಾವ್ಯಕೃತಿಗಳನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ. ಮುಖ್ಯಕಾವ್ಯಗಳ ಕೆಲವು ರಸಸ್ಥಾನಗಳನ್ನು ಉದಾಹರಿಸಲಾಗಿದೆ.

ಹೊಸಗನ್ನಡ ಗದ್ಯಕೃತಿಗಳಲ್ಲಿ, ಪ್ರೊ. ಎ. ಆರ್. ಕೃಷ್ಣ ಶಾಸ್ತ್ರಿಯವರ 'ವಚನ ಭಾರತ'ವನ್ನು ವಿಶೇಷವಾಗಿ ಲಕ್ಷಿಸಲಾಗಿದೆ. ಮಹಾಭಾರತದ ಸಂಬಂಧವಾದ ಕೃತಿಗಳ ಯಾದಿಯಾಗಲೀ, ಮಾಹಿತಿಯಾಗಲೀ ಇಲ್ಲಿ ಅಪೂರ್ಣವಾಗಿರುವುದು ಸಹಜ.

ಕುಮಾರವ್ಯಾಸ ಭಾರತ – ವಿಮರ್ಶೆಯುಕ್ತವಾದ ಹೊಸ ಪರಿಷ್ಕರಣದ ಆವಶ್ಯಕತೆ ಎಂಬ ಎರಡನೆಯ ಅಧ್ಯಾಯವು ಉಪಯುಕ್ತವೇ ಆದರೂ, ಪ್ರಕೃತ ಗ್ರಂಥದ ಮಟ್ಟಿಗೆ ಅದು ಅನಿವಾರ್ಯ ಅಂಶವೆನಿಸುವುದಿಲ್ಲ. ಇಡಿಯ ಕಾವ್ಯದ ಪೂರ್ಣಪಾಠ ಪ್ರಕಾಶನ ಸಂದರ್ಭದಲ್ಲಿ ಇಂಥ ಲೇಖನ ಹೆಚ್ಚು ಪ್ರಸ್ತುತ.

ಮೂರನೆಯ ಅಧ್ಯಾಯ – ಯುದ್ಧಪಂಚಕದ ಪೂರ್ವರಂಗ ಕವಿಯ ದೃಷ್ಟಿಯಲ್ಲಿ ಶ್ರೀಕೃಷ್ಣನ ಉದ್ದೇಶ ನೆರವೇರುವುದು ಆ ಕಾವ್ಯದ ಕೊನೆಯ ಐದು ಪರ್ವಗಳಲ್ಲಿ ಎಂದರೆ 'ಯುದ್ಧಪಂಚಕದಲ್ಲಿ' ಎಂದೂ ಆ ಜಯಕ್ಕೆ ಆದಿಪಂಚಕದ ಕಥೆ ಕೇವಲ ಪೂರ್ವರಂಗವೆಂದೂ ಲೇಖಕರ ಅಭಿಪ್ರಾಯ. ಇದು ವಿಚಾರಣೀಯ

ವಿಷಯ. ಕವಿಯ ದೃಷ್ಟಿಯಲ್ಲಿ ಇದು ಸಂಗತವಾಗಿದ್ದರೂ, ಕೃಷ್ಣಭಕ್ತಿ ನಿರಪೇಕ್ಷವಾದ ದೃಷ್ಟಿಯಲ್ಲಿ ಹೀಗೆ ಅಭಿಪ್ರಾಯಿಸಬೇಕಾಗಿಲ್ಲ. ಈ ಅಧ್ಯಾಯದಲ್ಲಿ ಇಡಿಯ ಉದ್ಯೋಗ ಪರ್ವದ ವೃತ್ತಾಂತವನ್ನು ಕಥನಾತ್ಮಕವಾಗಿ ನಿರೂಪಿಸಲಾಗಿದೆ. ಕ್ವಚಿತ್ತಾಗಿ ಕೆಲವೆಡೆ ಒಂದಿಷ್ಟು ವಿಮರ್ಶೋಕ್ತಿಗಳಿವೆ. ಉದ್ಯೋಗಪರ್ವದ ಯಥಾವತ್ತಾದ ಕಥನಾಂಶವು ಪ್ರಸಿದ್ಧವಾದ 'ಕೃಷ್ಣಸಂಧಾನ' ಎಂಬ ಯಕ್ಷಗಾನ ಪ್ರಸಂಗದಲ್ಲಿ ನಿರೂಪಿತವಾಗಿದ್ದು ಯಕ್ಷಗಾನಪ್ರಿಯರಾದ ಕರಾವಳಿ ಭಾಗದ ಜನರಿಗೆ ಈ ಕಥಾಭಾಗ ಚೆನ್ನಾಗಿ ಪರಿಚಿತವಾಗಿದೆ.

'ತಿಳಿಯಹೇಳುವೆ ಕೃಷ್ಣಕಥೆಯನು.... ಹಲವು ಜನ್ಮದ ಪಾಪಲೇಪವ ತೊಳೆವ ಜಲವಿದು' – ಎಂದು ಕವಿಯೇ ಘೋಷಿಸಿರುವುದರಿಂದ ಕಾವ್ಯದುದ್ದಕ್ಕೂ ಅಲ್ಲಲ್ಲಿ ಕೃಷ್ಣನ ಸೂತ್ರಧಾರಿ ಮಹಿಮೆ ಹಾಗೂ ಲೀಲಾವಿಲಾಸಗಳು ಎದ್ದು ತೋರುತ್ತವೆ. ಕವಿಯು ಕೃಷ್ಣಭಕ್ತನಾದುದರಿಂದ ಇದು ಸ್ವಾಭಾವಿಕ. ಆದರೆ, ಈ ಮಹಾಕಥನದಲ್ಲಿಯ ವಿವಿಧ ಪಾತ್ರಗಳಿಗೂ ಪ್ರತ್ಯಪ್ರತ್ಯೇಕ ವ್ಯಕ್ತಿತ್ವಗಳಿವೆ, ಚರ್ಯೆಗಳಿವೆ ಎಂಬುದನ್ನು ನಿರ್ಲಕ್ಷಿಸುವಂತಿಲ್ಲ. ಕವಿಯೂ ಅದನ್ನು ಮರೆತಿಲ್ಲ. ಕಥನದಲ್ಲಿಯ ಒಂದು ನಿರ್ದಿಷ್ಟಕ್ರಿಯೆ ಸಂಭವಿಸಲು ವ್ಯಕ್ತಿಗಳ ಮುಖಾಮುಖಿ, ಭಿನ್ನ ಮನಃಪ್ರಕೃತಿ, ಸಂವಾದ ಸಂಘರ್ಷ, ಇತರ ಪ್ರಚೋದನೆಗಳು ಕಾರಣವೇ? ಅಥವಾ ಎಲ್ಲವೂ ಪೂರ್ವ-ನಿಯೋಜಿತವೇ ಎಂಬುದು ನಿಗೂಢವಾದ ಪ್ರಶ್ನೆ. ಎಲ್ಲವೂ ವಿಧಿವಿಲಾಸ ಅಥವಾ ಶ್ರೀಕೃಷ್ಣನ ಸೂತ್ರಧಾರಿಕೆ ಎಂಬುಬಿಟ್ಟರೆ ಮತ್ತೆ ಅಲ್ಲಿ ವಿಚಾರವಿಮರ್ಶೆಗೆ ಎಡೆಯೇ ಇಲ್ಲ. ಹಾಗಾಗಿ ಕಾವ್ಯಮೌಲ್ಯವನ್ನು ವಿವೇಚಿಸುವಾಗ ಶ್ರೀಕೃಷ್ಣನಂಥ ವಿಶಿಷ್ಟವ್ಯಕ್ತಿಗಳ ಮಹಿಮಾಪ್ರಭಾವಳಿಯನ್ನು ಬದಿಗಿಟ್ಟು ಮನುಷ್ಯಸಹಜವಾಗಿ ಅವರನ್ನು ಕಲ್ಪಿಸಬೇಕಾಗುತ್ತದೆ.

ಮಹಾಭಾರತದ ಕೃಷ್ಣನ ನೈಜವ್ಯಕ್ತಿತ್ವ ಯಾವುದು? ಅಥವಾ ಆತನ ಜೀವಿ-ತೋದ್ದೇಶ ಯಾವುದು? ಧರ್ಮವನ್ನು ಎತ್ತಿ ಹಿಡಿಯುವುದೇ? ಅಥವಾ ಪಾಂಡವ-ರನ್ನು ಗೆಲ್ಲಿಸುವುದೇ? ಇಲ್ಲವೆ ಅಪ್ಪಟ ರಾಜಕಾರಣಿಯಾಗಿ ವರ್ತಿಸುವುದೆ? ಯಾವುದೇ ಉಪಾಯಗಳಿಂದ ಕೌರವಪಕ್ಷದ ಸಂಪೂರ್ಣ ಪತನವನ್ನು ಸಾಧಿಸುವುದೇ? – ಈ ಪ್ರಶ್ನೆಗಳು ಮುಖ್ಯವಾಗುತ್ತವೆ. ಉದ್ಯೋಗಪರ್ವದ ಕೃಷ್ಣನ ಹೆಚ್ಚಿನ ನಡೆನುಡಿಗಳೆಲ್ಲವೂ ಚತುರ ರಾಜಕಾರಣಿಯಂತಿದೆಯೇ, ಹೊರತು 'ಜಗನ್ನಾಟಕಸೂತ್ರಧಾರಿ'ಯಂತಿರುವು-ದಿಲ್ಲ. ಕೃಷ್ಣಪ್ರೇರಿತ ಭೇದೋಪಾಯಗಳೆಲ್ಲವೂ ಪಾಂಡವರನ್ನು ಹೇಗಾದರೂ ಗೆಲ್ಲಿಸುವ ತಂತ್ರಗಳೆಂಬುದು ಸ್ಪಷ್ಟ. ಕೃಷ್ಣ ನಿಜವಾಗಿಯೂ 'ಸೆಣಸು ಸೇರದ ದೇವ'ನಾದರೆ, ದ್ರೌಪದಿಯೊಡನೆ 'ಕಾಳಗವನೇ ಬಲಿದು ಬಹೆನು' ಎಂದು ವಚನವಿತ್ತುದರ ಔಚಿತ್ಯವೇನು ಎಂಬ ಪ್ರಶ್ನೆ ಇದಿರಾಗುತ್ತದೆ.

ಇನ್ನು 'ಧರ್ಮಮೂರ್ತಿ'ಯಾದ ಧರ್ಮರಾಯ ಶಲ್ಯನಲ್ಲಿ ಅರಿಕೆಮಾಡಿದ ಮಾತೊಂದನ್ನು ನೋಡೋಣ : 'ಮಾವ, ಯುದ್ಧದಲ್ಲಿ ಕರ್ಣನಿಗೆ ಸಾರಥಿಯಾಗ-ಬೇಕಾಗಿ ಬಂದರೆ, ಯುದ್ಧಸಮಯದಲ್ಲಿ ಅವರ ತೇಜೋವಧೆಯನ್ನು ಮಾಡಿ. ಅವನನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿ ನಮಗೆ ಗೆಲುವು ಬರುವಂತೆ ಮಾಡಬೇಕು!'.

ತಾತ್ಪರ್ಯವೇನೆಂದರೆ, ಮಹಾಭಾರತದಲ್ಲಿ ಮುಖ್ಯವಾಗಿ ಕ್ಷಾತ್ರನೀತಿ ಕಾಣುತ್ತದೆಯೇ ಹೊರತು ಅಪ್ಪಟ ಸಾತ್ತ್ವಿಕಧರ್ಮವಲ್ಲ! ಲೇಖಕರು ಇಲ್ಲಿಯ ಪಾತ್ರಗಳನ್ನು ವಿಮರ್ಶೆಗೆ ಒಡ್ಡಿದ್ದು ಕಂಡುಬರುವುದಿಲ್ಲ.

**ಯುದ್ಧಪ್ರಾರಂಭ – ಭೀಷ್ಮನೇ ಕೌರವನ ಸೇನಾಪತಿ** – ಈ ಚಿಕ್ಕ ಅಧ್ಯಾಯದಲ್ಲಿ ಕೌರವಸೇನೆಯ ಸೇನಾಪತಿ ಯಾರಾಗಬೇಕೆಂಬ ಜಿಜ್ಞಾಸೆ, ಭೀಷ್ಮನೇ ಅದಕ್ಕೆ ತಕ್ಕವನೆಂಬ ನಿರ್ಣಯ, ಆತನನ್ನು ಅದಕ್ಕಾಗಿ ಒಪ್ಪಿಸಿದ್ದು, ಒಂದು ಬಗೆಯ ಅಸಹಾಯಕತೆಯಿಂದಲೇ ಆ ಹೊಣೆಯನ್ನು ಪಿತಾಮಹ ಭೀಷ್ಮ ವಹಿಸಿದ್ದು – ಈ ವಿಚಾರಗಳಿವೆ. ಇಲ್ಲಿ ಕೌರವ, ಕರ್ಣ, ದ್ರೋಣ, ಭೀಷ್ಮರ ವ್ಯಕ್ತಿತ್ವದ ಕೆಲವು ಎಳೆಗಳು ಚಿತ್ರಿತವಾಗಿವೆ.

ಪಾಂಡವರ ಬಗೆಗೆ ಸದಭಿಪ್ರಾಯ, ಕೃಷ್ಣನ ಕುರಿತು ಭಕ್ತಿ–ಗೌರವ ಇದ್ದೂ ಭೀಷ್ಮದ್ರೋಣರು ಕೌರವನ ಪಕ್ಷಕ್ಕೆ ಅಂಟಿಕೊಂಡಿದ್ದುದೂ, ಯುದ್ಧಕ್ಕೂ ಮುಂದಾದುದೂ ಏನೇ ಕಾರಣ ಹೇಳಿದರೂ ಆಶ್ಚರ್ಯಕರವಾಗಿದೆ. ಈ ವೃದ್ಧಪ್ರಾಜ್ಞರಿಗೆ ಧರ್ಮಿಷ್ಠರ ಪಕ್ಷಕ್ಕೆ ನಿಲ್ಲುವುದಕ್ಕಿಂತಲೂ ಸಿಂಹಾಸನನಿಷ್ಠೆಯೇ ಮುಖ್ಯವಾಗಿದೆ. ಪ್ರಾಸಂಗಿಕವಾಗಿ ಹೇಳುವುದಿದ್ದರೆ, ರಾಮಾಯಣದಲ್ಲಿ ಅನ್ಯಾಯಗಾರ ಅಣ್ಣನನ್ನು ತೊರೆದು, ಶ್ರೀರಾಮನ ಪಾಳಯಕ್ಕೆ ಸೇರಿದ ವಿಭೀಷಣನನ್ನು ಧರ್ಮಬಾಹಿರನೆಂದು ಹೇಳಲಾಗಿಲ್ಲ !

**ಕುಮಾರವ್ಯಾಸನ ಸ್ವೋಪಜ್ಞತೆ** – ಇದೊಂದು ಮುಖ್ಯವಾದ ಅಧ್ಯಾಯ. ಸ್ವೋಪಜ್ಞತೆಯ ಬಲವಿಲ್ಲದೆ ಯಾರೂ ಮಹಾಕವಿಗಳಾಗುವುದಾಗಲೀ, ಮಹಾ ಕಲಾವಿದರಾಗುವುದಾಗಲೀ ಸಾಧ್ಯವಾಗದು. ಕುಮಾರವ್ಯಾಸನಲ್ಲಿ ಅಸಾಧಾರಣ ಸ್ವೋಪಜ್ಞತೆ ಇದ್ದುದರಿಂದಲೇ ಆತ ದಾರ್ಶನಿಕಪ್ರತಿಭೆಯ ಮಹರ್ಷಿವ್ಯಾಸನ ಮೇರುಕೃತಿ ಮಹಾಭಾರತವನ್ನು ಕೇವಲ ಅನುವಾದಮಾತ್ರವಾಗಿ ಕನ್ನಡಕ್ಕೆ ಇಳಿಸದೆ, ತನ್ನ ಅಪ್ರತಿಮ ಪ್ರತಿಭಾಸಾಮರ್ಥ್ಯದಿಂದ ಭಾಮಿನೀಷಟ್ಪದಿಯ ಕುಣಿಕುಣಿವ ಜೀವಪೂರ್ಣ ಛಂದಸ್ಸಿನಲ್ಲಿ ಕನ್ನಡಭಾರತವಾಗಿ ಪುನಃಸೃಷ್ಟಿ ಮಾಡುವಂತಾಯ್ತು. ಮಹಾಕವಿ ಪಂಪನಂತೆಯೇ ಕುಮಾರವ್ಯಾಸನು ಕಾವ್ಯದುದ್ದಕ್ಕೂ ಅಲ್ಲಲ್ಲಿ ಚಿಕಿತ್ಸಕ ದೃಷ್ಟಿಯ ತನ್ನ ಸ್ವೋಪಜ್ಞತೆಯನ್ನು ಮೆರೆದಿದ್ದಾನೆ. ಮುಖ್ಯವಾಗಿ ಭೀಷ್ಮಪರ್ವ ಹಾಗೂ ದ್ರೋಣಪರ್ವಗಳಲ್ಲಿ ಕಂಡುಬರುವ ಕೆಲವು ವಿಶಿಷ್ಟಸನ್ನಿವೇಶಗಳು ಸಂಸ್ಕೃತ ಭಾರತ–ದಲ್ಲಿ ಹೇಗಿವೆಯೆಂದು ಉದಾಹರಿಸಿ, ಕುಮಾರವ್ಯಾಸನ ಪ್ರತಿಭೆ ಆ ಭಾಗಗಳನ್ನು ಹೇಗೆ ಕಂಡರಿಸಿದೆ ಎಂದು ಲೇಖಕರು ವಿವರಿಸಿದ್ದಾರೆ. ಕುಮಾರವ್ಯಾಸನು ಚಿತ್ರಿಸಿದ ಕೆಲವು ನೋಟಗಳು ಸಾಹಿತ್ಯಾತ್ಮಕವಾಗಿ ಹೆಚ್ಚು ನಾಟಕೀಯ ರಮ್ಯತೆಯಿಂದ ಕೂಡಿರುವುದನ್ನು ಗಮನಿಸಬಹುದಾಗಿದೆ.

ಯಾವುದೇ ರಸಭಾವವನ್ನು ಅದ್ಭುತವಾಗಿ ನಿಭಾಯಿಸಬಲ್ಲ ಮಹಾಕವಿ ಕುಮಾರವ್ಯಾಸ ವೀರರಸಪ್ರಧಾನವಾದ ಯುದ್ಧರಂಗದ ಚಿತ್ರಣದಲ್ಲಿ ತೋರಿದ ಪ್ರಚಂಡ ಕಾವ್ಯಚೈತನ್ಯ ವಿಸ್ಮಯಾವಹವಾಗಿದೆ. ಭೀಷ್ಮದ್ರೋಣರ ನಿರತಿಶಯ ಶೌರ್ಯ

ವನ್ನು ವರ್ಣಿಸಿದ ಕವಿ, ಅವರನ್ನು ಯುದ್ಧವಿರಾಮಗೊಳಿಸಲಾದ ಸಂದರ್ಭಗಳನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ಸಿಡಿಲ ಮರಿ ಅಭಿಮನ್ಯುವಿನ ಬಗೆಗೆ ಕಟ್ಟಿದ ಶೌರ್ಯ ಕಾವ್ಯವಂತೂ ಅನ್ಯತ್ರ ದುರ್ಲಭವೆಂದೇ ಹೇಳಬೇಕು. ಅಭಿಮನ್ಯುವಿನ ದುರಂತಕ್ಕೆ ಎಲ್ಲರನ್ನೂ ಕಂಬನಿಗರೆಯಿಸುವ ಶಕ್ತಿ ಕುಮಾರವ್ಯಾಸನ ಲೆಕ್ಕಣಿಕೆಗೆ ಇದೆ. ಇನ್ನೊಬ್ಬ ತರುಣವೀರನಾದ ಭೀಮಪುತ್ರ ಘಟೋತ್ಕಚನ ರಾತ್ರಿಯುದ್ಧದ ವೈಖರಿ ಅದ್ಭುತವಾಗಿ ಚಿತ್ರಿತವಾಗಿದೆ.

ಲೋಕಪ್ರಸಿದ್ಧ ಭಗವದ್ಗೀತೆ ಭೀಷ್ಮಪರ್ವದ ಪ್ರಾರಂಭದಲ್ಲಿ ಪ್ರಕಟವಾದುದಾಗಿದೆ. ಸಂಸ್ಕೃತ ಭಾರತದಲ್ಲಿ ಏಳುನೂರು ಶ್ಲೋಕಗಳಲ್ಲಿ ಮೂಡಿದ ಈ ಅಧ್ಯಾತ್ಮಸಂಹಿತೆಯ ಹುರುಳನ್ನೇ ಕುಮಾರವ್ಯಾಸ ಅರುವತ್ತು ಪದ್ಯಗಳಲ್ಲಿ ಸಂಗ್ರಹಿಸಿಕೊಟ್ಟಿದ್ದಾನೆ.

**ಕರುಣಾರ್ದ್ರಪರ್ವ, ಕರ್ಣಪರ್ವ** – ಈ ಅಧ್ಯಾಯದ ಶೀರ್ಷಿಕೆಯೇ ಸೂಚಿಸು-ವಂತೆ ಮುಖ್ಯಕಥಾವಿಷಯ ಯುದ್ಧಪ್ರಸಕ್ತಿಯೇ ಆಗಿದ್ದರೂ ಈ ಪರ್ವದಲ್ಲಿ ಕರುಣರಸ ಹೇಗೆ ಕೂಡಿಬಂದಿದೆ ಎಂಬುದನ್ನು ಲೇಖಕರು ವಿವರಿಸಿದ್ದಾರೆ. ಎರಡೇ ದಿವಸ ನಡೆದ ಯುದ್ಧದ ವೃತ್ತಾಂತವಾದರೂ, ಯುದ್ಧಪಂಚಕದ ಉಳಿದ ಪರ್ವಗಳಿ-ಗಿಂತ ಕರ್ಣಪರ್ವವು ಬಹಳಷ್ಟು ವಿಸ್ತಾರವಾಗಿ ವಿನ್ಯಾಸಗೊಂಡಿದೆ. ಕರ್ಣನೇ ಇಲ್ಲಿ ಕೇಂದ್ರವ್ಯಕ್ತಿ ಎಂಬುದು ವಿದಿತವಿಚಾರ. ದುಷ್ಟಚತುಷ್ಟಯದಲ್ಲಿ ಒಬ್ಬನೆಂದು ಅಪಪ್ರಥೆಗೆ ಒಳಗಾದ ಕರ್ಣನಿಗೆ ಪಂಪನೂ, ಕುಮಾರವ್ಯಾಸನೂ ನೀಡಿದ ಪ್ರಾಶಸ್ತ್ಯ ಗಮನೀಯ. ಪಂಪನಂತೂ ಕರ್ಣನಿಂದಾಗಿಯೇ 'ಕರ್ಣರಸಾಯನಮಲ್ತೆ ಭಾರತಂ' ಎಂದು ಘೋಷಿಸಿಬಿಟ್ಟಿದ್ದಾನೆ. ಮೂಲಭಾರತದಲ್ಲೂ ಕರ್ಣನ ಮಹಾನುಭಾವತ್ವ ಪ್ರಕಟ-ವಾಗುವಲ್ಲಿ ಆತನ ವ್ಯಕ್ತಿಚಿತ್ರಣ ಪರಿಣಾಮಕಾರಿಯಾಗಿಯೇ ಬಂದಿದೆ.

ಯುದ್ಧಪರ್ವಪಂಚಕ ಯುದ್ಧಪ್ರಧಾನವೇ ಆಗಿದ್ದರೂ ಕಥಾದೃಶ್ಯಾವಳಿಗಳು ಭಿನ್ನ ಭಿನ್ನ. ಮಹಾಭಾರತವು 'ಪ್ರತಿಪರ್ವ ರಸೋದಯಂ' ಎನಿಸಿದ ಮಹಾಕಾವ್ಯ. ಈ ಕರ್ಣಪರ್ವವು ಹಲವು ಮಾರ್ಮಿಕಸನ್ನಿವೇಶಗಳಿಂದ ಕಿಕ್ಕಿರಿದಿದೆ. ಕೆಲವಂತೂ ತುಂಬ ನಾಟಕೀಯವಾಗಿವೆ. ವೀರ, ರೌದ್ರ, ಬೀಭತ್ಸರಸಗಳ ಚೆಲ್ಲಾಟಕ್ಕೆ ಇಲ್ಲಿ ಮಿತಿಯೇ ಇಲ್ಲ. ಯುದ್ಧಪ್ರಸಂಗಗಳೇ ಅಲ್ಲದೆ ಸಾಕಷ್ಟು ರೋಚಕ ಸಂವಾದಗಳ ಹೆಣಿಗೆಗಳು ಉದ್ದಕ್ಕೂ ಇವೆ. ಕರ್ಣಸಾರಥ್ಯಕ್ಕೆ ಶಲ್ಯನನ್ನು ಕೌರವ ಒಪ್ಪಿಸಿದ ಚಾಕಚಕ್ಯತೆ, ಶಲ್ಯ-ಕರ್ಣರ ಪರಸ್ಪರ ಮೂದಲಿಕೆಯ ಕಟಕಿಮಾತುಗಳು, ಯುದ್ಧದಲ್ಲಿ ಏಟುತಿಂದು ಗಾಯಪಡೆದ ಧರ್ಮರಾಯ ಹಾಗೂ ಆತನಿಗೆ ರಣಕಣದಲ್ಲಿ ಪೂರ್ಣರಕ್ಷಣೆ ನೀಡಲಾಗದ ಅರ್ಜುನ ಇವರೊಳಗೆ ನಡೆದ ಅತ್ಯಂತ ಅಪ್ರಿಯವಾದ ಕೆಡುನುಡಿಗಳು, ಶ್ರೀಕೃಷ್ಣನ ಮಧ್ಯಸ್ಥಿಕೆ, ಕರ್ಣನ ದಯನೀಯ ದುರಂತಸ್ಥಿತಿಯಲ್ಲಿ ಕರುಣಾರ್ದ್ರ-ಚಿತ್ತನಾಗಿದ್ದ ಅರ್ಜುನನನ್ನು ಶ್ರೀಕೃಷ್ಣ ಕೆರಳಿಸಿ ಕರ್ಣವಧೆಗಾಗಿ ಹುರಿಗೊಳಿಸಿದ ರೀತಿ, ಇತ್ಯಾದಿಗಳು ಮಾತಿನ ವಿವಿಧ ವರಸೆಗಳ ಶಕ್ತಿಯನ್ನು ಸೂಚಿಸುತ್ತವೆ.

ಯುದ್ಧಪ್ರಸಂಗಗಳಲ್ಲಿ ಕರ್ಣಾರ್ಜುನರ ಕಾಳಗ, ಹಾಗೂ ಭೀಮದುಶ್ಶಾಸನರ ಯುದ್ಧ ವಿಶಿಷ್ಟವಾದದ್ದು. ಗದಾಯುದ್ಧ ಪಟುವಾದ ಭೀಮಸೇನ ಇಲ್ಲಿ ಧನು-

ಯುದ್ಧದಲ್ಲಿ ಮೆರೆದುದು ಕುತೂಹಲಕರವಾಗಿದೆ. ಧರ್ಮರಾಯನೂ ಯುದ್ಧ-ರಂಗದಲ್ಲಿ ಚೆನ್ನಾಗಿ ಪ್ರಕಟವಾಗಿದ್ದಾನೆ. ದುಶ್ಶಾಸನವಧೆ ಹಾಗೂ ಭೀಮನಿಂದ ಅವನ ರಕ್ತಪಾನ ಬೀಭತ್ಸಮಯವಾಗಿ ಚಿತ್ರಿತವಾಗಿದೆ. ಭೀಮನ ಇಂಥ ವಿಲಕ್ಷಣಕ್ರೌರ್ಯ-ಯುಕ್ತ ಬೀಭತ್ಸವರ್ತನೆಗೆ ಆತನ ಪೂರ್ವಶಪಥದ ಕಾರಣಕ್ಕಿಂತಲೂ ಆತ ಮಾಡಿರ-ಬಹುದಾದ 'ವೀರಪಾನ'ವೇ ಕಾರಣವೆಂದು ಊಹಿಸಬೇಕಾಗುತ್ತದೆ.

ಕಾವ್ಯದಲ್ಲಿ ಯುದ್ಧಕ್ರಿಯೆಗೆ ಮುನ್ನುಡಿಯಾಗಿ ವೀರರು ವೀರವಾಕ್ಕುಗಳಾಗಿ ಉದ್ಗರಿಸುವ ಮೂದಲಿಕೆಯ ನುಡಿಗಳ ವರಸೆಗಳನ್ನೇ ಯಕ್ಷಗಾನದ ಯುದ್ಧಪ್ರಸಂಗ-ಗಳಲ್ಲಿ ಬಳಸುತ್ತಾರೆನ್ನಬಹುದು.

ಕರ್ಣವಧೆಗೆ ಶ್ರೀಕೃಷ್ಣ ನಿರ್ದೇಶಿಸಿದ ನೀತಿ 'ಧರ್ಮಯುದ್ಧ'ದ ಕಕ್ಷೆಯೊಳಗೆ ಬರುತ್ತದೆಯೇ ಎಂಬುದು ವಿಚಾರಣೀಯ.

**ಯುದ್ಧಪ್ರಪಂಚದ ಉಪಸಂಹಾರ** – ಈ ಅಧ್ಯಾಯದಲ್ಲಿ ಲೇಖಕರು ಶಲ್ಯಪರ್ವ - ಗದಾಪರ್ವಗಳ ಬಗೆಗೆ ಒಟ್ಟಾಗಿ ಕೆಲವು ವಿಚಾರಗಳನ್ನು ಪ್ರಸ್ತಾಪಿಸಿ ಕೃತಿಮುಕ್ತಾಯ-ವನ್ನು ನಿರ್ವಹಿಸಿದ್ದಾರೆ. ಕಾವ್ಯದಲ್ಲಿ ಶಲ್ಯಪರ್ವ ಚಿಕ್ಕಭಾಗವಾಗಿದೆ. ಶಲ್ಯನ ಸೇನಾಪತ್ಯದಲ್ಲಿ ನಡೆದ ಯುದ್ಧದಲ್ಲಿ ಹೇಳಿಕೊಳ್ಳುವಂಥ ಮಾರ್ಮಿಕ ಘಟನೆಗಳಿಲ್ಲ. ಶಲ್ಯನನ್ನು ನಿಪಾತಗೊಳಿಸಿದ ಧರ್ಮರಾಯನ ಶೌರ್ಯವಷ್ಟೇ ಇಲ್ಲಿ ವಿಜೃಂಭಿಸುತ್ತದೆ.

ಛಲದಂಕಮಲ್ಲ ಕೌರವನ ಹೋರಾಟದ ಕೊಟ್ಟ ಕೊನೆಯ ಹಂತದ ವಿವರ-ಗಳಿರುವ ಗದಾಪರ್ವದಲ್ಲಿ ವೀರವೂ ವಿಷಾದವೂ ದಟ್ಟವಾಗಿ ಬೆಸೆದುಕೊಂಡಿದೆ. ಇಲ್ಲಿ ರನ್ನನ ಗದಾಯುದ್ಧದ ಪ್ರಭಾವವಿರುವುದನ್ನು ಗಮನಿಸಬಹುದಾಗಿದೆ. ಅಭಿಮಾನಧನ ದುರ್ಯೋಧನ ವೈಶಂಪಾಯನ ಸರೋವರದೊಳಗೆ ಅಡಗಬೇಕಾದ ಸಂದರ್ಭ, ಭೀಮದುರ್ಯೋಧನರ ಭೀಕರ ಗದಾಯುದ್ಧ, ಕೌರವನ ಊರುಭಂಗ, ಮಕುಟ-ಭಂಗ, ಅಶ್ವತ್ಥಾಮನಿಂದ ರಾತ್ರಿ ಉಪಪಾಂಡವರ ಸಹಿತ ಪಾಂಡವರ ಶಿಬಿರದಲ್ಲಿದ್ದ-ವರೆಲ್ಲರ ಸಾಮೂಹಿಕನಾಶ, ಹಸ್ತಿನಾವತಿಯ ದುಃಖಿತಸ್ತ್ರೀಸಮೂಹದ ಕರುಳರಿಯುವ ವಿಲಾಪ, ಜಲದಾನಕ್ರಿಯೆ ಇತ್ಯಾದಿ ಘಟನೆಗಳು, ಮುಖ್ಯವೆನಿಸುತ್ತವೆ. ಹಾಗೆಯೇ ಭಯಂಕರವಾದ 'ಧೃತರಾಷ್ಟ್ರಾಲಿಂಗನ'ದಿಂದ ಶ್ರೀಕೃಷ್ಣನ ಕೃಪೆಯಿಂದ ಭೀಮನು ಪಾರಾದುದು, ಅಶ್ವತ್ಥಾಮನ ಕುಶಿಕಾಸ್ತ್ರದಿಂದ ಉತ್ತರೆಯ ಗರ್ಭಸ್ಥಶಿಶುವನ್ನು ಕೃಷ್ಣನು ರಕ್ಷಿಸಿದುದು ಕೂಡಾ ಉಲ್ಲೇಖನೀಯ ಘಟನೆಗಳೇ. ಧರ್ಮರಾಜನ ಪಟ್ಟಾಭಿಷೇಕ-ದೊಡನೆ ಗದಾಪರ್ವ 'ಮಂಗಳ'ವನ್ನು ಹೊಂದುತ್ತದೆ.

ಕಥಾವೈಶಿಷ್ಟ್ಯಗಳನ್ನು ನಿರೂಪಿಸುತ್ತ ಬಂದ ಲೇಖಕರು ಇಲ್ಲಿಗೆ ಕುಮಾರ-ವ್ಯಾಸನ ಕೃಷ್ಣನ ಚಿತ್ರ ಪೂರ್ಣವಾಗುತ್ತದೆ ಎನ್ನುತ್ತಾರೆ. ಅದೇನೋ ಸರಿ. ಆದರೆ ವ್ಯಾಸರ ಕೃಷ್ಣಚಿತ್ರ ಪೂರ್ಣವಾಗುವುದಿಲ್ಲ. ಅದು ಮತ್ತೂ ಮುಂದುವರಿದು ಕೃಷ್ಣ-ನಿರ್ಯಾಣದಲ್ಲಿ ಪರಿಸಮಾಪ್ತಿಗೊಳ್ಳುತ್ತದೆ. ಅದಿರಲಿ, ಮುಂದಿನ ಪರ್ವಗಳಲ್ಲಿ ಶಾಸ್ತ್ರೀಯವಾಗಿ ಅದೆಷ್ಟೇ ಮಹತ್ತ್ವದ ವಿಚಾರಗಳಿರಲಿ, ಕಥನಕುತೂಹಲ, ಕಾವ್ಯಸ್ವಾರಸ್ಯ ದೃಷ್ಟಿಗಳಿಂದ ಕವಿ ತನ್ನ ಕಾವ್ಯವನ್ನು ಗದಾಪರ್ವಕ್ಕೆ ನಿಲ್ಲಿಸಿದ್ದೇ ಸಮಂಜಸವಾಗಿದೆ.

ಈ ಕೃತಿಯ ಲೇಖಕರು ಮುಖ್ಯವಾಗಿ ಕಾವ್ಯಸ್ವಾರಸ್ಯನಿರೂಪಣವನ್ನೇ ದೃಷ್ಟಿ-ಯಲ್ಲಿ ಇಟ್ಟುಕೊಂಡಂತಿದೆ. ಕಾವ್ಯದ ಗುಣದೋಷವಿಮರ್ಶೆ ಅವರ ಉದ್ದೇಶವಾಗಿಲ್ಲ. ಹಾಗಾಗಿಯೇ ಅವರು ಕುಮಾರವ್ಯಾಸನ ಕಾವ್ಯನಿರ್ಮಿತಿಯ ಮಿತಿಗಳನ್ನು ಗುರುತಿಸ-ಹೋಗಿಲ್ಲ. 'ಕುಮಾರವ್ಯಾಸ'ನಲ್ಲಿ ಸಾಧಾರಣವಾದುದೆಂಬ ಯಾವ ಭಾಗವೂ ಕಾಣಿಸುವುದಿಲ್ಲ ಎಂಬುದು ಉದಾರವಾದೀ ಪ್ರಶಂಸೆಯಾದೀತೆ ಹೊರತು ಪೂರ್ಣ-ಸತ್ಯವಾಗದು. ಕೆಲವು ಚರ್ವಿತಚರ್ವಣಭಾಗಗಳನ್ನು ಕವಿಯೇ ತುಸು ಮೊಟಕು ಮಾಡಿದ್ದರೆ ಲೇಸಾಗಿತ್ತು ಎನಿಸುತ್ತದೆ. ಕೆಲವೆಡೆ ವ್ಯಕ್ತವಾದ ಕವಿಯ ವಾಚಾಳಿತನವನ್ನು ಧಾರಾಳಿತನವೆಂದು ಬಣ್ಣಿಸಬೇಕಾಗಿಲ್ಲವಲ್ಲ! ವರ್ತಮಾನದಲ್ಲಿ ನಿಂತುಕೊಂಡು ಇತರ ಮಗ್ಗುಲುಗಳಿಂದಲೂ ಮಾಡಬಹುದಾಗಿದ್ದ ವಿಮರ್ಶೆ ಇಲ್ಲಿ ಕಾಣಿಸುವುದಿಲ್ಲ. ಕಾವ್ಯದ ಫಲಶ್ರುತಿಯನ್ನು ಶ್ರುತಪಡಿಸುತ್ತಾ, ಕವಿ ಹೇಳಿರುವ 'ವೇದ ಪಾರಾಯಣದ ಫಲ ಆದರಿಸಿ ಭಾರತದೊಳಂದಕ್ಷರವ ಕೇಳ್ದರಿಗೆ.' ಎಂಬ ಅತಿಶಯೋಕ್ತಿಯ ಪರಮಾವಧಿ-ಯೆನಿಸುವ ಕವಿವಾಕ್ಯವನ್ನು ಲೇಖಕರು ವಿಮರ್ಶಿಸಲೆಳಸುವುದಿಲ್ಲ. 'ಇದು ಕವಿಯ ಉದ್ಗಾರ; ಈ ಮಾತನ್ನು ನಂಬಿ ನಡೆದುಕೊಳ್ಳುವವರು ಇಲ್ಲದಿಲ್ಲ' – ಎಂದಷ್ಟೆ ಹೇಳುತ್ತಾರೆ. ಅಲ್ಲದೆ, 'ಅನನುಕರಣೀಯವಾದ ಈ ಗ್ರಂಥದ ಸತ್ತ್ವ, ತತ್ತ್ವಗಳನ್ನು ಅನುಸರಿಸಿ ಬಾಳುವುದು ಒಂದೇ ನಮಗಿರುವ ದಾರಿ' ಎಂದು ಸಾರುತ್ತಾರೆ. ಇಲ್ಲಿ, ಈ ಗ್ರಂಥದಲ್ಲಿ ಪ್ರತಿಪಾದಿತವಾದ ಆದರ್ಶಗಳು ಅನುಕರಣೀಯ ಎಂಬುದಷ್ಟೆ ಮುಖ್ಯ ಹೊರತು, ಅದೊಂದು ಪುಣ್ಯಪ್ರದವಾದ ಪಾರಾಯಣಗ್ರಂಥವೆಂಬುದಲ್ಲ. ಎಷ್ಟೇ ಮಹತ್ತ್ವದ ಜಗದ್ಭವ್ಯವಾದ ಯುಗಕೃತಿಯೇ ಆಗಲಿ ಅದು ಮಹಾಕವಿಯೊಬ್ಬನ ಪ್ರತಿಭಾಸೃಷ್ಟಿ ತಾನೇ? ಮಹಾಕವಿಯ ಸತ್ತ್ವಪೂರ್ಣ ಕೃತಿಯನ್ನು ಮಹಾಕಾವ್ಯ-ವಾಗಿಯೇ ಆಸ್ವಾದಿಸುವುದು ಆರೋಗ್ಯಕರದೃಷ್ಟಿಯೇ ಹೊರತು ಅದಕ್ಕೆ ಆರಾಧನೆಯ ಆಯಾಮವನ್ನು ಕಲ್ಪಿಸಿದಾಗ, ಕಾವ್ಯಸ್ವಾರಸ್ಯಗ್ರಹಣದ ದಾರಿ ಬೇರಾಗುತ್ತದೆ. ಮಹಾ ಕವಿಪ್ರತಿಭೆಯ ಪ್ರಶಂಸೆ ಬೇರೆ; ಕಾವ್ಯಶರಣಾಗತಿ ಬೇರೆ! ಭಾವಸತ್ಯ ಹಾಗೂ ವಸ್ತುಸತ್ಯಗಳ ನಡುವಿನ ಅಂತರವನ್ನು ಗಣಿಸದೆ ಹೋದಾಗ ಕೆಲವೊಂದು ಸೂಕ್ಷ್ಮ ಸಾಂಸ್ಕೃತಿಕಸಮಸ್ಯೆಗಳು ಏರ್ಪಡುತ್ತವೆ. ಈ ದಿಶೆಯಲ್ಲಿ ಲೇಖಕರು ಒಂದಿಷ್ಟು ಬೆಳಕು ಚೆಲ್ಲುತ್ತಿದ್ದರೆ ಇನ್ನಷ್ಟು ಉಪಕಾರವಾಗುತ್ತಿತ್ತು.

ಅದೇನೇ ಇರಲಿ, ಪ್ರೊ. ಜಿ. ವೆಂ. ಅವರ ಈ ಸಮೀಕ್ಷಾಕೃತಿ ಅನೇಕ ಅಮೂಲ್ಯಮಾಹಿತಿಗಳನ್ನು ಕಲೆಹಾಕಿದ ವಿದ್ವತ್‌ಪರಿಶ್ರಮವನ್ನೊಳಗೊಂಡ ಒಂದು ಉತ್ತಮ ಕಾವ್ಯಕೈಪಿಡಿಯಾಗಿ ಸಾಹಿತ್ಯಪ್ರಿಯರಿಗೆ, ಅದರಲ್ಲೂ ಸಾಹಿತ್ಯದ ವಿದ್ಯಾರ್ಥಿ, ಅಧ್ಯಾಪಕರಿಗೆ ಅತ್ಯಂತ ಸಹಾಯಕವಾಗಿದೆ. ಕಾವ್ಯಸ್ವಾರಸ್ಯಗಳನ್ನು ಸಹೃದಯತೆಯಿಂದ ವಿವರಿಸಿದ ಈ ಕೃತಿ ಒಂದು ಸದಭಿರುಚಿಯ ಸಹೃದಯ ಸಲ್ಲಾಪವಾಗಿದೆ.



# ಸಂಪ್ರದಾಯದ ಜಾಡಿನಲ್ಲಿ 'ಸಾಹಿತ್ಯ ಮತ್ತು ಶಿಕ್ಷಣ'

ಡಾ. ಮಹಾಬಲೇಶ್ವರ ರಾವ್

ಬೆಂಗಳೂರಿನಲ್ಲಿ ನಡೆಯಲಿರುವ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಆಯ್ಕೆಯಾಗಿರುವುದು ನಿಜಕ್ಕೂ ಸಂತೋಷದ ಸಂಗತಿ. ಬಹುಶ್ರುತರೂ, ಭಾಷಾವಿದರೂ ಪರಮಗುರುಗಳೂ ಉದಾರವಾದಿ ಪ್ರಜಾಪ್ರಭುತ್ವವಾದಿ ನಿಲುವಿನವರೂ ಆಗಿರುವ ಪ್ರೊ. ಜಿ. ವಿ ಅವರ ಆಯ್ಕೆ ಇಷ್ಟೊಂದು ತಡವಾಗಿಯಾದರೂ ಆಯಿತಲ್ಲ ಎಂಬುದು ಬೇಸರ ಹಾಗೂ ಸಮಾಧಾನದ ಸಂಗತಿ. ಅವರನ್ನು ಇಷ್ಟು ವರ್ಷಗಳ ಕಾಲ ಕಾಯುವಂತೆ ಮಾಡಬೇಕಾಗಿರಲಿಲ್ಲ. ಕನ್ನಡದ ಸ್ಥಾನಮಾನಗಳ ಬಗ್ಗೆ ಗಂಭೀರ ಆತಂಕಗಳು ಕಂಡುಬಂದಿರುವ ಸಂದರ್ಭದಲ್ಲಿ ಅನುಭವಸಂಪನ್ನರೋರ್ವರು ಅಧ್ಯಕ್ಷಸ್ಥಾನದಿಂದ ಆಡುವ ಮಾತುಗಳಿಗೆ ರಾಜ್ಯದಲ್ಲಿ ವಿಶೇಷಮಹತ್ತ್ವವಿದೆ.

ಪ್ರೊ. ವೆಂಕಟಸುಬ್ಬಯ್ಯನವರು ಬಹುಕಾಲ ಪ್ರಾಧ್ಯಾಪಕರಾಗಿ, ಶಿಕ್ಷಣ ಕಾಲೇಜಿನಲ್ಲಿ ಕನ್ನಡ ಬೋಧನವಿಧಾನಶಾಸ್ತ್ರದ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದವರು. ಸಾಹಿತ್ಯ ಹಾಗೂ ಶಿಕ್ಷಣದ ನಡುವೆ ಇರಬಹುದಾದ ನಿಕಟಬಾಂಧವ್ಯವನ್ನು ತಮ್ಮ ಅಧ್ಯಾಪನದ ಸಂದರ್ಭದಲ್ಲಿ ಗುರುತಿಸಿ ವಿದ್ಯಾರ್ಥಿ ಶಿಕ್ಷಕರಿಗೆ, ಶಿಕ್ಷಕರಿಗೆ, ಪ್ರಶಿಕ್ಷಕರಿಗೆ ಹಾಗೂ ಇತರ ಶ್ರೋತೃಗಳಿಗೆ ಅದನ್ನು ಮಾತಿನ ಮೂಲಕ ಉಣಬಡಿಸಿದವರು. ಸಾಹಿತ್ಯ ಹಾಗೂ ಶಿಕ್ಷಣದ ಬಗ್ಗೆ ವಿವಿಧ ಸಂದರ್ಭಗಳಲ್ಲಿ ಮಾಡಿದ ಭಾಷಣಗಳ ಸಾರಾಂಶಸಂಗ್ರಹವೇ 'ಸಾಹಿತ್ಯ ಮತ್ತು ಶಿಕ್ಷಣ' ಎಂಬ ಹೆಸರಿನಲ್ಲಿ ಕೃತಿರೂಪದಲ್ಲಿ 2000ದಲ್ಲಿ ಅಚ್ಚಾಗಿದೆ. ಪ್ರೊ. ಜಿ. ವಿ. ಅವರ ಕೃತಿರೂಪದಲ್ಲಿ ಒಟ್ಟು ೧೯ ಲೇಖನ-ಗಳಿವೆ. ಕನ್ನಡದ ಬಗೆಗಿನ ಕಳಕಳಿ ಉಪಾಧ್ಯಾಯವೃತ್ತಿ, ಉನ್ನತಶಿಕ್ಷಣ, ಸಾಹಿತ್ಯ ಮತ್ತು ಶಿಕ್ಷಣ ಹಾಗೂ ಒಂದೆರಡು ಸ್ಮರಣಸಂಚಿಕೆಗಳಿಗಾಗಿ ಬರೆದ ಲೇಖನಗಳು ಎಂದು ಈ ಲೇಖನಗಳನ್ನು ಐದುಭಾಗವಾಗಿ ವಿಂಗಡಿಸಿಕೊಳ್ಳಬಹುದು.

'ಶಿಕ್ಷಣದಲ್ಲಿ ಕನ್ನಡ' ಎಂಬ ಲೇಖನದಲ್ಲಿ ಲೇಖಕರು ಕನ್ನಡ ಮಾಧ್ಯಮದ ಸ್ಥೂಲ ಇತಿಹಾಸವನ್ನು ಪ್ರಸ್ತಾಪಿಸಿ ಕನ್ನಡ ಮಾಧ್ಯಮಕ್ಕೆ ಸಿಗಬೇಕಾದ ಬೆಂಬಲ

ಹಿಗಿದಿರುವುದಕ್ಕೆ ಕಾರಣಗಳನ್ನು ಉಲ್ಲೇಖಿಸಿ ನೀಡುವ ಸಲಹೆಗಳು ಪ್ರಾಯೋಗಿಕ-ವಾಗಿವೆ; ಹಾಗೂ ಸರಕಾರ ಸಂಕಲ್ಪ ಮಾಡಿದರೆ ಜಾರಿಗೆ ತರಬಹುದಾದವುಗಳಾಗಿವೆ. ಕರ್ನಾಟಕದಲ್ಲಿ ಆಂಗ್ಲಮಾಧ್ಯಮ ಶಾಲೆಗಳೇ ಇರಕೂಡದು. ಕನ್ನಡವನ್ನು ಕಲಿಸುವ ಅಧ್ಯಾಪಕರು ಎಂ.ಎ., ಬಿ.ಎಡ್. ಮಾಡಿಕೊಂಡಿರಬೇಕು. ಕಾಲೇಜು ಹಂತದಲ್ಲಿ ಕನ್ನಡ ಬೋಧನೆ ಉದ್ದೇಶರಹಿತವಾಗಿದೆ. ಅದು ಉದ್ದೇಶಬದ್ಧವಾಗಿರುವುದಕ್ಕೆ ಉಪನ್ಯಾಸಕರಿಗೆ ಶಿಬಿರಗಳನ್ನೇರ್ಪಡಿಸಬೇಕು. ಕನ್ನಡೇತರರು ಕನ್ನಡವನ್ನು ದ್ವಿತೀಯಭಾಷೆಯಾಗಿ ಕಲಿಯಬೇಕು. ಅಂತಹ ವ್ಯವಸ್ಥೆಯನ್ನು ಜಾರಿಗೆ ತರಬೇಕು ಎಂದು ಪ್ರೊ. ಜಿ. ವಿ. ಅಭಿಪ್ರಾಯಪಡುತ್ತಾರೆ.

'ಕನ್ನಡಭಾಷೆಯಿಂದ ಭಾವೈಕ್ಯ' ಎಂಬ ಲೇಖನದಲ್ಲಿ ನಾವು ಭಾಷಾ ಬಳಕೆಯ ಸಂದರ್ಭದಲ್ಲಿ 'ಮಡಿಸಡಿಲಿಸುವ' ಅಗತ್ಯವನ್ನು ಒತ್ತಿ ಹೇಳುತ್ತಾರಲ್ಲದೆ ಅತಿ ಸಂಸ್ಕೃತಭೂಯಿಷ್ಠತೆಯನ್ನು ಹೊಡೆದೋಡಿಸಬೇಕು. ಪರಭಾಷೆಯ ಪದಗಳನ್ನು ಕನ್ನಡದ ಸ್ವಭಾವಕ್ಕೆ ಒಗ್ಗಿಸಿ ಬಳಸುವುದು ಅಗತ್ಯ ಹಾಗೂ ಜನಮನ್ನಣೆ ದೊರೆತ ಅಶುದ್ಧಪ್ರಯೋಗಗಳನ್ನು ಬಹಿಷ್ಕರಿಸಬೇಕೆಂದಿಲ್ಲ – ಎಂದು ಪ್ರಜಾಪ್ರಭುತ್ವವಾದಿ ನೆಲೆ-ಯಿಂದ ಸೂಚಿಸುತ್ತಾರೆ. ಕನ್ನಡ ನಾಡಿನಲ್ಲಿ ಕನ್ನಡಭಾಷೆಯಲ್ಲೇ ಇರುವ ಅನೇಕ ಭೇದಗಳನ್ನು ಪರಿಗಣಿಸಿಯೂ ಭಾಷೆಯಲ್ಲಿ ಒಂದು ಬಗೆಯ ಐಕ್ಯ ಕಂಡುಬಂದರೆ ಜನರಲ್ಲಿ ಭಾವೈಕ್ಯ ಮೂಡುತ್ತದೆ ಎಂದು ತೀರ್ಮಾನಿಸುತ್ತಾರೆ. ಒಂದು ಪ್ರಾಂತ್ಯದ ಜನರನ್ನು ಒಂದುಗೂಡಿಸುವಲ್ಲಿ ಭಾಷೆ ಪ್ರಧಾನ ಪಾತ್ರವಹಿಸುತ್ತದೆ ಎಂಬ ವಾದ ಒಪ್ಪತಕ್ಕದ್ದೇ. ಆದರೆ ಭಾವೈಕ್ಯವೆಂಬುದು ಹಲವಾರು ಅಂಶಗಳನ್ನು, ಮುಖ್ಯವಾಗಿ ಸಾಮಾಜಿಕ ಆರ್ಥಿಕ ಸಮಾನತೆಯನ್ನು ಆಧರಿಸಿದ ಸಂಕೀರ್ಣಪರಿಕಲ್ಪನೆ. ಭಾಷೈಕ್ಯದಿಂದ ಭಾವೈಕ್ಯ ಸಾಧ್ಯ ಎನ್ನುವ ಪ್ರೊ. ಜಿ. ವಿ. ಅವರ ವಾದ ತೀರ ಸರಳೀಕೃತ ಅಭಿಪ್ರಾಯ ಎನ್ನದೆ ವಿಧಿಯಿಲ್ಲ. ಏಕೆಂದರೆ ಭಾಷೆ, ಧರ್ಮ, ಜಾತಿ, ಪ್ರಾಂತ್ಯ ಇವೆಲ್ಲ ಏಕತೆಯ ಸಾಧನಗಳಾಗಿರುವಂತೆಯೇ ವಿದ್ರೋಹದ, ವಿಘಟನೆಯ ಸಾಧನಗಳೂ ಆಗಿವೆ ಎಂಬುದನ್ನು ನಾವು ಮರೆಯುವಂತಿಲ್ಲ. 'ಕನ್ನಡ ಜಾಗೃತಿ ಎತ್ತಸಾಗಿದೆ' ಎಂಬ ಲೇಖನದಲ್ಲಿ ಜಾಗೃತಿ ಭಾಷೆಗೆ ಮಾತ್ರ ಸಂಬಂಧಪಟ್ಟ ವಿಚಾರವಲ್ಲ. ಅದು ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಹೊಂದಿಕೊಂಡ ಆಲೋಚನೆ ಎಂದು ಸರಿಯಾಗಿಯೇ ಗುರುತಿಸುವ ವೆಂಕಟಸುಬ್ಬಯ್ಯನವರು ಆಡಳಿತ ಕ್ಷೇತ್ರ, ಶಿಕ್ಷಣಕ್ರಮ, ನ್ಯಾಯಾಲಯಗಳು ವೃತ್ತಪತ್ರಿಕೆಗಳ ಪಾತ್ರ, ಅಂಗಡಿ ಬೋರ್ಡುಗಳು ಹೀಗೆ ವಿವಿಧ ಕ್ಷೇತ್ರಗಳಲ್ಲಿ ಕನ್ನಡದ ಸ್ಥಿತಿಗತಿ ಹೇಗಿದೆ ಎಂಬುದನ್ನು ಸ್ಥೂಲವಾಗಿ ವಿಮರ್ಶಿಸಿ ಕೇಂದ್ರ ಸರಕಾರಿ ಕಛೇರಿಗಳ ವಿಕೇಂದ್ರೀಕರಣವಾಗಬೇಕು ಎಂದು ವಾದಿಸುತ್ತಾರೆ. ನ್ಯಾಯಾಲಯಗಳಲ್ಲಿ ನೀಡುವ ತೀರ್ಪು ತೀರ್ಮಾನಗಳು ಕನ್ನಡದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬರಬೇಕೆನ್ನುತ್ತಾರೆ. ಆದರೆ ಅಭಿವೃದ್ಧಿ ಎಂಬುದು ಇಂದು ಜನರನ್ನು ಕಾಡುವ ಜ್ವಲಂತ ಸಮಸ್ಯೆಯಾದರೆ ಕನ್ನಡಿಗರು ತಮ್ಮ ನೆಲ, ಜಲ ಮನ್ನಣೆಯನ್ನು ಕಳೆದುಕೊಳ್ಳುತ್ತಿರುವ ಸಂದರ್ಭವನ್ನು ಈ ಲೇಖನದಲ್ಲಿ ಲೇಖಕರು ವಿಶ್ಲೇಷಣೆ ಮಾಡಲು ಹೋಗುವುದಿಲ್ಲ. ಭಾಷಿಕ ದೃಷ್ಟಿಕೋನದ ಮೇಲುಗತಿ ಕನ್ನಡದ

ಬಗೆಗಿನ ಅವರ ಲೇಖನಗಳ ಮಹತಿ ಎಂಬುದನ್ನು ನಿರಾಯಾಸದಿಂದ ಹೇಳಬಹುದಾಗಿದೆ. 'ಕನ್ನಡ ಭಾಷಾಬೋಧಕನ ಅರ್ಹತೆಗಳು' ಎಂಬ ಲೇಖನ ಬಿ.ಎಡ್. ಕಾಲೇಜಿನ ವಿದ್ಯಾರ್ಥಿ ಶಿಕ್ಷಕರನ್ನು ಉದ್ದೇಶಿಸಿದಂತಿದೆಯಾದರೂ ವಿವಿಧ ಹಂತಗಳಲ್ಲಿ ಕನ್ನಡವನ್ನು ಕಲಿಸುವ ಶಿಕ್ಷಕರ ಅರ್ಹತೆಗಳೇನಿರಬೇಕು ಎಂಬುದನ್ನು ಖಚಿತಪಡಿಸುತ್ತದೆ. ಕನ್ನಡ-ವನ್ನು ಬೋಧನೆ ಮಾಡುವವರು ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಅಧ್ಯಯನ ಮಾಡುವುದು ಒಳಿತು ಎಂಬ ಪ್ರೊ. ಜಿ. ವಿ. ಅವರ ನುಡಿ ಕಿವಿಮಾತಿನಂತಿದೆ. ಕನ್ನಡ ಬೋಧನೆಗೆ ಇಂಗ್ಲಿಷ್ ಜ್ಞಾನ ಅಗತ್ಯವಿಲ್ಲ ಎಂಬ ಅವಿವೇಕ ಹಲವರಲ್ಲಿದೆ. ಈ ಹಿನ್ನೆಲೆಯಲ್ಲಿ ಪ್ರೊ. ಜಿ. ವಿ. ಅವರ ಮಾತು ಮಾರ್ಮಿಕವಾಗಿದೆ.

'ಉಪಾಧ್ಯಾಯವೃತ್ತಿ' ಎಂಬ ಲೇಖನ ಅಧ್ಯಾಪನ ಹೊಟ್ಟೆಪಾಡಿನ ಕೆಲಸವಲ್ಲ, ಅದೊಂದು ಸೇವಾವೃತ್ತಿ. ಉಪಾಧ್ಯಾಯರ ಜೀವನದಲ್ಲಿ ವಿದ್ಯಾರ್ಜನೆ, ವಿದ್ಯಾದಾನ, ವಿದ್ಯಾವರ್ಧನೆ, ವಿದ್ಯಾನುಸರಣಜೀವನ – ಎಂಬ ನಾಲ್ಕು ಮೆಟ್ಟಿಲುಗಳಿವೆ ಎಂಬ ಮಹತ್ತ್ವದ ಅಂಶಗಳ ಮೇಲೆ ಲೇಖಕರು ಬೆಳಕು ಚೆಲ್ಲಿದ್ದಾರೆ. 'ಮಕ್ಕಳು – ಶಿಕ್ಷಕರು' ಲೇಖನದಲ್ಲಿ 'ಶಿಕ್ಷಕ ಸ್ಟೋರ್ ಕೀಪರ್ ಅಲ್ಲ' ಶಿಕ್ಷಣ ಕ್ಷೇತ್ರದಲ್ಲಿ ರಾಜಕೀಯದ ಹಾವಳಿ ಅಧಿಕವಾಗಿದೆ. ಈಗ ಕಲಿಯಲು ಅಶಕ್ತರಾದವರೇ ಅಧ್ಯಾಪಕರಾಗುತ್ತಿದ್ದಾರೆ. ತರಗತಿಗಳಲ್ಲಿ ತಮ್ಮ ಪಾಠಪ್ರವಚನಗಳನ್ನು ಬಿಟ್ಟು ಇತರ ಅಧ್ಯಾಪಕರನ್ನು ಕುರಿತು ಕೀಳುನುಡಿಯುವ ಅಧ್ಯಾಪಕ ಶಾಲೆಯ, ದೇಶದ ಶತ್ರು. ಶಿಕ್ಷಕರು ಮಕ್ಕಳ ಬಗೆಗಿನ ಕರ್ತವ್ಯಗಳ ಬಗ್ಗೆ ಗಮನಹರಿಸಬೇಕು' ಎಂದು ಸದ್ಯದ ಪರಿಸ್ಥಿತಿಯನ್ನು ಅತ್ಯಂತ ಮಾರ್ಮಿಕವಾಗಿ ವಿಶ್ಲೇಷಣೆ ಮಾಡಿದ್ದಾರೆ. 'ಸಾಹಿತ್ಯ ಮತ್ತು ಶಿಕ್ಷಣ' ಎಂಬ ಲೇಖನದಲ್ಲಿ ಹಲವಾರು ಕಾವ್ಯಗಳಿಂದ ಆಯ್ದ ನಿದರ್ಶನಗಳನ್ನು ನೀಡುತ್ತಾ 'ಸಾಹಿತ್ಯ ನೀಡುವ ಶಿಕ್ಷಣ' ಹಾಗೂ 'ಸಾಹಿತ್ಯವನ್ನು ಕುರಿತ ಶಿಕ್ಷಣ'ವನ್ನು ವಿಸ್ತೃತವಾಗಿ ವಿವೇಚಿಸಿದ್ದಾರೆ. ಸಾಹಿತ್ಯಬೋಧಕರಿಗೆ ಇದು ಸಾಂಪ್ರದಾಯಿಕ ಪಥದರ್ಶನದಂತಿದೆ. ಓದಿನಿಂದ ಒದಗುವ ಸಂತೋಷಗಳು, ಗ್ರಂಥಾಲಯಗಳಲ್ಲಿ ವಿವಿಧ ಬಗೆಗಳು, ಮಕ್ಕಳಲ್ಲಿ ಓದಿನ ಆಸಕ್ತಿಮೂಡಿಸುವ ಬಗೆ ಮುಂತಾಗಿ ಇನ್ನಿತರ ಲೇಖನಗಳಲ್ಲಿ ಶಿಕ್ಷಣಾರ್ಥಿಗಳಿಗೆ ಫಲಪ್ರದವಾದ ಜ್ಞಾನ–ಮಾಹಿತಿಯನ್ನು ಲೇಖಕರು ಒದಗಿಸಿದ್ದಾರೆ.

ಈ ಎಲ್ಲ ಲೇಖನಗಳ ವೈಶಿಷ್ಟ್ಯವೆಂದರೆ ಹಳೆಯ ಕಾವ್ಯದಿಂದ ಆಯ್ದ ಭಾಗಗಳು, ಸಂಸ್ಕೃತ ಸುಭಾಷಿತಗಳು, ಆಂಗ್ಲಕಾವ್ಯದಿಂದ ಆಯ್ದ ಸಾಲುಗಳು ಹೀಗೆ ನಿದರ್ಶನಭಂಡಾರವೇ ಇದೆ. ಶುಭ್ರತೆ, ನಿಸ್ಸಂದಿಗ್ಧತೆ, ಖಚಿತತೆ, ಹಿತಮಿತತ್ವ, ತಾರ್ಕಿಕ ಚಿಂತನೆ, ಹೃದ್ಯನಿರೂಪಣೆ ಪ್ರೊ. ವೆಂಕಟಸುಬ್ಬಯ್ಯನವರ ಲೇಖನಗಳ ವೈಶಿಷ್ಟ್ಯ. ನವೋದಯ ಪಂಥದ ಶ್ರೇಷ್ಠಲೇಖಕರಲ್ಲಿ ನಾವು ಕಾಣುವ ಗುಣಗಳು ಪ್ರೊ. ಜಿ. ವಿ. ಅವರ ಲೇಖನಗಳಲ್ಲಿ ನಿಚ್ಚಳವಾಗಿದೆ. ಪರಂಪರೆಯ ಗಾಢಪ್ರಜ್ಞೆ ಹಾಗೂ ಆದರ್ಶದ ಹಂಬಲ ಅವರ ಲೇಖನಗಳ ತಳಹದಿ. ಆದರೆ ಬದಲಾಗುತ್ತಿರುವ ಕಾಲಮಾನದ ಅರಿವು ಅವರಿಗಿದೆ. ಹೊಸ ತಂತ್ರಜ್ಞಾನದ ಸಾಧ್ಯತೆ ಹಾಗೂ ಅಪಾಯಗಳ ಬಗ್ಗೆಯೂ ಎಚ್ಚರವಿದೆ. ಹೀಗಾಗಿ ಲೇಖನಗಳಲ್ಲಿ ಪರಂಪರೆ ಬಗ್ಗೆ ಅತಿಶ್ರದ್ಧೆಯಾಗಲಿ, ಆಧುನಿಕತೆಯ ಬಗೆಗೆ ವಿಪರೀತ ಮೋಹವಾಗಲಿ ಇಲ್ಲ.

ಸಿನಿಕತನಕ್ಕೆ ಒಳಗಾಗದ, ಸಂಪ್ರದಾಯದ ಜಾಡಿನಲ್ಲಿ ಸಾಗಿಬಂದ ನಿಷ್ಕಲ್ಮಷ ಮನಸ್ಸೊಂದು ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಗಳನ್ನು ಪರಿಭಾವಿಸುವ ಕ್ರಮ 'ಸಾಹಿತ್ಯ ಮತ್ತು ಶಿಕ್ಷಣ' ಕೃತಿಯಲ್ಲಿ ಎದ್ದುಕಾಣುತ್ತದೆ. ಕನ್ನಡ ಭಾಷೆ ಹಾಗೂ ಸಾಹಿತ್ಯ ಬೋಧನೆ ಮಾಡುವ ಅಧ್ಯಾಪಕರಿಗೆ ಇದೊಂದು ಯೋಗ್ಯ ಪರಾಮರ್ಶನ ಗ್ರಂಥ.



---

ಪ್ರಪಂಚದಲ್ಲೆಲ್ಲ ನೂತನ ಸೃಷ್ಟಿಯಲ್ಲಿ ಶಬ್ದಗಳ ಮಹಾಜಾಲವೇ ಪ್ರಚಾರಕ್ಕೆ ಬರುತ್ತಿದೆ. ಪ್ರಪಂಚದ ಎಲ್ಲ ಭಾಷೆಗಳೂ ಹೊಸ ಶಬ್ದಗಳನ್ನು ನೇರವಾಗಿ ಆಮದು ಮಾಡುತ್ತಿವೆ. ಈಗಾಗಲೇ ಕನ್ನಡದಲ್ಲಿ ೫೦೦೦ ಎರವಲು ಶಬ್ದಗಳಿವೆ. ಕಂಪ್ಯೂಟರಿನ ಯುಗವಿದು. ವಿಶ್ವವ್ಯಾಪಿಯಾದ ವೈಜ್ಞಾನಿಕ ಸ್ಫೋಟ ನಡೆದಿದೆ. ಕನ್ನಡಕ್ಕೆ ಇವನ್ನು ಅನುವಾದ ಮಾಡಬೇಕೆ? ನೇರವಾಗಿ ಅವುಗಳನ್ನೇ ಉಪಯೋಗಿಸಬೇಕೆ? ಈಗ ಸರಿಯಾದ ಸಮಯ, ವ್ಯಾಪಕವಾದ ಚರ್ಚೆಯಾಗಿ ವಿದ್ವಾಂಸರು, ಜನಸಾಮಾನ್ಯರು, ಭಾಷಾಶಾಸ್ತ್ರ ವಿಶಾರದರು ಬೇಗ ತೀರ್ಪಿತ್ತು ಮಾರ್ಗದರ್ಶನ ಮಾಡಬೇಕು. ನಾನಂತೂ ಕನ್ನಡಕ್ಕೆ ಹೊಂದುವ ಯಾವ ಶಬ್ದವಾದರೂ ನೇರವಾಗಿ ಆಮದು ಮಾಡಲು ಸಿದ್ಧನಾಗಿರುವವನು, ಭಾಷೆಯ ಧ್ವನಿವ್ಯವಸ್ಥೆಗೆ ಹೊಂದದ ಕೆಲವನ್ನು ಅಲ್ಪಸ್ವಲ್ಪ ಬದಲಾವಣೆಯಿಂದ ತಂದುಕೊಂಡುಬಿಡಬೇಕು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಗತಿಪ್ರಜ್ಞೆ – ಹೊಸಗನ್ನಡ ಯುಗದ ಸಾಕ್ಷಿಪ್ರಜ್ಞೆ

ಡಾ. ಮಹೇಶ್ವರಿ ಯು.

ಪ್ರೊ. ಜಿ. ವೆಂಕಟಸುಬ್ಬಯ್ಯನವರು ಹೊಸಗನ್ನಡ ಯುಗದ ಸಾಕ್ಷಿಪ್ರಜ್ಞೆಯಂತೆ ಇರುವವರು. ಹೊಸಗನ್ನಡದ ಆರಂಭಕಾಲದಲ್ಲಿ ಮತ್ತು ವಿಶೇಷವಾಗಿ ನವೋದಯ ಯುಗದಲ್ಲಿ ಭರದಿಂದ ನಡೆದ ಪ್ರಾಚೀನಸಾಹಿತ್ಯದ ಸಂಶೋಧನೆ, ಸಂಪಾದನೆ ಮತ್ತು ಅಧ್ಯಯನಗಳ ಕಂಪನ್ನು ಆವಾಹಿಸಿಕೊಂಡು ಹೊಸಗನ್ನಡದ ಪ್ರಗತಿಯ ಹೆಜ್ಜೆ ಗುರುತುಗಳನ್ನು ಅನುಸರಿಸಿಕೊಂಡು ಬಂದ ಸೂಕ್ಷ್ಮಜೀವಿ ಅವರು. ನಿಡುಗಾಲದ ಬದುಕಿನಲ್ಲಿ ಕನ್ನಡ ಸಾಹಿತ್ಯದ ಗತಿಯೊಂದಿಗೆ ಬೆರೆತು ಭಾಗಿಯಾದ ಅವರ ಬರಹಗಳ ಒಂದು ಸಂಗ್ರಹಕ್ಕೆ 'ಗತಿಪ್ರಜ್ಞೆ' ಎಂಬ ಶೀರ್ಷಿಕೆಯಿತ್ತುದು ಅರ್ಥಪೂರ್ಣ-ವಾಗಿದೆ. ಕವಿರಾಜಮಾರ್ಗದಿಂದ ತೊಡಗಿ ಬಿ. ಸಿ. ರಾಮಚಂದ್ರ ಶರ್ಮರ ಕವಿತೆಗಳ ವರೆಗೆ ಇಲ್ಲಿಯ ಬರಹಗಳ ವ್ಯಾಪ್ತಿ ಇದೆ. ಪ್ರಾಚೀನ ಮತ್ತು ಆಧುನಿಕ ಎಂಬ ಪ್ರತ್ಯೇಕ ವಿಭಾಗಗಳಲ್ಲಿ ವ್ಯವಸ್ಥಿತವಾಗಿಯೇ ಅವುಗಳನ್ನು ಪೋಣಿಸಿ ಕೊಡಲಾಗಿದೆ. ಅರುವತ್ತು ವರ್ಷಗಳ ಅವಧಿಯಲ್ಲಿ ವೆಂಕಟಸುಬ್ಬಯ್ಯನವರು ಬರೆದ ಲೇಖನಗಳ ಆಯ್ದ ಸಂಕಲನವಿದು. ಕನ್ನಡ ವಿಶ್ವವಿದ್ಯಾಲಯದ ಸುವರ್ಣ ಕರ್ನಾಟಕ ಹೊನ್ನಾರುಮಾಲೆ ಯೋಜನೆಯಲ್ಲಿ ಪ್ರಕಟವಾಗುವ ಗೌರವವನ್ನು ಇದು ಪಡೆದದ್ದು ಅತ್ಯಂತ ಸಹಜವಾಗಿದೆ.

ಪ್ರಾಚೀನಕಾವ್ಯಕ್ಕೆ ಸಂಬಂಧಿಸಿದಂತೆ ಕವಿರಾಜಮಾರ್ಗ, ಕಬ್ಬಿಗರಕಾವ, ನೇಮಿಚಂದ್ರ, ಕರ್ಣಾಮೃತ, ವೀರಶೈವ ಷಟ್ಪದೀಕಾವ್ಯ, ಸರ್ವಜ್ಞ, ಸೋಮನಾಥನ ಅಕ್ರೂರಚರಿತ್ರೆ – ಎಂದು ಮುಂತಾಗಿ ಇಲ್ಲಿ ವಿಷಯವೈವಿಧ್ಯ ಇದೆ. ಕನ್ನಡ ಸಾಹಿತ್ಯದಲ್ಲಿ ಚಾಣಕ್ಯ ಹಾಗೂ ರಾಮಾಯಣ ಕುರಿತು ಒಂದು ಅವಲೋಕನ – ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಅದ್ವೈತದರ್ಶನ – ಎಂಬ ಬರಹಗಳನ್ನೊಳ-ಗೊಂಡ ಮಾಹಿತಿ ಸಮೃದ್ಧಿ ಮತ್ತು ಒಳನೋಟಗಳು ವಿಶೇಷವಾಗಿದ್ದು ಗಮನ ಸೆಳೆಯುತ್ತವೆ. ಹಾಗೆ ನೋಡಿದರೆ ಸಂಗ್ರಹದ ಎಲ್ಲ ಬರಹಗಳಲ್ಲೂ ಅವನ್ನು ನಾವು ಕಾಣಬಹುದು. ಒಬ್ಬ ಸೂಕ್ಷ್ಮಪ್ರಜ್ಞೆಯ ಸಂಶೋಧಕ, ನಿರ್ಮಲ ಮನಸ್ಸಿನ ಸಹೃದಯ, ಗುಣಗ್ರಾಹಿಯಾದ ವಿಮರ್ಶಕ – ಈ ಬರಹಗಳಲ್ಲಿ ಒಟ್ಟು ಸೇರಿದ್ದಾರೆ.

ಕವಿರಾಜಮಾರ್ಗದ ಕರ್ತೃವಿನ ಬಗ್ಗೆ ಅದುವರೆಗೆ ಬಂದ ಚರ್ಚೆಗಳನ್ನು ಸಂಗ್ರಹಿಸಿ ಎಂ. ವಿ. ಸೀತಾರಾಮಯ್ಯನವರ ಶ್ರೀನೃಪತುಂಗದೇವಾನುಮತಮಪ್ಪ, ಶ್ರೀವಿಜಯಕೃತ ಕವಿರಾಜಮಾರ್ಗಂ' ಎಂಬ ಕೃತಿಯು ಹೆಚ್ಚು ಸ್ಪಷ್ಟವಾಗಿ ಸಾರುವ ಶ್ರೀವಿಜಯನ ಕರ್ತೃತ್ವವನ್ನು ಇವರ ಬರಹವು ಸಾಧಾರ ಅನುಮೋದಿಸು-ತ್ತದೆ. 'ನೃಪತುಂಗದೇವಾನುಮತ'ವೆಂಬ ಪದಗುಂಫನದಲ್ಲಿ ಶ್ರೀವಿಜಯ ಮತ್ತು ನೃಪತುಂಗನ ಪರಸ್ಪರ ಪ್ರೇಮ ವಿಶ್ವಾಸಗಳನ್ನು ಗುರುತಿಸುವ ವೆಂಕಟಸುಬ್ಬಯ್ಯನವರು ಇಬ್ಬರ ನಡುವೆ ನಡೆದ ಚರ್ಚೆಯ ತೀರ್ಮಾನವೇ ಕವಿರಾಜಮಾರ್ಗ ಎಂಬ ನಿಲುಮೆಗೆ ಬರುತ್ತಾರೆ. ಅಷ್ಟೇ ತಾರ್ಕಿಕವಾಗಿ 'ಶ್ರೀವಿಜಯನ ಹುಟ್ಟೂರು, ವಿದ್ಯಾಭ್ಯಾಸ ಮುಂತಾದವುಗಳನ್ನು ಊಹಿಸುವುದು ಜಿಸಿಲ್ಗುದುರೆಯ ಬೆನ್ನು ಹತ್ತಿದಂತೆ' ಎಂದು ಬರೆಯುತ್ತಾರೆ. ಅಭ್ಯಾಸಸೂಚಿ ಮತ್ತು ಅಡಿಟಿಪ್ಪಣಿಗಳನ್ನು ಪ್ರತ್ಯೇಕವಾಗಿ ಹೊಂದಿರುವ ಈ ಲೇಖನವು ಅಂತಹ ಬರಹದ ಶಿಸ್ತಿಗೆ ಮಾದರಿಯಂತಿದೆ. ನೇಮಿಚಂದ್ರನ ಕುರಿತಾದ ಎರಡು ಪ್ರತ್ಯೇಕ ಲೇಖನಗಳು ಒಟ್ಟಂದದಲ್ಲಿ ಕವಿಯ ಕಾಲದೇಶಾದಿ ಸನ್ನಿವೇಶಗಳಿಂದ ಹಿಡಿದು ಅವನ ಎರಡು ವಿಭಿನ್ನಧಾರೆಯ ಕೃತಿಗಳಾದ 'ಲೀಲಾವತೀಪ್ರಬಂಧ' ಹಾಗೂ 'ನೇಮಿನಾಥಪುರಾಣ'ಗಳ ವಿಸ್ತೃತವಾದ ಪರಿಚಯ-ವನ್ನು, ವಿಮರ್ಶೆಯನ್ನು ಮಾಡಿಕೊಡುತ್ತವೆ.

ಮೊದಲ ಲೇಖನದಲ್ಲಿ ಬೆಳೆದ ಅಡಿಟಿಪ್ಪಣಿಗಳು ಪ್ರತ್ಯೇಕ ಲೇಖನವೆನಿಸುವಷ್ಟು ದೀರ್ಘವೂ ಮಾಹಿತಿಪೂರ್ಣವೂ ಆಗಿದ್ದು ಹೀಗೆ ಉದ್ದುದ್ದ ಅಡಿಟಿಪ್ಪಣಿಗಳಿಂದ ತುಂಬುವ ಸೇಡಿಯಾಪು ಕೃಷ್ಣ ಭಟ್ಟರ ಲೇಖನಗಳನ್ನು ನೆನಪಿಸುತ್ತದೆ. ಇದೇ ಸಾಲಿಗೆ ಸೇರುವ ಮತ್ತೆರಡು ಲೇಖನಗಳು – ಸೋಮನಾಥನ 'ಅಕ್ರೂರಚರಿತ್ರೆ', ಹಾಗೂ 'ತಿಮ್ಮಪ್ಪ ದಾಸರ ಕೃತಿಗಳು'. ಕವಿಕಾಲ, ಕೃತಿಪರಿಚಯದ ಒಂದು ನಿಶ್ಚಿತಸ್ವರೂಪದಲ್ಲಿ ಈ ಬರಹಗಳು ಸಾಗುತ್ತವೆ. ಮೊದಲ ಲೇಖನವು ಅಕ್ರೂರನ ಭಕ್ತಿಯ ಪ್ರಾಧಾನ್ಯವನ್ನು ಭಾಮಿನಿಷಟ್ಪದಿಯಲ್ಲಿ ನಿರೂಪಿಸುವ ಸರಸವಾದ ಕಥನಕಾವ್ಯವನ್ನು ಅದರ ಆಕರವಾದ ಭಾಗವತದ ಪರಂಪರೆಯನ್ನು ಗುರುತಿಸುವುದರೊಂದಿಗೆ – ಪರಿಚಯಿಸುತ್ತದೆ. ಶ್ರೀ ಎಂ. ವಿ. ಸೀತಾರಾಮಯ್ಯನವರೂ ಅವರ ನಿಧನಾನಂತರ ಎನ್. ಎಸ್. ರಾಮ-ಸ್ವಾಮ್ಯೆಯರ್ ಹಾಗೂ ಗೀತಾಚಾರ್ಯರೂ ಶ್ರಮವಹಿಸಿ ಸಂಪಾದಿಸಿದ ತಿಮ್ಮಪ್ಪ ದಾಸರ ಕೃತಿಗಳ ಅನನ್ಯತೆಯನ್ನು ಅದೇ ಹೆಸರಿನ ಬರಹವು ನಿರೂಪಿಸುತ್ತದೆ. ಸಾಮಾನ್ಯವಾಗಿ ಕೀರ್ತನಕಾರರನ್ನು ದ್ವೈತಿಗಳೆಂದು ತಿಳಿಯುವುದು ವಾಡಿಕೆ. ಆದರೆ ಅದ್ವೈತಿಗಳಾದ ತಿಮ್ಮಪ್ಪದಾಸರ ರಚನೆಗಳ ವೈಶಿಷ್ಟ್ಯವು ಅರಿವಿಗೆ ಬರುವಂತೆ ಮಾಡಿದ ಸಂಪಾದಕರ ಕಾರ್ಯ ವೆಂಕಟಸುಬ್ಬಯ್ಯನವರಿಗೆ ಶ್ಲಾಘನೀಯವೆನಿಸುತ್ತದೆ. ಹಾಗೆಯೇ ದಾಸಕೂಟದಲ್ಲಿ ಅದ್ವೈತಿಗಳಾದ ಭಕ್ತರೂ ಇದ್ದರೆಂಬುದಾಗಿ ಲೇಖಕರು ಸೋದಾಹರಣ ತಿಳಿಸಿದ್ದಾರೆ.

ಪುಟ್ಟ ಲೇಖನವಾದರೂ ಬಹಳ ಕುತೂಹಲಕರವಾಗಿ ಶೋಧನೆಯನ್ನು ಮಾಡುವ 'ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಅದ್ವೈತದರ್ಶನ' ಹಲವು ಆಕರಗಳನ್ನು

ಪರಿಶೀಲಿಸುತ್ತದೆ. 'ಕನ್ನಡ ಸಾಹಿತ್ಯದಲ್ಲಿ ಚಾಣಕ್ಯ' ಎಂಬ ಬರಹ ಕೂಡ ಹೊಸ ವಿಷಯವನ್ನೆತ್ತಿಕೊಂಡು ಬೆಳಕು ಚೆಲ್ಲಲು ಇದು ಉದ್ದೇಶಿಸಿದೆ.

ಚಾಣಕ್ಯನ ಬದುಕು ಸಾಧನೆಯು ಕನ್ನಡ ಸಾಹಿತ್ಯದ ಇತಿವೃತ್ತವಾಗಿ ರುದ್ರಮೂರ್ತಿ ಶಾಸ್ತ್ರಿಗಳಿಂದ ಬೃಹತ್ ಕಾದಂಬರಿಯಾಗಿ ರೂಪುಗೊಂಡ ಹಿನ್ನೆಲೆಯನ್ನು ಲೇಖಕರು ಪರಿಶೀಲಿಸುತ್ತಾರೆ. ಈ ಸಂದರ್ಭದಲ್ಲಿ ಡಾ. ಲುಡ್ವಿಕ್ ಸ್ಟರ್ನಬಾಕ್ ಎಂಬ ವಿದೇಶಿ ವಿದ್ವಾಂಸರೊಬ್ಬರು ಚಾಣಕ್ಯನಿಗೆ ಸಂಬಂಧಿಸಿ ಜೀವಮಾನದ ತಪಸ್ಸೆಂಬಂತೆ ನಡೆಸಿದ ಸಂಶೋಧನೆಯನ್ನೂ ಪ್ರಕಟಿಸಿದ ಪುಸ್ತಕ ಸಂಪುಟಗಳನ್ನು ಉಲ್ಲೇಖಿಸುತ್ತಾರೆ. ಆ ಸಮೃದ್ಧಮಾಹಿತಿಯನ್ನು ಆಕರವಾಗಿಟ್ಟುಕೊಂಡು ಸಾವಿರಪುಟಗಳ ಒಂದು ಕಾದಂಬರಿಯನ್ನು ರಚಿಸುವ ಸಾಹಸಮಯ ಕಾರ್ಯದ ಪ್ರೇರಣೆ ಏನಿದ್ದಿರಬಹುದು ಎಂದೂ ತರ್ಕಿಸಿದ್ದಾರೆ.

'ರಾಮಾಯಣ ಕುರಿತು – ಒಂದು ಅವಲೋಕನ'ವನ್ನು ನಡೆಸುವ ಈ ಸಂಗ್ರಹದ ಬರಹವು ತಿಲಕಪ್ರಾಯವಾಗಿದೆ. ರಾಮಾಯಣದ ಪ್ರಾಚೀನತೆ, ಅದರ ರಚನೆಯ ಮೂಲೋದ್ದೇಶ, ರಾಮನ ವ್ಯಕ್ತಿತ್ವದ ಆದರ್ಶಮಯತೆ, ರಾಮಾಯಣದ ಇತರ ಪಾತ್ರಗಳು – ಹೀಗೆ ಒಂದೊಂದಾಗಿ ಪರಿಶೀಲಿಸುತ್ತ ಸಾಗುವ ಲೇಖನವು ಸೀತೆ ರಾಮಾಯಣದ ಕೇಂದ್ರಬಿಂದು ಎಂಬ ವಿಚಾರವನ್ನು ಮುಖ್ಯವಾಗಿ ಚರ್ಚಿಸುತ್ತದೆ. ರಾಮಾಯಣದ ಕಾವ್ಯಗುಣವನ್ನು ಸೋದಾಹರಣ ನಿರೂಪಿಸುತ್ತದೆ. ಲೇಖನದ ಕೊನೆಯ ಭಾಗದಲ್ಲಿ ನೀಡಲಾದ, ಭಾರತದ ಭಾಷೆಗಳಲ್ಲಿ ರಾಮಾಯಣಗಳ ಕುರಿತಾದ ವಿವರಗಳು ಹಾಗೂ ಅನ್ಯದೇಶಗಳಲ್ಲಿ ರಾಮಾಯಣದ ಬಗೆಗಿನ ಮಾಹಿತಿಗಳು ಅತ್ಯಂತ ಕುತೂಹಲಕರವೂ ಉಪಯುಕ್ತವೂ ಆಗಿವೆ. ಉಪಸಂಹಾರದಲ್ಲಿ ಕನ್ನಡ ಭಾಷೆಯಲ್ಲಿ ರಾಮಾಯಣಗಳ ಕುರಿತಾಗಿ ಸಂಗ್ರಹವಾಗಿ ಹೇಳಲು ವೆಂಕಟಸುಬ್ಬಯ್ಯನವರು ಮರೆಯುವುದಿಲ್ಲ. ಲೇಖನದ ಕೊನೆಗೆ ಅಭ್ಯಾಸಸೂಚಿಯನ್ನು ನೀಡಿರುವುದು ಆಸಕ್ತರಿಗೆ ತುಂಬ ಸಹಕಾರಿಯಾಗಿದೆ. ರಾವಣನನ್ನೇ ಶ್ರೇಷ್ಠವ್ಯಕ್ತಿಯಾಗಿ ಬಿಂಬಿಸಿರುವ ಆಧುನಿಕ ರಾಮಾಯಣಗಳು ಅಂತೆಯೇ ಉದಾತ್ತರಾವಣನನ್ನು ಚಿತ್ರಿಸಿರುವ ಜೈನರಾಮಾಯಣದ ಪರಂಪರೆ – ಇವನ್ನು ಗಮನಿಸಿರುವ ವೆಂಕಟಸುಬ್ಬಯ್ಯನವರು ಅದನ್ನೇ ರಾಮಾಯಣದ ಅಂತಸ್ಸತ್ತ್ವವಾಗಿ ಗುರುತಿಸುತ್ತಾರೆ. ರಾಮಾಯಣವು ಸಾವಿರಾರು ವರ್ಷಗಳಿಂದ ಬೇರೆ ಬೇರೆಯವರಿಗೆ ಬೇರೆ ಬೇರೆ ಪ್ರಭಾವವನ್ನು ಬೀರುತ್ತ ಬೆಳಗುತ್ತಲೇ ಇದೆ. ಈ ಕಥೆಯನ್ನು ಯಾರು ಹೇಗೆ ಬೇಕಾದರೂ ತಿರುಗಿಸಿ ತಮ್ಮ ಮೂಗಿನ ನೇರಕ್ಕೆ ಅರ್ಥ ಹೇಳುವ ಅವಕಾಶವಿದೆಯೆಂದು; ಸ್ವತಃ ವಿರುದ್ಧವಾದ ವಾದಗಳನ್ನು ಹೂಡಲು ಸಾಧ್ಯವಿದೆಯೆಂಬಂತೆ ಕಾಣುವುದೇ ರಾಮಾಯಣದ ಅಂತಸ್ಸತ್ತ್ವ. 'ಸಾಮಾಜಿಕ ಮತೀಯ ಆಂದೋಲನಗಳಿಗೆ ಆಧಾರವಾಗಿರುವುದು, ರಾಜಕೀಯದ ಅನೇಕ ಚಳುವಳಿಗಳಿಗೆ ಇದರಿಂದ ಸ್ಫೂರ್ತಿ ಸಿಕ್ಕಿರುವುದೂ ರಾಮಾಯಣದ ಎಣೆಯಿಲ್ಲದ, ಕೊನೆಯಿಲ್ಲದ, ಸಾವಿಲ್ಲದ ಸತ್ತ್ವದಿಂದ ಎಂಬುದನ್ನು ಮರೆಯುವ ಹಾಗಿಲ್ಲ' ಎಂಬ ಅವರ ಹೇಳಿಕೆ ಉಲ್ಲೇಖನೀಯ.

ಗತಿಪ್ರಜ್ಞೆ ಸಂಕಲನದ ಎರಡನೆಯ ಭಾಗ ಹೊಸಗನ್ನಡ ವಿಷಯ – ಅಭಿವ್ಯಕ್ತಿಗೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ಮೊದಲನೆಯ ಲೇಖನ ಹೊಸಗನ್ನಡ ಗದ್ಯರಚನೆಗೆ ದೊರೆತ ಮೂಲದ್ರವ್ಯವನ್ನು ಶೋಧಿಸುವ ಪ್ರಯತ್ನಮಾಡುತ್ತದೆ. ಪ್ರಾಚೀನಸಾಹಿತ್ಯದಲ್ಲಿ ವಿರಳವಾಗಿ ಇರುವ ಗದ್ಯಗ್ರಂಥಗಳ ಹಿನ್ನೆಲೆಯನ್ನು ನೀಡಿ ಹತ್ತೊಂಬತ್ತನೆಯ ಶತಮಾನದಲ್ಲಿ ಹೊಸ ಗದ್ಯದ ಬೆಳವಣಿಗೆಗೆ ಅಡಿಗಲ್ಲನ್ನು ಹಾಕಿದ ಕೃತಿಗಳನ್ನು ಪರಿಶೀಲಿಸುತ್ತದೆ. ಹೃದ್ಯವಾದ ಗದ್ಯವನ್ನು ಆಯ್ಕೆಮಾಡಿದ ಮುದ್ದಣನ ಕೊಡುಗೆ-ಯನ್ನು ಒಳಗೊಂಡಂತೆ ಇಪ್ಪತ್ತನೆಯ ಶತಮಾನದ ಗದ್ಯದ ವಿಪುಲ ಮತ್ತು ವೈವಿಧ್ಯಮಯ ಬೆಳವಣಿಗೆಗೆ ಹತ್ತೊಂಬತ್ತನೆಯ ಶತಮಾನದ ಗದ್ಯವು ರಂಗವನ್ನು ಸಿದ್ಧಮಾಡಿತೆಂದು ಈ ಬರಹವು ಪ್ರತಿಪಾದಿಸುತ್ತದೆ.

ಸೋಸಲೆ ಅಯ್ಯಾಶಾಸ್ತ್ರಿಗಳು, ಗೋವಿಂದ ಪೈಯವರಂತಹ ಹೊಸಗನ್ನಡದ ಆರಂಭಕಾಲದ ಹಿರಿಯರನ್ನು ಪರಿಚಯಿಸುವ ಬರಹಗಳೂ ಈ ಭಾಗದಲ್ಲಿವೆ. ಸಂಸ್ಕೃತಸಾಹಿತ್ಯವನ್ನು ಆಯ್ಕೆಮಾಡಿಕೊಂಡಿದ್ದ ಅಯ್ಯಾಶಾಸ್ತ್ರಿಗಳು ಬಸವಪ್ಪಶಾಸ್ತ್ರಿಗಳ ಮತ್ತು ಅಳಿಯ ಲಿಂಗರಾಜ ಅರಸು ಅವರ ಪ್ರಭಾವದಿಂದ ಕನ್ನಡದಲ್ಲಿ ಕೃತಿರಚನೆ ಮಾಡುವುದಕ್ಕೆ ತೊಡಗಿ, ಅನುವಾದ ಕಾರ್ಯ(ವಿಕ್ರಮೋರ್ವಶೀಯ)ದ ಮೂಲಕವೂ ಸ್ವತಂತ್ರ ನಾಟಕರಚನೆಯ ಮೂಲಕವೂ ಕನ್ನಡದ ಬೆಳಸಿಗೆ ಕಾರಣರಾದ ವಿಚಾರ-ವನ್ನು ಅವರ ಕುರಿತಾದ ಲೇಖನ ತಿಳಿಸುತ್ತದೆ. ಗೋವಿಂದ ಪೈಯವರ ಬಾಲ್ಯ ಬದುಕನ್ನು ಸಂಗ್ರಹವಾಗಿ ಪರಿಚಯಿಸುವ ಲೇಖನವು ಅವರು ಅಷ್ಟುದೊಡ್ಡ ಸಂಶೋಧಕರಾಗಿ (ಮುಖ್ಯವಾಗಿ ಇತಿಹಾಸ ಸಂಶೋಧನೆಯ ಕ್ಷೇತ್ರದಲ್ಲಿ) ದುಡಿದುದಕ್ಕೆ ಒಂದು ಹಿನ್ನೆಲೆಯನ್ನು ಒದಗಿಸುತ್ತದೆ. ಪೈಯವರು ಸಾರಸ್ವತ ಜನಾಂಗದವರಾಗಿರುತ್ತ ಸಾರಸ್ವತರ ಮೂಲದ ಶೋಧವು ಭಾರತದ ಇತಿಹಾಸದ ಶೋಧಕ್ಕೂ ಅವರನ್ನು ಕರೆದೊಯ್ದ ವಿಚಾರವನ್ನು ಹೇಳುತ್ತದೆ. ಅವರ ಮೊದಲ ಸಂಶೋಧನಲೇಖನ ಸಾರಸ್ವತರ ಕುರಿತೇ ಆಗಿದ್ದು Flashes from the Past ಎಂಬ ಹೆಸರಿನಲ್ಲಿ ಇಂಗ್ಲಿಷಿನಲ್ಲಿ ಅದು ಪ್ರಕಟಗೊಂಡುದನ್ನು ಉಲ್ಲೇಖಿಸುತ್ತದೆ. ಸಂಶೋಧಕರಾಗಿ ಅವರ ಹಿರಿಮೆಯನ್ನು ಗುರುತಿಸುವುದರ ಜೊತೆಗೆ ಅವರ ಕನ್ನಡದ ಮೇಲಿನ ಪ್ರೀತಿಕಾಳಜಿಗಳ ಕುರಿತಾಗಿಯೂ ಅವರ ಸಾಹಿತ್ಯಕ ಕೊಡುಗೆಯ ಅನನ್ಯತೆಯ ಬಗೆಗೂ ಗೌರವದ ಮಾತುಗಳನ್ನು ನುಡಿಯುತ್ತದೆ.

ಮಹತ್ತ್ವದ ಕೆಲವು ಕೃತಿಗಳ ಸಮೀಕ್ಷೆಯನ್ನು, ವಿಮರ್ಶೆಯನ್ನು ಈ ಭಾಗದ ಬರಹಗಳು ಮಾಡುತ್ತವೆ. ಉದಾಹರಣೆಗೆ ಡಿ.ವಿ.ಜಿಯವರ ನಾಟಕಗಳ ಬಗ್ಗೆ, ಎಂ.ಆರ್.ಶ್ರೀಯವರ 'ಮಹಾತ್ಯಾಗ' ಕಾದಂಬರಿಯ ಬಗ್ಗೆ, ದೇವುಡು ಅವರ 'ಮಹಾಬ್ರಾಹ್ಮಣ' ಕಾದಂಬರಿಯ ಬಗ್ಗೆ, ಸಿ. ಕೆ. ವೆಂಕಟರಾಮಯ್ಯನವರ 'ನಚಿಕೇತ' ನಾಟಕದ ಬಗ್ಗೆ.... ಇತ್ಯಾದಿ. ಎಸ್. ವಿ. ರಂಗಣ್ಣನವರು ಬರೆದ ಕೇಂದ್ರಸಾಹಿತ್ಯ ಅಕಾಡಮಿ ಪ್ರಶಸ್ತಿವಿಜೇತ ಕೃತಿ 'ರಂಗಬಿನ್ನಪ' ಎಂಬ ವಚನಗಳ ಸಂಕಲನದಲ್ಲಿ ವಸ್ತುವೈವಿಧ್ಯವನ್ನು ಪರಿಚಯಿಸುವ ಲೇಖನವು ಸಂಕ್ಷಿಪ್ತವಾಗಿದ್ದರೂ ಅದರಷ್ಟಕ್ಕೆ

ಸಮಗ್ರವಾಗಿದೆ. ರಂಗಣ್ಣನವರ ವಿಮರ್ಶೆಯನ್ನು ಸಮಗ್ರವಾಗಿ ಪರಿಚಯಿಸುವ ಮತ್ತೊಂದು ಲೇಖನವು ಅವರ 'ಹೊನ್ನಶೂಲ', 'ಕಾಳಿದಾಸನ ನಾಟಕಗಳ ವಿಮರ್ಶೆ' ಎಂಬ ಕೃತಿಗಳನ್ನು ವಿಶೇಷವಾಗಿ ಗಮನಿಸಿದೆ. ಅದೇ ರೀತಿಯಲ್ಲಿ ಮೂರು ಸಂಪುಟಗಳಲ್ಲಿ ಹರಡಿರುವ ಹತ್ತೊಂಬತ್ತು ಕವಿಗಳನ್ನು ಶೈಲಿಯ ದೃಷ್ಟಿಯಿಂದ ವಿವೇಚಿಸಿದ ರಂಗಣ್ಣನವರ 'ಶೈಲಿ' ಗ್ರಂಥಸರಣಿಯ ಅನನ್ಯತೆಯನ್ನು ದಾಖಲಿಸಲಾಗಿದೆ. ಅವರ ಚಿಕಿತ್ಸಕ ದೃಷ್ಟಿಯನ್ನು ಅಲ್ಲಲ್ಲಿ ಗುರುತಿಸಲಾಗಿದೆ.

ಕಾದಂಬರಿಯೆಂಬ ಪ್ರಕಾರವನ್ನು ಬಹಳ ವಿಶಿಷ್ಟವಾಗಿಯೂ ಗಂಭೀರವಾಗಿಯೂ ದುಡಿಸಿಕೊಂಡ ದಿವಾಣಜಿಯವರ ಮೂರು ಕಾದಂಬರಿಗಳನ್ನು ವಿಶ್ಲೇಷಿಸಿರುವುದು ಕೊಲ್ಹಾಪುರದಲ್ಲಿದ್ದು ಕನ್ನಡ ಬರವಣಿಗೆಯನ್ನು ಅರ್ಥಪೂರ್ಣವಾಗಿ ಮಾಡಿದ ಅವರಿಗೆ ಸಂದ ಗೌರವ. ವೆಂಕಟಸುಬ್ಬಯ್ಯನವರ ಸಾಹಿತ್ಯಪ್ರೀತಿ, ವಿಮರ್ಶನಪ್ರಜ್ಞೆ, ನವ್ಯಸಾಹಿತ್ಯಕ್ಕೂ, ಅದರಲ್ಲೂ ಕವಿತೆಗಳಿಗೂ ಸಂದುದು ಗಮನಿಸಲೇಬೇಕಾದ ವಿಚಾರ. ಸುಮತೀಂದ್ರ ನಾಡಿಗರ 'ಪಂಚಭೂತಗಳು' ಎಂಬ ಮಹತ್ವಾಕಾಂಕ್ಷೆಯ ದೀರ್ಘಕಾವ್ಯದ ಕುರಿತು ಅವರು ಬರೆಯುತ್ತಾರೆ. ಪೃಥ್ವಿ, ಅಪ್, ವಾಯು, ಆಕಾಶ, ತೇಜಸ್ಸೆಂಬ ಪಂಚಭೂತಗಳನ್ನು ಕೇಂದ್ರೀಕರಿಸಿ ನಲುವತ್ತಮೂರು ಸರ್ಗಗಳಲ್ಲಿ ಒಟ್ಟು ಆರು ಮಂಡಲಗಳಲ್ಲಿ ಕಾವ್ಯವನ್ನು ಹೆಣೆದ ನಾಡಿಗರ ಕಾವ್ಯೋದ್ದೇಶವನ್ನು, ಕಾವ್ಯದ ಪ್ರೇರಣೆ ಸ್ವರೂಪಗಳನ್ನು ಮಮತೆಯಿಂದಲೇ ಸವಿವರವಾಗಿ ಪರಿಶೀಲಿಸುವ ವೆಂಕಟಸುಬ್ಬಯ್ಯನವರು ಇತಿಮಿತಿಗಳನ್ನು ಕೂಡ ಗುರುತಿಸಲು ಮರೆಯುವುದಿಲ್ಲ. ಮುಖ್ಯವಾಗಿ ಈ ಶಬ್ದಬ್ರಹ್ಮನಿಗೆ ಕಿರಿಕಿರಿಯುಂಟುಮಾಡುವಂತಹ ಶಬ್ದಪ್ರಯೋಗಗಳನ್ನು, ಕಾವ್ಯ ವ್ಯಾಕರಣದ ದೋಷಗಳನ್ನು ಎತ್ತಿ ಹೇಳಿದ್ದಾರೆ. ಛಂದಸ್ಸಿನ, ಲಯದ ವೈವಿಧ್ಯವನ್ನು ಮೆಚ್ಚಿ ನುಡಿದಿದ್ದಾರೆ.

ಬಿ. ಸಿ. ರಾಮಚಂದ್ರ ಶರ್ಮರ ವ್ಯಕ್ತಿತ್ವ ಮತ್ತು ಸಾಹಿತ್ಯದ ಕುರಿತು ಅವರ ಮರಣಾನಂತರ ಪ್ರೀತಿ ಶ್ರದ್ಧೆಗಳಿಂದ ರೂಪುಗೊಂಡ ಬರಹವು ಮಾಹಿತಿಯ ದೃಷ್ಟಿಯಿಂದಲೂ ಸಮೃದ್ಧವಾಗಿದೆ. ಶರ್ಮರನ್ನು ಮತ್ತು ಅವರ ಕಾವ್ಯವನ್ನು ಇಷ್ಟೊಂದು ಹತ್ತಿರದಿಂದ ಕಂಡು ಕಂಡರಿಸಿದ ನಿದರ್ಶನಗಳು ವಿರಳವೆನ್ನಬಹುದು. ವೆಂಕಟಸುಬ್ಬಯ್ಯನವರು ಶರ್ಮರ ಕವಿತೆಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸುವುದರ ಜೊತೆಗೆ ಗೋಪಾಲಕೃಷ್ಣ ಅಡಿಗರ ಕವಿತೆಗಳೊಂದಿಗೆ ಕೆಲವೊಮ್ಮೆ ಹೋಲಿಸಿಯೂ ನೋಡುತ್ತಾರೆ. ಅವರೇ ಗುರುತಿಸಿದಂತೆ 'ನವ್ಯಕಾವ್ಯರಚನೆಯಲ್ಲಿ ಅಡಿಗ ಮತ್ತು ಶರ್ಮ ಇವರಿಬ್ಬರೆ ಬಹಳ ಪ್ರಖ್ಯಾತರು. ಆದರೆ ಈ ಇಬ್ಬರದೂ ಬೇರೆ ಬೇರೆ ಶೈಲಿಗಳು. ಒಬ್ಬರದು ಕರಾವಳಿಯ ಕನ್ನಡವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡರೆ ಶರ್ಮ ಸಂಪೂರ್ಣವಾಗಿ ನಗರ ಕನ್ನಡದ ಪ್ರತಿಬಿಂಬ' ಈ ತೌಲನಿಕ ನೋಟ ಹಾಗೂ ನವ್ಯಕಾವ್ಯದ ಕುರಿತು ವ್ಯಂಗ್ಯದ ಧೋರಣೆಯನ್ನು ತಳೆದವರ ಬಗೆಗಿನ ಉಲ್ಲೇಖಗಳು ಓದುಗರಿಗೆ ಈ ಲೇಖನದಿಂದ ಸಿಗುವ ಬೋನಸ್. (ಜಿ. ವರದರಾಜ ರಾವ್ ಬರೆದು ಪ್ರಜಾವಾಣಿಯಲ್ಲಿ ಪ್ರಕಟವಾದ 'ನವ್ಯಾಲಾಪ' ಕವನವನ್ನು ಇಡಿಯಾಗಿ ಉದ್ಧರಿಸಿದ್ದಾರೆ.)

ಗಮಕವೆಂದರೇನು – ಎಂಬ ಪ್ರಶ್ನೆಗೆ ಉತ್ತರರೂಪವಾಗಿರುವ ಲೇಖನದಲ್ಲಿ ಅವರ ಸಂಶೋಧನಾಸಕ್ತಿಗೆ ಅನುಗುಣವಾಗಿ ಪ್ರಾಚೀನಸಾಹಿತ್ಯದಲ್ಲಿ 'ಗಮಕ'ಶಬ್ದದ ಪ್ರಯೋಗ, ಉಲ್ಲೇಖಗಳನ್ನು ಗಮನಿಸುತ್ತಾ ಕೊನೆಗೆ ಅದರ ಸ್ವರೂಪ ಮತ್ತು ಅರ್ಥವ್ಯಾಪ್ತಿಯನ್ನು ನಿರೂಪಿಸುತ್ತಾರೆ. 'ಸಾಹಿತ್ಯ ಮತ್ತು ಶಿಕ್ಷಣ' ಸುದೀರ್ಘವಾದ ಮತ್ತು ಬೋಧಪ್ರದವಾದ ಲೇಖನ. ವೆಂಕಟಸುಬ್ಬಯ್ಯನವರಿಗೆ ಬದಲಾದ ಕಾಲದ ಬಗೆಗೆ ಪ್ರಜ್ಞೆ ಇಲ್ಲದಿಲ್ಲ. ಕಂಪ್ಯೂಟರ್, ಇಂಟರ್ನೆಟ್, ವೆಬ್‌ಸೈಟ್‌ಗಳು ಕಣ್ಣಮುಂದೆಯೇ ತಂದಿಡುವ ಜಗತ್ತಿನ ಬಗೆಗೆ ಅವರಿಗೆ ಸ್ಪಷ್ಟವಾದ ಅರಿವಿದೆ. ಆದರೂ ಹಿಂದಿನ ಕಾಲದ ಕೆಲವೊಂದು ಹೇಳಿಕೆಗಳು ಇಂದಿನ ಶಿಕ್ಷಣಕ್ಕೂ ಹೇಗೆ ಅನ್ವಯವಾಗುತ್ತದೆ ಎಂಬುದನ್ನು ಸೋದಾಹರಣ ತಿಳಿಸುತ್ತಾರೆ. ಶಿಕ್ಷಣದಲ್ಲಿ ಮಾಹಿತಿಯ ರೂಪದಲ್ಲಿ ಜ್ಞಾನದ ಬೆಳೆಯ ಜೊತೆಗೆ ಮೌಲ್ಯದ ಬಿತ್ತನೆ, ಸಾಮಾಜಿಕ ಅರಿವು, ಸಮಾಜ-ಮುಖಿಯಾದ ಚಿಂತನೆ ಮತ್ತು ಕಾರ್ಯ ಮೇಳೈಸಬೇಕು ಎಂಬುದು ಈ ಹಿರಿಯ ಜೀವದ ಕಾಳಜಿ.

ಕನ್ನಡಕ್ಕೆ ಸಮುದ್ರಗೀತಗಳನ್ನು ನೀಡಿದ ವಿ. ಕೃ. ಗೋಕಾಕರು 'ಆಫ್ರಿಕ ಗೀತೆ'ಗಳೆಂಬ ಅಪೂರ್ವ ಕವನಗುಚ್ಛವನ್ನು ಉತ್ಸಾಹದಿಂದಲೇ ಪರಿಚಯಿಸುವ ಲೇಖನವೊಂದು ಈ ಸಂಗ್ರಹದಲ್ಲಿದೆ. ಮತ್ತೆರಡು ಬರಹಗಳು ಜೈನಸಾಹಿತ್ಯ ಸಮಾವೇಶದ ಸಂದರ್ಭದಲ್ಲಿ ಹಾಗೂ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣ. ಅವರ ವಿದ್ವತ್ತು ಸಾಂಸ್ಕೃತಿಕ ಎಚ್ಚರ, ಕನ್ನಡದ ಭವಿತವ್ಯದ ಬಗ್ಗೆ ಕನಸು – ಇವುಗಳಲ್ಲಿ ಎದ್ದು ಕಾಣುತ್ತದೆ.

ಈ ಸಂಕಲನದ ಕೊನೆಯ ಬರಹವು ಶ್ರೀರಂಗರ ಒಂದು ನಾಟಕದ ಇಂಗ್ಲಿಷ್ ಅನುವಾದದ ಕುರಿತಾದದ್ದು. ಲೇಖನದ ಮೊದಲರ್ಧ ಶ್ರೀರಂಗದ ಬದುಕು ಬರಹದ ಸ್ಥೂಲಪರಿಚಯವನ್ನು ನೀಡುತ್ತದೆ. ಬಳಿಕ Open Scene ಎಂಬ ಹೆಸರಿನಲ್ಲಿ ಶ್ರೀರಂಗರ ನನ್ನ ನಾಟ್ಯ ನೆನಪುಗಳು ಹಾಗೂ ಏನಬೇಡಲಿ ನಿನ್ನ ಬಳಿಗೆ ಬಂದು ಎಂಬ ಏಕಾಂಕನಾಟಕವನ್ನೂ ಒಟ್ಟಿಗೆ ಅನುವಾದಿಸಿ ಪ್ರಕಟಿಸಿದ ಶ್ರೀರಂಗರ ಮಗಳು ಅಂತಾರಾಷ್ಟ್ರೀಯ ಖ್ಯಾತಿಯ ಬರಹಗಾರ್ತಿ ಶಶಿ ದೇಶಪಾಂಡೆಯವರ ಶ್ರಮವನ್ನು ಶ್ಲಾಘಿಸುತ್ತಾರೆ. ಅನುವಾದವೆಂಬಂತೆ ತೋರದೆ ಮೂಲ ಇಂಗ್ಲಿಷ್ ಕೃತಿ ಎಂಬಷ್ಟು ಸಮರ್ಥವಾಗಿ, ಇಂಗ್ಲಿಷ್ ಅನುವಾದಕ್ಕೆ ಮಾದರಿ(model)ಯಾಗಿ ಕೃತಿಯನ್ನು ತಂದಿರುವ ವಿಶೇಷವನ್ನು ಜಿ. ವಿ. ಗುರುತಿಸುತ್ತಾರೆ. ಶ್ರೀರಂಗರ 'ನಾಟ್ಯನೆನಪುಗಳು' ಅವರ ಆತ್ಮಕಥೆಯೂ ಜೊತೆಜೊತೆಗೆ ಕನ್ನಡ ನಾಟಕದ ಅನೇಕ ವಿವರಗಳ ಕತೆಯೂ ಆಗಿರುವುದರಿಂದ ಅದರ ಇಂಗ್ಲಿಷ್ ಅನುವಾದದ ಮಹತ್ತ್ವ ಮತ್ತು ಪ್ರಾಧಾನ್ಯದ ಕಡೆಗೆ ವೆಂಕಟಸುಬ್ಬಯ್ಯನವರು ನಮ್ಮ ಗಮನವನ್ನು ಸೆಳೆಯುತ್ತಾರೆ.

ಒಟ್ಟು ಕೃತಿಯನ್ನು ಅವಲೋಕಿಸಿದಾಗ ಪ್ರಾಚೀನ ಮತ್ತು ಆಧುನಿಕ ಸಾಹಿತ್ಯದ ನಾಡಿಮಿಡಿತವನ್ನು ಬಲ್ಲವರಾಗಿ ಜಿ. ವಿ. ಅವರು ಕಾಣಿಸುತ್ತಾರೆ. ಪಾಂಡಿತ್ಯದ ಸಮೃದ್ಧಿಯಿದ್ದರೂ ಅದು ಹೊರೆಯೆನಿಸದ ರೀತಿಯಲ್ಲಿ ಸರಳವಾಗಿ ತಿಳಿಹೇಳುವ ಅವರ ದಾರಿ ಪಂಡಿತನದಲ್ಲ. ತಪ್ಪು ಒಪ್ಪುಗಳನ್ನು ಸಮತೋಲನದಲ್ಲಿ ಗುರುತಿಸುವ

ಅವರ ರೀತಿ ಹೊಣೆಯರಿತ ವಿಮರ್ಶಕನದು. ವಿಶ್ಲೇಷಣೆ ಮತ್ತು ತುಲನೆ ಎಂಬ ಉಪಕರಣಗಳನ್ನು ಹದವರಿತು ಬಳಸುವ ಸಂಯಮ ಅವರದು. ಹೊನ್ನಾರು ಮಾಲೆಯ ಈ ಪುಸ್ತಕದ ಓದು ಜ್ಞಾನಯಾತ್ರೆಯೂ ಹೌದು; ರಸಯಾತ್ರೆಯೂ ಹೌದು. ಓದಿನ ಸಂದರ್ಭದಲ್ಲಿ ಅಲ್ಲಲ್ಲಿ ಕಿರಿಕಿರಿಯುಂಟುಮಾಡುವ ಮುದ್ರಣ ದೋಷಗಳಿಗೆ ಖಂಡಿತವಾಗಿ ವೆಂಕಟಸುಬ್ಬಯ್ಯನವರು ಹೊಣೆಯಲ್ಲ ಎಂಬುದನ್ನು ಓದುಗರು ಅರಿತುಕೊಳ್ಳುತ್ತಾರೆ.



---

ಕನ್ನಡದ ಗ್ರಂಥಗಳ ಭಾಷೆಗೂ ಜನರ ಆಡುನುಡಿಗೂ ಅನೇಕ ವ್ಯತ್ಯಾಸಗಳಿವೆ. ಈ ವ್ಯತ್ಯಾಸವು ಓದುಗರಿಗೆ ಆಗಲಿ ಮಾತನಾಡುವವರಿಗೆ ಆಗಲಿ ತಿಳಿಯದೆ ಇರುವಂಥ ವ್ಯತ್ಯಾಸವಲ್ಲ. ಉಚ್ಚಾರಣೆಯಲ್ಲಿ ಒತ್ತು ಇರುವುದು ಅವಧಾರಣೆಗೆ ಅಥವಾ ಕಾಕುವಿಗೆ. ಹೀಗೆ ಲೋಕಾಭಿರಾಮವಾಗಿ ಮಾತನಾಡುವ ಶೈಲಿಯನ್ನು ಬೇರೆ ಭಾಷೆಯೆಂದು ಕರೆಯಲಾಗುವುದಿಲ್ಲ. ಅದು ಗ್ರಂಥಸ್ಥಭಾಷೆಯನ್ನು ಕೆಡಿಸುವ ಪ್ರಯತ್ನವಲ್ಲ. ಆಡುನುಡಿಯ ಸೊಗಸು ಅದು. ಒಂದು ಬನಿ, ಒಂದು ಹದ, ಅಂದ, ಚಂದ, ಪ್ರಾಂತೀಯವಾಗಿ ಇಂಥ ಆಡುನುಡಿಗೆ ಒಂದೊಂದು ಕಡೆ ಒಂದೊಂದು ಸೊಗಸು ಪರಂಪರೆಯಿಂದ ಬೆಳೆದು ಬಂದಿದೆ. ಕರ್ನಾಟಕದ ಏಕೀಕರಣವಾದ ಮೇಲೆ ನಿಧಾನವಾಗಿ ಆದರೂ ನಿರ್ಧಾರವಾಗಿ, ಎಲ್ಲ ಕಡೆಯ ಆಡುಮಾತು ಪರಸ್ಪರವಾಗಿ ಅರ್ಥವಾಗಲೂ ಮೊದಲಾಗಿದೆ. ಆಡುಮಾತಿನ ಸೊಗಸು ಅದಕ್ಕೆ ಇರಲೇಬೇಕು. ಅದನ್ನು ತಿದ್ದಿ ವ್ಯಾಕರಣಬದ್ಧವಾಗಿಸುವುದು ಸರಿಯಲ್ಲ. ಹಾಗೆಯೇ ಗ್ರಂಥಸ್ಥಭಾಷೆಯನ್ನು ಆಡುಮಾತಿನ ರೀತಿಯಲ್ಲಿ ದಾಖಲಿಸುವುದು ಕೇವಲ ಪ್ರಯೋಗವಾಗುತ್ತದೆ. ಅಷ್ಟೆ! ಆದರೆ ಯಶಸ್ವಿಯಾಗುವುದಿಲ್ಲ.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ‘ಅನುಕಲ್ಪನೆ’ಯ ಜತೆ ಒಂದು ರಸನಡಿಗೆ

ಡಾ. ವರದರಾಜ ಚಂದ್ರಗಿರಿ

‘ಶಬ್ದಕಲ್ಪವೃಕ್ಷ’ ಎಂಬ ಗೌರವಕ್ಕೆ ಪಾತ್ರರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ನಮ್ಮ ಶಬ್ದಶುದ್ಧಿ ಮತ್ತು ಶಬ್ದಗೌರವಗಳನ್ನು ವೃದ್ಧಿಸುತ್ತಲೇ ನಮ್ಮ ಕಾವ್ಯಾಸ್ವಾದ ಅಥವಾ ರಸಗ್ರಹಣದ ಪರಿಧಿಗಳನ್ನು ವಿಸ್ತರಿಸುತ್ತಾ ಬಂದ ನಾಡೋಜರೂ ಹೌದು. ಕನ್ನಡಕ್ಕೆ ಹಲವು ಬಗೆಯ ನಿಘಂಟುಗಳನ್ನೂ ಪದಕೋಶಗಳನ್ನೂ ಕೊಟ್ಟ ಜಿವೆಂ ಅವರ ಅಪರೂಪದ ಲೇಖನಗಳ ಸಂಕಲನ ‘ಅನುಕಲ್ಪನೆ’. ಈ ಶೀರ್ಷಿಕೆಯೇ ತುಂಬ ಅರ್ಥವತ್ತಾದ ಶಬ್ದಪ್ರಯೋಗ. ಕವಿಯ ಕಲ್ಪನೆಗೆ ಸರಿಯಾದ ಒಂದು ಪುನಃಕಲ್ಪನೆ ಓದುಗನಲ್ಲಿ ಉಂಟಾಗಬೇಕು. ಹಾಗಿದ್ದಾಗ ಮಾತ್ರ ಕವಿಯ ಇಂಗಿತ ಅಥವಾ ಮನೋಭಾವವು ಓದುಗನಿಗೆ ಅರ್ಥವಾಗಲು ಸಾಧ್ಯ. ಅದನ್ನೇ ಅವರು ‘ಅನುಕಲ್ಪನೆ’ ಎಂದದ್ದು. ಕವಿಯ ಕಲ್ಪನೆಯನ್ನು ಅನುಸರಿಸುವ ಕಲ್ಪನೆ ಅದು. ಇಲ್ಲಿಯ ಪ್ರಬಂಧಗಳೂ ಈ ಹಿನ್ನೆಲೆಯಲ್ಲಿ ರಚಿತವಾದವುಗಳು. ಅವುಗಳು ಮೂಲಕೃತಿಗಳನ್ನು ಹಿಂಬಾಲಿಸುತ್ತವೆ; ಅಲ್ಲಿಯ ರಸಘಟ್ಟಿಯನ್ನು ಮೊಗೆದು ತೋರಿಸುತ್ತವೆ; ‘ನಾನು ಆಸ್ವಾದಿಸಿದ್ದೇನೆ, ನೀನೂ ರುಚಿ ನೋಡು’ ಎಂಬ ಸಲಿಗೆಯಿಂದ ನಮ್ಮನ್ನು ಕಾವ್ಯಾಸ್ವಾದಕ್ರಿಯೆಗೆ ಕರೆದೊಯ್ಯುತ್ತವೆ.

ಈ ಕೃತಿಯಲ್ಲಿಯ ಲೇಖನಗಳು ಬೇರೆ ಬೇರೆ ಸಂದರ್ಭಗಳಲ್ಲಿ ಬರೆಯಲ್ಪಟ್ಟವುಗಳು. ಹರಿಹರನಿಂದ ತೊಡಗಿ ನವ್ಯಕವಿಗಳ ವರೆಗೆ ಇವುಗಳ ವ್ಯಾಪ್ತಿ ಇದೆ. ಅವೆಲ್ಲವೂ ಸಾಹಿತ್ಯ ಮೀಮಾಂಸೆಯ ಸ್ವರೂಪದವುಗಳು. ಸಾಹಿತ್ಯ ಬೋಧನೆಗೆ ಪೂರಕವಾದ ಲೇಖನಗಳು. ಲೇಖಕರೇ ಹೇಳಿಕೊಂಡಂತೆ “ವಿದ್ಯಾರ್ಥಿಗಳಿಗೆ ಪಾಠ ಹೇಳುವಾಗ ನನಗೆ ಕಂಡುಬಂದುದರಲ್ಲಿ ಈ ‘ಅನುಕಲ್ಪನೆ’ ಯೇ ಅವರಿಗೆ ಬಹಳ ಕಷ್ಟವಾದುದು. ಇದನ್ನು ಅವರು ಗ್ರಹಿಸುವಂತೆ ಮಾಡಿದರೆ ಮುಂದಿನ ವಿವರಣೆಗಳು ಬಹುಬೇಗ ಅವರಿಗೆ ಅರ್ಥವಾಗುತ್ತವೆ. ಎಲ್ಲ ವಿದ್ಯಾರ್ಥಿಗಳೂ ಗ್ರಂಥವಿಮರ್ಶಕ-ರಾಗಬೇಕೆಂಬ ಆಸೆಯನ್ನು ಹೊಂದಿರುತ್ತಾರೆ. ಕೆಲವರು ಮಾತ್ರ ಈ ಮಾರ್ಗದಲ್ಲಿ ಪ್ರಯತ್ನಿಸುತ್ತಾರೆ. ಅಂತಹವರಿಗೆ ಯಾವುದು ಮುಖ್ಯವೆನ್ನುದನ್ನು ತೋರಿಸುವ ದೃಷ್ಟಿಯಿಂದ ನಾನು ಕೆಲವು ಲೇಖನಗಳನ್ನು ಬರೆದಿದ್ದೆನು.” ಹೀಗೆ ವಿಮರ್ಶೆಯ ಯಾವುದೇ ಸಿದ್ಧಾಂತಗಳಿಗೆ ಬದ್ಧರಾಗದೆ ಸಾಹಿತ್ಯಜಿಜ್ಞಾಸುಗಳಿಗೆ ಅವಶ್ಯವಾಗುವ

ಹಾಗೆ ಅವರ ಬರಹಗಳಿವೆ. ಸಾಮಾನ್ಯಸಾಹಿತ್ಯದ ವಿದ್ಯಾರ್ಥಿಯೋರ್ವನಲ್ಲಿ ರಸಾಸ್ವಾದನವೃಷ್ಟಿ ಬೆಳೆಸುವುದೇ ಅವರ ಲೇಖನಗಳ ಉದ್ದೇಶವಾಗಿತ್ತು.

ಈ ಸಂಕಲನದಲ್ಲಿ ಹರಿಹರನ 'ಗಿರಿಜಾ ಕಲ್ಯಾಣ ಮಹಾಪ್ರಬಂಧಂ' ಎಂಬ ಲೇಖನವಿದೆ. ಇದರಲ್ಲಿ ಹರಿಹರನ ವಿಶಿಷ್ಟತೆಗಳ ಬಗೆಗೆ ಹೇಳುತ್ತಾ 'ಹರಿಹರನ ಕಾವ್ಯರಾಶಿಯಲ್ಲಿ ಗಿರಿಜಾಕಲ್ಯಾಣಕ್ಕೆ ಸತ್ಯವಾಗಿಯೂ ಮೊದಲ ಸ್ಥಾನ ಲಭಿಸುವುದಿಲ್ಲ. ಒಂದು ವೇಳೆ 'ಗಿರಿಜಾ ಕಲ್ಯಾಣ'ವೊಂದನ್ನೇ ಹರಿಹರನು ರಚಿಸಿದ್ದರೆ ಆತನಿಗೆ ಈಗಿರುವ ಮಹತ್ತ್ವ ಎಂದೆಂದೂ ಲಭಿಸುತ್ತಿರಲಿಲ್ಲ' ಎನ್ನುತ್ತಾ ಹರಿಹರನ ನಿಜವಾದ ಕಾವ್ಯಪ್ರತಿಭೆಯು ಹರಿದಿರುವುದು ರಗಳೆಗಳ ಮೂಲಕವೇ ಎನ್ನುವುದನ್ನು ಸ್ಪಷ್ಟ ಪಡಿಸುತ್ತಲೇ ಗಿರಿಜಾಕಲ್ಯಾಣವನ್ನು ಅತಿಸಾಮಾನ್ಯ ಕಾವ್ಯವೆಂದು ಕಡೆಗಣಿಸುವ ಹಾಗಿಲ್ಲ ಎಂಬುದನ್ನೂ ಸಾಧಾರವಾಗಿ ಚರ್ಚಿಸುತ್ತಾರೆ. ಹರಿಹರನ ವರ್ಣನಾಕೌಶಲದ ಅನೇಕ ಉದಾಹರಣೆಗಳನ್ನು ಇದಕ್ಕಾಗಿ ಎತ್ತಿ ಉದಾಹರಿಸುತ್ತಾರೆ. ಹಿಮರಾಜಪುತ್ರಿಯ ಬಾಲಲೀಲೆಗಳು, ಮನ್ಮಥಗರ್ವಭಂಗ, ರತಿವಿಲಾಪ, ಗಿರಿಜೆಯ ಘೋರತಪಸ್ಸು ಇಂತಹ ಕಥಾಸಂದರ್ಭಗಳ ವರ್ಣನೆಯಿಂದ ಹರಿಹರನ ಪ್ರತಿಭೆಯ ದರ್ಶನ ನಮಗಾಗುತ್ತದೆ. ಹರಿಹರನ ಪ್ರತಿಭಾಚೈತನ್ಯವು ಅಡಗಿರುವುದು ರಗಳೆಗಳಲ್ಲೇ ಎನ್ನು-ವುದು ಸರ್ವವಿದಿತ. ಗಿರಿಜಾಕಲ್ಯಾಣದಲ್ಲಿ ಕಂಡುಬರುವ ಆತನ ಪ್ರತಿಭಾಪ್ರದರ್ಶನವು ಮುಂದೆ ರಗಳೆಯ ಕಸುಬುದಾರಿಕೆಗೆ ಆತ ಮಾಡಿಕೊಂಡ ಅಭ್ಯಾಸವೇ ಆಗಿದೆ.

– ೨ –

ರನ್ನನ ಗದಾಯುದ್ಧ ಕಾವ್ಯವು ಹೇಗೆ 'ರಸದ ಘಟ್ಟಿ'ಯೋ ಹಾಗೆಯೇ ಬಿ.ಎಂ.ಶ್ರೀ.ಯವರ ಗದಾಯುದ್ಧ ನಾಟಕವು 'ದುರಂತದ ಸೃಷ್ಟಿ' ಎನ್ನುತ್ತಾ ಲೇಖನ-ವೊಂದರಲ್ಲಿ ಬಿ.ಎಂ.ಶ್ರೀಯವರ ನಾಟಕವನ್ನು ವಿವರಿಸಹೊರಡುವ ಜಿವೆಂ ಅವರು ದುರಂತನಾಟಕವಾಗಿ ಗದಾಯುದ್ಧ ನಾಟಕವು ಯಾಕೆ ಮತ್ತು ಹೇಗೆ ಒಂದು ಯಶಸ್ವೀ ಕೃತಿ ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ. ಮೂಲಕಾವ್ಯ ಮತ್ತು ಗದಾಯುದ್ಧ ನಾಟಕ ಎರಡೂ ಕೃತಿಗಳ ವ್ಯತ್ಯಾಸ, ಮೂಲಕಥಾವಸ್ತುವಿನಲ್ಲಿ ರನ್ನನು ಮಾಡಿಕೊಂಡ ಬದಲಾವಣೆ ಮತ್ತು ಬಿ.ಎಂ.ಶ್ರೀಯವರು ದುರಂತನಾಟಕದ ಹಿನ್ನೆಲೆಯಲ್ಲಿ ಮಾಡಿ ಕೊಂಡ ಬದಲಾವಣೆಗಳನ್ನು ಇಲ್ಲಿ ಸೂಕ್ಷ್ಮವಾಗಿ ಅವಲೋಕಿಸುತ್ತಾರೆ. ಮ್ಯಾಕ್‌ಬೆತ್, ಹ್ಯಾಮ್ಲೆಟ್ ನಂತಹ ಶೇಕ್ಸ್‌ಪಿಯರ್‌ನ ದುರಂತನಾಟಕಗಳಿಂದ ಬಿ.ಎಂ.ಶ್ರೀಯವರು ಹೇಗೆ ಪ್ರಭಾವಿತರಾಗಿದ್ದಾರೆ ಮತ್ತು ದುರಂತನಾಟಕದ ವಿನ್ಯಾಸಕ್ಕೆ ಶೇಕ್ಸ್‌ಪಿಯರ್ ನಾಟಕಗಳ ಬಂಧಗಳನ್ನು ಗದಾಯುದ್ಧದಲ್ಲಿ ಹೇಗೆ ಬಳಸಿಕೊಂಡಿದ್ದಾರೆ ಎನ್ನುವುದನ್ನು ಜಿವೆಂ ಅವರು ವಿವರಿಸುತ್ತಾರೆ. ಗದಾಯುದ್ಧದ 'ಪರಿಣಾಮರಮಣೀಯತೆ'ಯು ದುರಂತನಾಟಕವಾಗಿ ಅದು ಯಶಸ್ವಿಯಾಗಲು ಕಾರಣವಾಯಿತು ಎನ್ನುತ್ತಾ ಅಂಥ ಪ್ರಕಾರವು ಕನ್ನಡಕ್ಕೆ ಬಿ.ಎಂ.ಶ್ರೀಯವರ ಮೂಲಕ ಬಂದುದಕ್ಕಾಗಿ ಹಿಗ್ಗುತ್ತಾರೆ. ಬಿ.ಎಂ.ಶ್ರೀ.ಯವರು ಇಂಗ್ಲಿಷ್ ಗೀತಗಳಲ್ಲಿ ಮಾಡಿದ 'ಅವಳ ತೊಡಿಗೆ ಇವಳಿಗಿಟ್ಟು ನೋಡುವ' ಕ್ರಮವನ್ನು ಇಲ್ಲೂ ಮಾಡಿದ್ದು, ಕನ್ನಡ ಕಾವ್ಯವಧುವು ಇಲ್ಲಿ ಪಾರಸಿ

ಹೆಂಗಸಿನ ಹೊಸ ರೂಪದಲ್ಲಿ ಕಾಣಿಸಿಕೊಳ್ಳುವಂತಾಗಿದೆ ಎನ್ನುತ್ತಾರೆ. ರನ್ನನ ಪಾತ್ರಚಿತ್ರಣ ಮತ್ತು ಬಿ.ಎಂ.ಶ್ರೀ.ಯವರ ಪಾತ್ರಚಿತ್ರಣಗಳಲ್ಲಿಯ ವಿಶೇಷಗಳನ್ನು ಗುರುತಿಸುತ್ತಾ, ದ್ರೌಪದಿಯ 'ಗಂಡಸುತನ' ಈ ನಾಟಕದಲ್ಲಿ ಹೊರಹೊಮ್ಮುವಷ್ಟು ಚೆನ್ನಾಗಿ ಇನ್ನೆಲ್ಲೂ ಕಂಡುಬಂದಿಲ್ಲ ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಚಳುವಳಿ, ಸಿದ್ಧಾಂತಗಳಿಂದ ದೂರವಾದ, ಈ ರೀತಿಯ ಆಸ್ವಾದನಾರೂಪದ ವ್ಯಾಖ್ಯಾನ ಇಂದು ತೀರಾ ಅಪರೂಪದ್ದಾಗಿದೆ.

ವಿ.ಸೀ.ಯವರ 'ದ್ರಾಕ್ಷಿ – ದಾಳಿಂಬೆ' ಎನ್ನುವ ಕವನಸಂಕಲನವನ್ನು ಕುರಿತ ಪ್ರಬಂಧವು ಈ ಸಂಕಲನದ ಸುದೀರ್ಘವಾದ ಅಧ್ಯಯನಪೂರ್ಣವಾದ ಲೇಖನ. ಕವನಸಂಕಲನವೊಂದನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ವಿ.ಸೀಯವರ ಒಟ್ಟು ಸಾಹಿತ್ಯದ ಪರಿಚಯ ಮಾಡಿಕೊಡುವ ವಿಶೇಷಲೇಖನವಿದು. ಈ ಲೇಖನವನ್ನು ಅವರು ಕಾವ್ಯಪರಿಶೀಲನೆ ಎಂದು ಕರೆದಿದ್ದಾರೆ.

ವಿ.ಸೀಯವರ ಕವನಗಳ ಬಗ್ಗೆ ಲೇಖನದ ಆರಂಭದಲ್ಲಿ ಜಿವೆಂ ಅವರು ನೀಡುವ ಪ್ರಸ್ತಾವನೆಯೊಂದನ್ನು ಗಮನಿಸಬೇಕು: "ವಿ.ಸೀ ಮುಖ್ಯವಾಗಿ ಒಬ್ಬ ಪ್ರಯೋಗಶೀಲ ಕವಿ. ತಮ್ಮ ಕಾವ್ಯಗಳಲ್ಲಿ ಅವರು ಮಾಡಿರುವ ಅನೇಕ ಪ್ರಯೋಗಗಳು ಇನ್ನೂ ಹೆಚ್ಚು ಪ್ರಚಾರವಾಗದಿರುವುದು ಶೋಚನೀಯವಾದ ಸಂಗತಿ. ಆಧುನಿಕ ಕಾವ್ಯಾಭ್ಯಾಸಿಗಳಿಗೆ ಇವರ ಕಾವ್ಯದಲ್ಲಿ ಅನೇಕ ಪಾಠಗಳು ದೊರೆತಾವು. ಒಂದು ಪದ ಪ್ರಯೋಗದಲ್ಲಿ, ನೂತನ ಛಂದೋವಿಸ್ತಾರದಲ್ಲಿ, ಸಂಕೋಚನದಲ್ಲಿ, ವಸ್ತುಗಳ ಆಯ್ಕೆಯಲ್ಲಿ ಇತರರಲ್ಲಿ ಕಾಣದ ಗುಣ ಇವರ ಕಾವ್ಯಗಳಲ್ಲಿದೆ. ಕನ್ನಡ ಸಾಹಿತ್ಯದಲ್ಲಿ ಇತರ ಆಧುನಿಕ ಕವಿಗಳು ಮಾಡದಿರುವ ಕೆಲವು ಪ್ರಯೋಗಗಳನ್ನು ಇವರು ನಡೆಸಿದ್ದಾರೆ. ಸಂಗೀತವನ್ನು ಕಾವ್ಯಕ್ಕೆ ಹೊಂದಿಸುವುದರಲ್ಲಿಯೂ ನಮಗೆ ಇದು ಗೊತ್ತಾಗುತ್ತದೆ. ಇತರ ಕವಿಗಳಂತೆಯೇ ತಮ್ಮ ಕಾವ್ಯವನ್ನು ಹಾಡಿ ತೋರಿಸುವ ಅವಕಾಶವನ್ನು ಕನ್ನಡ ಸಭೆಗಳಿಗೆ ವಿ.ಸೀ. ಅವರು ಒದಗಿಸಲಿಲ್ಲ. ಹಾಗಾಗಿದ್ದರೆ ಅವರ ಕಾವ್ಯಗಳ ಅರ್ಥ ಬಹುಸ್ಫುಟವಾಗಿ ಅನೇಕ ಅನರ್ಥಗಳು ತಪ್ಪಿ ಹೋಗಬಹುದಾಗಿತ್ತು. ಜಾಡು ಹೊಸದಾಗಿರುವಾಗ ಅದರಲ್ಲಿ ಎಲ್ಲಿಗೆ ಹೋಗಬಹುದೆನ್ನುವುದನ್ನು ತೋರಿಸುವುದು ಬಹಳ ಅಗತ್ಯ. ಇಲ್ಲದಿದ್ದರೆ ಅದು ಬೇಗ ಮುಚ್ಚಿ ಹೋಗಿ ಮತ್ತೆ ಹುಡುಕಬೇಕಾಗುತ್ತದೆ. ತಮ್ಮ ಕಾವ್ಯದ ವಿಚಾರವಾಗಿ ಅವರು ಎಲ್ಲೂ ಮಾತನಾಡದೇ ಹೋದುದು ಈ ದೃಷ್ಟಿಯಿಂದ ಒಂದು ನಷ್ಟವಾಗಿದೆ."

–೩–

ವಿಮರ್ಶೆಯ ಪರಿಭಾಷೆಯ ಬತ್ತಳಿಕೆಗಳನ್ನೆಲ್ಲ ಕಳಚಿಟ್ಟು ಕೇವಲ ರಸಗ್ರಹಣದ ಕುತೂಹಲ, ಬೆರಗುಗಳೊಂದಿಗೆ ವಿ.ಸೀ ಕಾವ್ಯೋದ್ಯಾನದೊಳಕ್ಕೆ ವಿಹಾರಕ್ಕೆ ಹೊರಟರೆ ಎಂತಹ ಅನುಭೂತಿ ದೊರಕುವುದು ಎನ್ನುವುದನ್ನು ಸ್ವತಃ ಕೈಹಿಡಿದು ನಡೆಸಿ ತೋರಿಸುವಂತೆ ಜಿವೆಂ ಅವರ ಕಾವ್ಯವಿಹಾರ ಇದೆ. ಅವರೆನ್ನುವಂತೆ 'ಜೀವನದ ಎಲ್ಲ ಹಾದಿಗಳಲ್ಲಿಯೂ ಪಾವನತೆಯನ್ನು ಸಾಧಿಸಬೇಕೆನ್ನುವ ಸಂಯಮಿ ವಿ.ಸೀ.' ಆ

ಭಾವದ ವಿವಿಧ ಮುಖಗಳನ್ನು ಜಿವೆಂ ಅವರು ಬಿಡಿಸಿ ಬಿಡಿಸಿ ತೆರೆದಿಡುತ್ತಾರೆ. 'ಪಾಕ್ಷಿ-ಪಾಕಂಚೆ' ಸಂಕಲನದ ಹೆಚ್ಚು ಕಡಿಮೆ ಎಲ್ಲ ಕವನಗಳ ಬಗೆಗೂ ಎರಡೆರಡು ಸಾಲುಗಳನ್ನು ಅವರು ಬರೆಯುತ್ತಾರೆ.

ಈ ಲೇಖನದೊಳಗೇ ಭಾವಗೀತೆ ಎಂದರೇನು ಎಂಬ ಬಗ್ಗೆ ಪುಟ್ಟ ಟಿಪ್ಪಣಿಯೊಂದಿದೆ. ಭಾವಗೀತೆಯ ಚರ್ಚೆಯಲ್ಲಿ ಸಾಮಾನ್ಯವಾಗಿ ಚರ್ಚಿಸಲ್ಪಡುವ, ಕವಿಯ ವೈಯಕ್ತಿಕವಾದ ಭಾವವು ಸಾರ್ವತ್ರಿಕವಾಗುವ ಬಗೆಯನ್ನು ಕುರಿತಂತೆ ಜಿವೆಂ ಹೀಗೆ ಬರೆಯುತ್ತಾರೆ: 'ಕವಿಯ ಆತ್ಮೀಯವಾದ ಭಾವನಾಸಾಮ್ರಾಜ್ಯದ ಸೃಷ್ಟಿ ಭಾವ-ಗೀತೆ. ಅಂದರೆ ಅದು ಸಂಪೂರ್ಣವಾಗಿ ವ್ಯಕ್ತಿನಿಷ್ಠವಾಗಿ ಇತರರಿಗೆ ಸಂಬಂಧ-ಪಟ್ಟಿಲ್ಲವೆಂದು ಅರ್ಥವಲ್ಲ. ಎಲ್ಲ ಕಲೆಗಾರರೂ ಮಾನವಸಾಮಾನ್ಯವಾದ ಅನುಭವ-ಗಳನ್ನು ಹೊಂದಿ ತಮ್ಮ ಪ್ರತಿಭಾಸಂಪನ್ನತೆಯಿಂದ ಅವುಗಳಿಗೆ ಲೋಕಸಂಪರ್ಕವನ್ನು ಒದಗಿಸುತ್ತಾರೆ. ತಮ್ಮ ಕಲ್ಪನಾಸಹಚಾರಿಯಾದ ಅನುಕಂಪೆಯಿಂದ ಇತರರ ಅನುಭವಗಳನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಾರೆ. ಆದುದರಿಂದ ಪ್ರತಿಯೊಂದು ಭಾವಗೀತೆಯಲ್ಲಿಯೂ ಮಾನವತೆಗೇ ಸಾಮಾನ್ಯವಾದ ಭಾವನಾವಿಶೇಷವು ವ್ಯಕ್ತವಾಗಿರುತ್ತದೆ ಅಥವಾ ಎಷ್ಟರಮಟ್ಟಿಗೆ ಈ ಭಾವನೆ ಲೋಕಸಾಮಾನ್ಯವೋ ಅಷ್ಟರಮಟ್ಟಿಗೆ ಅದಕ್ಕೆ 'ಭಾವಗೀತೆ' ಎಂಬ ಹೆಸರು ಒಪ್ಪುತ್ತದೆ ಎನ್ನಬಹುದು.' ಹೀಗಾಗಿ ನಾವು ಕವಿತೆಯಲ್ಲಿ ಕೇವಲ ಕವಿಯ ಜೀವನವನ್ನು ಗಮನಿಸುವುದಲ್ಲ; ಕವಿಯ ನಿರೂಪಣೆಯಲ್ಲಿರುವ ಮಾನವಸಾಧಾರಣವಾದ ಅನುಭವದ ನಿರೂಪಣೆ-ಯಲ್ಲಿರುವ ಕವಿಯ ದೃಷ್ಟಿಯನ್ನು ಗಮನಿಸಬೇಕು. ಈ ಅನುಭವ ವೈಶಿಷ್ಟ್ಯವನ್ನು ಗ್ರಹಿಸುತ್ತಾ ವಿ.ಸೀ.ಯವರ ಕವನಗಳಲ್ಲಿ ಬರುವ ಪ್ರೇಮ, ರಾಷ್ಟ್ರೀಯತೆ, ಸಾಮಾಜಿಕ ಸಮಸ್ಯೆ, ಇತ್ಯಾದಿ ಸೂಕ್ಷ್ಮಗಳನ್ನು ಎಳೆ ಎಳೆಯಾಗಿ ವಿವರಿಸುತ್ತಾರೆ. ಅನೇಕ ಕಡೆ ತಾವು ಓದಿದ ಇಂಗ್ಲಿಷ್ ಕವನಗಳ ಜತೆ ಹೋಲಿಸುವ ಕೆಲಸವನ್ನೂ ಮಾಡುತ್ತಾರೆ.

ಮಾಸ್ತಿಯವರ ಒಟ್ಟು ಸಾಹಿತ್ಯಕ್ಕೆ ಮೂಲವಾದ ಕವಿ ದೃಷ್ಟಿ ಒಂದೇ ಎನ್ನುವ ಜಿವೆಂ ಅವರು ಅದನ್ನು ಹೀಗೆ ಗುರುತಿಸುತ್ತಾರೆ: 'ಪ್ರಪಂಚದಲ್ಲಿ ಸೌಂದರ್ಯ, ಸತ್ಯ, ಪ್ರೇಮಗಳಿಗೂ ಅಸತ್ಯ, ಅಸುಂದರ, ದ್ವೇಷಗಳಿಗೂ ಘರ್ಷಣೆಯುಂಟಾದರೆ ಸತ್ಯ, ಸೌಂದರ್ಯ, ಪ್ರೇಮಗಳೇ ಎಂದೂ ಗೆದ್ದು ನಿಂತಾವೆಂಬ ಅಚಲವಾದ ಧರ್ಮದೃಷ್ಟಿ ಇದು.' ಈ ಮೂಲದೃಷ್ಟಿಯಲ್ಲೇ ಮಾಸ್ತಿಯವರು ತಾತ್ತ್ವಿಕ ಸಂಕೇತಗಳಾದ ಪಾತ್ರಗಳನ್ನು ಚಿತ್ರಿಸಿದ್ದಾರೆ. ಮಾಸ್ತಿಯವರ ಕೈಯಲ್ಲಿ ಆ ಪಾತ್ರಗಳ ಹಿರಿಮೆ ಇನ್ನಷ್ಟು ಬೆಳಗುತ್ತದೆ. 'ಯಶೋಧರಾ' ನಾಟಕದ ಪಾತ್ರಗಳು ಅದಕ್ಕೆ ಒಳ್ಳೆಯ ಉದಾಹರಣೆ.

–೪–

ಪದ್ಯನಾಟಕ ರೂಪದಲ್ಲಿರುವ ಈ ಕೃತಿಯಲ್ಲಿ ಮಾಸ್ತಿಯವರು ಚಿತ್ರಿಸುವ ಪಾತ್ರಗಳಲ್ಲಿ ಅವರ ಸ್ವಾರ್ಥರಹಿತ ಕಲ್ಯಾಣದೃಷ್ಟಿ ವ್ಯಕ್ತವಾಗುತ್ತದೆ. ಬುದ್ಧನ ಉನ್ನತಿ, ಯಶೋಧರೆಯ ಆತ್ಮಾಭಿಮಾನ, ಆನಂದನ ಸಮತಾದೃಷ್ಟಿ, ಅಂಬಾಪಾಲಿಯ ಪಶ್ಚಾತ್ತಾಪದಗ್ಧ ಹೃದಯ, ಅಂಜಿಕೆಯ ಸ್ವಾರ್ಥರಾಹಿತ್ಯ – ಇವೆಲ್ಲವನ್ನೂ ಮಾಸ್ತಿ-

ಯವರು ಒಂದೇ ದೃಷ್ಟಿಯಿಂದ ನೋಡಿ ಚಿತ್ರಿಸಬಲ್ಲರು. ನಾಟಕದಲ್ಲಿ ಮಾಸ್ತಿಯವರು ಬಳಸಿಕೊಳ್ಳುವ ದೃಷ್ಟಾಂತಗಳೂ ಉಪಮೆಗಳೂ ಬುದ್ಧನ ಉಪದೇಶಗಳಿಂದಲೇ ಆರಿಸಿದವುಗಳೆಂದು ಗುರುತಿಸುವ ಜಿವೆಂ ಈ ನಾಟಕವನ್ನು ಬುದ್ಧನ ಉಪದೇಶವಾಣಿಯಾಗಿಯೂ ನೋಡಬಹುದು ಎನ್ನುತ್ತಾರೆ.

ವಿಮರ್ಶಾ ಲೇಖನವೊಂದು ಸ್ವತಃ ಒಂದು ಕೃತಿವಿಶ್ಲೇಷಣೆಯಾಗುವುದರ ಜತೆಗೇ ಮುಂದೆ ಬರುವ ವಿಮರ್ಶೆಗಳಿಗೆ ಸಂಸ್ಕೃತಿಪಥ್ಯವೂ ಆಗುವುದು ಎಂಬ ಮಾತಿದೆ. ಜಿವೆಂ ಅವರ ಲೇಖನಗಳಿಗೆ ಇದು ಸರಿಯಾಗಿಯೇ ಅನ್ವಯಿಸುತ್ತದೆ. ಶಿವರಾಮ ಕಾರಂತರ 'ಕುಡಿಯರ ಕೂಸು' ಕಾದಂಬರಿಯ ಬಗ್ಗೆ ಜಿವೆಂ ಬರೆದ ಪರಿಚಯ ಲೇಖನವೊಂದು ಒಟ್ಟು ಕಾರಂತರ ಜೀವನ ಸಾಧನೆಗಳನ್ನು ಪರಿಚಯಿಸುವ ಗ್ರಂಥವೊಂದರ ಪ್ರವೇಶದಂತಿದೆ. 'ಕುಡಿಯರ ಕೂಸು' ಕಾದಂಬರಿಯ ದೇಶ, ಕಾಲ, ವಸ್ತು, ವರ್ಣನೆಗಳ ವಿವರಗಳನ್ನು ಕೊಡುತ್ತಲೇ ಮೂಢನಂಬಿಕೆ, ಶೋಷಣೆ ಇತ್ಯಾದಿಗಳತ್ತ ಗಮನ ಸೆಳೆಯುತ್ತಾ ಕಾದಂಬರಿಯ ಮೂಲಕ ಕಾರಂತರು ಕಟ್ಟಿಕೊಡುವ ವಾಸ್ತವ ಪ್ರಪಂಚವೊಂದರ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ.

ಶಿವರಾಮ ಕಾರಂತರ ಅದಮ್ಯವಾದ ಸಾಹಸ ಶಕ್ತಿ, ಕ್ರಿಯಾಶೀಲತೆಗಳನ್ನು ಗುರುತಿಸುವ ಜಿವೆಂ ಅವರು ಕಾರಂತರಿಗೆ 'ಶ್ರೀಮಾನ್ ಕಾರ್ಯವಂತರು' ಎಂದು ಅರ್ಥಪೂರ್ಣವಾದ ವಿಶೇಷಣವೊಂದನ್ನು ನೀಡಿ ಗೌರವಿಸುತ್ತಾರೆ.

'ಅನುಕಲ್ಪನೆ'ಯಲ್ಲಿ ಲೇಖನಗಳನ್ನು ಪೋಣಿಸಿರುವುದಕ್ಕೂ ಒಂದು ಕ್ರಮ ಇದೆ. ಹಳಗನ್ನಡ ಕಾವ್ಯದಿಂದ ಆರಂಭಿಸಿ, ಹಳಗನ್ನಡ ನಾಟಕ, ಆಧುನಿಕ ಕಾವ್ಯ, ಆಧುನಿಕ ನಾಟಕ, ಕಾದಂಬರಿ, ಸಣ್ಣಕತೆ, ನವ್ಯಕವನ – ಹೀಗೆ ವಿವಿಧ ಪ್ರಕಾರಗಳನ್ನು ಇದು ಒಳಗೊಳ್ಳುತ್ತದೆ. ಕಾರಂತರ ಕಾದಂಬರಿಯ ಬಳಿಕ ಭಾರತೀಪ್ರಿಯರ 'ರುದ್ರವೀಣೆ' ಎಂಬ ಸಣ್ಣಕಥಾ ಸಂಕಲನದ ಬಗ್ಗೆ ಜಿವೆಂ ಬರೆಯುತ್ತಾರೆ. 'ರುದ್ರವೀಣೆ' ಅಪರೂಪದ ಒಂದು ವಾದ್ಯ. ಇದರಲ್ಲಿ ನುಡಿಸುವ ರಾಗಗಳು ಸಾಮಾನ್ಯವಾಗಿ ಹೃದಯಭೇದಿಯೂ ಮರ್ಮಸ್ಪರ್ಶವೂ ಆಗಿರುತ್ತದೆಯೆಂದು ನಂಬಿಕೆ. ಅದಕ್ಕೆ ಅನು-ಗುಣವಾಗಿಯೇ ಈ ಸಂಕಲನದ ಕತೆಗಳು ದುಃಖದ ಅನುಭವಗಳನ್ನು ಸೂಚಿಸುತ್ತವೆ. ಭಾರತೀಪ್ರಿಯರ ಭಾಷಾವೈಶಿಷ್ಟ್ಯ, ಕಥನಕುತೂಹಲಗಳನ್ನು ಉದಾಹರಣೆಗಳ ಸಹಿತವಾಗಿ ವಿವರಿಸುವ ಅವರು ಕಾದಂಬರಿಯ ಜನಪ್ರಿಯತೆಯ ಎದುರು ಕಥಾಪ್ರಕಾರವು ಕಳಾಹೀನವಾಗುತ್ತಿರುವ ಬಗ್ಗೆ ಉಲ್ಲೇಖಿಸುತ್ತಾ ರುದ್ರವೀಣೆಯ ಕತೆಗಳಂತಹ ಕತೆಗಳು ಹೇಗೆ ಭಿನ್ನವಾಗಿ ಈ ಪ್ರಕಾರವನ್ನು ಬೆಳೆಸುವ ನಿಟ್ಟಿನಲ್ಲಿ ಗಮನಾರ್ಹವಾಗುತ್ತವೆ ಎನ್ನುವುದನ್ನು ವಿವರಿಸುತ್ತಾರೆ. ಕಥಾವಸ್ತುವನ್ನು ಕುರಿತಂತೆ ಭಾರತೀಪ್ರಿಯ ಅವರು ಮಾಡುವ ಆವರಣನಿರ್ಮಾಣ, ಬೇಕೆಂದೇ ಸೃಷ್ಟಿಸುವ ಅಸ್ಪಷ್ಟತೆ ಇವುಗಳನ್ನೆಲ್ಲ ಕಥಾರಚನೆಯ ಕೌಶಲದ ಕಸುಬುದಾರಿಕೆಯಾಗಿ ಗಮನಿಸಬೇಕು. ಆದರೆ ಕೆಲವೊಮ್ಮೆ ಅಸ್ಪಷ್ಟತೆಗಾಗಿಯೇ ಅಸ್ಪಷ್ಟತೆಯನ್ನು ತಂದರೆ ಅದರಿಂದ ಆಗುವ ತೊಂದರೆಯನ್ನೂ ಅವರು ಗುರುತಿಸುತ್ತಾರೆ.

– ೫ –

ಕುಮಾರವ್ಯಾಸ ಚಿತ್ರಿಸಿದ ಶ್ರೀಕೃಷ್ಣನ ಪಾತ್ರದ ಬಗ್ಗೆ ಬರೆಯುವಾಗ ಜಿವೆಂ ಅವರ ತೌಲನಿಕ ಪ್ರವೃತ್ತಿಯೂ ಎಚ್ಚರವಾಗಿರುತ್ತದೆ. ಪಂಪನ ಕೃಷ್ಣನ ಜತೆ ಹೋಲಿಕೆಯು ಸಹಜವಾಗಿಯೆಂಬಂತೆ ಕಾಣಿಸಿಕೊಳ್ಳುತ್ತದೆ. ಆದರೆ ಕೃಷ್ಣತತ್ತ್ವದ ಆಶಯವು ಕುಮಾರವ್ಯಾಸ ಭಾರತದ ಕೇಂದ್ರ ಎನ್ನುವುದನ್ನು ಅವರು ಗುರುತಿಸು-ತ್ತಾರೆ. ರಸಸಂದರ್ಭಗಳ ವರ್ಣವೈಖರಿಯೂ ಸೇರುವಾಗ ಕುಮಾರವ್ಯಾಸನ ಕೃಷ್ಣನ ವರ್ಣನೆ ಅಸದೃಶವಾದುದು. 'ಕೃಷ್ಣನು ಮಾಯಾನಾಟಕದ ಸೂತ್ರಧಾರಿಯಾದರೆ ಕುಮಾರವ್ಯಾಸ ಭಾರತವು ಒಂದು ಮಹಾಮಯಾನಾಟಕಶಾಲೆ' ಎಂಬ ಜಿವೆಂ ಅವರ ಮಾತು ತುಂಬ ಅರ್ಥವತ್ತಾದುದು.

ಅನುಕಲ್ಪನೆಯಲ್ಲಿ ಜಿವೆಂ ಅವರ ರಸಾನ್ವೇಷಣಯಾತ್ರೆಯು ಮುಗಿಯುವುದು ನವ್ಯಕವಿಗಳ ಕೃತಿಪರಿಶೀಲನೆಯಲ್ಲಿ. ನವ್ಯಕಾವ್ಯ ಪ್ರಯೋಗಗಳು ಇನ್ನೂ ಹೆಜ್ಜೆಯೂರುತ್ತಿದ್ದ ಕಾಲದಲ್ಲಿ ಬರೆದಿರಬಹುದಾದ ಈ ಲೇಖನದಲ್ಲಿ ಗೋಕಾಕರ 'ಬಾಳದೇಗುಲದಲ್ಲಿ', ಚೆನ್ನವೀರ ಕಣವಿಯವರ 'ದೀಪಧಾರಿ' ಮತ್ತು ರಾಮಚಂದ್ರ ಶರ್ಮ ಅವರ 'ಋಷಿ ನೀಡಿದ ಸ್ಫೂರ್ತಿ' ಕವನ ಸಂಕಲನಗಳನ್ನು ಎತ್ತಿಕೊಳ್ಳಲಾಗಿದೆ. ಗೋಕಾಕರ ನವೀನತೆಯನ್ನು ಮೆಚ್ಚಿಕೊಳ್ಳುವ ಜಿವೆಂ ಕಣವಿಯವರ ಕವನಗಳಲ್ಲಿ ಕಂಡುಬರುವ ನಿಷ್ಕೃಷ್ಟವಾದ ಪದಪ್ರಯೋಗ, ವಸ್ತುವೈವಿಧ್ಯ, ರೂಪಕಗಳ ನಾವೀನ್ಯ-ವನ್ನು ಇಷ್ಟಪಡುತ್ತಾರೆ. ರಾಮಚಂದ್ರ ಶರ್ಮ ಅವರ ಕವನಗಳನ್ನು ಸಮರ್ಥವಾಗಿಯೇ ವಿಶ್ಲೇಷಿಸಿ ಅವರ ಪ್ರತಿಭೆಯ ಬಗ್ಗೆ, ಸಂಯಮದ ಬಗ್ಗೆ, ಅಸಾಮಾನ್ಯ ರೂಪಕಶಕ್ತಿಯ ಬಗ್ಗೆ ಗೌರವದ ಮಾತುಗಳನ್ನಾಡುತ್ತಾರೆ. ಆದರೆ ನವ್ಯಕವನದ ಒಗಟಿನ ರೂಪದಲ್ಲಿ ಕವನ ಕಟ್ಟುವ ಜಾಣ್ಮೆಯ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ರಾಮಚಂದ್ರ ಶರ್ಮರಂಥ ಪ್ರತಿಭಾನ್ವಿತ ಕವಿಗಳ ಕಾವ್ಯಗುಣವು ಒಗಟಿನಂಥ ರಚನೆಗಳನ್ನು ಕಟ್ಟುವಲ್ಲಿ ಪೋಲಾಗಬಾರದು ಎನ್ನುವುದು ಅವರ ಕಳಕಳಿಯಾಗಿತ್ತು. ಅವರಾಡುವ ಈ ಕೆಳಗಿನ ಮಾತುಗಳು ನವ್ಯದ ಬಗೆಗೆ ಯಾವತ್ತೂ ಕೇಳಿ ಬರುವ ಆಕ್ಷೇಪಣೆಯೇ ಆಗಿವೆ. '.........ನವ್ಯಕವಿತೆಯ ಪ್ರಯೋಗಕ್ಕೆ ಒಂದು ಎಚ್ಚರಿಕೆಯ ಮಾತನ್ನಾಡ-ಬೇಕೆನ್ನಿಸುತ್ತದೆ. ಇದರಿಂದ ನವ್ಯತೆ ಬೇಡವೆಂದು ಅರ್ಥವಲ್ಲ. ಇದು ಕನ್ನಡದ ಪ್ರಗತಿಯಲ್ಲಿರುವ ಆಸಕ್ತಿಯಿಂದಾಡಿದ ಮಾತು.......... ಈ ಕವನಗಳನ್ನು ಓದುವುದಕ್ಕೆ ನಾವು ಎಷ್ಟು ಪ್ರಯಾಸಪಡುತ್ತೇವೆಯೋ ಅಷ್ಟೇ ಪ್ರಯಾಸವಾಗಿರಬಹುದು ಕವಿಗೆ ಈ ಅರ್ಥರಹಸ್ಯವನ್ನು ಹೀಗೆ ಕವನದಲ್ಲಿ ತುಂಬುವುದಕ್ಕೆ. ಅಪ್ರಯಾಸವಾಗಿ ಅನಾಯಾಸ ವಾಗಿ ಈ ಒಗಟು ಸಾಧಿತವಾದರೆ ಅದು ನಿಜವಾಗಿಯೂ ಆಶ್ಚರ್ಯಕರ. ಕವಿಯ ಮನಸ್ಸು ಒಂದೊಂದು ವೇಳೆ ಹೀಗೆ ವಿಚಿತ್ರ ರೀತಿಯಲ್ಲಿ ಕೆಲಸ ಮಾಡಬಲ್ಲ-ದೆನ್ನುವುದೇನೋ ಅನುಭವಕ್ಕೆ ಬಂದಿರುವ ವಿಷಯ. ಹಾಗಿದ್ದಾಗ ಪ್ರತಿಯೊಂದು ಕವನಕ್ಕೂ ಮುನ್ನುಡಿ, ಹಿನ್ನುಡಿಗಳ, ಅರ್ಥವಿವರಣೆಯ ಟಿಪ್ಪಣಿಯನ್ನು ಮೊದ ಮೊದಲು ಕೊಟ್ಟು ಓದುಗರನ್ನೂ ಈ ನವ್ಯರೀತಿಗೆ ಸಿದ್ಧರನ್ನಾಗಿ ಮಾಡುವ

ಪ್ರಯತ್ನವನ್ನಾದರೂ ಮಾಡಬೇಕು. ಪಾಶ್ಚಾತ್ಯರಲ್ಲಿಯೂ ಈ ಅಭಿವ್ಯಕ್ತಿಗೆ ಕೆಲವು ಮಾರ್ಗಗಳುಂಟು. ವಿಚಿತ್ರವಾಕ್ಯಸರಣಿ, ವಿರಾಮಚಿಹ್ನೆಗಳನ್ನು ತಲೆಕೆಳಗು ಮಾಡು-ವುದು ಅಥವಾ ಸಂಪೂರ್ಣವಾಗಿ ಬಿಟ್ಟುಬಿಡುವುದು, ರೂಪಕಗಳ ದೂರಾನ್ವಯ, ಅಪೂರ್ವ ಕತೆಗಳ, ದೇಶಾಂತರ ಪುರಾಣಗಳ ಅಕಸ್ಮಾತ್ ಸಂಬಂಧ, ಅತಿಸ್ವತಂತ್ರವಾದ ಛಂದೋಗತಿ – ಇವೆಲ್ಲ ಸೇರಿ ಏಳು ಸುತ್ತಿನ ಕೋಟೆಯನ್ನೂ ಕಟ್ಟಿಬಿಡುತ್ತವೆ, ಸರ್ಪಕಾವಲು ಹೊರಗೆ, ಒಳಗೆ ರಾಜಕುಮಾರಿ. ನುಗ್ಗಿ ಬರಬೇಕು ರಾಜಕುವರ ನಲ್ಲೆಯ ಬಳಿಗೆ......... ಕನ್ನಡಕ್ಕೆ ಒಗಟೆಯಿಲ್ಲದೆ ನವ್ಯತೆಯನ್ನು ಸಾಧಿಸುವುದಕ್ಕಾಗುವುದೇ ಇಲ್ಲವೇ?' ಇದು ಜಿವೆಂ ಅವರ ಪ್ರಾಮಾಣಿಕ ಕಳಕಳಿ.

– ೬ –

ಪ್ರೊ. ವೆಂಕಟಸುಬ್ಬಯ್ಯನವರ ಕನ್ನಡದ ಬಗೆಗಿನ ಕಾಳಜಿ ಅಸಂದಿಗ್ಧವಾದುದು. ಪದಗಳ ಆಳಕ್ಕೆ ಇಳಿದು, ಜಾಲಾಡಿ, ಅರ್ಥಮೂಲಗಳನ್ನು ಶೋಧಿಸಿ ತರುವ ಅವರ ಕ್ರಮ ವಿಶೇಷವಾದುದು. ಕನ್ನಡಕ್ಕೆ ಸಾಮಾಜಿಕ ನಿಘಂಟುವಿನಂತಹ ಹೊಸ ಬಗೆಯ ಪದವಿಶ್ಲೇಷಣೆಯನ್ನು ಬೆಳೆಸಿದವರವರು. ಅವರ ಈ ಕಾಳಜಿ ಅವರ ಸಾಹಿತ್ಯಿಕ ಬರಹಗಳಲ್ಲೂ ಕಾಣಿಸಿಕೊಂಡಿದೆ.

ಅನುಕಲ್ಪನೆಯ ಲೇಖನಗಳು ಇದಕ್ಕೆ ಉದಾಹರಣೆ. ಆಶಯಕೇಂದ್ರಿತ ವಿಮರ್ಶೆಯೇ ಇಂದು ಹೆಚ್ಚಾಗಿದ್ದು ವಿಮರ್ಶೆಯಲ್ಲಿ ಸಾಹಿತ್ಯದ ನೆಲೆಗಳನ್ನು ನಿರ್ಲಕ್ಷಿಸುವ ಪ್ರವೃತ್ತಿಯಿದೆ. ಜಿವೆಂ ಬರಹಗಳು ಅವುಗಳಿಗಿಂತ ಭಿನ್ನ. ಸಾಹಿತ್ಯ ಕೃತಿಗಳಿಗಿರುವ ವ್ಯಾಖ್ಯಾನ ಸಾಧ್ಯತೆಗಳನ್ನು ಅವರ ಬರಹಗಳು ವಿಸ್ತರಿಸುತ್ತವೆ.



# 'ಕೃತಿಚಿಂತನ' ಎಂಬ ಕೃತಿ ಚಿಂತನ

ಡಾ. ರಾಧಾಕೃಷ್ಣ ಬೆಳ್ಳೂರು

ಪ್ರೊ. ಜಿ. ವೆಂಕಟಸುಬ್ಬಯ್ಯನವರು ಬೇರೆ ಬೇರೆ ಸಂದರ್ಭಗಳಲ್ಲಿ ನೀಡಿದ ಉಪನ್ಯಾಸಗಳ ಯಥಾವತ್ತಾದ ಸಂಕಲನರೂಪ 'ಕೃತಿಚಿಂತನ'. ಕನ್ನಡದ ಮುಖ್ಯವೆನಿಸುವ ಒಂದಷ್ಟು ಗ್ರಂಥಗಳನ್ನು ಪರಿಚಯಿಸುವುದು ಈ ಲೇಖನಗಳ ಉದ್ದೇಶ. ಕೃತಿಯನ್ನು ಹಿಂಜಿ ಹಿಸುಕಿ, ರಸತೆಗೆಯುವ ವಿಮರ್ಶೆಯಾಗಲಿ, ಸಿದ್ಧ ಮಾನದಂಡಗಳಿಂದ ತೂಗಿನೋಡಿ ನಡೆಸುವ ಮೌಲ್ಯಮಾಪನವಾಗಲಿ ಇಲ್ಲದೆ, ಕೇವಲ ಓದಿನ ರುಚಿಯನ್ನು ಹಂಚಿಕೊಳ್ಳುವ ನೆವದ ಬರವಣಿಗೆಗಳಿವು. ಆದ್ದರಿಂದಲೇ ಇರಬೇಕು, ಕೃತಿಚಿಂತನವನ್ನು ಓದುವಾಗ ಮೂಲಕೃತಿಯನ್ನು ಓದಿದಷ್ಟೇ ಗಾಢವಾದ ಅನುಭವವಾಗುತ್ತದೆ; ಮೂಲಕೃತಿಯೇ ವಾಮನನಾಗಿ ಅಂಗೈ ಮೇಲೆ ಕುಳಿತಂತೆ ಅನ್ನಿಸುತ್ತದೆ.

ಇಲ್ಲಿ ಒಟ್ಟು ಹದಿನಾರು ಲೇಖನಗಳಿವೆ. ಈ ಪೈಕಿ ಒಂದು ಜೀವನಚರಿತ್ರೆಗೆ ಸಂಬಂಧಿಸಿದ್ದು - ಡಿವಿಜಿ ಅವರ 'ಗೋಪಾಲಕೃಷ್ಣ ಗೋಖಲೆ' ಕೃತಿಯ ಬಗ್ಗೆ. ಇನ್ನೊಂದು ಮೂರ್ತಿರಾಯರ 'ವ್ಯಕ್ತಿಚಿತ್ರಗಳಿಗೆ' ಸಂಬಂಧಿಸಿದ್ದು. ಈ ಎರಡೂ ಕೃತಿಗಳ ಆಯ್ಕೆ ವೆಂಕಟಸುಬ್ಬಯ್ಯನವರ ಒಳಗಿನ ಪ್ರಾಮಾಣಿಕ ತುಡಿತವೊಂದನ್ನು ಪ್ರತಿನಿಧಿಸುವಂತೆ ತೋರುತ್ತದೆ. ಅದು ಕೃತಿಕರ್ತೃವಿನ ಮಾನದಂಡದ ಆಯ್ಕೆಯಲ್ಲ. ಬದಲಾಗಿ ಯಾರ ಬಗ್ಗೆ ಬರೆದಿದ್ದಾರೋ ಅವರ ಬದುಕಿನ ಸಾಧನೆ ಮತ್ತು ಮೌಲ್ಯಗಳ ಮಾನದಂಡದ ಆಯ್ಕೆ. ಗೋಪಾಲಕೃಷ್ಣ ಗೋಖಲೆಯವರ ಬದುಕು ಯಾಕೆ ಮತ್ತು ಹೇಗೆ ಆದರ್ಶ ಮತ್ತು ಪರಿಪೂರ್ಣ ಬದುಕಾಗಿತ್ತು ಎಂಬುದನ್ನು ಅನ್ವೇಷಿಸಿ ದಾಖಲಿಸುವುದು ಡಿವಿಜಿಯವರ ಉದ್ದೇಶ. ಗೋಖಲೆ ಅವರ ಪ್ರಾಥಮಿಕ ಬಯೋಡಾಟಾವನ್ನು ನಿರ್ಲಕ್ಷಿಸಿ, ಸಾಧನೆ, ಸಿದ್ಧಿ, ಜೀವನಮೌಲ್ಯಗಳ ಪ್ರತಿಪಾದನೆಯಂತಹ ವಿಶಿಷ್ಟವಿಷಯಗಳನ್ನು ನಿರೂಪಿಸುತ್ತ ಹೋಗುವ ಕ್ರಮ ವೆಂಕಟಸುಬ್ಬಯ್ಯನವರನ್ನು ಆಕರ್ಷಿಸಿದೆ. ಡಿವಿಜಿ ತಮ್ಮ ಕೃತಿಯಲ್ಲಿ ಹೇಳಿದ ಬಹುಮುಖ್ಯ ಸಂಗತಿಗಳನ್ನು ಸ್ವಂತ ಅಡಿಗೆರೆಗಳೊಂದಿಗೆ ಹಿಡಿಯೊಳಗೆ ಹಿಡಿದು ಕೃತಿಚಿಂತನದಲ್ಲಿ ಇಟ್ಟಿದ್ದಾರೆ. 'ಇದು ಗೋಖಲೆಯವರ ಆತ್ಮೀಯವಾದ ಸಂಸಾರಸಂಬಂಧಿಯಾದ, ಕೇವಲ ವ್ಯಕ್ತಿಪರವಾದ ಜೀವನಕ್ಕೆ ಸಂಬಂಧಿಸಿದ್ದಲ್ಲ, ಆದುದರಿಂದಲೇ ನಾವಿಲ್ಲಿ

ಅವರ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ ಮುಂತಾದ ವೈಯಕ್ತಿಕ ವಿಷಯಗಳನ್ನು ಹೆಚ್ಚಾಗಿ ಕಾಣುವುದಿಲ್ಲ' – ಎನ್ನುತ್ತಾರೆ ವೆಂಕಟಸುಬ್ಬಯ್ಯ. ವೈಯಕ್ತಿಕ ವಿವರಗಳಿಲ್ಲ ಎಂಬುದನ್ನು ಒಂದು ಕೊರತೆಯಾಗಿ ಕಾಣದೆ, ಉದ್ದೇಶದ ಧನಾತ್ಮಕ ಅಂಶವನ್ನು ಗ್ರಹಿಸುವ ಕ್ರಮ ಅವರ ನಿಲುವನ್ನು ಲೇಖಕರ ನಿಲುವಿನೊಂದಿಗೆ ನಯವಾಗಿ ಜೋಡಿಸಿಬಿಡುತ್ತದೆ.

ಕಳೆದ ಶತಮಾನದ ಪೂರ್ವಾರ್ಧದಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕಲಿಸಿದವರಿಗೆ ಮತ್ತು ಕಲಿತವರಿಗೆ ಅದೊಂದು ಮರೆಯಲಾಗದ ಅನುಭವ. ಅಲ್ಲಿಯ ಸ್ಮರಣೀಯವ್ಯಕ್ತಿಗಳ ಚಿತ್ರ ಮೂರ್ತಿರಾಯರ ಪುಸ್ತಕದಲ್ಲಿ ಮೆಯ್ದಳೆದ ಕ್ರಮವನ್ನು ವೆಂಕಟಸುಬ್ಬಯ್ಯ ಇನ್ನೊಂದು ಚಿತ್ರದಲ್ಲಿ ಸೆರೆಹಿಡಿದಿದ್ದಾರೆ. ಆರ್. ಡಬ್ಲ್ಯೂ. ಬೂಟ್, ಡಿ. ಎನ್. ಮೂರ್ತಿ, ಎನ್. ಎಸ್. ಸುಬ್ಬರಾಯರು, ಮ್ಯಾಕಿಂಟಾಷ್, ಜೆ. ಸಿ. ರಾಲೋ ಹೀಗೆ ಹಲವರ ಜೊತೆಗಿನ ಮೂರ್ತಿರಾಯರ ಒಡನಾಟವನ್ನು ತಮ್ಮ ಒಡನಾಟವಾಗಿ ಗರ್ಭೀಕರಿಸಿಕೊಂಡು ಬರೆದ ಲೇಖನ ಸೊಗಸಾಗಿದೆ ಮತ್ತು ಮೌಲಿಕವಾಗಿದೆ.

ಸೃಜನಶೀಲ ಕೃತಿಗಳ ಕುರಿತಾಗಿ ಬರೆದ ಒಟ್ಟು ಎಂಟು ಲೇಖನಗಳು ಈ ಸಂಕಲನದಲ್ಲಿವೆ. ಮಾಸ್ತಿಯವರ 'ಯಶೋಧರಾ' ನಾಟಕ ಮತ್ತು ದೇವುಡು ಅವರ 'ಮಹಾಬ್ರಾಹ್ಮಣ' ಕಾದಂಬರಿಗಳ ಬಗ್ಗೆ ಬರೆದ ಎರಡು ಲೇಖನಗಳು ಈ ಪೈಕಿ ಗಮನ ಸೆಳೆಯುವಂಥವು. ಯಶೋಧರೆಯ ಪಾತ್ರದ ಮೂಲಕ ಬುದ್ಧನ ಅಂತಸ್ಸತ್ವವನ್ನು ಗುರುತಿಸುವ ಮಾಸ್ತಿಯವರ ತಂತ್ರವನ್ನು ಅಡಿಪಾಯವಾಗಿಟ್ಟುಕೊಂಡ ವೆಂಕಟಸುಬ್ಬಯ್ಯ ಅಲ್ಲಿ ಪ್ರತಿಪಾದಿತವಾದ ತಾತ್ತ್ವಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತಾರೆ. 'ಈ ನಾಟಕದ ಒಂದೊಂದು ಪಾತ್ರದ ಸ್ವಭಾವಗಳೂ ಬೇರೆ ಬೇರೆಯಾಗಿ ಕಾಣಬಹುದು. ಆದರೂ ಹಿರಿಯ ವ್ಯಕ್ತಿಗಳೆಲ್ಲ ಬಹುಶಃ ಯಾವುದೋ ಒಂದು ದೊಡ್ಡ ತತ್ತ್ವದ ಸಂಕೇತಗಳಂತೆ ಇರುತ್ತಾರೆ. ಶಾಂತಾ, ಸಾವಿತ್ರಿ, ತಿರುಪಾಣಿ, ಯಶೋಧರಾ ಇವರು ಈ ರೀತಿಯ ಪಾತ್ರಗಳು. ಈ ಮೂಲತತ್ತ್ವದಿಂದ ಆ ಪಾತ್ರಗಳ ಹಿರಿಮೆ ಹೆಚ್ಚಿದೆ' ಎನ್ನುತ್ತಾರೆ. ಏನಿದ್ದರೂ ವೆಂಕಟಸುಬ್ಬಯ್ಯನವರ ದೃಷ್ಟಿ ತತ್ತ್ವಗಳ ಕಡೆಗೆ. ಲೇಖನದುದ್ದಕ್ಕೂ ತತ್ತ್ವಗಳನ್ನು ಅನ್ವೇಷಿಸುವ ಕ್ರಮ ಢಾಳಾಗಿರುವುದು ಸುಳ್ಳಲ್ಲ. ಮಾಸ್ತಿಯವರ ಪಕ್ವಮನಸ್ಸು ಬೇರೆ ಬೇರೆ ಮಟ್ಟದ ಪಾತ್ರಗಳ ನಿಲುವನ್ನು ಒಂದೇ ಮಟ್ಟದಿಂದ ನೋಡಿ ದಾಖಲಿಸುವ ಶಕ್ತಿ ಹೊಂದಿದೆ ಎನ್ನುವುದಕ್ಕೆ ಲೇಖಕರು ಈ ನಾಟಕವನ್ನು ದೃಷ್ಟಾಂತವಾಗಿ ಗುರುತಿಸುತ್ತಾರೆ. ಇಲ್ಲಿಯ ಒಳನೋಟಗಳು ಸಂವೇದನಶೀಲ ಓದುಗನೊಬ್ಬನ ಪ್ರಾಂಜಲ ಮನಸ್ಸಿನ ಸೂಕ್ಷ್ಮ ಒಳನೋಟಗಳಾಗಿ ನೆಲೆ ನಿಲ್ಲುತ್ತವೆ. ಮಾಸ್ತಿಯವರು ಇತಿಹಾಸದ ಬುದ್ಧನನ್ನೂ ಯಶೋಧರೆಯನ್ನೂ ಗ್ರಹಿಸಿದ ರೀತಿ ಮತ್ತು ವೆಂಕಟಸುಬ್ಬಯ್ಯನವರು ಮಾಸ್ತಿ ಚಿತ್ರಿಸಿದ ಅವೇ ಪಾತ್ರಗಳನ್ನು ಗ್ರಹಿಸುವ ರೀತಿ ಇವೆರಡೂ ಒಂದನ್ನೊಂದು ತಬ್ಬಿದ ಹಾಗಿದೆ ಈ ಲೇಖನ.

ದೇವುಡು ಅವರ 'ಮಹಾಬ್ರಾಹ್ಮಣ' ಕಾದಂಬರಿ ಹಲವು ಕಾರಣಗಳಿಗೆ ಆಕ್ಷೇಪಕ್ಕೆ ಒಳಗಾಗಿದೆ. ಕಾರಣ, ಅದನ್ನು ಸಾಮಾಜಿಕ ಮಾನದಂಡಗಳಿಂದ

ಅಳಿಯಲು ಸಾಧ್ಯವಿಲ್ಲವೆನ್ನುವುದು ಒಂದು; ಬ್ರಾಹ್ಮಣ್ಯಕ್ಕೆ ಅಥವಾ ಬ್ರಾಹ್ಮಣನೊಬ್ಬನ ನಿತ್ಯಕರ್ಮಗಳಿಗೆ ಸಂಬಂಧಿಸಿದ ಪದಗಳು ಕಾದಂಬರಿಯುದ್ದಕ್ಕೂ ಹರಡಿದ್ದು ಅವು ಜನಸಾಮಾನ್ಯರ ಸಂವಹನಕ್ಕೆ ತೊಡಕಾಗುತ್ತವೆ ಎನ್ನುವುದು ಇನ್ನೊಂದು; ನಮ್ಮ ಕೈಗೆ ಸಿಗದ ಮಹತ್ತ್ವಾಕಾಂಕ್ಷೆಯ ಚಿಂತನೆ, ಸಾಧನೆ, ಸಿದ್ಧಿ ಇತ್ಯಾದಿಗಳ ಎತ್ತರ, ಬಿತ್ತರಗಳು ಓದಿನ ವೇಗಕ್ಕೆ ಕಡಿವಾಣ ಹಾಕುತ್ತವೆ ಎನ್ನುವುದು ಮತ್ತೊಂದು. ಆರಂಭದಲ್ಲೇ ಇಂತಹ ತೊಡಕುಗಳನ್ನು ಒತ್ತಿ ಹೇಳಿ, ಕಾದಂಬರಿಯ ವಿನ್ಯಾಸದಲ್ಲಿ ಒಳಗೊಂಡ ಅಸಂಬದ್ಧವೆನಿಸುವ ಸಂಗತಿಗಳಿಗೆ ತರ್ಕಬದ್ಧವಾಗಿ ಮತ್ತು ತಾತ್ತ್ವಿಕವಾಗಿ ಉತ್ತರಕಂಡುಕೊಳ್ಳುವ ಪ್ರಯತ್ನ ಲೇಖನವನ್ನು ಬೆಳೆಸುತ್ತ ಹೋಗುತ್ತದೆ. ಕೊನೆಗೆ ಅವರು ಕೊಡುವ ತೀರ್ಮಾನ ಇದು –

'ಇದು ತುಂಬ ವಿದ್ಯಾವಂತನಾದ, ವೇದಾಧ್ಯಯನನಿರತನಾದ, ಉಪನಿಷತ್ತುಗಳ ರಹಸ್ಯವನ್ನು ಭೇದಿಸಲು ಪ್ರಯತ್ನಪಟ್ಟ ಪ್ರಾಮಾಣಿಕವ್ಯಕ್ತಿಯ ಆಲೋಚನೆಗಳನ್ನು ರೂಪಿಸಿಕೊಂಡಿರುವ ಕೃತಿ; ಗಾಯತ್ರೀಮಂತ್ರದ ಉದಯದ ಹಿಂದೆ ಆಗಿರಬಹುದಾದ ಮಹಾಸಾಧನೆಯನ್ನೂ ಹಂತ ಹಂತವಾಗಿ ಕಲ್ಪಿಸಿಕೊಂಡಿರುವ ಕೃತಿ. ಸಾಮಾಜಿಕವಾಗಿ ಬ್ರಾಹ್ಮಣ, ಅಬ್ರಾಹ್ಮಣ ಎಂಬ ಭೇದ ತಲೆದೋರಿ ಲೋಕದಲ್ಲಿ ವೈಮನಸ್ಯವು ಹೆಚ್ಚಾಗುತ್ತಿದ್ದಾಗ ಬ್ರಾಹ್ಮಣರಿಗೂ ಅಬ್ರಾಹ್ಮಣರಿಗೂ ಬ್ರಾಹ್ಮಣ್ಯವೇನೆಂಬುದನ್ನು ತಿಳಿಸಿ ಕೊಟ್ಟು ಜಾತಿಯಲ್ಲಿ ಅಬ್ರಾಹ್ಮಣರಾದವರು ಹೇಗೆ ಬ್ರಾಹ್ಮಣ್ಯವನ್ನು ಸಂಪಾದಿಸ-ಬಹುದೆಂಬುದನ್ನು ಹೇಳುವ ಕೃತಿ.'

ಒಟ್ಟು ಕಾದಂಬರಿಯ ಕತೆ ಹೇಳುತ್ತ, ಅದನ್ನು ಅರ್ಥೈಸಿಕೊಳ್ಳಲು ಬೇಕಾದ ಮೂಲದ್ರವ್ಯದ ಕೀಲಿಕೈ ಒದಗಿಸಲು ವೆಂಕಟಸುಬ್ಬಯ್ಯ ಪ್ರಯತ್ನಿಸಿದ್ದಾರೆ. ಅದು ಸಾರ್ಥಕವೂ ಆಗಿದೆ.

ಪುಟ್ಟಸ್ವಾಮಯ್ಯನವರ ಲಲಿತಾಸಹಸ್ರನಾಮದ ಸಾಂಗತ್ಯಾನುವಾದವನ್ನು ಕುರಿತ ಪುಟ್ಟ ಲೇಖನ ಈಶ್ವರೀಯ ತತ್ತ್ವನಿರೂಪಣೆಯ ಕುರಿತು ವಿವರಿಸುವ ಪ್ರಮಾಣದಲ್ಲಿ ಅನುವಾದದ ಕುರಿತು ಮಾತನಾಡುವುದಿಲ್ಲ. ಲೇಖಕ ಅಥವಾ ಕೃತಿಗಿಂತ ತತ್ತ್ವವೇ ಮುಖ್ಯ ಎಂಬ ವೆಂಕಟಸುಬ್ಬಯ್ಯನವರ ನಿಲುವು ಕೃತಿಯ ಮೌಲ್ಯಮಾಪನವನ್ನು ನಿರ್ಲಕ್ಷಿಸುವ ಮಟ್ಟಕ್ಕೆ ಬಂದಿರುವುದು ಇಲ್ಲಿ ಕಾಣುವ ಋಣಾತ್ಮಕ ಅಂಶ.

ವಿ.ಸೀ ಅವರ 'ಮುಂಬಯಿ ವಾಸ', 'ಕಾಲೇಜ್ ದಿನಗಳು' ಹಾಗೂ ಪು.ತಿ.ನ ಅವರ 'ಹೊನಲ ಹಾಡು' ಇವುಗಳನ್ನು ಕುರಿತ ಲೇಖನಗಳು ಕೃತಿಯನ್ನು ಓದಿ, ಆಸ್ವಾದಿಸಿ, ಆಸ್ವಾದನೆಯ ನೆಲೆಯಿಂದಲೇ ಹಿಗ್ಗಿ ಬರೆದ ಬರಹಗಳಂತೆ ವರ್ಣನಾತ್ಮಕ-ವಾಗಿವೆ. ಒಂದಷ್ಟು ಹಿನ್ನೆಲೆ, ವಸ್ತುವಿನ ಸಂಕ್ಷಿಪ್ತವಿವರ, ಓದಿನಲ್ಲಿ ಗಮನಿಸಲೇ ಬೇಕಾದ ಸಂಗತಿಗಳ ಸೂಚನೆ–ಹೀಗೆ ಈ ಲೇಖನಗಳಿಗೆ ಸಿದ್ಧವಿನ್ಯಾಸವಿದೆ. ಆದರೆ ಎಂ. ವಿ. ಸೀತಾರಾಮಯ್ಯನವರ ಭಾವಪ್ರಬಂಧಗಳು ಮತ್ತು ಸಣ್ಣಕತೆಗಳ ಬಗ್ಗೆ ಬರೆಯುವಾಗ ಬರವಣಿಗೆ ವ್ಯಾಪ್ತಿಯನ್ನು ತುಸು ಹಿಗ್ಗಿಸಿಕೊಂಡಿದ್ದಾರೆ. ಲಲಿತಪ್ರಬಂಧ ಎನ್ನುವುದಕ್ಕೆ ಭಾವಪ್ರಬಂಧ ಎನ್ನುವ ಪರ್ಯಾಯ ಪದವೇ ಹೆಚ್ಚು ಔಚಿತ್ಯಪೂರ್ಣ ಎಂಬ ನಿಲುವಿನೊಂದಿಗೆ ಆರಂಭವಾಗುವ ಈ ದೀರ್ಘಲೇಖನ, ಭಾವಪ್ರಬಂಧದ

ಗುಣಲಕ್ಷಣಗಳನ್ನು ವಿವರಿಸುತ್ತ, ಅವನ್ನು ಎಂ.ವಿ.ಸೀ. ಅವರ ಭಾವ ಪ್ರಬಂಧಗಳಿಗೆ ಅನ್ವಯಿಸುತ್ತ ಅನನ್ಯತೆಗಳನ್ನೂ, ಸ್ವಾರಸ್ಯಗಳನ್ನೂ ಗುರುತಿಸುತ್ತ ಸಾಗುತ್ತದೆ. ಇಲ್ಲೂ ಒಂದು ಸಮತೂಕವನ್ನು ಸಾಧಿಸುವ ಓದಿನ ಗುಣವಿದೆ. ತಾತ್ತ್ವಿಕ ಅಂಶಗಳ ಹುಡುಕಾಟವಿದೆ. ವೆಂಕಟಸುಬ್ಬಯ್ಯನವರದು ಸಜ್ಜನ ದೃಷ್ಟಿಯ ಓದು. ಅಂತಹ ಓದನ್ನೇ ಅವರು ಇಲ್ಲೂ ಪ್ರತಿಪಾದಿಸುತ್ತಾರೆ.

'ಸಜ್ಜನರ ದೃಷ್ಟಿಯಿಂದ ಭಾವಪ್ರಬಂಧಗಳನ್ನು ಓದಬೇಕು. ಹೊಸ ವ್ಯಕ್ತಿಯನ್ನು ಅರ್ಥಮಾಡಿಕೊಳ್ಳುವ ಆಸಕ್ತಿಯಿರಬೇಕೇ ಹೊರತು, ಹೊಂಚುಹಾಕಿ ರಂಧ್ರಾನ್ವೇಷಣೆ ಮಾಡುವ ಕುತೂಹಲವಿರಬಾರದು'.

ಒಂದು ಕೃತಿಯನ್ನು ಅರ್ಥೈಸುವುದೆಂದರೆ ಒಂದು ವ್ಯಕ್ತಿತ್ವವನ್ನು ಅರ್ಥೈಸು-ವಂತೆ ಮುಕ್ತ ಮತ್ತು ಶುದ್ಧ ಮನಸ್ಸು ಕೃತಿಯ ಹಿಂದೆಯೂ ಓದಿನ ಹಿಂದೆಯೂ ಇದ್ದಾಗ ಮಾತ್ರ ಸಂವಹನ ಪರಿಪೂರ್ಣವಾಗುತ್ತದೆ – ಎಂಬ ವೆಂಕಟಸುಬ್ಬಯ್ಯನವರ ನಿಲುವು ಕೃತಿಚಿಂತನದುದ್ದಕ್ಕೂ ಹಬ್ಬಿದೆ. ಎಂ.ವಿ.ಸೀ ಅವರ ಸಣ್ಣ ಕತೆಗಳ ಆರಕ್ಕೇರದ, ಮೂರಕ್ಕಿಳಿಯದ ಮಟ್ಟವನ್ನು ಗುರುತಿಸುವ ಮೊದಲು ಸಣ್ಣಕತೆಯ ಬಗ್ಗೆ ಒಂದಷ್ಟು ಬರೆದು, ಗುಣಗ್ರಹಣವೇ ಮುಖ್ಯವೆಂದು ಭಾವಿಸುತ್ತ ಅವರು ಮುಂದುವರಿಯುತ್ತಾರೆ. ಒಂದೊಂದು ಕತೆಯನ್ನೂ ಬಿಡಿಬಿಡಿಯಾಗಿ ಪರಿಚಯಿಸುತ್ತಾರೆ.

ಟಿ. ಕೇಶವ ಭಟ್ಟರ 'ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು – ಮರು ನೋಟ' ಹಾಗೂ ಡಿ. ಆರ್. ವೆಂಕಟರಮಣನ್ ಅವರ 'ಕಗ್ಗಕ್ಕೊಂದು ಕೈಪಿಡಿ' ಎಂಬ ಎರಡು ಕೃತಿಗಳ ಬಗ್ಗೆ ಇರುವ ಪುಟ್ಟ ಲೇಖನಗಳು ಪರಿಚಯಾತ್ಮಕವಾದುವು. ಆದರೆ ಇತರ ಭಾಷೆಗಳಿಗೆ ಅನುವಾದಗೊಂಡ 'ಕನ್ನಡದ ಇಪ್ಪತ್ತು ಕತೆಗಳು' ವಿಮರ್ಶಾತ್ಮಕವಾದ ಮೌಲ್ಯನಿರ್ಣಯವುಳ್ಳ ಲೇಖನ. ಒಂದೊಂದು ಕತೆಯ ಮೌಲ್ಯವನ್ನೂ ಒಂದೊಂದು ಟಿಪ್ಪಣಿಯ ಮೂಲಕ ಕಟ್ಟಿಕೊಡುವ ಲೇಖಕರು ಇಡೀ ಲೇಖನವನ್ನು ಟಿಪ್ಪಣಿಗಳ ಗೊಂಚಲಿನಂತೆ ಹೊಸ ಮಾದರಿಯಲ್ಲಿ ರೂಪಿಸಿದ್ದಾರೆ.

ಕೆ. ಎಸ್. ನಾರಾಯಣಾಚಾರ್ಯರ ಬೇಂದ್ರೆ ಕಾವ್ಯದ ಬಗ್ಗೆ 'ಹೊಸ ಅರಿವು' ಎಂಬ ಕೃತಿ ತಾತ್ತ್ವಿಕವಾದ ಒಳನೋಟಗಳುಳ್ಳ ಕೃತಿ. ಅದರ ಸಾರವನ್ನು ಹಿಡಿದಿಡುವ ಪ್ರಯತ್ನ ಯಶಸ್ವಿಯಾಗಿದೆ. ರುದ್ರಮೂರ್ತಿ ಶಾಸ್ತ್ರಿಯವರ 'ಚಾಣಕ್ಯ' ಎಂಬ ಕಾದಂಬರಿಗೆ ಬರೆದ ಮೌಲಿಕವಾದ ಮುನ್ನುಡಿಯೂ ಈ ಸಂಕಲನದಲ್ಲಿ ಸೇರಿದೆ. ಬೃಹತ್ ಗಾತ್ರದ ಕಾದಂಬರಿಯನ್ನು ಗಟ್ಟಿಯಾದ ಗೂಟಕ್ಕೆ ಕಟ್ಟಿ ಮೇಯಲು ಬಿಟ್ಟಂತಿದೆ ಮುನ್ನುಡಿಯ ಅಂತಃಸತ್ವ. ಕಟ್ಟಿದ್ದು ಬಂಧಿಸುವ ಉದ್ದೇಶಕ್ಕಲ್ಲ, ರಕ್ಷಣೆಗೆ. ಕಾದಂಬರಿಯ ಹರವಿಗೆ ಮುನ್ನುಡಿಯಾಗಿ ಚಾಣಕ್ಯನನ್ನು ಪರಿಚಯಿಸುವ ಕಾದಂಬರಿಯ ಹರವಿನ ಮಜಲುಗಳನ್ನು ನಕ್ಷೆ ಹಾಕಿ ಗುರುತಿಸುವ ವಿಧಾನ ಮುನ್ನುಡಿಯನ್ನು ಓದಿಯೇ ಕಾದಂಬರಿಯನ್ನು ಓದುವಂತೆ ಒತ್ತಾಯಿಸುತ್ತದೆ.

ತೀ. ನಂ. ಶ್ರೀ ಅವರ 'ಬಿಡಿಮುತ್ತು' ಅನುವಾದಿತ ಸುಭಾಷಿತಗಳ ಸಂಕಲನ. ಇಲ್ಲಿ ಅನುವಾದದ ಸೊಗಸಿನ ಬದಲು ಸುಭಾಷಿತಗಳು ಪ್ರತಿಪಾದಿಸುವ ಮೌಲ್ಯಗಳ ಕಡೆಗೇ ವೆಂಕಟಸುಬ್ಬಯ್ಯನವರ ಗಮನ ಹರಿದಿದೆ. ಪಾಶ್ಚಾತ್ಯ ಗಂಭೀರ

ನಾಟಕಗಳ ಕುರಿತೂ, ಕಾಳಿದಾಸನ ನಾಟಕಗಳ ಕುರಿತೂ ಎಸ್.ವಿ. ರಂಗಣ್ಣನವರು ಬೃಹತ್ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ರಂಗಣ್ಣನವರ ಮಹಾಸಾಧನೆಯನ್ನು ಪರಿಚಯಿಸುವುದರೊಂದಿಗೆ ಅವರ ಕೃತಿಗಳನ್ನೂ ಪರಿಚಯಿಸುವ ಎರಡು ಲೇಖನಗಳು ಈ ಸಂಕಲನದಲ್ಲಿವೆ. ವಿಮರ್ಶೆಯನ್ನು ವಿಮರ್ಶಿಸುವಾಗ ಸಮತೂಕ ತಪ್ಪುವ ಸಾಧ್ಯಗಳೇ ಹೆಚ್ಚು. ಅಭಿಪ್ರಾಯಗಳ ಬಗ್ಗೆ ಅಭಿಪ್ರಾಯ ಹೇಳುವ ಕ್ರಮವನ್ನು ವೆಂಕಟಸುಬ್ಬಯ್ಯನವರಿಂದ ಕಲಿಯಬೇಕು. ಮೂಲಕೃತಿಯನ್ನು ವಿಮರ್ಶಕ ನೋಡುವ ದೃಷ್ಟಿಗೂ, ವಿಮರ್ಶೆಯನ್ನು ವಿಮರ್ಶಿಸುವ ವಿಮರ್ಶಕ ನೋಡುವ ದೃಷ್ಟಿಗೂ ವೈಯಕ್ತಿಕ ನಿಲುವುಗಳ ಹಿನ್ನೆಲೆಯಿಂದ ಭಿನ್ನತೆಯಿರುವುದು ಸಹಜ. ಅಲ್ಲಿ ಸಮತೂಕದ ದೃಷ್ಟಿ ಹಾಗೂ ವಸ್ತುನಿಷ್ಠತೆಗಳು ಕೆಲಸಮಾಡಬೇಕು. ಕಾಳಿದಾಸನನ್ನೂ ರಂಗಣ್ಣನವರನ್ನೂ ಒಂದೇ ನೋಟದಿಂದ ನೋಡುವ ಶಕ್ತಿ ವಿಮರ್ಶಕನಿಗಿರಬೇಕು. ರಂಗಣ್ಣನವರ ಮೂಲಕ ದೃಷ್ಟಿ ಹರಿದು ಕಾಳಿದಾಸನನ್ನು ತಲುಪಬೇಕು. ಅದು ಇಲ್ಲಿ ಸಾಧ್ಯವಾಗಿದೆ.

ಮೌಲ್ಯಮಾಪನ ಎಂಬ ವೆಂಕಟಸುಬ್ಬಯ್ಯನವರೇ ಬಳಸಿದ ಶಬ್ದ ಈಗಾಗಲೇ ನಡೆದುಹೋದ ಕ್ರಿಯೆಯನ್ನು ಸೂಚಿಸುತ್ತದೆ. ಅವರ ಲೇಖನದ ಒಳಗೆ ಮೌಲ್ಯಮಾಪನ ಕಡಿಮೆ. ಲೇಖನ ಬರೆಯುವ ಮೊದಲೇ ಮೌಲ್ಯಮಾಪನ ಮಾಡಿ ಮುಗಿಸಿ, ಮೌಲ್ಯವಿದೆ ಎಂದು ತೀರ್ಮಾನವಾದ ಮೇಲೆಯೇ ಅದರ ಬಗ್ಗೆ ಬರೆಯಹೊರಟಂತಿದೆ ಅವರ ಲೇಖನಗಳ ಧಾಟಿ.

ಒಟ್ಟಿನಲ್ಲಿ ಅವರದು ಸಾಮರಸ್ಯದ ಬರವಣಿಗೆ.



# ಬೊಗಸೆಯಲ್ಲಿ ಸಾಗರ – ನಯಸೇನ

ಡಾ. ನಿಕೇತನ

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ಸಾಹಿತ್ಯವನ್ನು ಜನಸಾಮಾನ್ಯರತ್ತ ಕೊಂಡೊಯ್ದ ಬಹುದೊಡ್ಡ ಇತಿಹಾಸವಿದೆ. ಕಳೆದ ಎಪ್ಪತ್ತೈದು ವರ್ಷಗಳಿಂದ ಈ ಮಹತ್ತ್ವದ ಕೆಲಸವನ್ನು ಪ್ರಸಾರಾಂಗವು ಪರಿಣಾಮಕಾರಿಯಾಗಿ ನಿರ್ವಹಿಸಿದೆ. "ನಮ್ಮ ವಿಶ್ವವಿದ್ಯಾನಿಲಯ ಕೈಗೊಂಡಿರುವ ಈ ಬಗೆಯ ಕಾರ್ಯ ಈ ರೂಪದಲ್ಲಿ ಭರತಖಂಡದ ಮತ್ತಾವ ವಿಶ್ವವಿದ್ಯಾನಿಲಯದಲ್ಲೂ ಕಂಡುಬಂದಿಲ್ಲ" ಎಂಬ ಕುವೆಂಪು ಅವರ ಅಭಿಪ್ರಾಯದಲ್ಲಿ ಅತ್ಯುಕ್ತಿಯಿಲ್ಲ. ಇದಕ್ಕೆ ಮುಖ್ಯಕಾರಣ ಪ್ರಸಾರಾಂಗ ಪ್ರಕಟಿಸಿರುವ ಪುಸ್ತಕಗಳು. ಇವು ಹಲವು ಸಂಪುಟಗಳ ಸಾಹಿತ್ಯಚರಿತ್ರೆ ಗ್ರಂಥಗಳಿಂದ ಹಿಡಿದು ೨೫ ಪೈಸೆಯ ಪುಟ್ಟ ಪರಿಚಯಾತ್ಮಕ ಉಪನ್ಯಾಸಗಳ ಬರಹರೂಪದ ಕೃತಿಗಳ ವರೆಗೂ ವ್ಯಾಪಿಸಿದೆ. ಕನ್ನಡನಾಡಿನ ಹಿರಿಯ ವಿದ್ವಾಂಸರು, ಸಾಹಿತಿಗಳು ಪ್ರಸಾರಾಂಗದ ಮೂಲಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಪ್ರಸಾರಾಂಗವು ಪ್ರಕಟಿಸಿದ 'ಪ್ರಚಾರಪುಸ್ತಕಮಾಲೆ'ಯ ೨೦೦ಕ್ಕೂ ಹೆಚ್ಚು ಪುಟ್ಟ ಪುಟ್ಟ ಕೃತಿಗಳು ಜನಸಾಮಾನ್ಯರಿಗೆ ಕನ್ನಡದ ಮಹತ್ತ್ವದ ಕವಿ-ಕೃತಿಗಳನ್ನು ಪರಿಚಯಿಸಿವೆ. ಒಂದೇ ಓದಿನಲ್ಲಿ ಪೂರ್ತಿ ಮುಗಿಸಬಹುದಾದ, ಸ್ವರೂಪದಲ್ಲಿ ಚಿಕ್ಕದಾದರೂ ಅಭಿವ್ಯಕ್ತಿಯಲ್ಲಿ ಸಮಗ್ರತೆಯನ್ನು ಹೊಂದಿದ ಈ ಪುಟ್ಟ ಪುಸ್ತಕಗಳು ನಿಜವಾಗಿಯೂ ಪುಟ್ಟ ಪುಟ್ಟ ಚಿನ್ನದ ನಾಣ್ಯಗಳೇ ಆಗಿವೆ. ಈ ಮಾಲೆಯಲ್ಲಿ ಬಂದ ೪೧ನೇ ಚಿನ್ನದ ನಾಣ್ಯವೇ ಪಂಡಿತರತ್ನ ಪ್ರೊ. ಜಿ. ವೆಂಕಟಸುಬ್ಬಯ್ಯನವರ 'ನಯಸೇನ'.

ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗಿರುವ ಶಾಸ್ತ್ರ ಮತ್ತು ಪ್ರಾಚೀನ ಸಾಹಿತ್ಯಕೃತಿಗಳ ಆಳವಾದ ಪರಿಚಯಕ್ಕೆ ಈ ಪುಟ್ಟ ಕೃತಿ ಸಾಕ್ಷಿಯಾಗಿದೆ. ಬೊಗಸೆಯಲ್ಲಿ ಸಾಗರವನ್ನು ಪರಿಚಯಿಸುವ ಪರಿಯಲ್ಲಿ ಈ ಕೃತಿಯ ಅಭಿವ್ಯಕ್ತಿಯಿದೆ. ಕನ್ನಡ ಕವಿ ನಯಸೇನನನ್ನು ಮತ್ತು ಆತನ ಕೃತಿಯನ್ನು ಈ ಪುಟ್ಟ ಪುಸ್ತಕದಲ್ಲಿ ಸಮಗ್ರವಾಗಿ ಪರಿಚಯಿಸಲಾಗಿದೆ. ೬೧ ಪುಟಗಳ ಈ ಕೃತಿಯು ಒಂದು ಉನ್ನತಾ-ಧ್ಯಯನಗ್ರಂಥದ ಸ್ವರೂಪವನ್ನು ಪಡೆದಿದೆ. ಕ್ರಮಬದ್ಧವಾದ ವಿಷಯಸೂಚಿಕೆಗಳು, ವಿಷಯಸೂಚಿಕೆಗಳಿಗೆ ಅನುಗುಣವಾಗಿ ಶಿಸ್ತುಬದ್ಧವಾದ ನಿರೂಪಣೆ ಕೃತಿಯಲ್ಲಿ ಎದ್ದು

ಕಾಣುತ್ತದೆ. ನಯಸೇನನಂಥ ಹಳಗನ್ನಡದ ಕೊನೆಯ ಕೊಂಡಿಗಳಂತಿರುವ ಕವಿಗಳನ್ನು ಕುತೂಹಲದಿಂದಲೂ ವಿಮರ್ಶಾತ್ಮಕವಾಗಿಯೂ ಓದಿ ಸವಿಯುವಂತೆ ಈ ಕೃತಿಯು ಪ್ರೇರಣೆ ನೀಡುತ್ತದೆ. ೧೧ನೇ ಶತಮಾನದ ಕೊನೆಯ ಭಾಗವೆಂದರೆ, ಒಂದು ರೀತಿಯಲ್ಲಿ ಹಳಗನ್ನಡಯುಗದ ಕೊನೆ. ಆ ಕಾಲದ ನಯಸೇನನ ಕೃತಿಯ ಭಾಷೆಯು ಕನ್ನಡಭಾಷೆಯ ಬೆಳವಣಿಗೆ ಮತ್ತು ಅದರ ದಾಖಲೆಯ ದೃಷ್ಟಿಯಿಂದಲೂ ಗಮನಾರ್ಹವಾಗಿದೆ.

ಸಕ್ಕದಮಂ ಪೇಳ್ವೊಡೆ ನೆರೆ
ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರೆಸಲ್ಕೆ ಘೃತಮುಮಂ ತೈಲಮುಮಂ

[ಸಂಸ್ಕೃತದಲ್ಲಿ ಕೃತಿಯನ್ನು ಹೇಳುವುದಾದಲ್ಲಿ ಅದರಲ್ಲಿಯೇ ಚೆನ್ನಾಗಿ ಹೇಳಲಿ. ಆದರೆ ಸುದ್ದಗನ್ನಡದಲ್ಲಿ (ಮಿತಿಮೀರಿ) ಸಂಸ್ಕೃತವನ್ನು ತಂದುಹಾಕಬಹುದೆ? ತುಪ್ಪವನ್ನೂ ಎಣ್ಣೆಯನ್ನೂ ಬೆರೆಸುವುದು ಯೋಗ್ಯವೇ?]

– ಎಂಬ ನಯಸೇನನ ಪದ್ಯ ಅತ್ಯಂತ ಪ್ರಸಿದ್ಧವಾದುದು. ಸಂಸ್ಕೃತದ ಅನುಕರಣೆ ಅತಿಯಾದ ಸಂದರ್ಭದಲ್ಲಿ ಅದನ್ನು ತಡೆಯುವ ಉದ್ದೇಶದಿಂದ ಹಲವು ಕನ್ನಡ ಕವಿಗಳು ಪ್ರಯೋಗಶೀಲರಾದರು. ತಮ್ಮದೇ ಆದ ರೀತಿಯಲ್ಲಿ ಅದನ್ನು ತಡೆಯುವ ವಿಭಿನ್ನ ಪ್ರಯತ್ನಗಳನ್ನು ಮಾಡಿದರು. ಅವರಲ್ಲಿ ನಯಸೇನನು ಗಮನಾರ್ಹನಾದಕವಿಯಾಗಿದ್ದಾನೆ. 'ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯಂ' ಎಂಬುದು ಆತನ ಸಂಕಲ್ಪ. 'ಪೊಸಗನ್ನಡ' ಎಂಬ ಪದದ ಬಳಕೆ ಭಾಷೆಯ ದೃಷ್ಟಿಯಿಂದ ಇಲ್ಲಿ ಗಮನಾರ್ಹ. ಹಳಗನ್ನಡವು ನಡುಗನ್ನಡವಾಗಿ ರೂಪುಗೊಳ್ಳುತ್ತಿರುವ ಸೂಚನೆಯನ್ನು ಈ ಮಾತು ನೀಡುತ್ತದೆ. ಕನ್ನಡವನ್ನು ಕುರಿತು ಚಿಂತಿಸದೆ ತನ್ನ ಕೃತಿಯಲ್ಲಿ ಸಂಸ್ಕೃತವನ್ನೇ ಉಪಯೋಗಿಸುವವನು ನಿಜವಾಗಿ ಕನ್ನಡ ಕವಿಯೆ? ಎಂಬ ಅಭಿಪ್ರಾಯದ ದಿಟ್ಟತನದ ಪ್ರಶ್ನೆ ಅವನ ಕನ್ನಡಭಾಷಾಭಿಮಾನಕ್ಕೆ ಸಾಕ್ಷಿಯಲ್ಲದೆ ಬೇರೆಯಲ್ಲ. ಸಂಸ್ಕೃತದ ಕುರಿತು ನಯಸೇನನಿಗೆ ತಿರಸ್ಕಾರವಿಲ್ಲ. ಆದರೆ ಅದರ ಅತಿಯಾದ ಬಳಕೆ ಸರಿಯಲ್ಲ. ಹಿತ–ಮಿತವಾದ ಸಂಸ್ಕೃತ ಕನ್ನಡಗಳ ಬಳಕೆಯನ್ನು ಅವನು ಪ್ರತಿಪಾದಿಸುತ್ತಾನೆಂದು ಅವನ ಮಾತುಗಳ ಆಧಾರದಿಂದ ತಿಳಿಯಬಹುದು. ಒಂದು ದೃಷ್ಟಿಯಿಂದ ಕನ್ನಡಭಾಷೆಗೆ ಹೊಸಸ್ವರೂಪವನ್ನು ಪ್ರತಿಪಾದಿಸಿದವರಲ್ಲಿ ನಯಸೇನ ಪ್ರಥಮನಾಗುತ್ತಾನೆ. ಕಾವ್ಯ ಕೇವಲ ಪಂಡಿತರಿಗಲ್ಲ; ಜನಸಾಮಾನ್ಯರಿಗೂ ಮುಟ್ಟಬೇಕು: ಅದಕ್ಕೆ ಭಾಷೆ ತೊಡಕಾಗಬಾರದು – ಎಂಬುದು ನಯಸೇನನ ನಿಲುವು. ಈ ಧೋರಣೆಯಿಂದಲೇ ಅವನು ಮುಖ್ಯನಾಗುತ್ತಾನೆ. ಆದುದರಿಂದ ನಯಸೇನನನ್ನು ಮತ್ತು ಅವನಂತಹ ಕವಿಗಳನ್ನು ಕನ್ನಡಿಗರಿಗೆ ಪರಿಚಯಿಸುವುದು ಅತಿಮುಖ್ಯವಾದುದಾಗಿದೆ. ಈ ಕಾರ್ಯವನ್ನು ವೆಂಕಟಸುಬ್ಬಯ್ಯನವರು ಈ ಪುಟ್ಟ ಕೃತಿಯಲ್ಲಿ ಶ್ರದ್ಧೆಯಿಂದ ಮಾಡಿದ್ದಾರೆ.

ಕೃತಿಯಲ್ಲಿ ಒಂಬತ್ತು ಪುಟ್ಟ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯ-ದಲ್ಲೂ ನಯಸೇನ ಮತ್ತು ಅವನ 'ಧರ್ಮಾಮೃತ'ದ ಮುಖ್ಯ ರಸಘಟ್ಟಗಳನ್ನು ಪರಿಚಯಿಸಲಾಗಿದೆ. ಅಧ್ಯಾಯದಿಂದ ಅಧ್ಯಾಯಕ್ಕೆ ಒಂದು ಸಂಬಂಧವನ್ನು ರೂಪಿಸಲಾಗಿದೆ. ನಯಸೇನ ಮತ್ತು ಅವನ ಕಾವ್ಯವಾದ 'ಧರ್ಮಾಮೃತ'ದ ಸಂಕ್ಷಿಪ್ತವಾದರೂ ಸಮಗ್ರಪರಿಚಯವನ್ನು ಮಾಡಿಕೊಡುವ ಲೇಖಕರ ಕುಶಲತೆ ಗಮನಸೆಳೆಯುತ್ತದೆ.

ಪೀಠಿಕೆಯಲ್ಲಿ ಹಳಗನ್ನಡದೊಳಗಿರುವ ಕಥನಕಲೆಯ ಸ್ವರೂಪದ ಬಗೆಗೆ ಉಲ್ಲೇಖವಿದೆ. ಕರ್ನಾಟಕಕ್ಕೆ ಜೈನಧರ್ಮದ ಆಗಮನದಿಂದ ಕನ್ನಡಸಾಹಿತ್ಯದ ಮೇಲಾದ ಅದರ ಪ್ರಭಾವವನ್ನು ಚರ್ಚಿಸಲಾಗಿದೆ. ಜೈನಪುರಾಣಕಥೆಗಳು ಕನ್ನಡ ಸಾಹಿತ್ಯದಲ್ಲಿ ನಿರೂಪಣೆಗೊಂಡ ರೀತಿಯನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಕನ್ನಡ ಸಾಹಿತ್ಯದ ಮೇಲೆ ಜೈನಪುರಾಣಗಳ ಪ್ರಭಾವವನ್ನು ಗುರುತಿಸುವವರಿಗೆ ಈ ಉಲ್ಲೇಖಗಳು ಮಹತ್ತ್ವದ್ದಾಗಿವೆ. ಈ ಪ್ರಭಾವಗಳ ಕುರಿತಾಗಿ ಇಂದು ಸಮಗ್ರವಾಗಿ ಅಧ್ಯಯನಗಳು ನಡೆದಿದ್ದರೂ ಈ ಕೃತಿ ಹೊರಬಂದ ಸಂದರ್ಭದಲ್ಲಿ ಇದು ಮಹತ್ತ್ವದ ಮಾಹಿತಿಯಾಗಿತ್ತು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಎರಡನೆಯ ಪುಟ್ಟ ಅಧ್ಯಾಯದಲ್ಲಿ ನಯಸೇನನ ಸಂಕ್ಷಿಪ್ತಪರಿಚಯವಿದೆ. 'ನಯಸೇನದೇವ', 'ನಯಸೇನಮುನೀಂದ್ರ' ಮೊದಲಾದ ಅವನ ಇತರ ನಾಮಗಳನ್ನು ಉಲ್ಲೇಖಿಸಲಾಗಿದೆ. ಕ್ರಿ. ಶ. 1112ನೆಯ ಇಸವಿಯಲ್ಲಿ ಕೃತಿ ರಚಿತವಾಯಿತೆಂಬುದನ್ನು ಸ್ಪಷ್ಟವಾಗಿ ಹೇಳಲಾಗಿದೆ. ಕನ್ನಡ ಸಾಹಿತ್ಯದಲ್ಲಿ ನಯಸೇನನ ಮಹತ್ತ್ವವನ್ನು ಚರ್ಚಿಸಲಾಗಿದೆ. ಜನಸಾಮಾನ್ಯರತ್ತ ಕಾವ್ಯವನ್ನು ಕೊಂಡೊಯ್ಯಬೇಕೆಂಬ ಸಂಕಲ್ಪ ಮತ್ತು ಸಂಸ್ಕೃತದ ಅತಿ ಅನುಸರಣೆಯಿಂದ ಬಿಡಿಸಿಕೊಳ್ಳಬೇಕೆಂಬ ಕಳಕಳಿ ಅವನ ಕೃತಿಯಲ್ಲಿ ವ್ಯಕ್ತವಾಗಿರುವುದನ್ನು ಚರ್ಚಿಸಲಾಗಿದೆ. ತನ್ನ ಕಾವ್ಯದಲ್ಲಿ ಸಹಜತೆಯಿದೆ ಎಂಬ ನಯಸೇನನ ಹೆಮ್ಮೆಯನ್ನು ಪ್ರಸ್ತಾವಿಸಿ, ಶಾಸ್ತ್ರಪಂಡಿತರಿಂದ ಗ್ರಂಥರಚನೆ ಮಾಡಿದರೆ ಹೆಚ್ಚು ಜನರ ರಸಾಸ್ವಾದನೆಗೆ ಅವಕಾಶವಿರುವುದಿಲ್ಲ ಎಂದು ಅವನ ನಿಲುವನ್ನು ಲೇಖಕರು ಸಮರ್ಥಿಸಿದ್ದಾರೆ. ಸಣ್ಣ ಗಾತ್ರದ ಎರಡೂವರೆ ಪುಟಗಳ ನಿರೂಪಣೆಯಲ್ಲಿ ನಯಸೇನ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತೆ ಚಿತ್ರಿಸಿದ್ದಾರೆ.

ಮುಂದೆ ಧರ್ಮಾಮೃತವನ್ನು ಪರಿಚಯಿಸಲಾಗಿದೆ. ಅದು ಧಾರ್ಮಿಕಗ್ರಂಥ. ಆದರೆ ಮೇಲ್ನೋಟಕ್ಕೆ ಕಥೆಗಳ ಗ್ರಂಥ. ಕವಿಗೆ ಕಥೆಗಳು ಕೇವಲ ಉದಾಹರಣೆಗಳು ಮಾತ್ರ. ಜೈನದರ್ಶನ ಮತ್ತು ಅದರ ಎಂಟು ಅಂಗಗಳನ್ನು ಪರಿಚಯಿಸುವುದು ಹಾಗೂ 'ಅಣುವ್ರತ'ಗಳ ಮಹಿಮೆಯನ್ನು ಕೃತಿಯಲ್ಲಿ ವರ್ಣಿಸುವ ಉದ್ದೇಶವನ್ನು ಕವಿ ಇಟ್ಟುಕೊಂಡಿದ್ದಾನೆಂದು ಲೇಖಕರು ವಿವರಿಸಿದ್ದಾರೆ. ಅಲ್ಲಿಯೇ ಅವರು ಜೈನದರ್ಶನದ ಎಂಟು ಅಂಗಗಳು ಹಾಗೂ ಅಣುವ್ರತಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಮುಂದಿನ ಪುಟ್ಟ ಅಧ್ಯಾಯದಲ್ಲಿ ಎರಡು ಕಥೆಗಳ ಮೂಲಕ ಧರ್ಮಾಮೃತದ ಪರಿಚಯ ಮಾಡಿಕೊಡಲಾಗಿದೆ. ಈ ಎರಡು ಕಥೆಗಳು ಧರ್ಮಾಮೃತದ ಕೇಂದ್ರಸ್ಥಾನದವಾಗಿವೆ. ದರ್ಶನಕಥೆ ಮತ್ತು ಅಹಿಂಸಾವ್ರತದ ಕಥೆಗಳನ್ನು ವಿವರವಾಗಿ

ರಸವತ್ತಾಗಿ ಪರಿಚಯಿಸಲಾಗಿದ್ದು ಧರ್ಮದ ದೃಷ್ಟಿಯನ್ನಿಟ್ಟುಕೊಂಡು ಸ್ಪಷ್ಟವಾಗಿ ಹಾಸ್ಯವನ್ನು ತುಂಬಿ ಕಥೆಗಳನ್ನು ನಿರೂಪಿಸಿದ ನಯಸೇನನ ಅಭಿವ್ಯಕ್ತಿಯ ಸ್ವರೂಪ-ವನ್ನು ಕಥೆಗಳ ಕೊನೆಯಲ್ಲಿ ಲೇಖಕರು ವಿವರಿಸಿದ್ದಾರೆ. ಈ ಪರಿಚಯಾತ್ಮಕವಾದ ಕಿರುಹೊತ್ತಗೆಯಲ್ಲಿ ಅತಿಹೆಚ್ಚು ಪುಟಗಳನ್ನು ಈ ಎರಡು ಕಥೆಗಳ ನಿರೂಪಣೆಗೇ ಮೀಸಲಿರಿಸಿರುವುದು ಗಮನಾರ್ಹ. ನಯಸೇನನ ತಾತ್ತ್ವಿಕತೆಯನ್ನು ಅರ್ಥಮಾಡಿ-ಕೊಡುವ ದೃಷ್ಟಿಯಿಂದ ಇದು ಮುಖ್ಯವಾಗಿದೆ.

ಮುಂದಿನ ಅಧ್ಯಾಯದಲ್ಲಿ ಧರ್ಮಾಮೃತದಲ್ಲಿ ಬರುವ ಕೆಲವು ನೀತಿಕಥೆ-ಗಳನ್ನು ಪರಿಚಯಿಸಲಾಗಿದೆ. ಧರ್ಮಾಮೃತದ ಒಂದು ಮಹತ್ತ್ವದ ಅಂಶವೆಂದರೆ ಪರಮತವಿಡಂಬನೆ. ಅದನ್ನು ಈ ಪುಸ್ತಕದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ನಯಸೇನನ ಧರ್ಮಾಮೃತದಲ್ಲಿ ವೈದಿಕ, ಬೌದ್ಧ ಧರ್ಮಗಳನ್ನು ವಿಡಂಬಿಸಿ ಜೈನಧರ್ಮದ ಶ್ರೇಷ್ಠತೆಯನ್ನು ಪ್ರತಿಪಾದಿಸಲಾಗಿದೆ. ಈ ರೀತಿಯ ಪರಮತ ವಿಡಂಬನೆಗೆ ಒಂದು ಮಹತ್ತ್ವದ ಕಾರಣವನ್ನು ಲೇಖಕರು ಗುರುತಿಸಿದ್ದಾರೆ. ಆ ಕಾಲಕ್ಕಾಗಲೇ ಇತರ ಧರ್ಮಗಳು ಜೈನಧರ್ಮವನ್ನು ವಿಡಂಬಿಸುತ್ತಿದ್ದಿರಬೇಕು; ಇದರಿಂದಲೇ ನಯಸೇನ ಪರಧರ್ಮವಿಡಂಬನೆ ಮಾಡಿರಬೇಕು ಎಂಬುದನ್ನು ಅವರು ಉಲ್ಲೇಖಿಸಿದ್ದಾರೆ. ಇತರ ಮತಗಳನ್ನು ಹಳಿದರೂ ಎಲ್ಲಿಯೂ ತನ್ನ ಸೌಮ್ಯತೆಯನ್ನು ನಯಸೇನನು ಬಿಟ್ಟಿಲ್ಲ ಎಂದು ಪ್ರಶಂಸಿಸುವುದು ಕವಿಯನ್ನು ಆಳವಾಗಿ ಅರ್ಥಮಾಡಿಕೊಂಡಿರುವುದಕ್ಕೆ ಸಾಕ್ಷಿ. ಉಪಸಂಹಾರದಲ್ಲಿ ಹರಿಹರನು ರಗಳೆಗಳನ್ನು, ರಾಘವಾಂಕನು ಷಟ್ಪದಿಗಳನ್ನು ಮೊದಲು ಬರೆದಂತೆ ನಯಸೇನನು ಒಂದು ಹೊಸ ಮಾದರಿಯ ಕಾವ್ಯರಚನೆ ಮಾಡಿದನು - ಎಂದು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ನಯಸೇನನ ಸ್ಥಾನನಿರೂಪಣೆ ಮಾಡಲಾಗಿದೆ.

ಈ ಕಿರುಹೊತ್ತಗೆಯು ಪ್ರೊ. ಜಿ. ವೆಂಕಟಸುಬ್ಬಯ್ಯರ ಪಾಂಡಿತ್ಯ, ಶಾಸ್ತ್ರ-ಪರಿಣತಿ, ಪ್ರಾಚೀನಕಾವ್ಯಗಳ ಅಧ್ಯಯನಗಳನ್ನು ಖಚಿತವಾಗಿ ವ್ಯಕ್ತಪಡಿಸುತ್ತದೆ. ನಯಸೇನನ ಕಾವ್ಯಪ್ರವೇಶ ಮಾಡುವ ಸಾಮಾನ್ಯವಿದ್ಯಾರ್ಥಿಗೆ ಈ ಕೃತಿ ಕೈದೀವಿಗೆ-ಯಾಗಿದೆ. ನಯಸೇನನ ಕೃತಿಯನ್ನು ಓದುವಂತೆ ಸಾಹಿತ್ಯದ ವಿದ್ಯಾರ್ಥಿಗಳನ್ನು, ಆಸಕ್ತರನ್ನು ಪ್ರೇರಿಸುವ ಶಕ್ತಿ ಈ ಬರವಣಿಗೆಗಿದೆ. ಹಳಗನ್ನಡ ಕೃತಿಗಳ ಪರಿಚಯಾತ್ಮಕ-ವಾದ ಮತ್ತು ವಿಮರ್ಶಾತ್ಮಕವಾದ ಒಳನೋಟಗಳ ಸರಳನಿರೂಪಣೆಗೆ ಈ ಕೃತಿ ಮಾದರಿಯಾಗಿದೆ. ನಿಜವಾಗಿ ಬೊಗಸೆಯಲ್ಲಿ ಸಾಗರವನ್ನು ತೋರಿಸುವ ಶಕ್ತಿ ಈ ಕೃತಿಗಿರುವುದು ಇದನ್ನು ಓದಿ ಮುಗಿಸಿದಾಗ ಸ್ಪಷ್ಟವಾಗಿ ತಿಳಿದುಬರುವ ಅಂಶ. ಪ್ರೊ. ಜಿ. ವೆಂಕಟಸುಬ್ಬಯ್ಯನವರ ಸೃಷ್ಟಿಶೀಲ ಪ್ರತಿಭೆಗೆ ಈ ಕೃತಿ ಸಾಕ್ಷಿಯಾಗಿದ್ದು ಇದು ಹಲವಾರು ಮುದ್ರಣಗಳನ್ನು ಕಂಡಿರುವುದು ನಿಜವಾಗಿಯೂ ಅಚ್ಚರಿಯಲ್ಲ ಮತ್ತು ಇಂದಿಗೂ ಅದರ ಜನಪ್ರಿಯತೆಗೆ ಮಾನದಂಡವೆಂದು ಧಾರಾಳವಾಗಿ ಹೇಳಬಹು-ದಾಗಿದೆ.



# ಬೆಳಕಿನ ಬೀಜಗಳ 'ಸೀಳುನೋಟ'

ಪ್ರೊ. ಎಮ್. ರಾಮಚಂದ್ರ

ಅಶರೀರವಾಣಿ ಅಥವಾ ಆಕಾಶವಾಣಿ ಎಂಬ ಪದವಿಶೇಷ ಭಾರತೀಯರಿಗೆ ಅಪರಿಚಿತವೇನಲ್ಲ. ಪ್ರಾಚೀನ ಕಾವ್ಯ ಪುರಾಣಗಳಲ್ಲಿ ವಿಶಿಷ್ಟ ಸಂದರ್ಭಗಳಲ್ಲಿ ಆ ಪದಗಳು ಪ್ರಯುಕ್ತವಾದದ್ದಿದೆ. 'ರೇಡಿಯೋ' ಎಂಬ ಪಾರಿಭಾಷಿಕ ಪದಕ್ಕೆ ಪ್ರತಿಯಾಗಿ ಇದೀಗ ಭಾರತದಲ್ಲಿ ಸರ್ವತ್ರವೂ 'ಆಕಾಶವಾಣಿ' ಎಂಬುದು ಪ್ರಯೋಗವಾಗುತ್ತಿದೆ-ಯಷ್ಟೆ. ಆ ಪದ ಪ್ರಾಚೀನವೇ ಆಗಿದ್ದರೂ ಅದನ್ನು ಅರ್ವಾಚೀನಸಂದರ್ಭಕ್ಕೆ ಸಂಗತಗೊಳಿಸಿದ ಮೊದಲಿಗತನದ ಹಿರಿಮೆ ಒಬ್ಬ ಕನ್ನಡಿಗನಿಗೆ ಸಲ್ಲುತ್ತದೆ. ಅದಕ್ಕಾಗಿ ಕನ್ನಡಿಗರೆಲ್ಲ ಹೆಮ್ಮೆ ಪಡಬೇಕು. ಆ ಕನ್ನಡಿಗ ಯಾರು ಎಂಬುದರ ಬಗೆಗೆ ಮಾತ್ರ ಕೊಂಚ ಭಿನ್ನಾಭಿಪ್ರಾಯವಿದೆ: 1935 ಸುಮಾರಿಗೆ ಪ್ರೊ. ಎಂ. ವಿ. ಗೋಪಾಲಸ್ವಾಮಿ ಎಂಬವರು ಪ್ರಪ್ರಥಮವಾಗಿ ಮೈಸೂರಲ್ಲಿ ಖಾಸಗಿ ರೇಡಿಯೋ ಕೇಂದ್ರವೊಂದನ್ನು ಸ್ಥಾಪಿಸಿದರು; ಅದಕ್ಕೆ ಭಾರತೀಯವಾದ ಒಂದು ಒಳ್ಳೆಯ ಹೆಸರನ್ನು ಅವರು ಹುಡುಕುತ್ತಿದ್ದಾಗ ನಾ. ಕಸ್ತೂರಿಯವರು 'ಆಕಾಶವಾಣಿ' ಎಂಬ ಹೆಸರನ್ನು ಸೂಚಿಸಿ-ದರು ಎಂದು ಹೇಳಲಾಗುತ್ತಿದೆ. ಆದರೆ ನಿಜವಾಗಿ ಆ ಹೆಸರನ್ನು ಸೂಚಿಸಿದವರು ರಾಳ್ಳಪಳ್ಳಿ ಅನಂತಕೃಷ್ಣ ಶರ್ಮರು. ಆ ಸೂಚನೆಯನ್ನು ಪ್ರೊ. ಗೋಪಾಲಸ್ವಾಮಿ-ಯವರಿಗೆ ತಿಳಿಸಿದವರು ನಾ. ಕಸ್ತೂರಿಯವರು ಎಂಬುದಾಗಿ ಪ್ರೊ. ಜಿ. ವೆಂಕಟ-ಸುಬ್ಬಯ್ಯನವರು ತಮ್ಮದೊಂದು ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ('ಸೀಳುನೋಟ' - ಅರಿಕೆ) ಅಷ್ಟೇ ಅಲ್ಲ, ಆ ಉಲ್ಲೇಖಕ್ಕೆ ಆಧಾರವಾಗಿ, ತಾವು ಪ್ರೊ. ಗೋಪಾಲಸ್ವಾಮಿ-ಯವರ ವಿದ್ಯಾರ್ಥಿಯಾಗಿದ್ದು ಹೊಸದಾಗಿ ಆರಂಭವಾದ ಆಕಾಶವಾಣಿಯಲ್ಲಿ ಮೊದಮೊದಲ ಉಪನ್ಯಾಸ ಮಾಡಿದವರಲ್ಲಿ ತಾವೂ ಒಬ್ಬರೆಂಬುದನ್ನು ಜ್ಞಾಪಿಸಿದ್ದಾರೆ. ಆ ಕಾರಣ ಪ್ರೊ. ಜಿ. ವಿ.ಯವರ ಮಾತಿಗೆ ಅಧಿಕೃತತೆಯ ಒಂದು ಮುದ್ರೆ ಬೀಳುತ್ತದೆ. ಇದೀಗ 'ಆಕಾಶವಾಣಿ'ಯೆಂಬ ಪದವನ್ನು ಟಂಕಿಸಿದವರಲ್ಲಿ ಮೂರನೆಯವರೊಬ್ಬರ ಹೆಸರೂ ಕೇಳಿಬರುತ್ತದೆ - ಅದೇ ದಿ. ಹೊಸಬೆಟ್ಟು ರಾಮರಾಯರದು. ರಾಮರಾಯರ ಹೆಸರು ಹೇಳುತ್ತಿರುವವರು ಅವರ ಪುತ್ರಿಯೇ ಆಗಿದ್ದಾರೆ. ನಾವಂತೂ ಈ ವಾದವನ್ನು ಹೆಚ್ಚು ಬೆಳೆಸದೆ Great men think alike ಎಂದು ಪೂರ್ಣವಿರಾಮ ಹಾಕಬಹುದೇನೋ!-

ಒಂದು ಕಾಲದಲ್ಲಿ ಆಕಾಶವಾಣಿ ಕೇಂದ್ರಗಳ ಕಾರ್ಯಾವಧಿ ಸಾಮಾನ್ಯವಾಗಿ ಪ್ರಾತಃಕಾಲದ ಆರು ಘಂಟೆಯಿಂದ ರಾತ್ರಿಯ ಹನ್ನೊಂದು ಘಂಟೆಯ ವರೆಗಿನದಾಗಿತ್ತು. ಕ್ರಮೇಣ ಅದು ಲಂಬಿಸುತ್ತ ಹೋಗಿ ಇಗ 'ದಿನ ಯಾಮಿನ್ಯೌ' ಕಾರ್ಯಕ್ರಮ ಪ್ರಸಾರಮಾಡುವ ಕೇಂದ್ರಗಳೂ ಇವೆ. ಅದು ಏನೇ ಇರಲಿ, ನಮ್ಮಲ್ಲಿ ಆಕಾಶವಾಣಿ ಕೇಂದ್ರಗಳು ಬೆಳಗಿನ ಹೊತ್ತಿನಲ್ಲಿ ಪ್ರಸಾರಮಾಡುವ ಕಾರ್ಯಕ್ರಮಗಳಲ್ಲಿ ಒಂದು ಸಮಾನವಾದದ್ದಾಗಿದೆ. ಅದೇ ಬೇರೆ ಬೇರೆ ಹೆಸರುಗಳನ್ನು ಹೊಂದಿರುವ 'ಚಿಂತನ'. ಇಂಗ್ಲಿಷಿನಲ್ಲಿ ಹೇಳುವುದಾದರೆ 'Thought for the Day'. ಮೂರೋ ನಾಲ್ಕೋ ನಿಮಿಷಗಳ ಮಿತಾವಕಾಶದಲ್ಲಿ ಜೀವನಕ್ಕೆ ಅವಶ್ಯವಾದ, ಅನ್ವಯಿಸಬಹು-ದಾದ ಒಂದು ವಿಚಾರಬಿಂದುವನ್ನು ವಿಶ್ಲೇಷಿಸುವುದೇ ಆ ಕಾರ್ಯಕ್ರಮದ ವಿಶೇಷತೆ. ಹಾಗೆ ಕಾರ್ಯಕ್ರಮಕ್ಕಾಗಿ ಚಿಂತನಗಳನ್ನು ಸಿದ್ಧಪಡಿಸಿದ ಎಷ್ಟೋ ಮಂದಿ ಅವುಗಳಲ್ಲಿ ಎಲ್ಲವನ್ನು ಅಥವಾ ಕೆಲವನ್ನು ಸಂಗ್ರಹಿಸಿ ಪುಸ್ತಕರೂಪದಲ್ಲಿ ಪ್ರಕಟಿಸಿದ್ದೂ ಇದೆ. ಅಂತಹ ಮಹನೀಯರಲ್ಲಿ ಒಬ್ಬರು ಪ್ರೊ. ಜಿ. ವೆಂಕಟಸುಬ್ಬಯ್ಯನವರು. ಅವರ ಆಕಾಶವಾಣಿ ಚಿಂತನಗಳ ಒಂದು ಸಂಗ್ರಹ 'ಸೀಳುನೋಟ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. (ದಿ. ಎಸ್. ವಿ. ಪರಮೇಶ್ವರ ಭಟ್ಟರ ಒಂದು 'ಸೀಳುನೋಟ'ವೂ ಇದೆ. ಅದು ವಿಮರ್ಶಾತ್ಮಕ ಪ್ರಬಂಧಗಳ ಸಂಗ್ರಹ.)

'ಸೀಳುನೋಟ'ದಲ್ಲಿ ಮೂವತ್ತೆರಡು ಚಿಂತನಗಳಿವೆ. ವಾಸ್ತವದಲ್ಲಿ ಪ್ರೊ. ಜಿ. ವಿ. ಯವರು ಆಕಾಶವಾಣಿ 'ಚಿಂತನ'ಕ್ಕಾಗಿ ಸುಮಾರು ಇನ್ನೂರಕ್ಕೂ ಹೆಚ್ಚು 'ಗಾಳಿಮಾತು'ಗಳನ್ನು ಬರೆದು ಓದಿದ್ದರಂತೆ. ಅವುಗಳಲ್ಲಿ ಹೆಚ್ಚಿನ ಹಸ್ತಪ್ರತಿಗಳು ಗಾಳಿಯಲ್ಲಿ ಹಾರಿಹೋದದ್ದರಿಂದ ಉಳಿದ ಕೆಲವನ್ನು 'ಶೋಧಿಸಿ' ಮೂವತ್ತೆರಡನ್ನು ಜೋಡಿಸಿ 'ಸೀಳುನೋಟ'ವೆಂಬ ಶೀರ್ಷಿಕೆಯಲ್ಲಿ ಮಾಲೆಕಟ್ಟಿ ಪ್ರೊ. ಜಿ.ವಿ.ಯವರು ಓದುಗರ ಕೈಗೆ ಒಪ್ಪಿಸಿದ್ದಾರೆ.

'ಸೀಳುನೋಟ'ದ ಮೂವತ್ತೆರಡು ಚಿಂತನಗಳಲ್ಲಿ ಇಪ್ಪತ್ತನಾಲ್ಕನ್ನು ಒಂದು ಭಾಗವಾಗಿಯೂ ಉಳಿದ ಎಂಟನ್ನು ಮತ್ತೊಂದು ಭಾಗವಾಗಿಯೂ ಪ್ರತ್ಯೇಕಿಸಲಾಗಿದೆ. ಪ್ರಥಮಭಾಗದ ಇಪ್ಪತ್ತನಾಲ್ಕರಲ್ಲಿ ಜನ್ಮಭೂಮಿ ಮತ್ತು ವಂದೇಮಾತರಂ ಗಳಂತರ ಪದ ಹಾಗೂ ಗೀತವಿಶೇಷಗಳ ವಿಶ್ಲೇಷಣೆಯಿದೆ. ತೀರ್ಥಕ್ಷೇತ್ರಗಳು ಹೇಗೆ ತಮ್ಮ ಅರ್ಥವನ್ನು ಕಳಕೊಂಡು ಅಶುಚಿಯ ಆಗರಗಳಾಗಿವೆ ಎಂಬ ವಿಷಾದವಿದೆ. ದೇವರನ್ನು ಕುರಿತ ಜಿಜ್ಞಾಸೆಯಿದೆ, ಭಕ್ತಿಯ ಬಗೆಗಿನ ವಿವೇಚನೆಯಿದೆ, ಪಾಪ-ಪುಣ್ಯಗಳ ವಿಭಜನೆ ಮತ್ತು ವಿವರಣೆಯಿದೆ, ಕಾಲದ ವ್ಯಾಖ್ಯಾನವಿದೆ. ಮತ, ಸತ್ಯ, ಶೀಲ, ಆಸಕ್ತಿ, ರುಚಿ – ಹೀಗೆ ಚಿಂತನಗಳ ಹೆಸರನ್ನು ನೋಡಿದರೆ ಅವುಗಳ ಹೂರಣ ಏನೆಂಬುದು ತಿಳಿಯುತ್ತದೆ. 'ನೆಟ್ಟಗೆ ನಿಲ್ಲುವುದು' ಎಂಬುದು ಒಂದು ಚಿಂತನಶೀರ್ಷಿಕೆ. ಈ ಚಿಂತನದಲ್ಲಿ ಜಿ.ವಿ.ಯವರು 'ನೆಟ್ಟಗೆ' ಎಂಬ ಪದದ ಲಕ್ಷ್ಯಾರ್ಥವನ್ನು ಹೇಳುವುದರೊಂದಿಗೆ, ಆ ಪದಕ್ಕೆ ವಿರೋಧಿ ಎನ್ನಬಹುದಾದ 'ಬಾಗು'ವಿನ ಅವಲಕ್ಷಣಗಳನ್ನೂ ಸೂಚಿಸುತ್ತಾರೆ. ಹಾಗೆಯೇ ಈ ಚಿಂತನ If you can

stand erect your shadow can not be brooked ಎಂಬ ಚೀನೀ ಗಾದೆ ಮಾತಿನ ಸಂಕ್ಷಿಪ್ತ ವ್ಯಾಖ್ಯಾನವಾಗಿದೆ. 'ಸ್ಪರ್ಶಶಿಲೆ'ಯೆಂಬ ಚಿಂತನದಲ್ಲಿ ಕಬ್ಬಿಣಕ್ಕೆ ತಾಗಿಸಿದರೆ ಅದನ್ನು ಚಿನ್ನವಾಗಿ ಪರಿವರ್ತಿಸುವ 'ಪರುಷಮಣಿ'ಯನ್ನು ಕುರಿತು ಹೇಳುವುದಲ್ಲ. ಒಂದು ಉನ್ನತ ಚೇತನದ ಸಾಮೀಪ್ಯ-ಸಂಸ್ಪರ್ಶಗಳಿಂದ ಹೇಗೆ ಒಂದು ಸಾಮಾನ್ಯ ಜೀವಕ್ಕೂ ಔನ್ನತ್ಯ ಸಿದ್ಧಿಸಬಹುದು ಎಂಬುದನ್ನು ತಿಳಿಸುತ್ತದೆ. ನಮ್ಮಲ್ಲಿ ಕೃತಂ ಸ್ಮರ, ಕೃತೋ ಸ್ಮರ ಎಂಬ ಮಾತಿದೆ. ಮಾಡಿದ್ದನ್ನು ಮಾಡಿದವನನ್ನೂ ನೆನೆಯುವುದು ಎಂಬುದು ಇದರ ತಾತ್ಪರ್ಯ. ಸ್ಮರಣೆ ಅಥವಾ ನೆನವರಿಕೆಯೇ ಕೃತಜ್ಞತೆ. 'ಯಾರಿಗೆ ಕೃತಜ್ಞರು?' ಎಂಬ ಚಿಂತನದಲ್ಲಿ ಈ ಭಾವವಿಸ್ತರಣವನ್ನು ನಾವು ಕಾಣುತ್ತೇವೆ. ಇಲ್ಲಿ ಉಲ್ಲೇಖಿಸದ ಇತರ ಚಿಂತನಗಳಲ್ಲಿ ಒಂದೊಂದು ವಿಚಾರರಶ್ಮಿಯನ್ನೋ ವಿಚಾರವಿಶೇಷವನ್ನೋ ಮನಗಾಣಬಹುದಾಗಿದೆ.

ಪುಸ್ತಕದ ಎರಡನೆಯ ಭಾಗದಲ್ಲಿರುವ ಎಂಟು ಚಿಂತನಗಳು ಯುಗಾದಿ, ವಿಜಯದಶಮಿ, ದೀಪಾವಳಿಯಂತಹ ಧಾರ್ಮಿಕ ಹಾಗೂ ಭಾರತ ಸ್ವಾತಂತ್ರ್ಯ, ಕರ್ನಾಟಕ ರಾಜ್ಯೋದಯದಂತಹ ರಾಷ್ಟ್ರೀಯ ಮತ್ತು ದೇಶೀಯ ಪರ್ವ ದಿನಾಚರಣೆಗಳನ್ನು ಕುರಿತದ್ದಾಗಿವೆ. ಅವುಗಳಲ್ಲಿ ಆಯಾ ಪರ್ವದಿನಗಳ ನಿಜಾರ್ಥ-ವನ್ನು ಪ್ರೊ. ಜಿ.ವಿ.ಯವರು ಎತ್ತಿ ಆಡುವುದರೊಂದಿಗೆ ಜನಸಾಮಾನ್ಯನಿಗೆ ಹಬ್ಬಗಳ ಅರ್ಥ ಮುಖ್ಯವಲ್ಲ, ಆಚರಣೆಯೇ ಹೇಗೆ ಪ್ರಧಾನವಾಗಿದೆ ಎಂಬುದನ್ನು ಹೇಳುತ್ತಾರೆ. ಎರಡನೆಯ ಭಾಗದಲ್ಲಿ ಮಾತ್ರವಲ್ಲ, ಪುಸ್ತಕದಲ್ಲೂ ಇರುವ ಚಿಂತನಗಳಲ್ಲಿ ಕೊನೆಯದು 'ನಾಡಹಬ್ಬ'. ಅದನ್ನು ಕೊನೆಗೊಳಿಸುವಾದ ಜಿ.ವಿ.ಯವರು ಆಡುವ ಎಚ್ಚರಿಕೆ ಮಾತು ಹೀಗಿದೆ: "ನಾದ ಸಾಕು; ಮೋದ ಬೇಕು. ಗುಂಪುಗಾರಿಕೆ ಸಾಕು, ಸೊಂಪಾಗಿರವ ಸ್ನೇಹ ಬೇಕು. ಜನ ಬದುಕಬೇಕೆಂದು ಕಾವ್ಯ ಬರೆಯಬೇಕು." - ಆಕಾಶವಾಣಿ ಚಿಂತನವಿರಲಿ, ವೇದಿಕೆಯ ಭಾಷಣವಾಗಲಿ, ಗೋಷ್ಠಿಗಳ ವಾದ-ವಿವಾದಗಳಿರಲಿ ಅವೆಲ್ಲವೂ ಅಕ್ಷರರೂಪದಲ್ಲಿ ಅಚ್ಚುಗೊಂಡು ಪುಸ್ತಕದ ಆಕಾರದಲ್ಲಿ ಪ್ರಕಟವಾದಾಗ ವಾಙ್ಮಯ ಎನಿಸಿಕೊಳ್ಳುತ್ತವೆ. ವಾಙ್ಮಯದ ಪ್ರಮುಖ ಲಕ್ಷಣವೆಂದರೆ ಪ್ರೊ. ಜಿ. ವಿ. ಹೇಳಿದ್ದೇ ಆಗಿದೆ. ಸಾವಿರ ವರ್ಷಗಳ ಹಿಂದೆ ರಾಘವಾಂಕ ತನ್ನ ಹರಿಶ್ಚಂದ್ರಕಾವ್ಯದಲ್ಲಿ ಹೇಳಿದ್ದನ್ನೇ ಪ್ರೊ. ವೆಂಕಟಸುಬ್ಬಯ್ಯನವರು ತಮ್ಮ 'ಸೀಳು-ನೋಟ'ದಲ್ಲಿ ಪಡಿನುಡಿದಿದ್ದಾರೆ. ಈ ಪುಟ್ಟ ಪುಸ್ತಕದ ಮೂವತ್ತೆರಡು ಕಿರುಬರೆಹಗಳ ರೂಪದಲ್ಲಿ ಜಿ.ವಿ.ಯವರು ಬದುಕಿನ ಎದೆಯ ಹೊಲದಲ್ಲಿ ಬಗೆಬಗೆಯ ಬೆಳಕಿನ ಬೀಜಗಳನ್ನು ಬಿತ್ತಿದ್ದಾರೆ. ಆ ಬೀಜಗಳನ್ನು ಮೊಳೆಯಿಸಿ, ಬೆಳೆಯಿಸಿ, ಚಿಗುರು-ಎಲೆ-ಮೊಗ್ಗು-ಹೂ, ಕಾಯಿ-ಹಣ್ಣುಗಳಿಂದ ತುರುಗುವಂತೆ ಆತ ಉಪಚಾರ ಕ್ರಿಯೆಯನ್ನು ಮಾಡಿದಾಗ ಸಾಹಿತ್ಯರಸ ಸಂಸ್ಕಾರ ಆತನಿಗೆ ಆಗಿಯೇ ಆಗುತ್ತದೆ. ಹಾಗೆ ಆದಾಗ ಆತ ಸುಸಂಸ್ಕೃತ ಎನಿಸಿಕೊಳ್ಳುತ್ತಾನೆ. ಅಂತಹ ಸುಸಂಸ್ಕೃತ ವ್ಯಕ್ತಿಗಳಿಂದ ಸಮಾಜದ ಸ್ವಾಸ್ಥ್ಯ ಸಿದ್ಧಿಸುತ್ತದೆ.

ನೃಪತುಂಗನೋ ಶ್ರೀವಿಜಯನೋ ಯಾರೇ ಇರಲಿ 'ಕವಿರಾಜಮಾರ್ಗ'ದಲ್ಲಿ ಉಪಾದೇಯವಾದ ಉಕ್ತಿಯೊಂದನ್ನು ಆಡಿದ್ದಾನೆ. 'ಜಾಣ' ಯಾರು ಎಂಬುದನ್ನು

ವಿವರಿಸುತ್ತ, 'ಕಿರಿದರೊಳ್ ಪಿರಿದುಂ ಅರ್ಥವನ್ ಅರಿಪಲ್ ಅರ್ಪನ್'ನೇ ಜಾಣ ಎನ್ನುತ್ತಾನೆ. ನಾಲ್ಕೈದು ನಿಮಿಷಗಳ ಆಕಾಶವಾಣಿ ಚಿಂತನಗಳು ಅಚ್ಚಾದಾಗ ಕಿರಿಟಾಕೃತಿಯು ಒಂದೆರಡು ಪುಟಗಳಷ್ಟೇ ಆಗುತ್ತವೆ. ಚಿಂತನಕಾರನ ಜಾಣ್ಮೆ ಆ ಪುಟಗಳಲ್ಲಿ ಪ್ರಕಟವಾಗುತ್ತದೆ. 'ಹೀಳುನೋಟ'ದ ಕಿರುಬರೆಹಗಳಲ್ಲಿ ಅಂತಹ ಜಾಣ್ಮೆಯ ಸಲ್ಲಕ್ಷಣಗಳು ದಟ್ಟವಾಗಿವೆ ಎಂದು ದಿಟ್ಟವಾಗಿ ಹೇಳಬಹುದಾಗಿದೆ.



---

ಭಾರತದಲ್ಲಿ ಪ್ರಾಂತೀಯ ಭಾಷೆಗಳಿಗೆ ಅಧಿಕಾರಯುತವಾದ ಸ್ಥಾನವನ್ನು ನೀಡಿ ಆಯಾ ಪ್ರಾಂತಗಳಲ್ಲಿ ಆಯಾ ಭಾಷೆಗಳೇ ಆಡಳಿತ ಭಾಷೆಯಾಗಬೇಕೆಂಬ ತೀರ್ಮಾನವನ್ನು ಕೈಗೊಂಡಿರುವುದು ತುಂಬ ಸ್ವಾಗತಾರ್ಹವಾದ ವಿಚಾರ. ಇನ್ನು ಆಯಾ ಪ್ರಾಂತಗಳಲ್ಲಿರುವ ಪ್ರಾದೇಶಿಕಭೇದಗಳನ್ನು ಆಧುನಿಕಗೊಳಿಸಿ (Modernise) ಅವುಗಳಿಗೆ ಒಂದು ಸಮಾನಗುಣಮಟ್ಟವನ್ನು (Standeredization) ತಂದುಕೊಡ-ಬೇಕಾದುದೂ ಅಷ್ಟೇ ಮುಖ್ಯವಾದುದು. ಪ್ರಜಾವರ್ಗದ ಬಹುಜನರಿಗೆ ಸಹಾಯವಾಗುವಂತೆ ಪ್ರಾಂತಗಳಲ್ಲಿರುವ ಪ್ರಾದೇಶಿಕ ಭೇದಗಳನ್ನು ಸಾಧ್ಯವಾದಷ್ಟೂ ಒಂದುಗೂಡಿಸಿ ಎಲ್ಲ ಕಡೆಯ ಆಡುಮಾತಿನ ಸ್ವರೂಪವು ಎಲ್ಲರಿಗೂ ಅರ್ಥವಾಗುವಂತೆ ಮಾಡುವ ಶಿಕ್ಷಣ ಕ್ಷೇತ್ರದ ಸಾಧ್ಯತೆಯನ್ನು ಆಳವಾಗಿ ಪರಿಶೀಲಿಸಬೇಕು.

ಈಗಿನ ಭಾರತದ ರಾಜಕೀಯದಲ್ಲಿ ಭಾಷಾಭಿಮಾನಕ್ಕೆ ಅಗಾಧ-ವಾದ ಪ್ರಾಧಾನ್ಯ ದೊರಕಿದೆ. ಭಾಷಾಭಿಮಾನವನ್ನು ರಾಜಕೀಯ-ನಿಪುಣರು ಪಕ್ಷಪ್ರತಿಷ್ಠೆಗೆ ಒಂದು ಸಾಧನವನ್ನಾಗಿ ಉಪಯೋಗಿಸಿ-ಕೊಳ್ಳುವುದೂ ಉಂಟು. ಅದೇ ಅಭಿಮಾನವನ್ನೇ ರಾಷ್ಟ್ರದ ಬೆಳವಣಿಗೆಯ, ಅಭಿವೃದ್ಧಿಯ ಉದ್ದೇಶಕ್ಕೆ ಮಾರ್ಗದರ್ಶಕವನ್ನಾಗಿ ಮಾರ್ಪಡಿಸಬೇಕು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಡಿ. ವಿ. ಗುಂಡಪ್ಪ

## ಅಂಬಾತನಯ, ಮುದ್ರಾಡಿ

ಕೇಂದ್ರ ಸಾಹಿತ್ಯ ಅಕಾಡೆಮಿ ತನ್ನ 'ಭಾರತೀಯ ಸಾಹಿತ್ಯ ನಿರ್ಮಾಪಕರು' ಎಂಬ ಪ್ರಕಟನಮಾಲಿಕೆಯಲ್ಲಿ ಭಾರತದ ಎಲ್ಲ ಭಾಷೆಗಳ ಶ್ರೇಷ್ಠಸಾಹಿತಿಗಳ ವ್ಯಕ್ತಿ ಚಿತ್ರಣಗಳನ್ನು ಹಿರಿಯ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಿದೆ. ಇವುಗಳಲ್ಲಿ 'ಡಿ. ವಿ. ಗುಂಡಪ್ಪ' ಒಂದು. ಇದನ್ನು ಬರೆದವರು ಪ್ರೊ. ಜಿ. ವೆಂಕಟಸುಬ್ಬಯ್ಯನವರು. ಡಿ. ವಿ. ಗುಂಡಪ್ಪನವರು 'ಡಿವಿಜಿ' ಎಂಬ ಮೂರು ಅಕ್ಷರಗಳಿಂದಲೇ ಕನ್ನಡ ಸಾರಸ್ವತ ಪ್ರಪಂಚಕ್ಕೆ ಚಿರಪರಿಚಿತರಾದವರು. ಪ್ರಾಯಃ ಸರ್ವಜ್ಞವಚನಗಳ, ಶರಣರ ವಚನಗಳ, ದಾಸಕೀರ್ತನೆಗಳ ಅನಂತರ ಡಿವಿಜಿಯವರ 'ಮಂಕುತಿಮ್ಮನ ಕಗ್ಗ'ದಷ್ಟು ಜನಪ್ರಿಯವಾದ, ಜನಮಾನ್ಯವಾದ ಕೃತಿ ಬೇರೊಂದಿರಲಾರದು. ಕಗ್ಗವೊಂದೇ ಸಾಕು – ಡಿವಿಜಿಯವರ ಹೆಸರು ಚಿರಕಾಲ ಉಳಿಯುವುದಕ್ಕೆ.

ಡಿವಿಜಿಯವರದ್ದು ಬಹುಮುಖ ಪ್ರತಿಭೆ. 'ಗುಂಡಪ್ಪನವರು ಗುಡುಗಿದರೆಂದರೆ ದೆಹಲಿಯ ಸಿಂಹಾಸನ ನಡುಗುತ್ತದೆ' ಎಂದು ಸುಮಾರು ಐವತ್ತು ವರ್ಷಗಳ ಹಿಂದೆ 'ಪ್ರಜಾಮತ' ಪತ್ರಿಕೆಯಲ್ಲಿ ಓದಿದ ನೆನಪು. ಓರ್ವ ಪತ್ರಿಕೋದ್ಯಮಿಯಾಗಿ ಡಿವಿಜಿಯವರ ಖ್ಯಾತಿಯಿದು. 'ಶ್ರೀಮದ್ಭಗವದ್ಗೀತಾತಾತ್ಪರ್ಯ ಅಥವಾ ಜೀವನ ಧರ್ಮಯೋಗ' ಭಾರತೀಯ ಸಂಸ್ಕೃತಿಪ್ರಿಯರಿಗೆ ಸರ್ವಮಾನ್ಯವಾದ, ವಿದ್ವಜ್ಜನ ಗೌರವಕ್ಕೆ ಪಾತ್ರವಾದ ಮೇರುಕೃತಿ. ಜೀವನಚರಿತ್ರೆ, ಕವಿತೆ, ನಾಟಕ, ಭಾರತೀಯ ಸಂಸ್ಕೃತಿ, ಕಾವ್ಯಮೀಮಾಂಸೆ – ವಿಮರ್ಶೆ, ಮಕ್ಕಳ ಸಾಹಿತ್ಯ, ರಾಜ್ಯಾಡಳಿತ – ರಾಷ್ಟ್ರಧರ್ಮ, ಜ್ಞಾಪಕಚಿತ್ರಶಾಲೆ – ಹೀಗೆ ಡಿವಿಜಿಯವರ ಸಾಹಿತ್ಯದ ಹರಹು. ಇಂತಹ ಬಹುಮುಖೀ ಮೇರುವ್ಯಕ್ತಿತ್ವವನ್ನು ಚಿತ್ರಿಸುವುದು ಸುಲಭದ ಕೆಲಸವಲ್ಲ. ಡಿವಿಜಿಯವರನ್ನು, ಅವರ ಸಮಗ್ರಕೃತಿಗಳನ್ನು ಹತ್ತಿರದಿಂದ ಕಂಡ ಆಪ್ತರಿಗೆ, ಸಹೃದಯರಿಗೆ ಮಾತ್ರ ಸಾಧ್ಯವಾಗುವ ಕೆಲಸವಿದು. ಸಮಕಾಲೀನ ಕನ್ನಡದ ಪಂಡಿತ ಪರಂಪರೆಯ ಹಿರಿಯರೂ, ಬಹುಶ್ರುತ 'ಪದಜೀವಿ'ಗಳೂ ಆಗಿರುವ ಮಾನ್ಯ ಜಿ. ವೆಂಕಟಸುಬ್ಬಯ್ಯನವರು ಈ ವ್ಯಕ್ತಿಚಿತ್ರಣವನ್ನು ಚೆನ್ನಾಗಿ ಸೆರೆಹಿಡಿದಿದ್ದಾರೆ. ಅವರು ಕೃತಿಯ ಆರಂಭದ 'ಅರಿಕೆ'ಯಲ್ಲಿ ಹೀಗೆ ಹೇಳುತ್ತಾರೆ: 'ಡಿವಿಜಿ ಕರ್ನಾಟಕದ ಬಹು

ದೊಡ್ಡ ವ್ಯಕ್ತಿ. 1943ರ ಮೊದಲಿನಲ್ಲಿ ನಾನು ಅವರನ್ನು ಕಂಡದ್ದು. ಆ ಬಳಿಕ ಅವರ ಆಶೀರ್ವಾದ ನೆರಳಿನಲ್ಲಿ ಬೆಳೆದವನು; ಅವರ ಗ್ರಂಥಗಳಿಂದ ಸಾಹಿತ್ಯಮಾರ್ಗವನ್ನೂ, ಅವರ ಪ್ರಭಾವವಲಯವನ್ನೂ ಅರಿತುಕೊಂಡವನು. ಅವರ ಮಗ ಬಿ.ಜಿ.ಎಲ್. ಸ್ವಾಮಿ ನನಗೆ ಕಿರಿಯ ಸ್ನೇಹಿತರಾಗಿದ್ದರು. ಹೀಗಿದ್ದೂ ಡಿವಿಜಿಯವರ ವ್ಯಾಪಕವಾದ ವಿದ್ವತ್ತು, ಎಂದೂ ಮಸುಳದ ಸ್ಮರಣಶಕ್ತಿ, ಜನವರ್ಗದ ಸಂಪರ್ಕ, ಅಧಿಕಾರಸ್ಥಾನ-ದಲ್ಲಿದ್ದವರ ಮೇಲಿನ ಪ್ರಭಾವ ಇವುಗಳನ್ನು ಬೆಲೆಕಟ್ಟುವುದು ಕಷ್ಟದ ಕೆಲಸ. ನನ್ನ ಮಿತಿಯಲ್ಲಿ ನಾನು ಡಿವಿಜಿಯವರನ್ನು ಕಂಡಂತೆ ಅವರ ವ್ಯಕ್ತಿತ್ವನ್ನು ಚಿತ್ರಿಸಿದ್ದೇನೆ.' ಇದು ಜಿ.ವಿ.ಯವರ ಸೌಜನ್ಯ.

ಈ ಬರೆಹ 'ಡಿ. ವಿ. ಗುಂಡಪ್ಪ' ಕೃತಿಸಮೀಕ್ಷೆಯಲ್ಲ, ಮಾನ್ಯ ವೆಂಕಟ-ಸುಬ್ಬಯ್ಯನವರು ಕಂಡ ಚಿತ್ರಣದ ಸೂಕ್ಷ್ಮಪರಿಚಯ. ಕೃತಿ 'ಪ್ರವೇಶ'ದಲ್ಲಿಯ ಮಾತು ಹೀಗಿದೆ: 'ಕನ್ನಡ ಸಾಹಿತ್ಯದ ನವೋದಯಯುಗವೆಂದು ಕರೆಯುವ ಕಾಲವನ್ನು ಆ ಹೆಸರಿಗೆ ಅರ್ಹವನ್ನಾಗಿ ಮಾಡಿದ ವಿದ್ವಾಂಸರನ್ನೂ, ಕವಿಗಳನ್ನೂ, ಪ್ರಚಾರಕರನ್ನೂ ನೆನೆಯುವ ಸಮಯದಲ್ಲಿ ಯಾರೂ ಮರೆಯಲಾರದ ಕೆಲವು ಹೆಸರುಗಳಿವೆ. ಆರ್. ನರಸಿಂಹಾಚಾರ್ಯ, ಬೆಳ್ಳಾವೆ ವೆಂಕಟನಾರಾಯಣಪ್ಪ, ಬಿ. ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣ ಶಾಸ್ತ್ರೀ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ. ಆರ್. ಶ್ರೀನಿವಾಸಮೂರ್ತಿ, ವಿ. ಸೀತಾರಾಮಯ್ಯ, ತಿರುಮಲೆ ತಾತಾಚಾರ್ಯ ಶರ್ಮ ಇವರೊಬ್ಬೊಬ್ಬರೂ ಅವರವರ ಕಾರ್ಯಕ್ಷೇತ್ರಗಳಲ್ಲಿ ಬಹುಪ್ರಮುಖರಾಗಿದ್ದ-ರಲ್ಲದೆ, ಇತರ ಸಾಮಾಜಿಕ ವ್ಯವಹಾರಗಳಲ್ಲಿ ಮುಂದಾಳುಗಳಾಗಿ ದುಡಿದವರು...... ಕನ್ನಡಸಾಹಿತ್ಯಕ್ಕೆ ಲೋಕವಿಖ್ಯಾತಿಯನ್ನು ತಂದುಕೊಟ್ಟ ಹಿರಿಯರು..... ಇವರೆಲ್ಲ ಏಕಾಭಿಪ್ರಾಯದಿಂದ ಕಾರ್ಯಮುಖರಾಗಿದ್ದರೆಂಬುದು ಕನ್ನಡದ ಅದೃಷ್ಟ.' (ಇಲ್ಲಿ ಗಮನಾರ್ಹವಾದುದು ಕೊನೆಯ ವಾಕ್ಯ. ಈ ಸಾಮರಸ್ಯದ ಅಭಾವ ನಾವಿಂದು ಕಾಣುತ್ತೇವಲ್ಲವೆ?)

'ಇವರೆಲ್ಲರ ಸ್ನೇಹವಿಶ್ವಾಸಗಳನ್ನು ಹೊಂದಿದ್ದ ಡಿ. ವಿ. ಗುಂಡಪ್ಪನವರ ಜೀವನ ಬಹು ವಿಶಿಷ್ಟವಾದುದು. ಇತರರಂತೆ ಅವರು ವಿಶ್ವವಿದ್ಯಾನಿಲಯದ ಶಿಕ್ಷಣವನ್ನು ಪಡೆದವರಲ್ಲ. ಈಗಿನ ಪ್ರೌಢಶಾಲೆಗೆ ಸಮಾನವಾಗಿದ್ದ ಮೆಟ್ರಿಕ್ಯುಲೇಷನ್‌ವರೆಗೆ ಶಿಕ್ಷಣವನ್ನು ಪಡೆದವರು. ಆದರೆ ಮನೆತನದಲ್ಲಿದ್ದ ಸಂಸ್ಕೃತಜ್ಞಾನ, ವೇದಾಧ್ಯಯನ, ಉಪನಿಷತ್ತುಗಳ ವ್ಯಾಸಂಗ, ಸಂಗೀತಾಸಕ್ತಿ ಮುಂತಾದುವುಗಳ ಜತೆಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಸ್ವಂತಬೋಧನೆಯಿಂದ ಅದ್ಭುತವಾದ ಪಾಂಡಿತ್ಯವನ್ನು ಗಳಿಸಿಕೊಂಡವರು.'

ಡಿವಿಜಿಯವರ ಬಹುಮುಖ ಪ್ರತಿಭೆಯನ್ನು ಕಂಡಾಗ – ಅವರ 'ಏಕಲವ್ಯ-ನಿಷ್ಠೆಯ ಸಾಧನೆ-ಸಿದ್ಧಿಯ ಪರಿಚಯ ಬೆರಗೇಳಿಸುತ್ತದೆ.

ಡಿವಿಜಿಯವರ 'ಮನೆತನ'ದ ಸೂಕ್ಷ್ಮಪರಿಚಯ ಕೃತಿಯಲ್ಲಿದೆ. ಅದರಂತೆ ಡಿವಿಜಿಯವರ ವಿದ್ಯಾಭ್ಯಾಸದ ಕುರಿತ ಮಾತುಗಳಿವೆ. ಅವರ ಆಸಕ್ತಿಗೆ ಕಾರಣವಾದ ಸುತ್ತಮುತ್ತಲಿನ ಪ್ರಭಾವದ ಪರಿಚಯವಿದೆ. 'ಗುಂಡಪ್ಪನವರು ವಾಸಿಸುತ್ತಿದ್ದ ಸುತ್ತ

ಮುತ್ತಲಿನಲ್ಲಿ ಅನೇಕ ಸಂಗೀತಗಾರರ ಮನೆಗಳೂ, ನರ್ತಕಿಯವರ ಮನೆಗಳೂ ಇದ್ದುವು. ಇವುಗಳ ಸಾಮೀಪ್ಯದಿಂದ ಸಂಗೀತ, ನರ್ತನ ಮುಂತಾದ ಲಲಿತಕಲೆಗಳಲ್ಲಿ ಅವರ ಅಭಿರುಚಿ ಬೆಳೆಯಲು ಅವಕಾಶವಾಯಿತು. ಆಗಾಗ ನೆರವೇರುತ್ತಿದ್ದ ನರ್ತನ ಪ್ರದರ್ಶನಗಳು, ಸಂಗೀತಕಚೇರಿಗಳು ಇವರಿಗೆ ರಸದೌತಣವನ್ನು ನೀಡಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಈ ಕಾರಣಗಳಿಂದ ಬಾಲಕ ಗುಂಡಪ್ಪನವರಲ್ಲಿ ಸುಪ್ತವಾಗಿದ್ದ ಕಲಾಭಿಜ್ಞತೆ ಪ್ರಖರವಾಗಿ ರೂಪುಗೊಳ್ಳಲು ಸಾಧ್ಯವಾಯಿತು.' ಬೇಲೂರಿನ ಶಿಲಾಬಾಲಿಕೆಯರನ್ನು ಕುರಿತಾದ 'ಅಂತಃಪುರಗೀತೆ'ಗಳನ್ನು ಕಂಡಾಗ ನಮಗಿದು ಸ್ಪಷ್ಟವಾಗುತ್ತದೆ.

ಡಿವಿಜಿಯವರ ವಿಸ್ತಾರವಾದ ವ್ಯಾಸಂಗ ವಿದ್ಯಾರ್ಜನೆಯ ಕಾಲದಲ್ಲೇ ನಡೆದುದು ಎಂಬುದನ್ನು ವೆಂಕಟಸುಬ್ಬಯ್ಯ ತಿಳಿಸುತ್ತಾರೆ. ಇಂಗ್ಲಿಷ್ ವಿದ್ಯಾಭ್ಯಾಸವನ್ನು ಮುಂದುವರಿಸುವ ಉದ್ದೇಶದಿಂದ ಗುಂಡಪ್ಪನವರನ್ನು ಮೈಸೂರಿನಲ್ಲಿ ಪ್ರೌಢಶಾಲೆಗೆ ಸೇರಿಸಲಾಗಿತ್ತು. ಅವರ ಅಜ್ಜಿಯೂ, ತಾತನೂ ಪ್ಲೇಗಿಗೆ ತುತ್ತಾಗಿ ತೀರಿಕೊಂಡರು. ಗುಂಡಪ್ಪ ಊರಿಗೆ ಬಂದವರು 'ಮೈಸೂರಿಗೆ ಹಿಂದಿರುಗುವ ಅವಕಾಶವಿಲ್ಲದೆ ಕೋಲಾರದಲ್ಲಿ ಪ್ರೌಢಶಾಲೆಯ ಓದನ್ನು ಮುಂದುವರಿಸಿದರು. ಅಲ್ಲಿದ್ದಾಗಲೇ ಸ್ವಲ್ಪ ವೇದಾಧ್ಯಯನವೂ, ಕಾವ್ಯರಚನೆಯ ಅಭ್ಯಾಸವೂ ಮೊದಲಾದುವು. ಪ್ರೌಢಶಾಲೆಯ ಅಧ್ಯಾಪಕರಲ್ಲಿ ಆರ್. ಎ. ಕೃಷ್ಣಸ್ವಾಮಿ ಅಯ್ಯರ್ ಎಂಬುವರು ಚರಿತ್ರೆಯ ಪಾಠವನ್ನು ಮಾಡುವಾಗ ಇಂಗ್ಲೆಂಡಿನ ಮಂತ್ರಿ ಮಹೋದಯರ ವಿಚಾರವನ್ನು, ದೊಡ್ಡ ದೊಡ್ಡ ಲೇಖಕರ ಹೆಸರನ್ನೂ ಹೇಳಿ ರಾಜಕೀಯದಲ್ಲಿ ಆಸಕ್ತಿ ಬೆಳೆಸಿದರು. ಅಲ್ಲಿಯೇ ಇದ್ದ ಅನುಕೂಲಗಳಿಂದ ಅವರಿಗೆ ಸಾಕ್ರೆಟಿಸ್‌ನ ಸಂವಾದಗಳು ಎಂಬ ಗ್ರಂಥದ ಪರಿಚಯವೂ ಇಂಗ್ಲೆಂಡಿನ ಇಂಗ್ಲಿಷ್ ಪತ್ರಿಕೆಗಳ ಪರಿಚಯವೂ ಒದಗಿಬಂದುವು. ವಿಸ್ತಾರವಾದ ವ್ಯಾಸಂಗದಲ್ಲಿ ನಿರತರಾದ ಡಿವಿಜಿ ಪಾಠಪ್ರವಚನಗಳ ಕಡೆಗೆ ಗಮನಕೊಡದೆ ಹೋದುದರಿಂದಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ಅಲ್ಲಿಗೆ ಅವರ ಶಾಲಾವಿದ್ಯಾಭ್ಯಾಸಪೂರೈಸಿತು.' ಮತ್ತೆಲ್ಲವೂ ಸ್ವಾಧ್ಯಯನದ ಸತ್ಫಲಗಳು.

ಡಿವಿಜಿಗೆ 1904ರಲ್ಲಿ ಭಾಗೀರಥಮ್ಮನೊಂದಿಗೆ ವಿವಾಹ. ಸಂಸಾರದ ನಿರ್ವಹಣೆಗಾಗಿ ಯಾವುದಾದರೂ ವೃತ್ತಿಯನ್ನು ಆಶ್ರಯಿಸಬೇಕಾದ ಅನಿವಾರ್ಯತೆ. ಬೆಂಗಳೂರಿಗೆ ಪಯಣ. ಆರಿಸಿಕೊಂಡದ್ದು 'ಪತ್ರಿಕೋದ್ಯೋಗ'. 'ಸೂರ್ಯೋದಯ ಪ್ರಕಾಶಿಕೆ', 'ಈವಿನಿಂಗ್ ಮೆಯಿಲ್', 'ಭಾರತಿ', 'ದಿ ಮೈಸೂರ್ ಸ್ಟಾಂಡರ್ಡ್', 'ನಡೆಗನ್ನಡಿ', ಪತ್ರಿಕೆಗೆ ಲೇಖನ ಬರೆಯುತ್ತಿದ್ದ ಡಿವಿಜಿಯವರು ಮದ್ರಾಸಿಗೆ ತೆರಳಬೇಕಾಗಿ ಬಂತು. ಅಲ್ಲಿ 'ಇಂಡಿಯನ್ ಪೇಟ್ರಿಯಟ್', ಇಂಗ್ಲಿಷ್ ಪತ್ರಿಕೆಗಳಿಗೆ ಲೇಖನ, ಮದ್ರಾಸಿನಿಂದ ಹಿಂದಿರುಗಿ ಬೆಂಗಳೂರಿಗೆ ಬಂದು 'ಸುಮತಿ' ಎಂಬ ವಾರಪತ್ರಿಕೆಯನ್ನು 'ಸುಮತಿ ಗ್ರಂಥಮಾಲೆ'ಯನ್ನೂ ಪ್ರಾರಂಭಿಸಿದ ಪರಿಚಯ ಕೃತಿಯಲ್ಲಿದೆ.

1960ರಲ್ಲಿ ಮೈಸೂರ್ ಟೈಮ್ಸ್' ಪತ್ರಿಕೆಯ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ಅಸಿಸ್ಟಂಟ್ ಎಡಿಟರಾಗಿ ಜೀವನ ನಡೆಸಿದ ಡಿವಿಜಿ ಯಾವುದೋ ಆತ್ಮಗೌರವಪರೀಕ್ಷೆಯದಲ್ಲಿ ತಮ್ಮ ಒಪ್ಪಿಗೆಯಿಲ್ಲದೆ ಕೋರ್ಟಿನ ವ್ಯವಹಾರದಲ್ಲಿದ್ದ



ಮೊಕದ್ದಮೆಯನ್ನು ಸಂಪಾದಕರು ಹಿಂದಕ್ಕೆ ಪಡೆದುದರಿಂದ ಬೇಸರಗೊಂಡು ರಾಜೀನಾಮೆ ಕೊಟ್ಟ ವಿಚಾರವನ್ನು ಕಾಣುವಾಗ ಡಿವಿಜಿಯವರು ಅಭಿಮಾನಧನ-ರಾಗಿದ್ದರೆಂಬುದರ ಅರಿವಾಗುತ್ತದೆ. ಇತರರ ಮೇಲ್ವಿಚಾರಣೆಯಲ್ಲಿ ಪತ್ರಿಕೋದ್ಯೋಗವು ತಮಗೆ ಸರಿಹೊಂದುವುದಿಲ್ಲವೆಂದು 'ದಿ ಕರ್ನಾಟಕ' ಎಂಬ ಇಂಗ್ಲಿಷ್ ಪತ್ರಿಕೆ-ಯೊಂದನ್ನು ಡಿವಿಜಿ ಪ್ರಕಟಿಸಿದರು. ಮಾನ್ಯ ವೆಂಕಟಸುಬ್ಬಯ್ಯ ಬರೆಯುತ್ತಾರೆ: 'ತನ್ನ ಇಪ್ಪತ್ತಾರನೆಯ ವಯಸ್ಸಿನಲ್ಲಿ ಒಂದು ಪತ್ರಿಕೆಯ ಮಾಲೀಕನೂ ಸಂಪಾದಕನೂ ಆದ ಮತ್ತೊಬ್ಬ ವ್ಯಕ್ತಿಯನ್ನು ಕಾಣುವುದು ಕಷ್ಟ. ನಮ್ಮ ದೇಶದಲ್ಲಿ ಈ ಶತಮಾನದ ಆದಿಯಲ್ಲಿ ಇದು ನಿರ್ವಿವಾದವಾಗಿ ದುಸ್ಸಾಧ್ಯವಾಗಿತ್ತು.'

'ವೃತ್ತಪತ್ರಿಕೆ' 1968ರಲ್ಲಿ ಪ್ರಕಟವಾದ ಡಿವಿಜಿಯವರ ಗ್ರಂಥ. ಪತ್ರಕರ್ತನ ವೃತ್ತಿಯೇ ತಮ್ಮ ವೃತ್ತಿಯೆಂದು ತಿಳಿದಿದ್ದ ಡಿವಿಜಿ ಈ ಕೃತಿಯಲ್ಲಿ ಹೇಳಿದ ಮಾತುಗಳಿವು:

- ಮುಖ್ಯವಾಗಿ ಪತಿಕಾವೃತ್ತಿ ಜನಬೋಧನೆಯ ಉದ್ದೇಶವುಳ್ಳದ್ದು. ಜನಬೋಧನೆ ಚೆನ್ನಾಗಿ ನಡೆಯಬೇಕಿದ್ದರೆ ಬೋಧಕರು ಸ್ವಲ್ಪ ಸಿದ್ಧತೆ ಮಾಡಿಕೊಳ್ಳಬೇಕು.
- ಪ್ರತಿಯೊಬ್ಬ ಪತ್ರಕರ್ತನೂ ಯತ್ಕಿಂಚಿತ್ತಾದರೂ ಸಾಹಿತ್ಯವ್ಯಾಸಂಗ ಮಾಡಬೇಕು.
- ನಾವು ಎತ್ತರಕ್ಕೆ ಹೋದಷ್ಟೂ ಕೆಳಗಡೆಯ ದಿಣ್ಣೆಗಳು ಕಣ್ಣಿಗೆ ಕಾಣುವುದು ಕಡಿಮೆಯಾಗುತ್ತದೆ. ಮಾಡಿದ ಕೆಲಸ ಹಸನಾಗಿ ಕಾಣಬೇಕಾದರೆ, ನಾವು ಹೆಚ್ಚು ಅಧ್ಯಯನ ಮಾಡಬೇಕು. ಹೆಚ್ಚು ಕೃಷಿ ಮಾಡಬೇಕು. ಕೃಷಿ ಮಾಡಿದಂತೆ ಉದ್ಯೋಗ ಬೆಳೆಯುತ್ತದೆ.

ವೆಂಕಟಸುಬ್ಬಯ್ಯ ಬರೆಯುತ್ತಾರೆ: 'ಇಂಥ ತಿಳಿವಳಿಕೆಯನ್ನು ನೀಡುವ ವಾಕ್ಯಗಳ ಹಿಂದೆ ಅಪಾರ ವಿದ್ವತ್ತು ಸ್ಪಷ್ಟವಾಗಿದ್ದುದರಿಂದಲೇ ಪತ್ರಿಕಾಕರ್ತರು ಈ ಗ್ರಂಥವನ್ನು ತಮ್ಮ ಕೈಪಿಡಿಯಾಗಿ ಇಂದಿಗೂ ಉಪಯೋಗಿಸುತ್ತಾರೆ.'

'ರಾಜ್ಯಶಾಸ್ತ್ರ' 1952ರಲ್ಲಿ ಪ್ರಕಟವಾದ ಬಹುಪ್ರಸಿದ್ಧವಾದ ದೊಡ್ಡಗ್ರಂಥ. ಈ ಕುರಿತು 'ಅಪಾರವಾದ ವಿಷಯಸಂಪತ್ತು, ಸ್ಪಷ್ಟವಾದ ನಿರೂಪಣೆ, ಬಹುವ್ಯಾಪಕವಾದ ಸಂದರ್ಭಗಳ ಪರಿಶೀಲನೆ, ಪಾಶ್ಚಾತ್ಯ ಪೌರಸ್ತ್ಯ ಶಾಸ್ತ್ರಗ್ರಂಥಗಳ ಆಧಾರಗಳ ಉದ್ಧಾರ, ಇತಿಹಾಸಗಳಿಂದ ದೃಷ್ಟಾಂತಗಳನ್ನು ಗುರುತಿಸುವುದು, ಮುಂತಾದ ಕಾರಣಗಳಿಂದ ಈ ಗ್ರಂಥದ ಪ್ರಯೋಜನವನ್ನು ಅಳೆಯಬಹುದು. ಸರಳವಾದ ಭಾಷೆಯಿಂದಲೂ, ಆಕರ್ಷಕವಾದ ಶೈಲಿಯಿಂದಲೂ ಕೂಡಿರುವ ಈ ಗ್ರಂಥವನ್ನು ಮೀರಿಸಿರುವ ಬೇರೊಂದು ಗ್ರಂಥ ಕನ್ನಡದಲ್ಲಿ ಇನ್ನೂ ರಚಿತವಾಗಿಲ್ಲವೆಂಬುದರಿಂದಲೇ ಈ ಗ್ರಂಥವು ಅಪೂರ್ವವಾದುದೆಂದು ಹೇಳಬಹುದು.' –ಲೇಖಕರ ಅಭಿಪ್ರಾಯವಿದು.

ರಾಜ್ಯದ ಆಡಳಿತದಲ್ಲಿ ತಲೆದೋರಬಹುದಾದ ಮಾನವದೌರ್ಬಲ್ಯಗಳನ್ನು ಡಿವಿಜಿ ವಿವರಿಸುವುದು ಹೀಗೆ:

'ಬಹುದಿನದ ಊಟವಿಲ್ಲದೆ ಹಸಿದಿರುವವನು ಔತಣದೆಲೆಯ ಮುಂದೆ ಕುಳಿತಾದ ಹೇಗೆ ಆತುರದಿಂದ ಪಕಪಕನೆ ಬುಕ್ಕುತ್ತಾನೆಯೋ, ನಮ್ಮ ಸಾರ್ವಜನಿಕರು ಹಾಗೆ ಅಧಿಕಾರಾವಕಾಶದ ದರ್ಶನವಾದೊಡನೆ ಬಾಯಿಬಿಟ್ಟು ಬುಕ್ಕಲಾರಂಭಿಸಿದರೆ ಆಶ್ಚರ್ಯವಲ್ಲ. ಪ್ರಜಾರಾಜ್ಯಪದ್ಧತಿಗೆ ಪ್ರಜಾಪ್ರತಿನಿಧಿಗಳ ಅಧಿಕಾರಾತುರತೆಯೇ ಯಮ-ಭಟನಾಗುತ್ತದೆ.'

ಡಿವಿಜಿಯವರು ಇನ್ನೆರಡು ಗ್ರಂಥಗಳನ್ನು ಈ ಗ್ರಂಥಕ್ಕೆ ಪೂರಕವೆಂಬಂತೆ ರಚಿಸಿದ್ದಾರೆ. 'ರಾಜ್ಯಾಂಗತತ್ತ್ವಗಳು' ಮತ್ತೊಂದು 'ಸಾರ್ವಜನಿಕದಲ್ಲಿ ಸಾತ್ವಿಕ' ಈ ಕುರಿತು ಪರಿಚಯದ ನಾಕುಮಾತುಗಳು ಈ ಕೃತಿಯಲ್ಲಿವೆ.

ಡಿವಿಜಿಯವರು ಜೀವನಚರಿತ್ರೆಗಳನ್ನು ಬರೆದಿದ್ದಾರೆ. ಅವರೇಕೆ ಜೀವನಚರಿತ್ರೆ ಬರೆದರೆಂಬುದನ್ನು ವೆಂಕಟಸುಬ್ಬಯ್ಯ ಹೀಗೆ ಹೇಳುತ್ತಾರೆ: 'ಯುವಕ ಜೀವನದ ಅಭಿವೃದ್ಧಿಗೆ ಮಹಾವ್ಯಕ್ತಿಗಳ ಜೀವನಚರಿತ್ರೆಗಳನ್ನು ಓದುವುದು ಅಗತ್ಯವಾದುದು ಎಂಬುದು ಡಿವಿಜಿಯವರ ಅಭಿಪ್ರಾಯವಾಗಿತ್ತು. ದೇಶದಲ್ಲಿ ಸಾರ್ವಜನಿಕ ಜೀವನ-ವನ್ನು ಎಷ್ಟು ಶುದ್ಧಗೊಳಿಸುತ್ತೇವೋ ಅಷ್ಟರಮಟ್ಟಿಗೆ ದೇಶದ ಆರ್ಥಿಕ ಉನ್ನತಿಯೂ ಸಾಮಾನ್ಯರ ಬದುಕೂ ಉತ್ತಮಗೊಳ್ಳುತ್ತದೆಂಬುದು ಅವರ ದೃಢವಾದ ನಂಬಿಕೆ. ವಿದ್ಯಾರ್ಥಿದೆಸೆಯಲ್ಲಿರುವ ಮನಸ್ಸನ್ನು ಸರಿಯಾದ ದಾರಿಗೆ ತಿರುಗಿಸಬೇಕೆಂಬ ಉದ್ದೇಶದಿಂದ ಅವರು ಮೂವರು ಮಹನೀಯರ ಜೀವನಚರಿತ್ರೆಗಳನ್ನು ರಚಿಸಿದರು. ಹೀಗೆ ಹೇಳುವ ಲೇಖಕರೂ ಜೀವನಚರಿತ್ರೆಯನ್ನು ರಚಿಸಬೇಕಾದರೆ ಅವರು ಆರಿಸಿಕೊಳ್ಳುವ ವ್ಯಕ್ತಿಯ ಬಗ್ಗೆ ಗಾಢವಾದ ಪರಿಚಯವಿರಬೇಕು. ಸಾಕಷ್ಟು ವಿಷಯದ ವೈಪುಲ್ಯವಿರಬೇಕು. ವ್ಯಕ್ತಿಯ ಸಾನ್ನಿಧ್ಯವು ಹೆಚ್ಚು ಕಾಲ ದೊರಕಿದ್ದರಂತೂ ಬರಹಕ್ಕೆ ಹೆಚ್ಚು ಬೆಲೆ ಬರುತ್ತದೆ. ಗ್ರಂಥದ ಬೆಲೆ ಹೆಚ್ಚುತ್ತದೆ.' ಈ ಮಾತು ಪೂರ್ಣ ಅನ್ವಯವಾಗುವುದು ವೆಂಕಟಸುಬ್ಬಯ್ಯನವರಿಗೆ; ಅವರ ಈ ವ್ಯಕ್ತಿಚಿತ್ರಣಗ್ರಂಥಕ್ಕೆ.

'ದಿವಾನ್ ರಂಗಾಚಾರ್ಲು' – ಗ್ರಂಥ 1911ರಲ್ಲಿ ಪ್ರಕಟವಾದ ಜೀವನಚರಿತ್ರೆ. ಅದು ಪಠ್ಯಪುಸ್ತಕವಾಗಿ ಅನೇಕ ಮುದ್ರಣ ಕಂಡಿತ್ತು. ಡಿವಿಜಿಯವರು ಈ ಗ್ರಂಥ ರಚನೆಗೆ ಪಟ್ಟ ಪ್ರಯತ್ನವನ್ನು ಲೇಖಕರು ಹೀಗೆ ಹೇಳುತ್ತಾರೆ. 'ಡಿವಿಜಿ ಹುಟ್ಟುವ ವೇಳೆಗೆ ರಂಗಾಚಾರ್ಲು ನಿಧನಹೊಂದಿ ನಾಕು ವರ್ಷಗಳಾಗಿದ್ದುವು. ಆದುದರಿಂದ ಡಿವಿಜಿ ಅವರನ್ನು ಕಂಡಿರಲಿಲ್ಲ. ಬೆಂಗಳೂರಿಗೆ ಬಂದಮೇಲೆ, ಸಾರ್ವಜನಿಕ ಜೀವನ-ದಲ್ಲಿ ಸೇರುವ ವೇಳೆಗೆ ದಿವಾನ್ ರಂಗಾಚಾರ್ಲು ಅವರ ದೇಶೋದ್ಧಾರದ ಕಾರ್ಯ-ಗಳನ್ನು ಕೇಳಿ, ಅವರ ಬಗೆಗೆ ಓದಿ, ಅವರಲ್ಲಿ ಗೌರವ ಹುಟ್ಟಿಬಂದ ಮೇಲೆ ಬರೆದ ಗ್ರಂಥವಿದು.' ಈ ಗ್ರಂಥರಚನೆಗೆ ಡಿವಿಜಿ ಪಟ್ಟ ಪರಿಶ್ರಮವನ್ನು ಲೇಖಕರು ಚಿತ್ರಿಸಿದ್ದಾರೆ.

'ಗೋಪಾಲಕೃಷ್ಣ ಗೋಖಲೆ', ಡಿವಿಜಿಯವರ ಜೀವನಚರಿತ್ರೆಗಳಲ್ಲೇ ಮುಖ್ಯವಾದುದು. ಈ ಪುಸ್ತಕದ ಮುನ್ನುಡಿಯಲ್ಲಿ 'ಎಲ್ಲರಿಗೂ ಒಳ್ಳೆಯದೆಂದು ನಾನು ನಂಬಿಕೊಂಡಿರುವ ಕೆಲವು ನಂಬಿಕೆಗಳನ್ನೂ ಗುರಿಗಳನ್ನೂ ದಾರಿಗಳನ್ನೂ ನಿರೂಪಿಸುವುದಕ್ಕೆಂದು ಬರೆದ ಪುಸ್ತಕ ಇದು' ಎನ್ನುತ್ತಾರೆ ಡಿವಿಜಿಯವರು. ಗೋಖಲೆಯವರ ವಿಶಿಷ್ಟವ್ಯಕ್ತಿತ್ವದ ಚಿತ್ರಣ-ವನ್ನು ಈ ಗ್ರಂಥದಲ್ಲಿ ಕಾಣಬಹುದು. ವೆಂಕಟಸುಬ್ಬಯ್ಯನವರು ಡಿವಿಜಿಯವರು

ಕೊನೆಯಲ್ಲಿ ಹೇಳಿರುವ ಮಾತನ್ನು ಇಲ್ಲಿ ಕಾಣಿಸಿದ್ದಾರೆ. 'ಗಾಂಧಿಯವರ ಅವತಾರ ಕಾರ್ಯಸಮಾಪ್ತವಾಯಿತು. ಗೋಖಲೆಯವರ ಅವತಾರಕಾರ್ಯ ಉಳಿದಿದೆ. ಗಾಂಧಿಯವರದು ಒಂದು ಯುಗಕ್ಕೆ ಒಂದು ಸಾರಿ ಒದಗಿಸಿಕೊಳ್ಳುವ ಕಾರ್ಯ - ಕ್ಷಣಿಕ್ಕಾಲದ ಕಾರ್ಯ. ಗೋಖಲೆಯವರದು ನಿರಂತರವೂ ನಡೆಯಬೇಕಾದ ಕಾರ್ಯ–ನಿತ್ಯಜೀವನಕಾರ್ಯ. ಗಾಂಧಿಯವರು ನಮಗೆ ಸಂಪಾದಿಸಿಕೊಟ್ಟ ಮಹಾ-ವರ ಸಾರ್ಥಕವಾಗಬೇಕಾದರೆ ಗೋಖಲೆಯವರು ತೋರಿಸಿದ ವ್ರತದೀಕ್ಷೆಯನ್ನು ತೊಟ್ಟವರು ದೇಶದಲ್ಲಿ ಸಾವಿರಾರು ಮಂದಿಯಾಗಬೇಕು. ನಮ್ಮ ದೇಶಪ್ರೀತಿ ಸತ್ಯ-ವಾದದ್ದಾದರೆ, ನಮ್ಮ ಸ್ವರಾಜ್ಯ ಉಳಿದು ಸಫಲವಾಗಬೇಕಾದರೆ, ನಮ್ಮ ಬುದ್ಧಿಗಳನ್ನು ನಾವು ಯಾರಿಗೆ ಅಡವು ಹಾಕದೆ ನಮ್ಮ ಅಂತಃಸಾಕ್ಷಿಗೆ ಯಾವ ಬಣ್ಣದ ಮುಸುಕನ್ನು ಕವಿಸದೆ, ನಿರ್ಮಲವೂ ಸ್ವತಂತ್ರವೂ ಆದ ಸತ್ಯಸಹಿತದೃಷ್ಟಿಯಿಂದ ಸಾರ್ವಜನಿಕ ವಿಚಾರಗಳನ್ನು ನೋಡಿ ನಡೆಸಬೇಕು. ಇದು ಎಲ್ಲರಿಗೂ ಎಲ್ಲ ಕಾಲಕ್ಕೂ ಇರುವ ರಾಷ್ಟ್ರಧರ್ಮ. ಆ ಶ್ರೇಷ್ಠಧರ್ಮಕ್ಕೆ ಆದರ್ಶಪ್ರಾಯವಾದುದುದು ಗೋಖಲೆಯವರ ಜೀವನ.' ಕೊನೆಯಲ್ಲಿ ವೆಂಕಟಸುಬ್ಬಯ್ಯನವರು 'ಕನ್ನಡ ಸಾಹಿತ್ಯದಲ್ಲಿ ಜೀವನ-ಚರಿತ್ರೆಗಳಿಗೆ ಮಾರ್ಗಹಾಕಿಕೊಟ್ಟವರು ಡಿವಿಜಿಯವರು. ಅವರು ಬರೆದ ಜೀವನ-ಚರಿತ್ರೆಗಳಲ್ಲಿ ಗೋಪಾಲಕೃಷ್ಣ ಗೋಖಲೆ ಇಂದಿಗೂ ಎಲ್ಲರಿಗೂ ಜೀವನಚರಿತ್ರೆಯ ರಚನೆಯಲ್ಲಿ ಅನುಸರಿಸಬಹುದಾದ ಮಾರ್ಗವನ್ನು ತೋರಿಸುವ ಗ್ರಂಥವಾಗಿ ಪ್ರಕಾಶಿಸುತ್ತದೆ' ಎನ್ನುವ ಖಚಿತಾಭಿಪ್ರಾಯವನ್ನು ತಿಳಿಸುತ್ತಾರೆ.

### ವಿದ್ಯಾರಣ್ಯರ ಬಗೆಗೆ ಸಂಶೋಧನೆ

'ವಿದ್ಯಾರಣ್ಯರು ಮತ್ತು ಅವರ ಕಾಲ' (1920) 'ವಿದ್ಯಾರಣ್ಯರ ಸಮಕಾಲೀನರು' (1933) ಮತ್ತು 'ವಿದ್ಯಾರಣ್ಯವಿಜಯ' (1944) ಎಂಬ ಮೂರು ಸಂಶೋಧನ ಗ್ರಂಥಗಳ ಬಗೆಗೆ ಮಾಹಿತಿ ನೀಡಿದ್ದಾರೆ ವೆಂಕಟಸುಬ್ಬಯ್ಯನವರು. "ಮುಖ್ಯವಾಗಿ ಡಿವಿಜಿಯವರು ವಿದ್ಯಾರಣ್ಯರು ಮತ್ತು ವಿಜಯನಗರ ಸಾಮ್ರಾಜ್ಯ- ಈ ವಿಚಾರವಲ್ಲಿ ತುಂಬ ಗಾಢವಾದ ಸಂಶೋಧನೆಗಳನ್ನು ಮಾಡಿದ್ದಾರೆ. ಮಾಧವ-ವಿದ್ಯಾರಣ್ಯ ಇಬ್ಬರೂ ಒಬ್ಬರೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಡಿವಿಜಿಯವರ ಲೇಖನದಿಂದ ಆದ ಬಹುಮುಖ್ಯವಾದ ಪ್ರಯೋಜನವೆಂದರೆ - ಅಲ್ಲಿಯವರೆಗೆ ಇದ್ದ ವಾದ-ವಿವಾದಗಳೆಲ್ಲ ತಟಸ್ಥವಾದುದು. ಅವರ ಲೇಖನಗಳ ಕೊನೆಯಲ್ಲಿ ಬರುವ ಸ್ವಲ್ಪಭಾಗವೂ ಮನನಯೋಗ್ಯವಾಗಿದೆ. ಓದುಗರ ಗಮನಕ್ಕೆ ವಿಶೇಷವಾಗಿ ತರುವ ಉದ್ದೇಶದಿಂದ ಇಲ್ಲಿ ಅದನ್ನು ಉಲ್ಲೇಖಿಸಲಾಗಿದೆ. 'ಪ್ರಕೃತ 600 ವರ್ಷಗಳ ಹಿಂದೆ ಯಾವ ಮಹಾನುಭಾವರ ಬ್ರಾಹ್ಮಣ್ಯವು ದೀನವೃತ್ತಿಯಾಗಿರದೆ ಧೀರವೃತ್ತಿಯಾಗಿ ವೇದಶಾಸ್ತ್ರಭ್ಯುದಯಹೇತುವಾಯಿತೋ, ಯಾರ ವೈರಾಗ್ಯವೂ ತಾಟಸ್ಥ್ಯದಲ್ಲಿ ಪರ್ಯವಸಾನವಾಗದೆ ಪೌರುಷಪ್ರಕಾಶದಲ್ಲಿ ಫಲಿಸಿತೋ ಆ ವಿದ್ಯಾರಣ್ಯರ ಚರಿತ್ರೆಯು ಈ ವಿಷಮಕಾಲದಲ್ಲಿ ನಮಗೆ ಕಗ್ಗತ್ತಲೆಯಲ್ಲಿ ಕಾಣಬಂದ ಪಂಜಿನಂತೆಯೂ, ಮರುಭೂಮಿಯಲ್ಲಿ ಸಿಕ್ಕಿದ ಸರೋವರದಂತೆಯೂ ಇದೆ. ಆ ಸರಸ್ಸಿನಲ್ಲಿ ನಮ್ಮ

ಅಂತಃಕರಣವನ್ನು ತೊಳೆಯೋಣ. ಈ ದೀವಿಗೆಯ ಬೆಳಕಿನಲ್ಲಿ ಜೀವನಯಾತ್ರೆಯನ್ನು ನಡೆಸೋಣ.' ವ್ಯಕ್ತಿಚಿತ್ರಣವನ್ನು ಮಾಡಹೊರಟ ವೆಂಕಟಸುಬ್ಬಯ್ಯನವರು ಅಗತ್ಯ-ವಾದುದನ್ನು ಹೆಕ್ಕಿ ತೋರುವ ಬಗೆಯಿದು.

'ವಿದ್ಯಾರಣ್ಯವಿಜಯ' ಒಂದು ನಾಟಕ. ವೆಂಕಟಸುಬ್ಬಯ್ಯನವರು 'ಇದು ನಾಟ್ಯಶಾಸ್ತ್ರದ ದೃಷ್ಟಿಯಿಂದ ಒಂದು ನಾಟಕವೆನಿಸಿಕೊಳ್ಳಲಾರದು. ಆದರೂ ಒಳ್ಳೆಯ ಓದುನಾಟಕ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಡಿವಿಜಿಯವರು ಈ ನಾಟಕಕ್ಕೆ ಬರೆದಿರುವ ಮುನ್ನುಡಿಯಲ್ಲಿ 'ಇದು ಸಾಮಾನ್ಯನಾಟಕಗಳಂತೆ ಒಬ್ಬ ವ್ಯಕ್ತಿಯ ಕಥೆಯಲ್ಲ. ಒಬ್ಬ ರಾಜ ಅಥವಾ ರಾಣಿಯ ವ್ಯಥೆ, ವಿರಹ, ಜಯ, ಪರಿಣಯ ಮೊದಲಾದ ವೈಯಕ್ತಿಕಸಂಗತಿಗಳನ್ನು ಬಣ್ಣಿಸುವ ನಾಟಕವು ಏಕಮುಖ-ವಾಗಿ ಹರಿಯುವ ನೀರ್ಗಾಲುವೆಯಂತೆ ಇರುವುದು. ಈ ಪ್ರಬಂಧವು ಒಂದು ರಾಜ್ಯದ ಕಥೆ – ಎಂದರೆ ಅಸಂಖ್ಯಾತರಾದ ವ್ಯಕ್ತಿಗಳನ್ನು ಒಳಗೊಂಡ ಒಂದು ಜನಸಮುದಾಯದ ಹಾನಿವೃದ್ಧಿಗಳ ಕಥೆ. ಇದರ ಮುಖ್ಯಪಾತ್ರಗಳು ಅನೇಕ ಮಂದಿ. ಇದು ಗಂಗಾದಿ ಮಹಾನದಿಗಳಂತೆ ಅನೇಕಶಾಖೆಗಳಾಗಿ ಒಡೆದು ಬಹುಮುಖವಾಗಿ ಪ್ರವೇಶಿಸಿತಕ್ಕದ್ದು. ಆದುದರಿಂದ ಸಾಮಾನ್ಯನಾಟಕಗಳಲ್ಲಿ ಕಾಣಬರುವಂತಹ ಸಂದರ್ಭೈಕ್ಯವು ಇದರಲ್ಲಿ ಕಾಣಬರದೆ ಇರಬಹುದು. ಆದರೂ ಇದರಲ್ಲಿ ರಸೈಕ್ಯ-ವಾವುದೂ ಇಲ್ಲದೇ ಇಲ್ಲವೆಂದು ಲೇಖಕನು ಎಣಿಸಿಕೊಂಡಿರುವನು.' ಎಂದ ಮಾತುಗಳು ಇಲ್ಲಿ ಗಮನಾರ್ಹವಾದವುಗಳು. 'ಇದು ಬಹುಪ್ರಭಾವಯುತವಾದ ಒಂದು ಓದುನಾಟಕವೆಂಬ ಬಗ್ಗೆ ಎರಡು ಅಭಿಪ್ರಾಯವಿರಲಾರದು' – ಇದು ವೆಂಕಟಸುಬ್ಬಯ್ಯನವರ ಮಾತು.

ಡಿವಿಜಿಯವರು ಪ್ರತಿಭಾಸಂಪನ್ನ ಅಭಿಜಾತಕವಿ. 'ವಸಂತ ಕುಸುಮಾಂಜಲಿ' 1922ರಲ್ಲಿ ಪ್ರಕಟವಾದ ಮೊದಲ ಕವನಸಂಕಲನ. ಆದರೂ ಡಿವಿಜಿಯವರು ವಿದ್ಯಾರ್ಥಿದೆಸೆಯಲ್ಲೇ ಪ್ರೌಢಬಂಧದಲ್ಲಿ ಕಾವ್ಯ ಬರೆಯತೊಡಗಿದವರು. ವಸಂತ ಕುಸುಮಾಂಜಲಿಯಲ್ಲಿ ಅದರ ಬೆಳವಣಿಗೆಯನ್ನು ವೆಂಕಟಸುಬ್ಬಯ್ಯ ಗುರುತಿಸಿದ್ದಾರೆ. ಡಿವಿಜಿಯವರು ಕಲ್ಪನಾಲೋಕವಿಹಾರಿಯಾದ ಕವಿಯಲ್ಲ. ಅವರದು ಜನಸಾಮಾನ್ಯರ ನಡುವೆ ಸಾಗಿದ ದಾರಿ. ಈ ದೇಶದ ಬಗೆಗೆ ಅವರ ಉತ್ಕಟಪ್ರೀತಿ ಪ್ರಕಟವಾದ ಬಗೆಯಿದು:

'ಎನ್ನಯ ಮಾನಸ ಭವನದೊ
ಳುನ್ನತ ಪದವಿಯಲ್ಲಿ ದೇಶಮಾತೆಯನಿರಿಸು
ತ್ತೆನ್ನಯ ಸರ್ವಸ್ವವನಾ
ಸನ್ನುತ ದೇವತೆಯ ಪಾದಕರ್ಪಿಸಿ ಮಣಿವೆಂ'

ಗೋಖಲೆಯವರ ಸಿದ್ಧಾಂತಗಳಲ್ಲಿ ಆಸಕ್ತಿ ಹೊಂದಿದ್ದ ಡಿವಿಜಿಯವರ ರಾಷ್ಟ್ರಪ್ರೇಮಕ್ಕೆ ಸಾಕ್ಷ್ಯವೀ ಕವಿತೆ. ದೇಶಭಕ್ತರ, ಸಮಾಜಸುಧಾರಕರ, ಆಡಳಿತಗಾರರ,

ದಾಯಿಗಳ ಕುರಿತಾದ ಬಿಡಿಕವಿತೆಗಳಿವೆ. ತಿಲಕ್, ಗೋಖಲೆ, ಟಾಗೋರ್, ವಿಶ್ವೇಶ್ವರಯ್ಯ, ರಾಜಾ ರಾಮಮೋಹನರಾಯ್, ಗಾಂಧಿ ಮುಂತಾದವರ ಕುರಿತ ಕವನಗಳಿವೆ.

'ನಿವೇದನ' ಡಿವಿಜಿಯವರ ಎರಡನೆಯ ಕವನಸಂಕಲನ. ವೆಂಕಟಸುಬ್ಬಯ್ಯ-ನವರು 'ಪ್ರಕೃತಿಮಾತ್ರವನ್ನು ಸ್ತುತಿಸುತಿರ್ಪುದು' – 'ಜನುಮ ಭೂಮಿಯ ಮಮತೆಯಿಂದ ಬಿಡಿಸುತಿರ್ಪುದು' ಮತ್ತು 'ನೋವಿನ ನಿರೂಪಣೆ' – ಹೀಗೆ ಮೂರು ಸ್ತರಗಳನ್ನು ಈ ಸಂಗ್ರಹದಲ್ಲಿ ಗುರುತಿಸಿದ್ದಾರೆ. ಹೀಗೆ ಗುರುತಿಸಿ ತತ್ಸಂಬಂಧಿಯಾದ ಕವನಗಳ ಸಾಲುಗಳನ್ನು ನೆನಪಿಸುತ್ತಾರೆ. ಪ್ರಕೃತಿಸೌಂದರ್ಯದ ನೆಲೆವೀಡಾದ ಕೊಡಗು, ಜೋಗದ ಜಲಪಾತ, ಶಿವನಸಮುದ್ರ ಎಂಬ ಸ್ಥಳಗಳ ವರ್ಣನೆಯನ್ನು ಡಿವಿಜಿ ತೆರೆದಿಟ್ಟ ಬಗೆಯತ್ತ ನಮ್ಮ ಗಮನಸೆಳೆಯುತ್ತಾರೆ. ಜತೆಯಲ್ಲೇ ಈ ಸಂಕಲನದಲ್ಲಿ 'ಬೇಲೂರ ಶಿಲಾಬಾಲಿಕೆಯರು' ಎಂಬ ಬಹುಕಾಲ ಸೆರೆಹಿಡಿದಿಡುವ ಕವನಗಳನ್ನು ಉದಾಹರಿಸುತ್ತಾರೆ. ಈ ಮೂಲಕ ಡಿವಿಜಿಯವರ ವರ್ಣನಾವೈಖರಿ-ಯನ್ನೂ ಅವರಿಗಿರುವ ಪ್ರಕೃತಿಪ್ರೇಮವನ್ನೂ ನಮ್ಮ ಮುಂದಿಡುತ್ತಾರೆ. ಕೀಟ್ಸ್ ಕವಿಯ ಪ್ರಭಾವ ಡಿವಿಜಿಯವರ ಮೇಲಾದುದನ್ನು ಗುರುತಿಸುತ್ತಾರೆ. 'ವನಸುಮ' ಎಂಬುದು ಬಹುಜನಪ್ರಿಯವಾದ ಕವನ.

'ವನಸುಮದೊಲೆನ್ನ ಜೀ
ವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ, ಹೇ ದೇವ'

– ಎಂಬ ಹಾಡನ್ನು ನೆನಪಿಸುತ್ತಾರೆ.

**ಭಾರತಭೂವಂದನಂ**

1947ರಲ್ಲಿ ಭಾರತವು ಸ್ವತಂತ್ರವಾದಾಗ ಡಿವಿಜಿಯವರು 'ಸ್ವತಂತ್ರ ಭಾರತ ಅಭಿನಂದನಸ್ತವ' ಎಂಬ ಹೆಸರಿನ ಇಪ್ಪತ್ತನಾಲ್ಕು ವೃತ್ತಗಳ ಕಾವ್ಯ ರಚಿಸಿದರು. ಮತ್ತೆ ಅದು 1978ರಲ್ಲಿ 'ಭಾರತಭೂವಂದನಂ' ಎಂಬ ಹೆಸರಿನಿಂದ ಪ್ರಕಟವಾಯಿತು. ಈ ಕುರಿತು ವೆಂಕಟಸುಬ್ಬಯ್ಯನವರು 'ಇದು ಭಾರತ ಭೂಮಿಗೆ ಸಲ್ಲಿಸುವ ವಂದನೆಯ ಹೆಸರಿನಲ್ಲಿ ಪ್ರಕಟವಾಗಿದ್ದರೂ ಇಲ್ಲಿರುವ ವಸ್ತು ರಾಷ್ಟ್ರಕನ ಧರ್ಮವನ್ನು ನಿರೂಪಿಸುವುದೇ ಆಗಿದೆ. ಸಾರ್ವಜನಿಕರೂ ಆಡಳಿತಗಾರರೂ ಪ್ರಜಾಪ್ರತಿನಿಧಿಗಳೂ ಅವಶ್ಯವಾಗಿ ಅರಿತಿರಬೇಕಾದ ಕರ್ತವ್ಯಗಳನ್ನು ನಿರ್ಧಾರವಾಗಿ ತಿಳಿಸುವ ಇದು ಪ್ರಜಾಪ್ರತಿನಿಧಿಗಳ ಕೈಪಿಡಿಯೇ ಸರಿ. ಚುನಾವಣೆಗಳಲ್ಲಿ ಗೆದ್ದು ಬಂದು ಶಾಸನಸಭೆಗಳ ಸದಸ್ಯರೂ ಮಂತ್ರಿಗಳೂ ಆಗಿ, ದೇಶಸೇವೆಯಲ್ಲಿ ಆಸಕ್ತಿ ತೋರಿಸುವವರು ಈ ಕವನದಲ್ಲಿರುವ ತತ್ತ್ವಗಳನ್ನು ಚೆನ್ನಾಗಿ ಅರಿತು ಪ್ರಯೋಗದಲ್ಲಿ ಇಟ್ಟುಕೊಂಡರೆ ದೇಶಕ್ಕೆ ಎಷ್ಟೋ ಮೇಲಾದೀತು.' ಎಂದು ಕೃತಿಯ ಸಂದೇಶವನ್ನು ಸಂಗ್ರಹವಾಗಿ ಹೇಳಿದ್ದಾರೆ. ಅಲ್ಲದೆ ವೃತ್ತಗಳ ಭಾವಾನುವಾದವನ್ನು ಕೊಟ್ಟಿದ್ದಾರೆ.

'ಶೃಂಗಾರಮಂಗಳಂ' ಡಿವಿಜಿಯವರ ಇನ್ನೊಂದು ಕವನಸಂಕಲನ. 'ಶೃಂಗಾರಮಂಗಳಂ ಎಂಬ ಕವನಗುಚ್ಛ ಅತ್ಯಂತ ಸ್ವಾರಸ್ಯವಾದ ಕಿರುಗ್ರಂಥ. ಸತ್ಯ-ಸೌಂದರ್ಯ ಇವೆರಡರ ಸ್ವರೂಪವನ್ನು ಕುರಿತು ಡಿವಿಜಿಯವರು ದೀರ್ಘಕಾಲ ಮಾಡಿದ ಚಿಂತನಫಲ – ಈ ಕೃತಿ. ಶಿಲಾಬಾಲಿಕೆಯರನ್ನು ಕುರಿತ ಗ್ರಂಥದಲ್ಲಿ ಅವರು ಕೀಟ್ಸ್ ಕವಿಯ ಸತ್ಯ-ಸೌಂದರ್ಯ ಮೀಮಾಂಸೆಯನ್ನು ಕುರಿತು ಕೆಲವು ಸಾಲುಗಳನ್ನು ಅನುವಾದ ಮಾಡಿ, ಆ ಕವಿಗೆ ತಮ್ಮ ಗೌರವವನ್ನು ಸೂಚಿಸಿದ್ದರು. ಆ ಬಳಿಕವೂ ಅವರು ಆ ವಿಚಾರವಾಗಿ ಬಹುಕಾಲ ಪಾಶ್ಚಾತ್ಯ ಪೌರಸ್ತ್ಯ ಆಧಾರಗಳ ಬೆಳಕಿನಲ್ಲಿ ತಮ್ಮದೇ ಆದ ಒಂದು ನಿಲುವನ್ನು ಕಂಡುಕೊಂಡರು. ಆ ನಿಲುವಿನ ನಿರೂಪಣೆ 'ಶೃಂಗಾರಮಂಗಳಂ' ಗ್ರಂಥದಲ್ಲಿ ಸ್ವಾರಸ್ಯವಾಗಿ ಒಡಮೂಡಿದೆ' ಎಂದು ವೆಂಕಟಸುಬ್ಬಯ್ಯ ಗುರುತಿಸಿದ್ದಾರೆ. ಜತೆಯಲ್ಲೇ 'ಶೃಂಗಾರವೆನ್ನುವುದು ಅಖಿಲಸೃಷ್ಟಿಯನ್ನು ಒಂದುಗೂಡಿಸುವ ಶಕ್ತಿಯುಳ್ಳದ್ದು, ಜೀವಿಗಳ ಅಂತರಂಗದ 'ಅನಿಲ'ವನ್ನು ಶಮನಗೊಳಿಸುವ ಚೈತನ್ಯವುಳ್ಳದ್ದು. ಪುರುಷರ ಸ್ತ್ರೀಯರ ಪರಸ್ಪರ ಸಂಸರ್ಗದಿಂದ ಇಬ್ಬರ ಜೀವನವನ್ನೂ ನಿಸ್ಸಂಗಕ್ಕೆ ಅರ್ಹರನ್ನಾಗಿ ಮಾಡುತ್ತದೆ. ಹೀಗೆ ಪೀಠಿಕೆಯನ್ನು ಹಾಕಿ ಮಿಕ್ಕ 'ಸಾಕ್ಷ್ಯಪಂಚಕ'ವೆಂಬ ಐದು ಭಾಗಗಳಲ್ಲಿ ಮಾನವಜೀವಿತದಲ್ಲಿ ಕಾಮ ಮತ್ತು ಮೃತ್ಯು ಇವುಗಳ ಪ್ರಭಾವವನ್ನು ಕುರಿತು ಅತ್ಯಂತತಾರ್ಕಿಕವಾದ ಸಿದ್ಧಾಂತವೊಂದನ್ನು ಸ್ಥಾಪಿಸಿದ್ದಾರೆ ಡಿವಿಜಿ' ಎಂದು ಗುರುತಿಸಿದ್ದಾರೆ. ಕೊನೆಯಲ್ಲಿ 'ಡಿವಿಜಿಯವರ ಶೈಲಿ ಹಳಗನ್ನಡದ ಕಡೆಗೆ ವಾಲುತ್ತದೆ. ಪ್ರಾಚೀನ ಕನ್ನಡ ಕವಿಗಳ ವಾಗ್ಧೋರಣೆಯೇ ಈ ಶೈಲಿಯಲ್ಲಿಯೂ ಕಾಣಬರುತ್ತದೆ. ಆದರೂ ಆಧುನಿಕರಿಗೂ ಬೇಕಾದ ಆಳವಾದ ಚಿಂತನೆಗಳಿಂದ ಕೂಡಿರುವ ಈ ಪುಟ್ಟಗ್ರಂಥ ಹೊಸಗನ್ನಡ ಕಾವ್ಯರಾಶಿಗಳ ನಡುವೆ ಒಂದು ಪ್ರಮುಖರತ್ನದಂತೆ ಹೊಳೆಯುತ್ತಿದೆ' ಎಂದು ಕೃತಿಯ ಹೆಚ್ಚುಗಾರಿಕೆಯನ್ನು ಗುರುತಿಸಿದ್ದಾರೆ.

'ಕೇತಕೀವನ' 1973ರಲ್ಲಿ ಪ್ರಕಟವಾದ ಕವನಸಂಕಲನ. ಆದರೆ ಇಲ್ಲಿಯ ಕವನಗಳು ಡಿವಿಜಿಯವರ ಭಾವನೆಯಲ್ಲಿ ಎಳವೆಯಲ್ಲೇ ಹಾದುಹೋದವುಗಳು. ಕೈಗೆ ಸಿಕ್ಕಿದ ಚೀಟಿಗಳಲ್ಲಿ ಗುರುತುಹಾಕಿಕೊಂಡವುಗಳು. ವೆಂಕಟಸುಬ್ಬಯ್ಯನವರು 'ಹೀಗೆ ಸಂಕಲಿತವಾಗಿರುವ ಈ ಕವನಸಂಕಲನದಲ್ಲಿ ಯುವಮನಸ್ಸಿನಲ್ಲಿ ಹೊಯ್ದಾಡುವ ಅನೇಕಮುಖದ ಆಸೆ ಆಕಾಂಕ್ಷೆಗಳೂ ರೋಷನಿರಾಶೆಗಳೂ ಧ್ಯೇಯಧೋರಣೆಗಳೂ ಬದುಕು ಸಾವಿನ ಬಗ್ಗೆ ಆಲೋಚನೆಗಳೂ ಪರತತ್ತ್ವದ ಬಗ್ಗೆ ನಂಬುಗೆ ಸಂದೇಹಗಳೂ ಕಾವ್ಯವಸ್ತುವಾಗಿವೆ. ಕೆಲವು ವ್ಯಕ್ತಿಪ್ರಶಂಸೆ, ಕೆಲವು ಇಂಗ್ಲಿಷ್ ಕವನಗಳ ಅನುವಾದಗಳು – ಹೀಗೆ ವೈವಿಧ್ಯಮಯವಾಗಿರುವ ಈ ಕವನರಾಶಿಯಲ್ಲಿ – ಈ ಒಂದೆ ಪ್ರಕಟವಾಗಿರುವ ಅವರ ಶ್ರೇಷ್ಠಕವನಗಳ ಸಮೀಪಕ್ಕೆ ಬರುವ ಗುಣಗಳ ಕವನಗಳು ಕಡಮೆ. ಆದರೆ ಯುವಕವಿಯ ಆಲೋಚನೆಗಳು ಯಾವ ಯಾವ ಮಾರ್ಗಗಳಲ್ಲಿ ಹರಿಯುತ್ತಿದ್ದುವು ಎಂಬ ಕುತೂಹಲಕ್ಕೆ ಸಾಕಷ್ಟು ಗ್ರಾಸ ಇಲ್ಲಿ ದೊರಕುತ್ತದೆ.

ನಡೆಯುವ ಮಸಣಂ ನೋಡಾ
ನಡಗಿಹುವೆನ್ನೆದೆಯೊಳೆನಿತೊ ಸಂಕಲ್ಪಶವಂ
ಸುಡುತಿಹುದಿದೊ ಚಿಂತಾಚಿತಿ
ಗುಡುಗುಡಿಸುತಲಲೆವುವತ್ತಲಾಶಾ ಪ್ರೇತಂ

'ನಾನು ನಡೆಯುತ್ತಿರುವ ಹೆಣವಾಗಿದ್ದೇವೆ. ನಾನು ಮಾಡಿಕೊಂಡಿದ್ದ ಅನೇಕ ಸಂಕಲ್ಪಗಳೆಲ್ಲವೂ ಹೆಣವಾಗಿ ನನ್ನ ಎದೆಯಲ್ಲಿ ಅಡಗಿವೆ. ಚಿಂತೆಯೆಂಬ ಚಿತಾಗ್ನಿ ಸುಡುತ್ತಿದೆ. ಅದರೆದುರು ಆಶೆಗಳೆಲ್ಲಾ ಪ್ರೇತಗಳಾಗಿ ಎತ್ತೆತ್ತಲೋ ಅಲೆದಾಡುತ್ತಿವೆ.'

ಡಿವಿಜಿಯವರ ಜೀವಿತದಲ್ಲಿ ನಡೆದ ಒಂದು ದುರಂತ ಚಿತ್ರಣವೇ ಈ ಕವನದ ಸಾಲುಗಳು. ತುಂಬ ತರುಣವಯಸ್ಸಿನಲ್ಲಿಯೇ ಅವರು ತಮ್ಮ ಪತ್ನಿಯನ್ನು ಕಳೆದುಕೊಂಡರು. ಆ ಸಮಯದಲ್ಲಿ ಅವರ ಅನೇಕ ಆಶಾಸೌಧಗಳು ಉರುಳಿ ಬಿದ್ದವು. ವೆಂಕಟಸುಬ್ಬಯ್ಯ 'ಇಂಥ ಮಾನಸ ಭೃಗುಪತನದಿಂದ ಡಿವಿಜಿ ಮತ್ತೆದ್ದು ಬಂದದ್ದು ನಮ್ಮ ನಾಡಿನ ಅಪೂರ್ವಪುಣ್ಯಗಳಲ್ಲಿ ಒಂದೆಂದು ಧಾರಾಳವಾಗಿ ಹೇಳಬಹುದು' ಎನ್ನುತ್ತಾರೆ. ಈ ಮಾತು ಅತಿಶಯೋಕ್ತಿಯಲ್ಲ.

'ಅಂತಃಪುರಗೀತೆ ಮತ್ತು ಗೀತಶಾಕುಂತಲಮ್' ಎಂಬ ಡಿವಿಜಿಯವರ ಎರಡು ಕೃತಿಗಳನ್ನು ಜೊತೆಯಲ್ಲೇ ಲೇಖಕರು ವಿಚಾರಮಾಡಿದ್ದಾರೆ. "ಬೇಲೂರಿನ ಶಿಲ್ಪಕಲೆಯ ಬಗ್ಗೆ ಡಿವಿಜಿಯವರಿಗೆ ಎಲ್ಲಿಲ್ಲದ ವ್ಯಾಮೋಹ. ಆ ಶಿಲ್ಪಗಳ ಹಿಂದೆ ಈಗ ಕಾಣದಾಗಿರುವ ಶಿಲ್ಪಚಾತುರ್ಯ, ಅವುಗಳಲ್ಲಿ ಆ ಕಲೆಗಾರರು ಹುದುಗಿಸಿರುವ ಭಾವವಿಲಾಸ ಇವುಗಳನ್ನು ಎಷ್ಟು ವರ್ಣಿಸಿದರೂ ಅವರ ಮನಸ್ಸಿಗೆ ತೃಪ್ತಿಯಿಲ್ಲ. ಆದುದರಿಂದಲೇ ಸೌಂದರ್ಯಚಿತ್ರಣದಲ್ಲಿ, ಭಾವಸೌಂದರ್ಯನಿರೂಪಣೆಯಲ್ಲಿ, ಮಧುರ ಭಾವನೆಯಲ್ಲಿ ಪರಮಾತ್ಮದರ್ಶನನಿರೀಕ್ಷೆಯಲ್ಲಿ ಬಹುಸೊಗಸಾದ ಕಲಾಲೋಕವನ್ನೇ ಸೃಷ್ಟಿಸಿರುವ ಕಾವ್ಯವಾಗಿದೆ' ಎಂಬ ಮೆಚ್ಚುನುಡಿಯಾಡಿದ್ದಾರೆ. ಅಂತಃಪುರಗೀತೆಗಳನ್ನು ಕಂಡವರಿಗೆ ಈ ಮಾತು ಸಹಜವೆನಿಸುತ್ತದೆ.

'ಗೀತಶಾಕುಂತಲಮ್' ಎಂಬುದು ಕಾಳಿದಾಸನ ಪ್ರಸಿದ್ಧನಾಟಕದ ಕೆಲವು ಸುಂದರ ಸರಸಪದ್ಯಗಳನ್ನು ಆರಿಸಿ, ಅವುಗಳನ್ನೇ ಕನ್ನಡ ಹಾಡುಗಳನ್ನಾಗಿ ಮಾರ್ಪಡಿಸಿರುವ ಕಾವ್ಯ. ಇಲ್ಲಿ ಸುಮಾರು ೩೫ ಹಾಡುಗಳಿವೆ. ಈ ಕಾವ್ಯಕ್ಕೆ ಡಿವಿಜಿಯವರು ನೀಡಿರುವ ಪೀಠಿಕೆ ತುಂಬ ಸೊಗಸಾದ ಕಾಳಿದಾಸವಿಮರ್ಶೆ. ಹಾಡುಗಳಂತೂ ಕವಿಮನೋಧರ್ಮವನ್ನು ಅದರ ಪರಾಕಾಷ್ಠೆಗೆ ಒಯ್ಯುತ್ತವೆ.

ಕಾಳಿದಾಸನ ಕೃತಿಗಳನ್ನು ನಮ್ಮಲ್ಲಿ ಅನೇಕರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಸಾಲಿನಲ್ಲಿ ಡಿವಿಜಿಯವರದ್ದು ಕೆಲವೇ ಪದ್ಯಗಳ ಅನುವಾದರೂ ಅದು ಉಳಿದೆಲ್ಲವುಗಳಿಗಿಂತ ಮನೋಜ್ಞವಾದುದು.

ಎರಡು ಪರೀಕ್ಷಣಗ್ರಂಥಗಳು 'ಶ್ರೀರಾಮಪರೀಕ್ಷಣಂ' ಮತ್ತು 'ಶ್ರೀಕೃಷ್ಣಪರೀಕ್ಷಣಂ' ಡಿವಿಜಿಯವರ ಅಂತರಂಗಪೇಕ್ಷಣೆಗೆ ಒಳಗಾದ ಗ್ರಂಥಗಳು. ಬಹುಕಾಲದಿಂದ ಭಾರತೀಯ ಜನಮನದ ಮೇಲೆ ಪರಿಣಾಮ ಮಾಡಿದ, ಜತೆಯಲ್ಲೇ ಅವರಿಬ್ಬರ

ನಡವಳಿಕೆಯ ಬಗ್ಗೆ ಪ್ರಶ್ನೆ ಮಾಡಿದವುಗಳು. 'ಶ್ರೀರಾಮಪರೀಕ್ಷಣಂ' ಕೃತಿಯಲ್ಲಿ ಡಿವಿಜಿಯವರು –

'ಕ್ಷಮಿಸೆನ್ನ ಕವಿಪಿತಾಮಹ
ವಿಮೃಶಿಸನಾನಲ್ತು ನಿನ್ನ ಕೃತಿ ಚಾತುರಿಯಂ
ಅಮೃತಾನ್ನವನುಂಡಣುಗಂ
ಪ್ರಮುದಿತನಹನಲ್ತೆ ಕರಪುನರ್ಲೇಹನದಿಂ'

– ಎಂದು ಹೇಳುತ್ತಾರೆ. ಇಲ್ಲಿ ಡಿವಿಜಿಯವರು ತೋರಿದ ವಿನಯ ಅವರ ಹಿರಿಮೆಗೆ ಸಾಕ್ಷಿಯಾಗಿದೆ.

'ರಾಮಾಯಣವು ಶ್ರುತಿಸಾರ. ಜೀವನದಲ್ಲಿ ಭೋಗಾಸಕ್ತಿಯೋ, ವೈರಾಗ್ಯವೋ ಯಾವುದು ಸರಿಯಾದ ಉದ್ದೇಶ? ಪೌರುಷಪ್ರದರ್ಶನವೋ, ಸ್ಥಿರವಾದ ಕ್ಷಮಾ–ಗುಣವೋ? ಜೀವನದ ಘಟನೆಗಳ ಬಗ್ಗೆ ಉದಾಸೀನನಾಗಿರುವುದು ಹಿತವೋ, ಸ್ವೈರವೃತ್ತಿಯಿಂದ ನಡೆದುಕೊಳ್ಳಬೇಕೋ? ಬ್ರಹ್ಮಸೃಷ್ಟಿಯಲ್ಲಿ ಯಾವುದು ಸರಿಯಾದ ನಡವಳಿಕೆ? ಈ ಎಲ್ಲ ಪ್ರಶ್ನೆಗಳು ಒಂದಲ್ಲ ಒಂದು ಸಲ ಎಲ್ಲ ಚಿಂತನಪರರಿಗೂ ಎದುರುನಿಲ್ಲುತ್ತವೆ. ಅವುಗಳಿಗೆ ಉತ್ತರ ಹುಡುಕಬೇಕಾದುದು ಅವರಿಗೆ ಅಗತ್ಯವಾಗು–ತ್ತದೆ. ಈ ಪ್ರಶ್ನೆಗಳಿಗೆಲ್ಲ ರಾಮಾಯಣದಲ್ಲೇ ಉತ್ತರವಿದೆಯೆಂದು ಡಿವಿಜಿ ತಿಳಿದಿದ್ದರು' ಇದು ವೆಂಕಟಸುಬ್ಬಯ್ಯನವರು ಡಿವಿಜಿಯವರನ್ನು ಕಂಡುಕೊಂಡ ಬಗೆ.

'ಮಾನವನಾಗಿ ರಾಮನ ನಡವಳಿಕೆ ಸರಿಯೇ?' ಎಂಬ ಪ್ರಶ್ನೆಗೆ ರಾಮಾ–ಯಣದಲ್ಲೇ ಸಮರ್ಪಕ ಉತ್ತರ ನೀಡಿದ್ದಾರೆ. ಅವರ ದೃಷ್ಟಿಯಲ್ಲಿ ರಾಮನ ನಡವಳಿಕೆ ವಿಮರ್ಶಾತೀತ. ಲೇಖಕರು 'ಅಹಲ್ಯೆ'ಯ ಉದಾಹರಣೆಯನ್ನು ಎತ್ತಿ ತೋರುತ್ತಾರೆ ಇಲ್ಲಿ.

'ಶ್ರೀಕೃಷ್ಣಪರೀಕ್ಷಣಂ' ಎಂಬುದು ಕೃಷ್ಣನ ವ್ಯವಹಾರಗಳಿಗೆ ವಿವರಣೆ ನೀಡುವ ಗ್ರಂಥ. ಶ್ರೀಕೃಷ್ಣನ ಜೀವನದಲ್ಲಿ ಅನೇಕ ವೇಳೆ ಅವನು ಧರ್ಮದಲ್ಲಿ ಕುಂಟಿದ ಸನ್ನಿವೇಶಗಳಿವೆ. ಬಾಲ್ಯದಲ್ಲಿ ಬೆಣ್ಣೆಯನ್ನು ಕದ್ದುದು, ಸೋದರಮಾವನನ್ನೇ ಕೊಂದುದು, ಮಹಾಭಾರತದ ಯುದ್ಧದಲ್ಲಿ ದ್ರೋಣನಿಗೂ ಕರ್ಣನಿಗೂ ಮೋಸಮಾಡಿ ಅವರ ಸಾವಿಗೆ ಕಾರಣನಾದದ್ದು ಹೀಗೆ. ಜತೆಯಲ್ಲೇ ಗೋಪಿಕೆಯರ ಕುರಿತಾದ ಅವನ ನಡವಳಿಕೆ. ಡಿವಿಜಿಯವರು ಇವನ್ನು ಗಮನಿಸಿ ಪರೀಕ್ಷಣಂ ಮಾಡಿದ್ದಾರೆ. ಕೃಷ್ಣನು ಗೋಪಿಕೆಯರ ವಿಚಾರದಲ್ಲಿ ನಡೆದುಕೊಂಡ ಕ್ರಮದ ಬಗ್ಗೆ ಡಿವಿಜಿ 'ಅವನು ಮಾಡಿದ ಮಹಾಕಾರ್ಯ ಯಾವುದೆಂದರೆ ಗೋಪಿಕಾಸ್ತ್ರೀಯರಿಗೆ ಅಂಟಿಕೊಂಡಿದ್ದ ಕಾಮವೆಂಬ ರೋಗಕ್ಕೆ ಪರಿಹಾರೋಪಾಯವಾಗಿ ಅಧ್ಯಾತ್ಮತತ್ತ್ವವನ್ನು ಬೋಧಿಸಿದುದು. ಆದುದರಿಂದ ಭಕ್ತರಾದ ಗೋಪಿಯರು ಪರಮಾತ್ಮನಲ್ಲಿ ಐಕ್ಯರಾದರು. ಶ್ರೀಕೃಷ್ಣನು ಸಾಮೋಪಾಯದಿಂದ ಅವರನ್ನು ತಿದ್ದಿದನು' – ಇದು ಡಿವಿಜಿಯವರ ದೃಷ್ಟಿಯೆಂದು ವೆಂಕಟಸುಬ್ಬಯ್ಯ ಗುರುತಿಸಿದ್ದಾರೆ.

'ಶ್ರೀಕೃಷ್ಣಪರೀಕ್ಷಣಂ' ಗ್ರಂಥದ ಕೊನೆಯ ಭಾಗ 'ಲೀಲಾವಿಭೂತಿ' ಎಂಬ ಗೀತರೂಪಕ. ಇದೊಂದು ಸ್ವಾರಸ್ಯಪೂರ್ಣ ಸಂಗೀತಬದ್ಧ ರಮ್ಯಕೃತಿ. ಇಲ್ಲಿಯ 'ನಾರದ ಕೃಷ್ಣಸಂವಾದ' ಭಾಗದಲ್ಲಿ ಕೃಷ್ಣನ ಕುರಿತಾದ ಸಂದೇಹವೂ, ಅದಕ್ಕೆ ಉತ್ತರವೂ ಇದೆ. ಪ್ರಶ್ನಿಸುವವನು ನಾರದ; ಉತ್ತರಿಸುವವನು ಶ್ರೀಕೃಷ್ಣ. ಮೂಲದ ಕಂದಪದ್ಯಗಳ ಗದ್ಯಭಾಗವನ್ನು ಲೇಖಕರು ಕೊಟ್ಟಿದ್ದಾರೆ.

'ಉಮರನ ಒಸಗೆ' ಡಿವಿಜಿಯವರು ಅನುವಾದಿಸಿದ ಕಾವ್ಯಗಳಲ್ಲಿ ಒಂದು. ಉಮರ್‌ಖಯ್ಯಮ್ ಪರ್ಷಿಯಾದೇಶದ ಪ್ರಸಿದ್ಧ ಕವಿ. ಅವನ ಕವಿತೆಗಳು ಪ್ರಸಿದ್ಧಿಗೆ ಬಂದುದೇ 'ಫಿಟ್ಜ್ ಜೆರಲ್ಡ್'ನ ಇಂಗ್ಲಿಷ್ ಅನುವಾದಗಳ ಮೂಲಕ. ವೆಂಕಟಸುಬ್ಬಯ್ಯನವರು 'ಈ ಅನುವಾದಗಳಲ್ಲಿ ಹಳಗನ್ನಡದ ಬನಿಯುಳ್ಳ ಹೊಸಗನ್ನಡವನ್ನು ನಾವು ಕಾಣಬಹುದು. ಡಿವಿಜಿಯವರ ಶೈಲಿ ಫಿಟ್ಜ್ ಜೆರಲ್ಡ್‌ನ ಶೈಲಿಗೆ ಪೇಳಿಮಾಡಿಸಿದಂತಿದೆ. ಈ ಅನುವಾದದ ಬಗ್ಗೆ ಎರಡು ವಿಷಯಗಳನ್ನು ನಾವು ಮೆಚ್ಚಬೇಕು. ಅನುವಾದದ ಪದ್ಯಗಳಿಗೆ ಪೀಠಿಕೆಯಾಗಿ ವಿಸ್ತಾರವಾದ ವಿಷಯಪೂರ್ಣವಾದ ವಿಮರ್ಶೆಯಿಂದ ಕೂಡಿದ ಒಂದು ಸೊಗಸಾದ ಪ್ರಬಂಧವಿದೆ. ಇಲ್ಲಿ ಉಮರನ ಬಗ್ಗೆ ಇಂಗ್ಲಿಷಿನಲ್ಲಿ ಈ ವರೆಗೆ ಬಂದಿರುವ ಎಲ್ಲ ಬರಹಗಳನ್ನೂ ಗಮನಿಸಿ, ಉತ್ಕೃಷ್ಟವಾದ ಚಾರಿತ್ರಿಕ ವಿವರಣೆಗಳನ್ನು ನೀಡಿ, ಉಮರನ ಜೀವನಧ್ಯೇಯವೇನು ಎಂಬುದನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಕನ್ನಡಕ್ಕೆ ಇದೊಂದು ಅಮೂಲ್ಯಕೊಡುಗೆ' ಎನ್ನುತ್ತಾರೆ. ಕೊನೆಯಲ್ಲಿ 'ಉಮರನ ಒಸಗೆಯನ್ನು ಡಿವಿಜಿ – ಹೀಗೆ ಸಂಗ್ರಹಿಸಿದ್ದಾರೆ. 'ಈ ಜನ್ಮ ಸಾಕು' ಎಂದು ನರಳುವುದೇಕೆ? ಸಾವು ಬರುವಾಗ ಬರಲಿ; ಅದು ಬರುವವರೆಗೂ ಬದುಕೋಣ. ಆದಷ್ಟು ಚೆನ್ನಾಗಿ ಬದುಕೋಣ. ಇದೇ ಉಮರನ ಒಸಗೆ' ಎನ್ನುತ್ತಾರೆ.

**ಮಂಕುತಿಮ್ಮನ ಕಗ್ಗ**

'ಗುಂಡಪ್ಪನವರ ಕೃತಿಗಳ ರಾಶಿಯಲ್ಲಿ ಅತ್ಯಪೂರ್ವವಾದ ಗ್ರಂಥ ಮಂಕುತಿಮ್ಮನ ಕಗ್ಗ. ಸುಮಾರು ಸಾವಿರ ಪದ್ಯಗಳಲ್ಲಿ ಮಾನವ ಜೀವನದ ಅನೇಕವಾದ ಸಮಸ್ಯೆಗಳನ್ನು ಕುರಿತ, ಗಾಢವಾದ ಚಿಂತನೆಗಳನ್ನೊಳಗೊಂಡ ಒಂದೊಂದು ಪದ್ಯವೂ ಬಿಡಿಬಿಡಿಯಾದ ಮುಕ್ತಕದಂತೆ ಸುಂದರವಾಗಿದೆ. ಇವೆಲ್ಲ ನಾಲ್ಕು ಸಾಲಿನ ದ್ವಿತೀಯಾಕ್ಷರಪ್ರಾಸದ ಪದ್ಯಗಳು. ಪ್ರತಿಯೊಂದು ಪದ್ಯದ ಕೊನೆಯಲ್ಲಿಯೂ ಮಂಕುತಿಮ್ಮ ಎಂಬ ಅಂಕಿತ ಬರುತ್ತದೆ' ಎಂದು ಪರಿಚಯಿಸಿದ ವೆಂಕಟಸುಬ್ಬಯ್ಯನವರು ಹತ್ತಾರು ಕಗ್ಗದ ಪದಗಳನ್ನು ವಿವೇಚಿಸುತ್ತಾರೆ.

'ಏನು ಜೀವನದರ್ಥ? ಏನು ಪ್ರಪಂಚಾರ್ಥ?
ಏನು ಜೀವ ಪ್ರಪಂಚಗಳ ಸಂಬಂಧ?
ಕಾಣದಿಲ್ಲಿರ್ಪುದೇನಾನುಮುಂಟೆ? ಅದೇನು?
ಜ್ಞಾನ ಪ್ರಮಾಣವೇಂ?'

– ಎಂಬಲ್ಲಿಂದ ತೊಡಗಿ

'ಶರಣುವೊಗು ಜೀವನರಹಸ್ಯದಲಿ, ಸತ್ಯದಲಿ
ಶರಣು ಜೀವನವ ಸುಮವೆನಿಪ ಯತ್ನದಲಿ
ಶರಣಂತರಾತ್ಮಗಂಭೀರಪ್ರಶಾಂತಿಯಲಿ
ಶರಣು ವಿಶ್ವಾತ್ಮದಲಿ – ಮಂಕುತಿಮ್ಮ'

ಎಂಬಲ್ಲಿಯ ತನಕ ಮತ್ತೆ ಮತ್ತೆ ಮೆಲುಕುಹಾಕುವ ಪದ್ಯಗಳನ್ನು ಉದಾಹರಿಸುತ್ತಾರೆ. ಕೊನೆಯಲ್ಲಿ 'ಮಂಕುತಿಮ್ಮನ ಕಗ್ಗದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲದ ಹೊಸದರ್ಶನವೊಂದನ್ನು ಪ್ರತಿಪಾದಿಸಿದ್ದೇನೆಂಬ ಧೋರಣೆ ಈ ಕವಿಗೆ ಇಲ್ಲ. ಕಾವ್ಯಲಕ್ಷಣಗಳೆಲ್ಲ ಚೆನ್ನಾಗಿ ಹೊಂದಿಕೊಂಡಿವೆ ಎಂಬ ನಂಬಿಕೆಯೂ ಇಲ್ಲ. ಲೋಕದ ತಾಪದಲ್ಲಿ ಬೆಂದು, ತಂಪನ್ನು ಹುಡುಕಿ ಹೊರಟ ಕವಿ ನೆಯ್ದಿರುವ ವಾಗ್ವಸ್ತ್ರ ಈ ಗ್ರಂಥ. ಬೇಕಾದವರು ಇದನ್ನು ಸ್ವೀಕರಿಸಬಹುದು. ಮಂಕುತಿಮ್ಮ ಎಂಬ ಹೆಸರು ಮರ್ಯಾದೆಗೆ ಕಡಿಮೆಯೆಂದು ಕಂಡರೆ ಇದನ್ನು ವೆಂಕನೋ, ಕಂಕನೋ, ಶಂಕರಾಚಾರ್ಯನೋ ಹೇಳಿದ್ದೆಂದು ತಿಳಿದುಕೊಳ್ಳಲಿ ಎಂದು ಕವಿ ವಿನಯದಿಂದ ಪ್ರಾರ್ಥಿಸಿದ್ದಾರೆ ಓದುಗರನ್ನು' ಎನ್ನುತ್ತಾರೆ. 'ಹೀಗೆ ಇದೊಂದು ಉದಾತ್ತವ್ಯಕ್ತಿತ್ವದ ಸಾಂದ್ರಾನುಭವಗಳ ಚಿನ್ನಪವಾಗಿ ಪ್ರಕಾಶಿಸುತ್ತಾ ಇದೆ. ಇದೇ ಮಂಕುತಿಮ್ಮನ ಹಿರಿಮೆ' ಎಂದು ಒಂದೇ ವಾಕ್ಯದಲ್ಲಿ ಸೂತ್ರಪ್ರಾಯವಾದ ಮಾತನ್ನು ಹೇಳಿದ್ದಾರೆ.

'ಮರುಳ ಮುನಿಯನ ಕಗ್ಗ' ಎಂಬ ಗ್ರಂಥವು ನ್ಯಾಯವಾಗಿ ಮಂಕುತಿಮ್ಮನ ಕಗ್ಗದ ಮುಂದುವರಿದ ಭಾಗ. ಈ ಪದ್ಯಗಳು ಬಿಡಿಬಿಡಿಯಾಗಿ ಹಂಚಿಹೋಗಿದ್ದು, ಡಿವಿಜಿಯವರು ತೀರಿಕೊಂಡ ಮೇಲೆ ಪ್ರಕಟಗೊಂಡು ಪ್ರಸಿದ್ಧವಾಗಿದೆ.

'ಕಗ್ಗವಿದು ಬೆಳೆಯುತಿದೆ ಲಂಕೆಯಲಿ ಹನುಮಂತ
ಹಿಗ್ಗಿ ಬೆಳೆಸಿದ ಬಾಲದಂತೆ ಸಿಗ್ಗುಳಿದು
ನುಗ್ಗಿ ಬರುತಿರೆ ಲೋಕದ ಪ್ರಶ್ನೆಗಳ ಧಾಳಿ
ಉಗ್ಗು ಬಾಯ್ಚಪಲವಿದು – ಮರುಳ ಮುನಿಯ'

– ಈ ಪದ್ಯವನ್ನು ಗಮನಿಸಿದರೆ ಮೇಲಿನ ಮಾತು ಸತ್ಯವಾಗಿ ಕಾಣುತ್ತದೆ. ಇದಾದರೂ ಏಕೆ ಹುಟ್ಟಿತು?

'ಬಿನದ ಕಥೆಯಲ್ಲ, ಹೃದ್ರಸದ ನಿರ್ಝರಿಯಲ್ಲ
ಮನನಾನುಸಂಧಾನಕಾದುದೀ ಕಗ್ಗ
ನೆನೆನೆನೆಯುತೊಂದೊಂದು ಪದ್ಯವನದೊಮ್ಮೊಮ್ಮೆ
ಅನುಭವಿಸಿ ಚಪ್ಪರಿಸೊ – ಮರುಳಮುನಿಯ'

'ಹೀಗೆ ಈ ಪದ್ಯಗಳನ್ನು ಬೇರೆ ಬೇರೆಯಾಗಿ ಓದಿ, ಅನುಭವಿಸಬೇಕಾದ ಅಗತ್ಯವನ್ನು ಕವಿಗಳು ನಿರೂಪಿಸಿದ್ದಾರೆ. ಈ ಗ್ರಂಥದಲ್ಲಿ ಒಟ್ಟು (೮೦೬+೧೯) ಎಂಟುನೂರ ಇಪ್ಪತ್ತೈದು ಪದ್ಯಗಳಿವೆ. ಮಂಕುತಿಮ್ಮನ ಕಗ್ಗದಲ್ಲಿರುವುದಕ್ಕಿಂತ ನೂರ

ಎಪ್ಪತ್ತು ಪದ್ಯಗಳು ಕವಿಮೆ. ಈ ಎರಡು ಗ್ರಂಥಗಳಲ್ಲಿಯೂ ಕೆಲವು ಅಂಶಗಳು ಸಮಾನವಾಗಿವೆ. ಆದರೂ ಮರುಳಮುನಿಯನ ಕಗ್ಗದಲ್ಲಿ ಲೋಕತತ್ತ್ವವನ್ನು ಕುರಿತು ಚಿಂತನೆಗೆ ಹೆಚ್ಚು ಪ್ರಾಮುಖ್ಯ ದೊರೆತಿದೆ. ಡಿವಿಜಿಯವರು ವೇದಾಂತದರ್ಶನ-ಗಳನ್ನೂ, ಇತರ ದರ್ಶನಗಳನ್ನೂ ಚೆನ್ನಾಗಿ ಅಭ್ಯಾಸಮಾಡಿದ್ದವರು. ಪಾಶ್ಚಾತ್ಯತತ್ತ್ವ-ಶಾಸ್ತ್ರವನ್ನೂ ಆಳವಾಗಿ ಅರಿತಿದ್ದವರು. ಆದುದರಿಂದ ಮಂತ್ರದ್ರಷ್ಟಾರರಾದ ಪ್ರಾಚೀನ ಋಷಿವರ್ಯರ ರೀತಿಯಲ್ಲಿ ದೂರದಲ್ಲಿ ನಿಂತು, ಮಾನವನ ಬಾಳನ್ನು ವಿಮರ್ಶಿಸಿ, ಅದರ ಸತ್ವವನ್ನು ತಿಳಿಯಬಲ್ಲವರಾಗಿದ್ದರು. ಅದ್ದರಿಂದಲೇ ಅವರ ಜೀವಿತದ ಕೊನೆಯ ಭಾಗದಲ್ಲಿ ರಚಿತವಾದ ಪದ್ಯಗಳಲ್ಲಿ ದೇವರಲ್ಲಿ ನಂಬಿಕೆ, ಅವನ ಲೋಕ-ನಾಟಕ, ಪ್ರಕೃತಿಯ ಮಹತ್ತ್ವ, ಪರಮಾತ್ಮನ ಕೃಪೆ, ಅಧಿಕಾರ, ಐಶ್ವರ್ಯ, ಸುಖ ಇತ್ಯಾದಿ ಅನೇಕ ವಿಚಾರಗಳನ್ನು, ಹೊಸ ಹೊಸ ಉಪಮಾನ ರೂಪಕಾದಿಗಳಿಂದ, ಪ್ರಕೃತಿಯ ದೃಷ್ಟಾಂತಗಳಿಂದ ಚಿತ್ರವತ್ತಾಗಿ ಮನದಟ್ಟುವಂತೆ ವಿವೇಚಿಸುತ್ತಾರೆ. ಇಂಥ ಕಡೆಗಳಲ್ಲಿ ನಮಗೆ ಡಿವಿಜಿಯವರ ವಿದ್ಯಾವೈದುಷ್ಯದ ವ್ಯಾಪಕತೆಯನ್ನು ಕಂಡು ಆಶ್ಚರ್ಯವಾಗುತ್ತದೆ.' – ಹೀಗೆನ್ನುವ ವೆಂಕಟಸುಬ್ಬಯ್ಯ 'ಇದು ಕೇವಲ ವೇದಾಂತಕ್ಕೆ ಮೀಸಲಾದ ಗ್ರಂಥವಲ್ಲ. ವೇದಾಂತಭಾಗ ಪ್ರಧಾನವಾಗಿದ್ದರೂ, ಬಾಳಿನ ಹಲವು ಮುಖಗಳ ಬಗ್ಗೆ ಕವಿಗಳ ಆಲೋಚನೆ ತುಂಬ ಪ್ರಭಾವವನ್ನು ಬೀರುತ್ತದೆ. ನಿಧಾನವಾಗಿ ಓದಿ ಚಿಂತಿಸಬೇಕಾದ ಅಂತಸ್ಸತ್ವವುಳ್ಳ ಕಾವ್ಯಗಳು ಕನ್ನಡದಲ್ಲಿ ಹೆಚ್ಚಾಗಿಲ್ಲ ಎಂಬುದನ್ನು ನೆನಪಿಟ್ಟು ಈ ಗ್ರಂಥದ ಪದ್ಯಗಳನ್ನು ಓದಬೇಕು' ಎಂಬ ಎಚ್ಚರವನ್ನು ನೀಡುತ್ತಾರೆ. ಉದಾಹರಣೆಗಾಗಿ ಕೆಲವು ಪದ್ಯಗಳನ್ನು ಸೂಚಿಸುತ್ತಾರೆ.

### ನಾಟಕಗಳು

ಡಿವಿಜಿಯವರು ಕೆಲವು ನಾಟಕಗಳನ್ನು ರಚಿಸಿದ್ದಾರೆ. ಅವರು ಬರೆದ ಮೊದಲ ನಾಟಕವೇ ಟೆನಿಸನ್ ಕವಿಯ 'The Cup' ಎಂಬ ಇಂಗ್ಲಿಷ್ ನಾಟಕದ ರೂಪಾಂತರ 'ಕನಕಾಲುಕಾ'. ಇನ್ನೊಂದು 'ತಿಲೋತ್ತಮೆ' ಪೌರಾಣಿಕ ಕಥಾವಸ್ತು. ಷೇಕ್ಸ್‌ಪಿಯರ್ ಮಹಾಕವಿಯು ರಚಿಸಿದ 'King Henry VII' ಎಂಬ ನಾಟಕದಲ್ಲಿ 'John Jack Cade' ಎಂಬ ಪಾತ್ರದ ವಿವರವನ್ನೊಳಗೊಂಡ ಜಾಕ್ ಕೇಡ್ ಎಂಬ ನಾಟಕ. ಈ ನಾಟಕಕ್ಕೆ ಬರೆದ ಮುನ್ನುಡಿಯಲ್ಲಿ ಡಿವಿಜಿ ಹೇಳಿರುವ ಮಾತು ತುಂಬ ಅರ್ಥಪೂರ್ಣವಾದುದು.

'ಈ ಬಗೆಯ ನಾಟಕಸಾಮಗ್ರಿ ನಮ್ಮ ದೇಶದಲ್ಲಿಯೇ ಇಂದಿನ ರಾಜಕೀಯದಲ್ಲಿ ಬೇಕಾದಷ್ಟು ದೊರೆಯುತ್ತಿರುವಾಗ ಇಂಗ್ಲೆಂಡಿನಿಂದ ಅದನ್ನು ಸಾಲಪಡೆಯಬೇಕಾದದ್ದೇನು? ಎಂದರೆ ಆ ದಾರಿಯಲ್ಲಿ ಒಂದೆರಡು ಸೌಕರ್ಯಗಳಿವೆ. ನಮ್ಮ ದೋಷ, ದುರ್ಬಲತೆಗಳ ಪ್ರತಿಬಿಂಬವನ್ನು ನಾವು ಇನ್ನೊಬ್ಬರಲ್ಲಿ ಕಂಡಾಗ ನಮ್ಮ ಮನಸ್ಸಿಗೆ ಕೊಂಚ ತೃಪ್ತಿಯಾಗುತ್ತದೆ. ರಾಜಕೀಯದಲ್ಲಿ ನಮಗಿಂತ ಎಷ್ಟೋ ಉತ್ಕೃಷ್ಟವೆನಿಸಿಕೊಂಡಿರುವ ಇಂಗ್ಲೆಂಡಿನಲ್ಲಿ ಐನೂರು ವರ್ಷಗಳ ಹಿಂದೆ ನಡೆದ ವಿಕಟಪ್ರಕರಣ, ಮುನ್ನೂರು ವರ್ಷಗಳ ಹಿಂದಣ ಷೇಕ್ಸ್‌ಪಿಯರ್‌ನ ವಾಗ್ವೈಖರಿಯಲ್ಲಿ ರೂಪುಗೊಂಡು ನಮ್ಮ

ಮುಂದೆ ಬಂದಾಗ ನಮ್ಮ ರಾಜಕೀಯಸ್ಥರ ಮುಖ ಕೆಂಪೇರಲಾರದು; ಅವರು ಓಗ್ಗಿದರೂ ಓಗ್ಗಿಯಾರು; ಹಾಗೆ ಪ್ರಕೃತ ಲೇಖಕನಿಗೆ ಅಪವಾದದ ಹೊರೆ ತಪ್ಪೀತು.' – ಡಿವಿಜಿಯವರು ನಮ್ಮ ರಾಜಕೀಯವನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸುತ್ತಿದ್ದರು ಎಂಬುದಕ್ಕೆ ಈ ಮಾತುಗಳು ಉದಾಹರಣೆಯಾಗಿವೆ.

'ಮ್ಯಾಕ್‌ಬೆತ್' ಇನ್ನೊಂದು ಅನುವಾದ. ಇದು ಷೇಕ್ಸ್‌ಪಿಯರನ ಸುಪ್ರಸಿದ್ಧ 'ದುರಂತ ನಾಟಕ'. ಡಿವಿಜಿಯವರ ಅನುವಾದಕ್ಕಿಂತ ಮೊದಲೇ ಅನೇಕರು 'ಮ್ಯಾಕ್‌ಬೆತ್' ಅನುವಾದಿಸಿದ್ದಾರೆ. ಡಿವಿಜಿಯವರು ಅನುವಾದಕ್ಕೆ ಕಾರಣ ನೀಡುವುದು ಹೀಗೆ: ಷೇಕ್ಸ್‌ಪಿಯರ್‌ನ ಜಗತ್ತನ್ನು ಕೂಡಿದ ಮಟ್ಟಿಗೂ ಯಥಾವತ್ತಾಗಿ ಇರುವುದು ಇರುವಂತೆಯೇ ತೋರಿಸಬೇಕೆಂಬುದು ನನ್ನ ಸಂಕಲ್ಪ. ಬರಿಯ ಕತೆಯನ್ನು ಹೇಳಬೇಕೆಂಬಷ್ಟು ಮಾತ್ರವೇ ಅಲ್ಲ. ಆತನು ಉಪಯೋಗಿಸಿರುವ ಹೆಸರುಗಳು, ಆತನು ನಿರ್ಮಿಸಿರುವ ವಾತಾವರಣ, ಆತನ ವರ್ಣನೆ, ವಾಕ್ಯಾಲಂಕಾರಗಳು, ಆತನ ಪೂರ್ವೋದಾರಣೆಗಳು ಇವೆಲ್ಲವನ್ನೂ ಒಟ್ಟಿನಮೇಲೆ ಆತನ ಲೋಕದ ಪ್ರತಿಬಿಂಬವನ್ನು ಸಾಧ್ಯವಿರುವ ಮಟ್ಟಿಗೂ ಇಲ್ಲಿ ಇಳಿಸಬೇಕೆಂಬುದು ನನ್ನ ಪ್ರಯತ್ನ. ಕನ್ನಡ ಸಾಹಿತ್ಯವು ಬೆಳೆಯುವುದಕ್ಕೂ ಕನ್ನಡಿಗರ ಮನೋಬುದ್ಧಿಗಳು ವಿಕಾಸ ಹೊಂದುದಕ್ಕೂ ಅವರ ದೃಷ್ಟಿಯು ವಿಶಾಲವಾಗುವುದು ಅವಶ್ಯಕವೆಂದು ನಾನು ನಂಬಿದ್ದೇನೆ. ಈ ಮಾತು ಮತ್ತೆ ಮತ್ತೆ ನೆನಪಿಡಬೇಕಾದುದು.

'ಮ್ಯಾಕ್‌ಬೆತ್' ನಾಟಕ ಇಂದಿಗೂ ಅತ್ಯುತ್ತಮವಾದ ಕನ್ನಡದ ಅನುವಾದವೆಂದು ಹೇಳಬಹುದು. ಅವರ ವಿದ್ವತ್ತೆ ಮತ್ತು ಭಾಷೆಯ ಮೇಲಿನ ಪ್ರಭುತ್ವ ಇವೆರಡಕ್ಕೂ ಇದು ಸಾಕ್ಷ್ಯನೀಡುವ ಗ್ರಂಥ. ಇಷ್ಟಾದರೂ ಒಂದು ಮಟ್ಟದ ಕನ್ನಡ ಭಾಷೆಯ ಪ್ರಭುತ್ವವಿಲ್ಲದವರಿಗೆ ಇಲ್ಲಿರುವ ಸೊಗಸು ದೂರವಾಗಿಯೇ ನಿಲ್ಲುತ್ತದೆ. ಸಾರ್ವಜನಿಕರನ್ನು ಮುಟ್ಟುವುದು ಡಿವಿಜಿಯವರ ಉದ್ದೇಶವಾಗಿರಲಿಲ್ಲ ಎಂಬುದನ್ನು ಈ ಹೀಗೆಯೇ ಅವರ ವಾಕ್ಯಗಳಲ್ಲಿಯೇ ತಿಳಿಸಲಾಗಿದೆ' ಎಂದು ವೆಂಕಟಸುಬ್ಬಯ್ಯ ಹೇಳಿದ್ದಾರೆ.

ಈ ನಾಟಕದ ಅನುವಾದದ ಭಾಷೆಯ ವಿಚಾರವಾಗಿ ಡಿವಿಜಿಯವರು 'ವೈಯಾಕರಣಿ ಮಹಾಶಯರಲ್ಲಿ ಒಂದು ವಿಶೇಷ ವಿಜ್ಞಾಪನೆ. ಮಿತ್ರರೇ, ನೀವು ಒಪ್ಪಲಾರದ ಅನೇಕ ಸಂಗತಿಗಳು ಈ ಬರವಣಿಗೆಯಲ್ಲಿ ಸೇರಿವೆಯೆಂದು ತೋರುತ್ತದೆ. ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಗ್ರಂಥದ ಕನ್ನಡ, ಬೀದಿಯ ಕನ್ನಡ, ಇವೆಲ್ಲವನ್ನೂ ಬೆರೆಸಿದ್ದೇನೆ. ಸುಲಭವಾಗಿ ಸಂಧಿಸೇರಿಸಬಹುದಾದ ಕಡೆ ವಿಸಂಧಿ ಮಾಡಿದ್ದೇನೆ. ಸಮಾಸವಾಗುವ ಕಡೆ ವಿಗ್ರಹ ಬಿಡಿಸಿದ್ದೇನೆ. ಚಿತ್ರ, ವಿಚಿತ್ರ ಪದಗಳನ್ನೂ ಪ್ರಯೋಗಗಳನ್ನು ಜೋಡಿಸಿದ್ದೇನೆ. ಸೈರಿಸಿರಿ.... ಕ್ಷಮಾಗುಣದಿಂದ ನೋಡಿ ಕರುಣಿಸಿರಿ. ಆಗ ಬಹುಶಃ ಯಾವುದನ್ನು ನೀವು ತಪ್ಪೆಂದೆಣಿಸಿರುವಿರೋ ಅದು ತಪ್ಪಲ್ಲದೆ ಇರಬಹುದೆಂದೂ ಪ್ರಪಂಚ ಬೆಳೆದಂತೆ ಭಾಷೆಯೂ ಭಾಷೆ ಬೆಳೆದಂತೆ ನಿಮ್ಮ ಶಾಸ್ತ್ರವೂ ಬೆಳೆಯಬೇಕಾಗುವುದು ಸಹಜವೆಂದೂ ನಿಮ್ಮ ದಿವ್ಯ ಚಿತ್ತಗಳಿಗೆ ತೋರಬಹುದು' ಪ್ರಗಲ್ಭಪಂಡಿತ ಡಿವಿಜಿಯವರ ದೂರದೃಷ್ಟಿ ಮೆಚ್ಚಬೇಕಾದುದೇ,

ವೆಂಕಟಸುಬ್ಬಯ್ಯ ಕೃತಿಯನ್ನು ಹೇಗೆ ಪರಿಚಯಿಸಬೇಕು. ಕೃತಿಕಾರರನ್ನು ಹೇಗೆ ತಿಳಿಯಬೇಕು ಎಂಬುದನ್ನು ಚೆನ್ನಾಗಿ ಬಲ್ಲರು. ಅದನ್ನು ನಾವಿಲ್ಲಿ ಕಾಣುತ್ತೇವೆ.

'ಪರಶುರಾಮ' ರಸಸ್ಪಂದಿಯಾದ ನಾಟಕ. ಪ್ರಾಚೀನಭಾರತದ ಮೌಲ್ಯಗಳನ್ನು ಆಧುನಿಕರಿಗೆ ಪರಿಚಯಮಾಡುವ ರಚನೆ. ಗದ್ಯದ ಸಂಭಾಷಣೆಯೂ, ಪದ್ಯಗಳ ಅರ್ಥಗಾಂಭೀರ್ಯವೂ ಹೃದ್ಯವಾಗಿದೆ.' ಇದು ಲೇಖಕ ವೆಂಕಟಸುಬ್ಬಯ್ಯನವರ ಅಭಿಪ್ರಾಯ. 'ಪ್ರಹಸನತ್ರಯೀ' 'ಗಂಭೀರವೃತ್ತಿಯ ಗಾಥಾಲೋಚನೆಯ, ತೀಕ್ಷ್ಣ-ಮತಿಯ ಡಿವಿಜಿ ಪ್ರಹಸನಗಳನ್ನು ರಚಿಸಿದ್ದಾರೆಂದರೆ ಆಶ್ಚರ್ಯವೇ ಆಗಬಹುದು' ಎಂದು ವೆಂಕಟಸುಬ್ಬಯ್ಯ ಹೇಳುತ್ತ ಪ್ರಹಸನಗಳ ಕಿರುಪರಿಚಯ ಮಾಡಿಕೊಡುತ್ತಾರೆ.

## ಗದ್ಯಸಾಹಿತ್ಯ

ಡಿವಿಜಿಯವರ ಗದ್ಯಸಾಹಿತ್ಯವೂ ವಿಪುಲವಾದುದು. ಮಕ್ಕಳಿಗೆ ಬಾಲ್ಯದಿಂದಲೇ ಪುಸ್ತಕಗಳಲ್ಲಿ ಪ್ರೀತಿಯನ್ನು ಬೆಳೆಸಬೇಕೆಂಬುದು ಡಿವಿಜಿಯವರ ಅಭಿಪ್ರಾಯವಾಗಿತ್ತು ಎಂಬುದನ್ನು ಗುರುತಿಸಿದ ವೆಂಕಟಸುಬ್ಬಯ್ಯನವರು 'ಜೆಕ್ಕೋಜಿ ಮತ್ತು ಇಂದ್ರವಜ್ರ'ಗಳೆಂಬ ಎರಡು ಮಕ್ಕಳ ಕತೆಗಳನ್ನು ಗುರುತಿಸುತ್ತಾರೆ – ಜೊತೆಯಲ್ಲಿ ಮಕ್ಕಳ ಸಾಹಿತ್ಯ ರಚಿಸುವಲ್ಲಿ ಅವರಿಗೆ ಸಾರ್ವಜನಿಕ ಜೀವನದ ಕಾರ್ಯಭಾರವು ಸಮಯವನ್ನು ಬಿಟ್ಟುಕೊಡಲಿಲ್ಲವೆಂಬ ಅಭಿಪ್ರಾಯಕ್ಕೆ ಬರುತ್ತಾರೆ.

## ಸಂಸ್ಕೃತಿ

ಸಂಸ್ಕೃತಿ ಎಂದರೇನು? ಈ ಪ್ರಶ್ನೆಯನ್ನು ಪೌರಸ್ತ್ಯ ಮತ್ತು ಪಾಶ್ಚಾತ್ಯ ದೃಷ್ಟಿಯಿಂದ ಅವಲೋಕನ ಮಾಡಿ ಬರೆದ ಡಿವಿಜಿಯವರ ಪುಟ್ಟ ಗ್ರಂಥ. 'ಈ ಗ್ರಂಥದಲ್ಲಿ ಸಂಗ್ರಹವಾಗಿ ಹೇಳಿರುವ ವಿಷಯಗಳನ್ನು ವಿಸ್ತರಿಸುವುದಾದರೆ ದೊಡ್ಡ ಗ್ರಂಥವೇ ಆಗುತ್ತದೆ. ಒಂದು ವಿಶ್ವಕೋಶದಲ್ಲಿ ವಿಷಯಗಳನ್ನು ಸಂಗ್ರಹಿಸುವಂತೆ ಡಿವಿಜಿ ಇಲ್ಲಿ ತಮ್ಮ ಸಂಗ್ರಹ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ. ಸೂತ್ರಪ್ರಯವಾದ ಒಂದು ವಾಕ್ಯಸಮುದಾಯವನ್ನು ಇಲ್ಲಿ ಎತ್ತಿ ತೋರಿಸಬಹುದು. 'ಸಂಸ್ಕೃತಿ ಎಂಬುದು ಬರಿಯ ವಿದ್ಯೆಯಲ್ಲ – ಅದು ವಿದ್ಯಾಕುಸುಮಪರಾಗ. ಅದು ಸಾಹಿತ್ಯ ಪರಾಮರ್ಶೆಯ ಮತ್ತು ಲೋಕಾನುಭವವಿವೇಕದ ದಾಂಪತ್ಯದಿಂದ ಜನಿಸುವ ಒಂದಾನೊಂದು ಸಕಲಸಮಾಧಾನಕರವಾದ ಶೀಲಸೌಭಾಗ್ಯ. ಅದು ಜೀವನದ ನಾನಾ ಧ್ಯೇಯಗಳು ನಾನಾತತ್ತ್ವಗಳು ನಾನಾಧರ್ಮಗಳ ಮೂಲ ತಾರತಮ್ಯ ಜ್ಞಾನದಿಂದ ಸಮನ್ವಯ ಸ್ವಾರಸ್ಯ' ಎಂಬುದನ್ನು ಎತ್ತಿ ತೋರುತ್ತಾರೆ. ವೆಂಕಟಸುಬ್ಬಯ್ಯನವರು.

ಡಿವಿಜಿಯವರು ಸುಸಂಸ್ಕೃತನಲ್ಲಿರಬೇಕಾದ ಗುಣಗಳನ್ನು ಗುರುತಿಸುವುದು ಹೀಗೆ: ೧) ಸ್ವಸ್ಥಾನಪರಿಜ್ಞಾನ, ೨) ಪರೇಂಗಿತ ಪರಿಗ್ರಹಣ, ೩) ಸ್ವಾರ್ಥನಿಯಮನ, ೪) ಸಮನ್ವಯದೃಷ್ಟಿ, ೫) ಸರಸತೆ.

**ಬಾಳಿಗೊಂದು ನಂಬಿಕೆ** : ಮೈಸೂರಿನ ವಯಸ್ಕರ ಶಿಕ್ಷಣ ಸಮಿತಿಗೆಂದು ಸಾಮಾನ್ಯಜನರ ಉಪಯೋಗಕ್ಕೆಂದು ಈ ಸಣ್ಣ ಕೈಪಿಡಿ; ಗಾತ್ರದಲ್ಲಿ ಚಿಕ್ಕದಾದರೂ

ಅದು ತುಂಬಬಹುದಾದ ಪಾತ್ರದಲ್ಲಿ ಸತ್ತ್ವಪೂರ್ಣವಾಗಿರುವಂಥದು. ಇದು ಎಲ್ಲರಿಗೂ ದಿನನಿತ್ಯದ ಓದಿಗೆ ಕೈಪಿಡಿಯಾಗಬಲ್ಲುದು. ಹೀಗೆ ಅಭಿಮತ ವೆಂಕಟಸುಬ್ಬಯ್ಯನವರದ್ದು.

**ದೇವರು** : 'ದೇವರು ಇದ್ದಾನೆಯೇ?' ಎಂಬ ಪ್ರಶ್ನೆಗೆ ಉತ್ತರಿಸಿದ ಪ್ರಬಂಧ-ವಿದು. ಅಡಿಟಿಪ್ಪಣಿಯಲ್ಲಿ ವೆಂಕಟಸುಬ್ಬಯ್ಯನವರು ಬೆಂಗಳೂರಿನ ಸೆಂಟ್ ಮಾರ್ಥಾ ಆಸ್ಪತ್ರೆಯಲ್ಲಿ ಒಂದು ತಿಂಗಳು ವೈದ್ಯರ ಶುಶ್ರೂಷೆಯಲ್ಲಿದ್ದಾಗ ನೆನಪಿನ ಬಲದಿಂದ ಹೇಳಿ ಬರೆಯಿಸಿದ ಲೇಖನ ಇದು' ಎಂದಿದ್ದಾರೆ. ಡಿವಿಜಿಯವರು ಎಲ್ಲಿದ್ದರೂ ಈ ಚಿಂತನೆ ಬಿಟ್ಟವರಲ್ಲ ಎಂಬದಿಲ್ಲಿ ವ್ಯಕ್ತವಾಗುತ್ತದೆ. ಡಿವಿಜಿಯವರು ತಮ್ಮ ನಿಲುವನ್ನು ಕ್ರೋಢೀಕರಿಸುವ ಸೂತ್ರ ಇದು.

'ಆವುದುವೊಳಿತೋ ನಿನಗದು
ಜೀವ ಹಿತಕ್ಕಾವುದಹುದೊ ಸತ್ಯಂ ನಿತ್ಯಂ
ಆ ವಸ್ತುವೆ ಆ ಸತ್ಯವೆ
ದೇವಂ ಜಗದೀಶ್ವರನಾತ್ಮತತ್ವಂ ಬ್ರಹ್ಮಂ'

'ನಿನಗೆ ಯಾವುದು ಒಳ್ಳೆಯದೋ, ಜೀವಿಗಳ ಹಿತವನ್ನು ಸಾಧಿಸುವುದಕ್ಕೆ ಯಾವುದು ಸತ್ಯವೂ ನಿತ್ಯವೂ ಆದುದೋ, ಅದೇ, ಆ ಸತ್ಯವೇ ದೇವರು. ಅದೇ ಜಗದೀಶ್ವರ. ಅದೇ ಆತ್ಮತತ್ವ. ಅದೇ ಬ್ರಹ್ಮ.' ಡಿ.ವಿ.ಜಿಯವರು ದೇವರನ್ನು ಕಂಡುದು ಹೇಗೆಂಬುದನ್ನು ಲೇಖಕರು ತಿಳಿಸುತ್ತಾರೆ.

**ಜ್ಞಾಪಕ ಚಿತ್ರಶಾಲೆ:** ಎಂಟು ಸಂಪುಟಗಳಲ್ಲಿ ಡಿವಿಜಿಯವರು ನೀಡಿರುವ ಸುಮಾರು ಮುನ್ನೂರು ವ್ಯಕ್ತಿಚಿತ್ರಗಳು ಕನ್ನಡಕ್ಕೆ ಒಂದು ಹೊಸ ಬಗೆಯ ಗ್ರಂಥರಾಶಿ-ಯನ್ನೇ ತಂದು ಕೊಟ್ಟವೆ ಎಂಬುದನ್ನು ಗುರುತಿಸಿದ ಲೇಖಕರು ಈ ಎಂಟು ಗ್ರಂಥಗಳಲ್ಲಿ ಕಾಣಬರುವ ವ್ಯಕ್ತಿಗಳು ಬೇರೆ ಬೇರೆ ಗುಂಪಿಗೆ ಸೇರಿರುವುದನ್ನು ಗುರುತಿಸುವುದು ಹೀಗೆ: ೧) ಸಾಹಿತಿ, ಸಜ್ಜನ, ಸಾರ್ವಜನಿಕರು, ೨) ಕಲೋಪಾಸಕರು, ೩) ಸಾಹಿತ್ಯೋಪಾಸಕರು, ೪) ಮೈಸೂರಿನ ದಿವಾನರು, ೫) ವೈದಿಕ ಧರ್ಮ ಸಂಪ್ರದಾಯಸ್ಥರು, ೬) ಹಲವರು ಸಾರ್ವಜನಿಕರು, ೭) ಹೃದಯಸಂಪನ್ನರು, ೮) ಸ್ಮೃತಿಚಿತ್ರಗಳು.

ಹೀಗೆ ತಮ್ಮ ಜ್ಞಾಪಕಚಿತ್ರಶಾಲೆ ತೆರೆದಿಟ್ಟ ಡಿವಿಜಿಯವರು ವೆಂಕಟಸುಬ್ಬಯ್ಯ-ನವರಿಗೆ ಕಾಣುವುದು ಹೀಗೆ : 'ಇಂಥ ವ್ಯಕ್ತಿಗಳನ್ನು ನಮ್ಮ ಮುಂದಿಟ್ಟ ಡಿವಿಜಿ ಅವರೆಲ್ಲರಿಗಿಂತಲೂ ಹೆಚ್ಚಿನ ಸ್ಥಾನವನ್ನು ಪಡೆದಂತೆ ನಮಗೆ ಭಾಸವಾದರೆ ಆಶ್ಚರ್ಯವಿಲ್ಲ'. ಡಿವಿಜಿಯವರ ವ್ಯಕ್ತಿಚಿತ್ರಣದಲ್ಲಿ ನಮಗಿದು ಸ್ಪಷ್ಟವಾಗುತ್ತದೆ.

'ಕಾವ್ಯಮೀಮಾಂಸೆ ಮತ್ತು ವಿಮರ್ಶೆ' ಶಿರೋನಾಮೆಯಲ್ಲಿ ಡಿವಿಜಿಯವರ ಕೃತಿಗಳ ಪರಿಚಯವಿದೆ. ಜೀವನ ಸೌಂದರ್ಯ ಮತ್ತು ಸಾಹಿತ್ಯ – 'ಸೌಂದರ್ಯ-ವೆಂಬುದು ಮಾನವನ ಮನಸ್ಸನ್ನು ಆಕರ್ಷಿಸಿ ಮೋಹಗೊಳಿಸುವ ಒಂದು ಶಕ್ತಿ

ಎಂದೂ, ಅದು ಅವನ ಬಹಿರಿಂದ್ರಿಯಗಳಿಗೆ ಗೋಚರಿಸುವ ರೂಪಶಬ್ದಗಳಲ್ಲಿ ಮಾತ್ರ ಇಲ್ಲವೆಂದೂ, ಅಂತರಂಗಕ್ಕೆ ತಟ್ಟುವ ಜೀವವರ್ತನೆ ವಿಲಾಸಗಳಲ್ಲಿಯೂ ಅ ಡಗಿರುವುದೆಂದು ಡಿವಿಜಿ ತಿಳಿಸುತ್ತಾರೆ' ಎಂಬುದನ್ನು ಹೇಳಿದ ಲೇಖಕರು. 'ಹೊಂಬಿಸಿಲು, ತಂಗಾಳಿ, ಮಾಂದಳಿರು, ಮಲ್ಲಿಗೆಯರಲು, ಗಿಳಿಪಿಂಡು, ನವಿಲ್ಗರಿ, ಚೆಂದುಟಿ, ಕಿರುನಗೆ, ಕುಡಿನೋಟ – ಇಂಥವು ಮಾತ್ರವೇ ಅಲ್ಲಿ ಸೌಂದರ್ಯದ ನೆಲೆಮನೆಗಳು. ಹೃದಯಸಂಕ್ಷೋಭೆ, ಹೃದಯಸಂಯಮನ, ವ್ಯಾಮೋಹ, ವಿವೇಕ, ಆವೇಶ, ಸಮಾಧಿ ಈ ಪರಿಯ ಹಾರ್ದಜೀವನವೇ ಕಾವ್ಯವಸ್ತು – ಮನೋರಾಜ್ಯದಲ್ಲಿ ರಾಗಭಾವ, ಸಂಶಯ, ಭಯ, ಹಟ, ತಾಳ್ಮೆ ಈ ನಾನಾಪ್ರಜೆಗಳು ಹೇಗೆ ಹೇಗೆ ಚಳವಳ ನಡೆಸಬಹುದೋ, ಆತ್ಮರಾಜನು ಆಳಬಹುದೋ ಅದನ್ನು ಕವಿಯು ಚಿತ್ರಿಸುತ್ತಾನೆ. ಕಾವ್ಯಭೂಮಿಯಲ್ಲಿ ಜೀವನು ಹೃದಯಲೀಲೆ, ಆತ್ಮಶಕ್ತಿ – ಇವೆರಡರ ನಡುವೆ ಬಿದ್ದು ಹೊರಳಾಡುತ್ತಿರುತ್ತಾನೆ. ಜೀವನೋಪಯುಕ್ತವಾದ, ಜೀವನೋತ್ತೇಜಕವಾದ ಸೌಂದರ್ಯ – ಇವುಗಳನ್ನು ಹಿಡಿದು ಕೆಲಸಮಾಡುವವನು ಕವಿ' ಎಂಬ ಡಿವಿಜಿಯವರ ಅಭಿಪ್ರಾಯವನ್ನು ಉಲ್ಲೇಖಿಸಿದ್ದಾರೆ.

'ವಿಜ್ಞಾನ ಮತ್ತು ಸಾಹಿತ್ಯ' – 'ಸಾಹಿತ್ಯ ಮತ್ತು ಜನಜೀವನ' ಭಾಷೆಯ ಸ್ವರೂಪ ಸ್ವಭಾವ ಮತ್ತು ವ್ಯವಹಾರ ರೂಪಗಳು. – 'ಸೌಂದರ್ಯಸಂಹಿತೆ' ಯ ಭಾಗಗಳನ್ನು ಸೂಚಿಸಿದ ಲೇಖಕರು 'ಸೌಂದರ್ಯ ಮೀಮಾಂಸೆ ಬಹು ಉತ್ಕೃಷ್ಟವಾದ ಸತ್ವದಿಂದ ತುಂಬಿದೆ. ಲೋಕದಲ್ಲಿ ಸುಂದರವಾದುದು ಯಾವುದು ಎಂಬ ಪ್ರಶ್ನೆಗೆ ೩೫ ವಾಕ್ಯವೃಂದಗಳಲ್ಲಿ ಡಿವಿಜಿ ನೀಡಿರುವ ವಿವರಣೆ ಹಿಂದೆ ಯಾರೂ ಪ್ರಯತ್ನಪಡದೇ ಇದ್ದ ಕಾರ್ಯ. ಇದು ಮಾನವನ ಬಾಳಿನ ಕಲೆಗಳ ಸತ್ತ್ವದ ಸಂಬಂಧವನ್ನು ಬಹು ನವುರಾಗಿ ಬಿಡಿಸಿ ವಿವರಿಸಿದೆ. ಸೌಂದರ್ಯತತ್ತ್ವವನ್ನು ಯಾರು ಬೇಕಾದರೂ ಅರ್ಥ ಮಾಡಿಕೊಳ್ಳಬಹುದಾಗಿರುವ ಈ ಬರವಣಿಗೆ ಕನ್ನಡದ ಅತ್ಯುತ್ತಮ ಬರಹಗಳಲ್ಲಿ ಒಂದೆಂದು ಯಾರಿಗಾದರೂ ಅರ್ಥವಾಗುತ್ತದೆ. ಇದನ್ನು ಪ್ರತಿಯೊಬ್ಬ ವಿದ್ಯಾವಂತನೂ ಖಂಡಿತ ಓದಬೇಕು' ಎನ್ನುತ್ತಾರೆ.

**ಸಾಹಿತ್ಯಶಕ್ತಿ** ಡಿವಿಜಿಯವರ ಎರಡನೆಯ ಗ್ರಂಥ. 'ಈ ಗ್ರಂಥದ ವಿಚಾರವಾಗಿ ಹೇಳಬೇಕಾದುದು ಅಧಿಕವಾಗಿಯೇ ಇದೆ. ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಕುರಿತು ಡಿವಿಜಿ ಉದ್ದಕ್ಕೂ ಬರೆಯುತ್ತಲೇ ಬಂದಿದ್ದಾರೆ. ಕಾವ್ಯವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಇರಬೇಕಾದ ಅಧಿಕಾರ, ಅದನ್ನು ಆಳವಾಗಿ ಅಭ್ಯಾಸ ಮಾಡುವ ರೀತಿ, ಕೇವಲ ಪಾಂಡಿತ್ಯದ ರಚನೆಗಿಂತ ಹೇಗೆ ಕಾವ್ಯರಚನೆ ಬೇರೆ-ಯಾದುದು, ಸಂಪ್ರದಾಯಕ್ಕೂ ಆಧುನಿಕತೆಗೂ ಇರುವ ಸಂಬಂಧವೇನು? ಮುಂತಾದ ವಿಷಯಗಳನ್ನು ತರ್ಕಬದ್ಧವಾಗಿ ವಿವರಿಸಿ, ಯಾವುದು ತಮ್ಮ ದೃಷ್ಟಿಯಲ್ಲಿ ಸರಿಯಾದ ಮಾರ್ಗ ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾರೆ. ಪಾಶ್ಚಾತ್ಯಸಾಹಿತ್ಯಗಳ ಪ್ರಭಾವ-ದಿಂದ ಕನ್ನಡದಲ್ಲಿ ಆಗುತ್ತಿರುವ ಸಮಕಾಲೀನ ಕಾವ್ಯದೃಷ್ಟಿಯನ್ನು ತುಂಬ ಬಿಚ್ಚು ಮನಸ್ಸಿನಿಂದಲೇ ಅವರು ಅಧ್ಯಯನ ಮಾಡಿ, ಅವುಗಳ ಮೌಲ್ಯಮಾಪನ ಮಾಡಬಲ್ಲವರಾಗಿದ್ದರು. ಇಂಗ್ಲಿಷ್ ಸಾಹಿತ್ಯದಲ್ಲಿ ಪೂರ್ಣಪರಿಣತಿಯನ್ನು ಪಡೆದಿದ್ದ

ಅವರು-ಅಲ್ಲಿಂದ ನಮಗೆ ಪ್ರಯೋಜನಕರವಾದುದು ಏನಿದೆಯೋ ಅವೆಲ್ಲವನ್ನು ಸ್ವೀಕರಿಸಲು ಸಿದ್ಧರಾಗಿದ್ದರು. ಆದರೆ ಪ್ರಾಚೀನನವೀನಗಳ ಸಮನ್ವಯ ಬೇಕೆಂಬುದು ಅವರ ನಿಶ್ಚಿತ ಮನಸ್ಸಾಗಿತ್ತು. 'ಹಳೆಬೇರು ಹೊಸ ಚಿಗುರು' ಎಂಬುದು ಅವರು ಆಗಿಂದಾಗ ಉಪಯೋಗಿಸುತ್ತಿದ್ದ ನುಡಿಗಟ್ಟಾಗಿತ್ತು' ಎನ್ನುತ್ತ ಡಿವಿಜಿಯವರ ದೂರ ದೃಷ್ಟಿಯನ್ನು ವೆಂಕಟಸುಬ್ಬಯ್ಯನವರು ಎತ್ತಿ ತೋರಿದ್ದಾರೆ. ಈ ಗ್ರಂಥದಲ್ಲಿಯ 'ಕಾವ್ಯೋಪಾಸನೆ' – 'ಸೌಂದರ್ಯ ತ್ರಿಕೂಟ'ಗಳ ಪರಿಚಯ ನೀಡಿದ್ದಾರೆ. 'ಮಹಾಭಾರತದ ಪಾತ್ರಗಳು' ಎಂಬ ಸುದೀರ್ಘಲೇಖನದಲ್ಲಿ ದುರ್ಯೋಧನ, ಧೃತರಾಷ್ಟ್ರ, ಗಾಂಧಾರಿ, ಕರ್ಣ, ಭೀಷ್ಮ, ಅರ್ಜುನ, ಕೃಷ್ಣ ಪಾತ್ರಗಳ ಒಳನೋಟವನ್ನು ಡಿವಿಜಿ ಚಿತ್ರಿಸಿದ್ದನ್ನು ತೋರಿದ್ದಾರೆ.

**ಭಗವದ್ಗೀತಾತಾತ್ಪರ್ಯ ಅಥವಾ ಜೀವನಧರ್ಮಯೋಗ** ಎಂಬ ಹೆಸರಿನಲ್ಲಿ ಡಿವಿಜಿ ರಚಿಸಿರುವ ತಾತ್ಪರ್ಯವನ್ನು ಒಳಗೊಂಡ ಗ್ರಂಥವು ಅವರ ಗ್ರಂಥರಾಶಿಯ ಮುಕುಟಮಣಿ. ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಪ್ರತಿವಾರವೂ ಸೇರುತ್ತಿದ್ದ ವ್ಯಾಸಂಗಗೋಷ್ಠಿಯಲ್ಲಿ ಡಿವಿಜಿಯವರು ಭಗವದ್ಗೀತೆಯ ವಿಚಾರವಾಗಿ ಎರಡು ಸಲ ಪ್ರವಚನ ಮಾಡಿದ್ದರು. ಅದರ ವಿವರಣೆಯೇ ಈ ಗ್ರಂಥ. 'ಜೀವನ ಧರ್ಮಯೋಗ–ವೆಂಬ ಡಿವಿಜಿಯವರ ಗ್ರಂಥಕ್ಕೆ ವಿಶಿಷ್ಟವಾದ ಸ್ಥಾನವಿದೆ. ಮಾನವನ ಜೀವನ, ಧರ್ಮ, ದರ್ಶನ, ಮತ್ತು ಮತ ಈ ಎಲ್ಲ ಕ್ಷೇತ್ರಗಳ ಪರಸ್ಪರ ಸಂಬಂಧವನ್ನು ಇಲ್ಲಿ ಪರಿಶೀಲಿಸಿದ್ದಾರೆ. ಆಧುನಿಕಜೀವನದ ಸಮಸ್ಯೆಗಳು ಮತ್ತು ಇಹಪರಗಳು – ಸಂಬಂಧ ಮುಂತಾದವುಗಳನ್ನು ಮಾನವವ್ಯವಹಾರದೃಷ್ಟಿಯಲ್ಲಿ ಪರೀಕ್ಷಿಸಿದ್ದಾರೆ. ಈ ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದುದು ಆಶ್ಚರ್ಯವೇನೂ ಅಲ್ಲ. ದೀರ್ಘವಾದ ಬಾಳಿನ ಅನುಭವ, ಅನೇಕ ಶಾಸ್ತ್ರಗಳ ಆಳವಾದ ಪಾಂಡಿತ್ಯ, ಸತ್ಯಾನ್ವೇಷಣ ದೃಷ್ಟಿ, ಮುಂತಾದುವೆಲ್ಲದರ ಸಮ್ಮೇಳನವನ್ನು ಈ ಭಗವದ್ಗೀತಾನು–ವಾದದ ಮತ್ತು ಅದಕ್ಕೆ ಸಂಬಂಧಿಸಿದ ಪೂರ್ವಾಪರ ವಿವೇಚನೆಗಳಲ್ಲಿ ನಾವು ಕಾಣಬಹುದು. ಈ ಗ್ರಂಥವು ಒಂದು ರಸಘಟ್ಟಿ. ಈ ಅಭಿಪ್ರಾಯಕ್ಕೆ ಎರಡು ಮಾತಿರಲಾರದು.

**ಸಂಸ್ಥೆಗಳು**

ಡಿವಿಜಿಯವರು ಸದಾ ಸಮಾಜಮುಖಿಯಾಗಿ ಜೀವಿಸಿದವರು, ಬದುಕಿದವರು ಈ ಕುರಿತು ವೆಂಕಟಸುಬ್ಬಯ್ಯ ವಿವೇಚನೆ ನಡೆಸಿದ್ದಾರೆ. ಡಿವಿಜಿಯವರು ನೇತಾರರಾಗಿ ನಡೆಸಿದ ಸಂಘ–ಸಂಸ್ಥೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಗೋಖಲೆ ಸಾರ್ವಜನಿಕ ಸಂಸ್ಥೆ ಮುಖ್ಯವಾದುವು.

ಕನ್ನಡ ಸಾಹಿತ್ಯ ಪರಿಷತ್ತಿಗೆ ಡಿವಿಜಿಯವರು ಸಲ್ಲಿಸಿದ ಸೇವೆ, ಮಡಿಕೇರಿಯಲ್ಲಿ 1932ರಲ್ಲಿ ನಡೆದ ಸಾಹಿತ್ಯಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಡಿವಿಜಿಯವರು ಮಾಡಿದ ಭಾಷಣದ ಮುಖ್ಯಾಂಶವನ್ನು ವೆಂಕಟಸುಬ್ಬಯ್ಯ ಎತ್ತಿ ತೋರಿದ್ದಾರೆ.

'ಕನ್ನಡ ಹೋದರೆ ಹೋಗಲಿ, ಅಥವಾ ಇರಲೇಬೇಕೆಂದರೆ, ಶ್ರೀಮಂತರ ಮನೆಯ ಬಡ ಬಳಗದಂತೆ ಮೂಲೆಯಲ್ಲಿ ಬಿದ್ದುಕೊಂಡಿರು ಎಂದು ವಾದಿಸುವವರು ಈಗ ಬಹುಸ್ಥಾನಗಳಲ್ಲಿದ್ದಾರೆ. ಅವರಿಗೆ ನಾವು ಹೇಳಬೇಕಾದದ್ದಿಷ್ಟೆ. ಇದುವರೆಗೆ ನಿಮ್ಮ ಭಾಷೆಗಳು ದೊಡ್ಡದಾಗಿರುವುದು ನಿಜ; ಆದರೆ ಇನ್ನು ಮುಂದಕ್ಕೆ ನಮ್ಮ ಭಾಷೆಯನ್ನು ದೊಡ್ಡದನ್ನಾಗಿಸಬೇಕೆಂದಿದ್ದೇವೆ. ನೀವು ನಮಗೆ ಉಪಕಾರಿಗಳು ನಿಜ, ಆದರೆ ಈಗ ನಾವು ನಿಮ್ಮ ಬೆಂಬಲದಲ್ಲೇ ನಿಂತು ನಿಮ್ಮ ಸಹಾಯವನ್ನು ಸಾರ್ಥಕಗೊಳಿಸಬೇಕೆಂದಿದ್ದೇವೆ. ಉಪಕೃತನು, ಆತ್ಮಾವಲಂಬಿಯಾದಾಗಲೇ ಅಲ್ಲವೆ ಉಪಕಾರಿಯ ಯಶಸ್ಸೂ ಪರಿಪೂರ್ಣತೆಗೆ ಬರುವುದು.'

'ಸಾಹಿತ್ಯಕ್ಷೇತ್ರದಲ್ಲಿ ಸ್ವದೇಶೀವ್ರತಕ್ಕೆ ಅವಕಾಶವಿಲ್ಲ. ಜನಜನಾಂಗಗಳ ಜೀವನದಲ್ಲಿ ಸರಸ್ವತಿ, ಧನ್ವಂತರಿಯವರು ಕಾಲದೇಶಗಳ ಅವಧಿಗೆ ಒಳಪಡದೆ ಸಂಚರಿಸಬೇಕಾದವರು, ಆಕಾಶದಂತೆ ಸೂರ್ಯಚಂದ್ರರಂತೆ ಎಲ್ಲರಿಗೂ ಸೇರಬೇಕಾದುದು ಜ್ಞಾನ.'

'ನಮ್ಮ ಜೀವನದ ಹೊರಮನೆಗೆ ಕಿಟಕಿಗಳಿರುವಂತೆ ಅದರ ಒಳಮನೆಗೂ ಇದ್ದು ಅಲ್ಲಿ ಗಾಳಿಯ ಸಂಚಾರವಾಗುತ್ತಿರಬೇಕು. ಯಾವ ಸಾಹಿತ್ಯವು ಹೇಗೆ ಎಲ್ಲ ಕಡೆಗಳಿಂದಲೂ ಬೆಳಕನ್ನೂ ಗಾಳಿಯನ್ನೂ ಬರಮಾಡಿಕೊಳ್ಳುವುದೋ, ಅದು ತನ್ನ ನೈರ್ಮಲ್ಯವನ್ನು ಕಾಪಾಡಿಕೊಂಡು, ಚೈತನ್ಯವನ್ನು ಹೆಚ್ಚಿಸಿಕೊಂಡು, ಮುಪ್ಪನ್ನು ದೂರದಲ್ಲಿಟ್ಟಿರುವುದು' – ಡಿವಿಜಿಯವರ ಈ ಮಾತು ಗಮನಾರ್ಹವೆಂಬುದನ್ನು ವೆಂಕಟಸುಬ್ಬಯ್ಯ ನೆನಪಿಸುತ್ತಾರೆ.

ಪರಿಷತ್ತಿನ ಅಂಗರಚನೆಯನ್ನು ತಿದ್ದುಪಡಿ ಮಾಡಿದ್ದು, ಪರಿಷತ್ತಿಗೆ ಬೆರಳಚ್ಚುಗಾರರನ್ನು ನೇಮಕಮಾಡಿದ್ದು, ವಸಂತಸಾಹಿತ್ಯೋತ್ಸವ, ಕನ್ನಡ ಹಬ್ಬ ಮೊದಲಾದ ಡಿವಿಜಿಯವ ಕಾರ್ಯವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಗೋಖಲೆ ಸಾರ್ವಜನಿಕ ಸಂಸ್ಥೆಯೊಂದಿಗೆ ಡಿವಿಜಿಯವರ ಸಂಬಂಧ ಬಹು ದೊಡ್ಡದು. ಈ ಸಂಸ್ಥೆಯಲ್ಲಿ ಪ್ರತಿವಾರ ಸಾಹಿತ್ಯ, ವಿಜ್ಞಾನ, ಕಲೆಗಳ ಕುರಿತು ಚಿಂತನ–ಮಂಥನ ನಡೆಯುತ್ತದೆ. ಗೋಖಲೆಯವರ ಕುರಿತು ಡಿವಿಜಿ 'ತಾನು ದೇಶಪ್ರೇಮಿಯೆಂದು ಭಾವಿಸುವ ಪ್ರತಿಯೊಬ್ಬ ಭಾರತೀಯನೂ ರಾಜಕೀಯಕ್ಷೇತ್ರದಲ್ಲಿ ದುಡಿಯಲು ಕನಸು ಕಾಣಬೇಕು ಎಂದ ಗೋಖಲೆಯವರು ನನಗೆ ಹೇಳಿಕೊಟ್ಟರು. ದೇಶದ ರಾಜಕೀಯ ಜೀವನವನ್ನು ದಾರ್ಶನಿಕವನ್ನಾಗಿ ಮಾಡಿ ದೇಶದ ಎಲ್ಲ ರಾಜಕೀಯ ಸಂಸ್ಥೆಗಳನ್ನು ಆಧ್ಯಾತ್ಮಿಕ ಆಧಾರದ ಮೇಲೆ ಕಾರ್ಯಮುಖವಾಗುವಂತೆ ಮಾಡಬೇಕು. ನನ್ನ ಜೀವನಕ್ಕೆ ಅವರು ಸ್ಫೂರ್ತಿದಾತರು. ಈಗಲೂ ನನಗೆ ಸ್ಫೂರ್ತಿಯನ್ನು ನೀಡುತ್ತಿದ್ದಾರೆ.' ಈ ಮಾತನ್ನು ನೆನಪಿಸುತ್ತಾರೆ ಲೇಖಕರು.

**ವ್ಯಕ್ತಿಯಾಗಿ ಡಿವಿಜಿ**

ಜನಕ್ಕೆ ಹೇಗೆ ಕಂಡರೆಂಬುದನ್ನು, ಅವರನ್ನು ಹತ್ತಿರದಿಂದ ಕಂಡವರು ವೆಂಕಟಸುಬ್ಬಯ್ಯನವರು. ಡಿವಿಜಿಯವರ ಕುಟುಂಬ, ಬೆಳೆದು ಬಂದ ಪರಿಸರ, ಬಡತನದ ನಡುವೆಯೂ ತೋರಿಸಿಕೊಳ್ಳದ ಸ್ವಾಭಿಮಾನ. ಒಡನಾಟಕ್ಕೆ ಸಿಕ್ಕಿದ

ಹಿರಿಯರು, ವಿದ್ವಾಂಸರು, ಸಾರ್ವಜನಿಕವಾಗಿ ಡಿವಿಜಿ ಬದುಕಿದ ರೀತಿ, ಕಿರಿಯರಲ್ಲಿ ತೋರುತ್ತಿದ್ದ ವಾತ್ಸಲ್ಯ, ಸಂವಾದಚಾತುರ್ಯ ಇವನ್ನೆಲ್ಲ ಆಪ್ತವಾಗಿ ಚಿತ್ರಿಸಿದ್ದಾರೆ ವೆಂಕಟಸುಬ್ಬಯ್ಯನವರು. ಅವರು ಈ ಭಾಗವನ್ನು ಮುಗಿಸುವುದು ಹೀಗೆ: 'ಅವರು ಮಾನವತೆಯ ಸುಂದರ ಮಹಾಕಾವ್ಯ'.

ಕೊನೆಯಲ್ಲಿ ಸರಕಾರದ, ಸಂಸ್ಥೆಗಳ ಮತ್ತು ಸಾರ್ವಜನಿಕ ಕೃತಜ್ಞತೆ ಎಂಬಲ್ಲಿನ ಲೇಖನದಲ್ಲಿ ಡಿವಿಜಿಯವರಿಗೆ ಸಂದ ಗೌರವಚಿತ್ರಣವಿದೆ. ಅನುಬಂಧದಲ್ಲಿ ಡಿವಿಜಿಯವರ ಪ್ರಸಿದ್ಧವಾದ 'ವನಸುಮ' ಮತ್ತು 'ಬೇಲೂರಿನ ಶಿಲಾಬಾಲಿಕೆಯರು' ಎಂಬ ಎರಡು ಕವನಗಳಿವೆ. ಜೀವನದ ಪ್ರಮುಖಘಟನೆಗಳ ಸಂಕ್ಷಿಪ್ತ ಮಾಹಿತಿಯಿದೆ.

ಮಾನ್ಯ ಜಿ. ವೆಂಕಟಸುಬ್ಬಯ್ಯನವರು 'ಡಿ.ವಿ.ಗುಂಡಪ್ಪ' ಕೃತಿರಚನೆಯ ಮೂಲಕ, ಡಿವಿಜಿಯವರ ಬದುಕನ್ನು ಅತ್ಯಂತ ಹೃದಯಸ್ಪರ್ಶಿಯಾಗಿ, ಚಿಂತನೀಯ-ವಾಗಿ ಕನ್ನಡಿಗರಿಗೆ ನೀಡಿದ್ದಾರೆ. ದೊಡ್ಡವರ ದೊಡ್ಡತನವನ್ನು ಗುರುತಿಸುವುದಕ್ಕೆ ದೊಡ್ಡತನವೇ ಬೇಕು.



---

ಪರೀಕ್ಷೆ ಎಂಬುದು ಒಂದು ಅಗತ್ಯವಾದ ಪೀಡೆ. ಏಕೆಂದರೆ ಅದಕ್ಕಿಂತ ಬೇರೆ ಯಾವ ಮೌಲ್ಯಮಾಪನವನ್ನೂ ಮಾನವನ ಬುದ್ಧಿ ಇನ್ನೂ ಕಂಡುಹಿಡಿದಿಲ್ಲ. ಅಂಥ ಸಾಧನವನ್ನು ಅನ್ವೇಷಣೆ ಮಾಡುವ ತನಕ ಪರೀಕ್ಷೆಗಳನ್ನು ನಡೆಸುತ್ತಲೇ ಇರಬೇಕು. ಆದರೆ ಅದನ್ನು ನಡೆಸುವ ಮಾರ್ಗದಲ್ಲಿ ಕೆಲವು ಸುಧಾರಣೆಗಳನ್ನು ಮಾಡಲು ಇನ್ನೂ ಸಾಧ್ಯವಿದೆ. ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಕೇಳುವ ವಿಧಾನದಲ್ಲಿ ಹೆಚ್ಚು ಎಚ್ಚರಿಕೆ ವಹಿಸುವುದು ಸಾಧ್ಯವಿದೆ. ಅದಕ್ಕೆ ಅಧ್ಯಾಪಕವರ್ಗವೂ ಶಿಕ್ಷಣ ಇಲಾಖೆಯು ಶ್ರಮವಹಿಸಬೇಕು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಮಾರ್ಗದರ್ಶಕರು

ಡಾ. ತಾಳ್ತಜೆ ವಸಂತಕುಮಾರ

ಪ್ರೊ. ಜಿ. ವೆಂಕಟಸುಬ್ಬಯ್ಯನವರ ಕೃತಿ 'ಮಾರ್ಗದರ್ಶಕರು' (ಪ್ರ. ವಸಂತ ಪ್ರಕಾಶನ ಬೆಂಗಳೂರು; 2006; ಪು. ೧೩೭+೧೪). ಇದು, ಆಧುನಿಕ ಕನ್ನಡದ ಸಂದರ್ಭದಲ್ಲಿ ದುಡಿದ ಮಹನೀಯರ ವ್ಯಕ್ತಿಚಿತ್ರಗಳ ಸರಮಾಲೆಯಾಗಿದೆ. ಲೇಖಕರ ಮಾತಿನಲ್ಲಿ 'ಇಪ್ಪತ್ತೊಂದನೆಯ ಶತಮಾನದ ಈ ದಶಕದಲ್ಲಿ ಕನ್ನಡದ ಅನೇಕ ಹಿರಿಯರ ಜನ್ಮಶತಮಾನೋತ್ಸವಗಳು ನೆರವೇರಿವೆ. ಇನ್ನೂ ನೆರವೇರುವ ಅವಕಾಶವಿದೆ. ಹೀಗಿರುವಾಗ ಅಂಥ ಹಿರಿಯರಲ್ಲಿ ನನಗೆ ಪರಿಚಿತರಾಗಿ ನನ್ನ ಮೇಲೆ ಪ್ರಭಾವವನ್ನು ಬೀರಿದ ಕೆಲವರ ನೆನಪು ನನ್ನನ್ನು ಕಾಡಿತು. ಮತ್ತೆ ಕೆಲವರು ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡರು. ಆ ಸಂದರ್ಭಗಳಲ್ಲಿ ನಾನು ರಚಿಸಿದ ಕೆಲವು ಚಿಕ್ಕ ಚಿಕ್ಕ ಲೇಖನಗಳನ್ನು, ಕನ್ನಡಪ್ರಭ, ಪ್ರಜಾವಾಣಿ, ವಿಜಯ ಕರ್ನಾಟಕ, ಹೊಸತು ಮುಂತಾದ ಪತ್ರಿಕೆಗಳು ಪ್ರಕಟಿಸಿದವು. ಅವುಗಳನ್ನೆಲ್ಲ ಕೂಡಿಸಿ 'ಮಾರ್ಗದರ್ಶಕರು' ಎಂಬ ಹೆಸರಿನಲ್ಲಿ ಈ ಪುಸ್ತಕವನ್ನು ಪ್ರಕಟಿಸಲಾಗಿದೆ' ಎಂಬೀ ವಿವರಣೆ ಸಿಗುತ್ತದೆ. ಪತ್ರಿಕೆಗಳ ಸೀಮಿತವ್ಯಾಪ್ತಿಗೆ ಅಳವಡಿಸುವಾಗಿನ ಸಂಗ್ರಾಹ್ಯಗುಣ, ಜತೆಜತೆಗೇ ಮುಖ್ಯ ವಿಷಯಕ್ಕೆ ಬಾಧಕವಾಗದಂತೆ ಹಾಳತವಾಗಿ ನಿರೂಪಿಸುವ ವಿಚಕ್ಷಣ–ಸರಳತೆಗಳು ಇಲ್ಲಿಯ ಎಲ್ಲ ಬರಹಗಳ ಮೂಲದ್ರವ್ಯವಾಗಿದೆ.

ಪ್ರೊ. ಜಿ. ವಿ.ಯವರು ಇಲ್ಲಿ ಒಟ್ಟು ಹತ್ತೊಂಬತ್ತು ಮಂದಿ ವಿದ್ವಾಂಸರ ಗುಣವಿಶೇಷಗಳನ್ನು ಕಾಣಿಸುತ್ತ ಹೋಗಿದ್ದಾರೆ. 'ಗುಣವಿಶೇಷಗಳು' ಎಂದೆ: ಏಕೆಂದರೆ ಆಯಾ ಶೀರ್ಷಿಕೆಯೇ ವಿಶಿಷ್ಟ ಗುಣವಾಚಕದಿಂದ ಗಮನಸೆಳೆಯುವುದು ಇಲ್ಲಿಯ ವಿಶೇಷತೆಯಾಗಿದೆ. ಉದಾಹರಣಾರ್ಥ, 'ಅತ್ಯಪೂರ್ವ ವಿದ್ವಾಂಸ', 'ಪ್ರಸಿದ್ಧ ಪುರಾತತ್ತ್ವ ಶಾಸ್ತ್ರಜ್ಞ', 'ಸಜ್ಜನತೆ', 'ಮಿನುಗುವ ಮಿಂಚು', 'ವಿನಯವಂತ ವಿದ್ವಾಂಸ', 'ಮಾತಿನ ಮಂಟಪ', 'ಅನುವಾದಕುಶಲಿ', 'ಮೌನಿಯಾಗಿದ್ದ ವಿದ್ವಾಂಸ', 'ವಿದ್ವದ್ವರೇಣ್ಯ' ಈ ಬಗೆಯ ಪೂರ್ವಪದ ಇಲ್ಲವೆ ವಿಶೇಷಣಗಳು ಎಲ್ಲ ಲೇಖನಗಳಿಗೂ ಅಂದ ಕೊಟ್ಟಿವೆ.

ಮೊದಲನೆಯ ಲೇಖನ ಡಾ. ಅಂಬಳೆ ವೆಂಕಟಸುಬ್ಬಯ್ಯನವರ ಕುರಿತಾಗಿದ್ದು, ಇದರಲ್ಲಿ ಅಪೂರ್ವವಾದ ಸಾಂಸ್ಕೃತಿಕ ಮಾಹಿತಿಗಳನ್ನು ಕಾಣುತ್ತೇವೆ. ಸ್ಮಾರ್ತ ಬ್ರಾಹ್ಮಣರ ಬೃಹಚ್ಚರಣ ಪಂಗಡದ ವಲಸೆಯ ವಿವರಗಳು, ಸಮುದ್ರಯಾನ

ಮಾಡುವುದು ವಿಪ್ರರಿಗೆ ತ್ಯಾಜ್ಯವಾಗಿದ್ದ ಸಂದರ್ಭದಲ್ಲಿ ವೆಂಕಟಸುಬ್ಬಯ್ಯ ಹಾಗೂ ಅವರ ಬಳಗಕ್ಕೆ ಬಹಿಷ್ಕಾರ ಹಾಕಿದ ಹಿನ್ನೆಲೆ ಎಲ್ಲವನ್ನೂ ಹೇಳುತ್ತ, 'ಈಗ ಇದು ಸಮಾಜದ ಚರಿತ್ರೆಗೆ ಸೇರಿದ ವಿಷಯ' ಎಂಬ ಷರಾ ಬರೆಯುತ್ತಾರೆ!

ಪ್ರೊ. ವೆಂಕಟಸುಬ್ಬಯ್ಯನವರಿಗೆ ಸುದೀರ್ಘಕಾಲದ ಸಾಹಿತ್ಯಕ –ಸಾಂಸ್ಕೃತಿಕ– ಸಾಮಾಜಿಕ ಸಂದರ್ಭಗಳಲ್ಲಿ, ಪ್ರೇರಣೆ–ಪ್ರೋಷಣೆ–ಸಮಾಲೋಚನೆ–ಸಲಹೆ–ಆದೇಶ ಹೀಗೆ ವಿಭಿನ್ನ ಪಾತಳಿಗಳಲ್ಲಿ ಸಮ್ಮುಖರಾದವರೇ ಇಲ್ಲಿ ವಿವಕ್ಷಿತರಾಗಿರುವುದರಿಂದ ಉದ್ದಕ್ಕೂ ಕೃತಿಯಿದು ವ್ಯಕ್ತಿನಿಷ್ಠವಾದ ನೆಲೆಯಲ್ಲಿಯೇ ಅನಾವರಣಗೊಳ್ಳುತ್ತ ಸಾಗುತ್ತದೆ. ಅದೆಷ್ಟೋ ಮಂದಿ ಇವರಿಗೆ ಪಾಠ ಹೇಳಿದವರು. (ಉದಾ: ಎ. ಆರ್. ಕೃಷ್ಣ ಶಾಸ್ತ್ರೀ, ಎಂ. ಎಚ್. ಕೃಷ್ಣ, ಜಿ. ಹನುಮಂತ ರಾವ್, ಎಸ್. ಶ್ರೀಕಂಠ ಶಾಸ್ತ್ರಿ – ಹೀಗೆ). ಇನ್ನು ಕೆಲವರು ಪ್ರೀತಿಯ ಸಹಾಧ್ಯಾಯಿಗಳು (ಉದಾ: ಎಸ್. ವಿ. ಪರಮೇಶ್ವರ ಭಟ್ಟ ಇತ್ಯಾದಿ) ಮತ್ತಿತರರು ಅವರ ಮೇಲೆ ವಿಶೇಷ ಪ್ರಭಾವ ಬೀರಿದವರು (ಉದಾ: ಎ. ಎನ್. ಮೂರ್ತಿರಾವ್, ಸಿದ್ಧವನಹಳ್ಳಿ ಕೃಷ್ಣಶರ್ಮ, ಕೆ. ವಿ ರಾಘವಾಚಾರ್, ಎಸ್. ಕೆ. ರಾಮಚಂದ್ರರಾಯರು) ಮತ್ತು ಕೆಲವರು ತಮ್ಮ ವಿಶೇಷ ಸಾಧನೆಗಳ ಮೂಲಕ ಗುರುತಾದವರು (ಉದಾ: ಟಿ. ಎನ್. ಶಾಮರಾವ್, ನೀರ್ಪಾಜೆ ಭೀಮ ಭಟ್).

ಇಲ್ಲಿಯ ಎಲ್ಲ ಲೇಖನಗಳೂ ವ್ಯಕ್ತಿವಿವರಗಳೆ ಆಗಿದ್ದರೂ ಎಡೆಯೆಡೆಯಲ್ಲಿ ಆಯಾ ಸಂದರ್ಭಗಳಿಗೆ ಹೊಂದುವಂತೆಯೂ, ಹಾಗಿದ್ದೂ ಅತ್ಯಪೂರ್ವ ಒಳನೋಟ ಬೀರುವಂತೆಯೂ ಲೇಖಕರು ಸಾಗುತ್ತ ಹೋಗುವ ಪರಿ ವಿಲಕ್ಷಣವಾಗಿದೆ. ಕರ್ನಾಟಕದ – ಕನ್ನಡದ ಬೆಳವಣಿಗೆಯ ಕಾಲಘಟ್ಟದಲ್ಲಿ ಇಪ್ಪತ್ತನೆಯ ಶತಮಾನಕ್ಕೆ ಭವ್ಯ ಹಿನ್ನಲೆಯಿದೆ. ಅದರಲ್ಲೂ ಮೈಸೂರು ಭಾಗಕ್ಕೆ ಅತ್ಯಪೂರ್ವ ಸಾಂಸ್ಕೃತಿಕತೆ ಪ್ರಾಪ್ತವಾಗಿದೆ. ಇದನ್ನು ಜಿ.ವಿ.ಯವರು ವಿವರಿಸುವ ಕ್ರಮ ಕುತೂಹಲಕರವಾಗಿದೆ. ಒಂದು ಉದಾಹರಣೆ ನೋಡೋಣ.

"ಆಧುನಿಕ ಕನ್ನಡದ ನಿಜವಾದ ಬೆಳವಣಿಗೆಗೆ ಮೂಲಭೂತವಾಗಿ ಅಗತ್ಯ–ವಾಗಿದ್ದ ವಿದ್ವತ್ತು ನಿರ್ಮಾಣವಾದುದು ಇಪ್ಪತ್ತನೆಯ ಶತಮಾನದ ಮೊದಲರ್ಧದಲ್ಲಿ, ಬಿ.ಎಂ.ಶ್ರೀಯವರು ಇಂಗ್ಲಿಷಿನ ಅಧ್ಯಾಪಕರಾಗಿ ಸಂಸ್ಕೃತ, ಕನ್ನಡ, ತಮಿಳು, ಗ್ರೀಕ್ ಮುಂತಾದ ಭಾಷೆಗಳನ್ನು ಆಳವಾಗಿ ಅಭ್ಯಾಸಮಾಡಿ ತರಗತಿಗಳಲ್ಲಿಯೂ ಸಾರ್ವಜನಿಕ ಭಾಷಣಗಳಲ್ಲಿಯೂ ಮಾಡಿದ ಪ್ರಚಾರದ ಪ್ರಭಾವವನ್ನು ಅಳೆಯುವುದು ಸಾಧ್ಯವಿಲ್ಲ. ಕೇವಲ ಪ್ರಚಾರದಿಂದ ಏನೂ ಆಗುತ್ತಿರಲಿಲ್ಲ. ಆದುದರಿಂದ ಅವರೇ ಮೊದಲು ಮಾಡಿದ 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ಧಾರವಾಡದ ಭಾಷಣ ಕನ್ನಡದ ನವೋದಯಕ್ಕೆ ಕಾರಣವಾಯಿತು....

"..... ಶ್ರೀಯವರ ಶಿಷ್ಯರೂ ಮಿತ್ರರೂ ಆ ಬಳಿಕ ಸೃಷ್ಟಿಮಾಡಿದ ಸಾಹಿತ್ಯದ ರಾಶಿ ಅಪಾರವಾಗಿ ಇನ್ನೂ ಬೆಳೆಯುತ್ತಲೇ ಇದೆ. ಬೆಳೆಯುವುದಷ್ಟೇ ಅಲ್ಲ ಶಾಖೋಪಶಾಖೆಗಳಾಗಿ ಅನೇಕ ರೂಪಾಂತರಗಳನ್ನು ಪಡೆದು ಈಗಲೂ ನೂತನ ಪ್ರಯೋಗಗಳು ನಡೆಯುತ್ತಲೇ ಇವೆ.. .

"...ಹೊಸಗನ್ನಡದ ಸಾಹಿತ್ಯಸೃಷ್ಟಿಯಲ್ಲಿ ಅಭೂತಪೂರ್ವವಾದ ಕಾರ್ಯಗಳನ್ನು ನಿರ್ವಹಿಸಿದ ಮಾಸ್ತಿಯವರು, ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರೀ ಇವರೆಲ್ಲ ಶ್ರೀಯವರ ಶಿಷ್ಯರು. ಡಿ.ವಿ.ಜಿ. ಶ್ರೀಯವರ ಆಪ್ತಮಿತ್ರರು. ಇವರೆಲ್ಲ ಮೊದಲ ತಲೆಮಾರಿನ ವಿದ್ಯಾರ್ಥಿಗಳು ಮತ್ತು ಲೇಖಕ ವಿದ್ವಾಂಸರು. ಇವರ ಮುಂದೆ ಬಂದ ತೀ. ನಂ. ಶ್ರೀ. ಡಿ. ಎಲ್. ಎನ್. ಮುಂತಾದವರಿಂದ ಹಿಡಿದು ಮುಂದೆ ಹತ್ತು ವರ್ಷಗಳ ಕಾಲ ಶ್ರೀಯವರ ಶಿಷ್ಯರಾದ ನೂರಾರು ವಿದ್ವಾಂಸರು, ಲೇಖಕರು ಹೊಸಗನ್ನಡದ ಅಭಿವೃದ್ಧಿಗೆ ಬೇರೆ ಬೇರೆ ರೀತಿಯಲ್ಲಿ ಕಾರಣರಾದರು" (ಪು. ೫೬, ೫೭) ಹೀಗೆ ತರ್ಕಬದ್ಧವಾಗಿ ವಿಚಾರಪ್ರಣಾಲಿಯು ಬೆಳೆಯುವುದನ್ನು ಇಲ್ಲಿ ಗಮನಿಸುತ್ತೇವೆ.

ಹಾಗೆಂದು, ಜಿ. ವಿ.ಯವರು ಕೇವಲ 'ಮೈಸೂರು' ಮಠದವರೆಂದೂ ಭಾವಿಸಬೇಕಾಗಿಲ್ಲ! ಅನುವಾದಕ ಟಿ. ಎಸ್. ಶ್ಯಾಮರಾಯರ ಬಗೆಗೆ ಬರೆಯುತ್ತಲೇ ಕರಾವಳಿಯ ಕಡೆಂಗೋಡ್ಲು ಬಗೆಗೆ, ಎಸ್ವಿಪಿ ಮತ್ತು ಜಿ. ವರದರಾಜರಾಯರ ಸಾಧನೆಗಳಲ್ಲಿ ಕರ್ನಾಟಕದ ಈ ಭಾಗದ ಕೊಡುಗೆಗಳ ವಿಚಾರವಾಗಿಯೂ ಬೆಳಕು ಚೆಲ್ಲುತ್ತಾರೆ.

ಅಂತೆಯೇ ಇಲ್ಲಿ ಜಿ.ವಿ.ಯವರ ಲಕ್ಷ್ಯ ಕೇವಲ ಸಾಹಿತಿಗಳೂ, ಕವಿ – ನಾಟಕಕಾರರ ಬಗೆಗಷ್ಟೇ ಅಲ್ಲ; ಇತಿಹಾಸಕಾರರು, 'ಆಕಾಶವಾಣಿ'ಯ ಸಂಸ್ಥಾಪಕರು (ಎಂ. ವಿ. ಗೋಪಾಲಸ್ವಾಮಿ) ಸ್ವಾತಂತ್ರ್ಯ ಚಳವಳಿ – ಗಾಂಧೀವಾದಗಳಲ್ಲಿ ಸರ್ವಾರ್ಪಣೆಗೊಂಡವರು (ಸಿದ್ಧವನಹಳ್ಳಿ ಕೃಷ್ಣಶರ್ಮ) ಇವರೆಲ್ಲರೂ ನುಡಿಹಾರ–ಗಳಿಂದ ಇಲ್ಲಿ ಅಲಂಕೃತರಾಗಿದ್ದಾರೆ.

ಈಗಾಗಲೇ ಸೂಚಿಸಿದಂತೆ, ಈ ಕೃತಿಯ ವಿನ್ಯಾಸವೇ ಆಪಾತತಃ ಸಾಂಸ್ಕೃತಿಕ ನೆಲೆಯದು. ಆ ತನ್ನ ಉದ್ದೇಶದಲ್ಲಿ ಇಲ್ಲಿಯ ಎಲ್ಲ ಲೇಖನಗಳೂ ಗೆಲ್ಲುತ್ತವೆ. ನಮ್ಮ ಬೆನ್ನ ಹಿಂದಿನ ಬದುಕಿನ ಅಗಾಧ ವ್ಯಾಪ್ತಿ ಮತ್ತು ಆಳಗಳನ್ನು ಪರಿಚಯಿಸುತ್ತವೆ. ಇಪ್ಪತ್ತನೆಯ ಶತಕದ ಕಾಲಮಾನವನ್ನು ಕನ್ನಡದ ಎರಡನೆಯ ಸುವರ್ಣಯುಗ ಎನ್ನುವ ಮನಸ್ಸು ಗಟ್ಟಿಯಾಗುತ್ತದೆ. ಡಿವಿಜಿಯವರ ಜ್ಞಾಪಕಚಿತ್ರಶಾಲೆಯಂತೆ, ನವರತ್ನ ರಾಮರಾಯರ, ಮಾಸ್ತಿಯವರ ಹಾಗೂ ಎ. ಎನ್. ಮೂರ್ತಿರಾಯರ ಬರೆಹಗಳಂತೆ ಇಲ್ಲಿಯೂ ಕೂಡಾ ಕನ್ನಡ ಸಂಸ್ಕೃತಿ ಲೋಕದ ವಿಶಿಷ್ಟ ಬೆಳಕಂಡಿಗಳು ಕಾಣಿಸುತ್ತವೆ. **'ಮಾರ್ಗದರ್ಶಕರು'** ಈ ಕಾಲದ ಎಲ್ಲರೂ ಓದಿ ಮನನ ಮಾಡಬೇಕಾದ ಕೃತಿಯಾಗಿದೆ.



# ಕನ್ನಡದ ನಾಯಕಮಣಿಗಳು

ಅರುಣಕುಮಾರ, ಎಸ್. ಆರ್.

ಲೇಖಕನೊಬ್ಬನ ಬದುಕು, ನಡೆ, ನುಡಿ ಮತ್ತು ಚಿಂತನೆಗಳ ಉತ್ಪನ್ನ-ಗಳಾಗಿರುವ ಕೃತಿಗಳು ಅವುಗಳೊಳಗಿನ ಸಂಬಂಧಗಳನ್ನು ನಿರೂಪಿಸುತ್ತವೆ. ಬದುಕಿನ ಆಗುಹೋಗುಗಳು, ಅನುಭವಗಳನ್ನು ಬರವಣಿಗೆಯಲ್ಲಿ ಇರಿಸುವ ಪ್ರಯತ್ನವನ್ನು ಲೇಖಕ ಮಾಡುತ್ತಾನೆ. ಇಂದಿನ ದಿನಗಳಲ್ಲಿ ನಡೆದಂತೆ ನುಡಿವ, ನುಡಿದಂತೆ ನಡೆವ ಬದುಕನ್ನು ನಾವು ಕಾಣಲಾಗದು. ಆದರೆ ಒಂದು ಕಾಲದಲ್ಲಿ ಅಪೂರ್ವಬದ್ಧತೆ-ಯೊಂದಿಗೆ ಜೀವನಸೋಪಾನಕ್ಕೆ ವ್ಯವಸ್ಥಿತವಾದ ಆಯಾಮವನ್ನು ಕೊಟ್ಟುಕೊಳ್ಳುತ್ತಲೇ, ಸಮಾಜಕ್ಕೆ ಒಳಿತನ್ನು ಬಯಸಿ, ಬರೆದು ಬಾಳುವ ವ್ಯಕ್ತಿತ್ವಗಳಾಗುವುದು ಬರಹ-ಗಾರರೆನಿಸಿದವರ ಗುಣಧರ್ಮವಾಗಿತ್ತು. ಈ ಬಗೆಯ ಜೀವನಾದರ್ಶವನ್ನು ಪಾಲಿಸಿ-ಕೊಂಡು ಬಂದು, ಜೀವನದಲ್ಲಿ ಮಹತ್ತನ್ನು ಸಾಧಿಸಿದ ಕೆಲವು ಸಾಹಿತಿಮಹನೀಯರ ನುಡಿಚಿತ್ರಣ ಮಾಡಿದವರು ಕನ್ನಡದ ಖ್ಯಾತಬರಹಗಾರ, ನಿಘಂಟುತಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯನವರು. 'ಕನ್ನಡದ ನಾಯಕಮಣಿಗಳು' ಎಂಬ ಕೃತಿಯಲ್ಲಿ ಈ ಬಗೆಯ ಹದಿನಾರು ಜನ ಕನ್ನಡದ ಲೇಖಕರನ್ನು, ತಮ್ಮ ಧ್ಯೇಯೋದ್ದೇಶಗಳಿಗಾಗಿ ಅಹರ್ನಿಶಿ ದುಡಿದ ಸಂಸ್ಕೃತಿಸಂಪನ್ನರನ್ನು ಅವರು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಕನ್ನಡದಲ್ಲಿ ಆತ್ಮಚರಿತ್ರೆ ಹಾಗೂ ವ್ಯಕ್ತಿಚಿತ್ರಗಳು ಸಾಕಷ್ಟು ಬಂದಿವೆ. ವ್ಯಕ್ತಿಚಿತ್ರ-ವೆಂದರೆ ವ್ಯಕ್ತಿಯೊಬ್ಬನ ಜೀವನದ ವಿವಿಧ ಮಜಲು, ಸಾಧನೆ, ಸಮಾಜಕ್ಕೆ ಅವನ ಕೊಡುಗೆಯನ್ನು ಆದ್ಯಂತವಾಗಿ ನಿರೂಪಿಸುವುದಾದರೆ, ಸಂಕ್ಷಿಪ್ತ ಚರಿತ್ರೆಯಲ್ಲಿ ಲೇಖಕರು ಆ ವ್ಯಕ್ತಿಯನ್ನು ಹತ್ತಿರದಿಂದ ಒಡನಾಡಿ ಅನುಭವಿಸಿದ್ದರಲ್ಲಿ ಕೆಲವೊಂದನ್ನು ಆಯ್ದು ದಾಖಲಿಸುವುದಾಗಿದೆ. ಪ್ರೊ. ವೆಂಕಟಸುಬ್ಬಯ್ಯನವರ ನೆನಕೆಗಳು ಆತ್ಮೀಯತೆಯ ಸೊಗಡಿನಲ್ಲಿ ವಿಮರ್ಶೆಯ ತಳಹದಿಯೊಂದಿಗೆ, ನಿರೂಪಣವಿಧಾನದ ಸೊಗಸಿನಿಂದಾಗಿ ಪರಿಣಾಮಕಾರಿಯಾಗಿವೆ.

ಪ್ರಸ್ತುತ ಕೃತಿಯಲ್ಲಿ ಚಿತ್ರಿಸಲಾದ ಹದಿನಾರು ಮಂದಿ ಮಹತ್ತ್ವದ ವ್ಯಕ್ತಿಗಳಲ್ಲಿ ಹಲವರು ಅವರ ಒಡನಾಡಿಗಳಾಗಿ, ಸಮಕಾಲೀನರಾಗಿ, ಹಿರಿಯರಾಗಿದ್ದವರು. ಕೆಲವರ ಬಗೆಗೆ ಅವರು ಓದಿ ತಿಳಿದುಕೊಂಡುದಾಗಿದೆ. ಒಟ್ಟಿನಲ್ಲಿ ತಮ್ಮ ಮನದ ತುಂಬ ಪರಿಣಾಮಬೀರಿದಂತಹವರ ಚಿತ್ರಣಗಳನ್ನು ಆಯ್ದು ನೀಡಿರುತ್ತಾರೆ. ಅವರಲ್ಲಿ

ಮೂವರು ಕನ್ನಡಕ್ಕಾಗಿ ದುಡಿದ ವಿದೇಶೀಯ ಮಿಶನರಿಗಳಾದರೆ, ಉಳಿದವರೆಲ್ಲರೂ ಕನ್ನಡಿಗರು. ಒಂದೆಡೆ ಸ್ವಾತಂತ್ರ್ಯಚಳುವಳಿ, ಇನ್ನೊಂದೆಡೆ ಕನ್ನಡ ನೆಲ, ಜಲ, ಭಾಷೆಯೊಂದಿಗೆ ದೇಶಸಂಸ್ಕೃತಿಸಂರಕ್ಷಣೆಯ ಮನೋಭಾವದಲ್ಲಿ ಕನ್ನಡತನವನ್ನು ಉಳಿಸುವ ಪ್ರೀತಿಯೊಂದಿಗೆ ಹುಟ್ಟಿಕೊಂಡ ನವೋದಯದ ಚಿತ್ತಾರದಲ್ಲಿ ತಮ್ಮ ಬದುಕು ಮತ್ತು ಬರವಣಿಗೆಯಿಂದ ಜನರ ಮನಸ್ಸನ್ನು ಆಳಿದ ಸಾಹಿತಿಗಳು, ಕಲಾವಿದರು. ಸಮಾಜಸೇವಾಕಾಂಕ್ಷಿಗಳ ದೊಡ್ಡ ಪಡೆಯಲ್ಲಿ ಕೇವಲ ಹದಿನಾರು ಮಂದಿಯನ್ನಷ್ಟೇ ಪ್ರೊ. ಜಿ.ವೆಂ. ಈ ಕೃತಿಯಲ್ಲಿ ನೆನಪಿಸಿಕೊಂಡಿದ್ದಾರೆ.

**ವಿದೇಶೀಯರಿಂದ ಕನ್ನಡದ ಕಾಯಕ**

ರೆವರೆಂಡ್ ಜಾನ್ ಹ್ಯಾಂಡ್ಸ್ ಮತ್ತು ಎಫ್. ಕಿಟ್ಟೆಲ್ ಇಬ್ಬರೂ ಕೂಡ ವಿದೇಶೀ ಮಿಶನರಿಗಳು. ಶಿಕ್ಷಣ, ಮುದ್ರಣ, ನಿಘಂಟುರಚನೆ, ಗ್ರಂಥಸಂಪಾದನೆ, ಕನ್ನಡ ವ್ಯಾಕರಣ ಮುಂತಾದ ಮಹತ್ತ್ವದ ಕೆಲಸಗಳಿಂದಾಗಿ ಈ ಇಬ್ಬರು ಮಹನೀಯರು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇವರಿಬ್ಬರ ಆರಂಭಿಕ ಹಂತದ ಕೆಲಸಗಳು ಹೊಸಕಾಲಕ್ಕಾಗಿ ಕನ್ನಡವನ್ನು ಕಟ್ಟುವ ಕಾಯಕದ ಗಟ್ಟಿ ತಳಹದಿಯಾದುವು ಎಂಬುದನ್ನು ಪ್ರೊ. ಜಿ.ವೆಂ. ಅಂತಃಕರಣಪೂರ್ವಕವಾಗಿ ಸ್ಮರಿಸಿಕೊಂಡಿದ್ದಾರೆ.

**ಆಂಗ್ಲರೂ ಮೆಚ್ಚಿದ ರಾವ್ ಬಹದ್ದೂರ್**

ಚಿತ್ತವಾಡಿಗೆ ಹನುಮಂತ ಗೌಡರು ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಕನ್ನಡಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ದುಡಿದ ಮಹನೀಯರಲ್ಲಿ ಒಬ್ಬರು. ಅವರ 'ಶಂತನು ದ್ವೀಪದ ಚಕ್ರವರ್ತಿ' ಎಂಬುದು ಮುಖ್ಯ ಕಾದಂಬರಿ ಕೃತಿ. ಮುರಿಗಾರಾಘ್ಯನ ಶೃಂಗಾರಚಾತುರ್ಯೋಲ್ಲಾಸಿನಿ, ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ, ಲಕ್ಷ್ಮಣರಾಯರ ಸೂರ್ಯಕಾಂತ ಮುಂತಾದ ಗ್ರಂಥಗಳ ಕಾಲಘಟ್ಟದಲ್ಲೇ ರಚಿತವಾದ ಈ ಕಾದಂಬರಿಗೆ ಕನ್ನಡದ ಸಂದರ್ಭದಲ್ಲಿ ಐತಿಹಾಸಿಕ ಮಹತ್ತ್ವವಿದೆಯೆಂದು ಪ್ರೊ. ಜಿ.ವೆಂ. ಗುರುತಿಸಿಕೊಡುತ್ತಾರೆ. ಹನುಮಂತ ಗೌಡರ ಸಾಹಿತ್ಯಕೃತಿಗಳು ಮುದ್ರಿತಗೊಂಡಿಲ್ಲವೆಂಬ ಕೊರತೆಯನ್ನು ಹೇಳುತ್ತಾ, ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷ್ ಸರಕಾರವೇ ಅವರಿಗೆ 'ರಾವ್ ಬಹದ್ದೂರ್' ಬಿರುದನ್ನು ನೀಡಿ ಗೌರವಿಸಿರುವುದನ್ನು ನೆನೆದುಕೊಂಡಿದ್ದಾರೆ. ಆ ಮಹನೀಯರ ಪುಟ್ಟ ಜೀವನಪರಿಚಯವನ್ನು ನೀಡಿದ್ದಾರೆ.

**ಕನ್ನಡದ ಟಿಪಿಕಲ್ ಕೈಲಾಸಂ**

ಕನ್ನಡ ನಾಟಕಗಳಿಗೆ ಹೊಸ ಆಯಾಮವನ್ನು ನೀಡಿದ ಕೈಲಾಸಂ ಅವರ ಪ್ರಯತ್ನ ಅಪಾರವೆಂದೆನಿಸಿದರೂ, ನಿರ್ದಿಷ್ಟವಾಗಿ ಅವರ ಕೊಡುಗೆ ಹೇಳುವಂತಾದ್ದೇನಿಲ್ಲವೆಂದೂ ಇಂಗ್ಲಿಷ್ ಭಾಷೆಯಲ್ಲಿದ್ದ ಹಿಡಿತದಿಂದಾಗಿ ಅವರ ಇಂಗ್ಲಿಷ್ ನಾಟಕಗಳು ಶಕ್ತಿಶಾಲಿಯಾದಂತೆ, ಕನ್ನಡ ನಾಟಕಗಳು ಪ್ರೌಢವಾಗಿರಲಿಲ್ಲವೆಂದೂ ಅನ್ಯರು ಹೇಳದ ಸತ್ಯವನ್ನು ಹೊರಹಾಕುತ್ತಾರೆ. ಆದರೆ ಕೈಲಾಸಂ ತಮ್ಮ ನಾಟಕಗಳಿಗಿಂತ ಎಷ್ಟೋ ದೊಡ್ಡವರು. ಅವರ ಸೃಷ್ಟಿಯ ವೈವಿಧ್ಯ ಇನ್ನೂ ವಿಸ್ತಾರವಾಗಬಹುದಿತ್ತು.

ಅವರ ಬಾಳಿನ ವೈಚಿತ್ರ್ಯ, ಭಾಷೆಯ ಕೃತ್ರಿಮತೆ, ಅವರ ಅಲ್ಪತೃಪ್ತಿ ಇವು ಬರಡು ನೆಲದಲ್ಲಿ ಹಸಿರನ್ನು ಹೊಮ್ಮಿಸಿದರೂ, ವೃಕ್ಷವನ್ನು ಬೆಳೆಸಲಾರದೆ ಹೋದುವು ಎಂಬ ಮಾತಿನಲ್ಲಿ ಕೈಲಾಸಂ ಅವರ ನಿಜವ್ಯಕ್ತಿತ್ವಕ್ಕೂ ಸೃಷ್ಟಿಶೀಲತೆಗೂ ಇರುವ ಅಂತರವನ್ನು ಅನಾವರಣ ಮಾಡಿದ್ದಾರೆ.

**ಬಹುಮುಖ ಪ್ರತಿಭಾಶಾಲಿ ಪಂಡಿತ ತಾರಾನಾಥ**

ಪ್ರಸಿದ್ಧ ಆಯುರ್ವೇದ ವಿದ್ವಾಂಸ, ಯೋಗಶಾಸ್ತ್ರನಿಪುಣ, ಸಂಗೀತವಿಶಾರದ, ಶಿಕ್ಷಣತಜ್ಞ, ಪಂಡಿತ ತಾರಾನಾಥರ ಜೀವನದ ಏಳುಬೀಳುಗಳ ಸ್ವಾರಸ್ಯಕರ ಅಂಶಗಳು, ಸಾಧನೆಯ ಮಜಲುಗಳು ಹಾಗೂ ಸಮಾಜಸೇವೆಯ ವಿವಿಧ ಮುಖಗಳ ಪರಿಚಯುವನ್ನು ಈ ಲೇಖನ ಮಾಡುತ್ತದೆ. ತಾರಾನಾಥರು 'ಧರ್ಮಸಂಭವ' ಎಂಬ ಗಾಢವಾದ ಚಿಂತನೆಗಳಿರುವ ಕೃತಿಯನ್ನಲ್ಲದೆ ಹಲವಾರು ನಾಟಕಗಳನ್ನು ರಚಿಸಿದ್ದರು. ಪಂಡಿತ ತಾರಾನಾಥರನ್ನು ಆ ಕಾಲದ ಕನ್ನಡದ ಅನೇಕ ಬರಹಗಾರರು ಗುರುಭಾವನೆಯಿಂದ ಸ್ವೀಕರಿಸಿ ಅವರ ಬಳ್ಳಾರಿಯ ಆಶ್ರಮ ಪ್ರೇಮಾಯತನದಲ್ಲಿದ್ದು, ಅವರ ಸೃಷ್ಟಿಶೀಲಸಾಮರ್ಥ್ಯವನ್ನು ಮೆಯ್ಗೂಡಿಸಿಕೊಂಡವರಾಗಿದ್ದರು. ತಾರಾನಾಥರ ಬರಹ ಕಡಮೆಯಾಗಿದ್ದರೂ ಅವರ ಬದುಕೇ ಕನ್ನಡ ನವೋದಯಕ್ಕೆ ಒಂದು ರೀತಿಯ ಪ್ರೋತ್ಸಾಹವನ್ನು ನೀಡಿತು ಎಂಬುದನ್ನು ಪ್ರೊ. ಜಿ. ವೆಂ. ಉಲ್ಲೇಖಿಸಿದ್ದಾರೆ.

**ಎ.ಸೀ.ಯವರ ಬರವಣಿಗೆಯ ಗಟ್ಟಿತನ**

ಎ. ಸೀತಾರಾಮಯ್ಯನವರು ಬರೆದ ಮುಂಬಯಿವಾಸ, ಕಾಲೇಜು ದಿನಗಳು ಕೃತಿಗಳಲ್ಲಿ ಕಂಡುಬರುವ ವ್ಯಕ್ತಿತ್ವಚಿತ್ರಣಗಳನ್ನು ಮರುನಿರೂಪಿಸುವ ಪ್ರೊ. ಜಿ. ವಿ. ಯವರು ಅವರೊಂದಿಗಿನ ಒಡನಾಡಿದ ದಿನಗಳನ್ನು ನೆನಪಿಸಿಕೊಂಡಿದ್ದಾರೆ. ಎ.ಸೀ.-ಯವರ ಬರವಣಿಗೆ ಎಷ್ಟು ಹೃದ್ಯವೆಂದರೆ ಅವರು ಓದಿದ ಕಾಲೇಜಿನಲ್ಲಿಯೇ ತಾವು ಓದಿದ್ದರೂ 'ಕಾಲೇಜು ದಿನಗಳನ್ನು ನನ್ನ ಅನುಭವದಿಂದ ಪುಷ್ಟೀಕರಿಸಬಲ್ಲೆನಾದರೂ, ಎ. ಸೀ ಯವರಂತೆ ಬರೆಯಲಾರೆ' ಎನ್ನುತ್ತಾ ಎ. ಸೀ.ಯವರ ಬರವಣಿಗೆಯ ಗಟ್ಟಿತನವನ್ನು, ಅಂತರಂಗದ ಹಿರಿಮೆಗಳನ್ನೊಂದಷ್ಟು ಆಯ್ದು ನೀಡುತ್ತಾರೆ.

**ಕನ್ನಡದ ಪ್ರಗತಿ ನೋಡಿ ಕುವೆಂಪು ಅವರ ಮೌನಸಂಭ್ರಮ**

ಕುವೆಂಪು ಅವರಿಗೆ ಕರ್ನಾಟಕ ಸರಕಾರವು ರಾಷ್ಟ್ರಕವಿಪ್ರಶಸ್ತಿ ನೀಡಿದ (1964) ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ಅಧ್ಯಕ್ಷರಾದ ಪ್ರೊ. ಜಿ. ವಿ. ಯವರು ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಅವರನ್ನು ಸಂಮಾನಿಸುವ ಅಭಿಪ್ರಾಯ ವ್ಯಕ್ತಪಡಿಸಿದಾಗ, ಯಾರೋ ಕಿಡಿಗೇಡಿಗಳು ಈ ಸಂಮಾನವನ್ನು ಒಪ್ಪಿ ಕೊಳ್ಳಬಾರದೆಂದು ಅವರಿಗೆ ಪತ್ರವನ್ನು ಬರೆದಿದ್ದರಂತೆ. ಕುವೆಂಪು ಅವರು ಪ್ರೊ. ಜಿ. ವಿ. ಯವರನ್ನು ಮೈಸೂರಿಗೆ ಬರಮಾಡಿಕೊಂಡು ಪರಿಷತ್ತಿನ ಕಥೆಯನ್ನೆಲ್ಲಾ ಕೇಳಿ ಬಂದ ಪತ್ರವನ್ನು ತೋರಿಸಿದಾಗ, ಪ್ರೊ. ಜಿ. ವಿ.ಯವರು ನೀಡಿದ ವಿವರಣೆಯಿಂದ ತೃಪ್ತಿಗೊಂಡು ಪರಿಷತ್ತಿಗೆ ಬಂದು ಗೌರವ ಸ್ವೀಕರಿಸಿದರಂತೆ. ಭಾಷಣಕ್ಕೆ ಮೊದಲು

ಮಾಡಿದವರೇ ತಮ್ಮ ಗುರುಗಳಾದ ಬಿ. ಎಂ. ಶ್ರೀಯವರ ನೆನಪು ಮಾಡಿಕೊಂಡ ರೀತಿಯಂತೂ ಅಪೂರ್ವವಾಗಿತ್ತಂತೆ. ಬಿ. ಎಂ. ಶ್ರೀ.ಯವರ ಭಾವಚಿತ್ರವನ್ನು ನೋಡಿ 'ಬಿ. ಎಂ. ಶ್ರೀಕಂಠಯ್ಯನವರೇ' ಎಂದು ತಮ್ಮ ಭಾಷಣದ ಆರಂಭದಲ್ಲೇ ಕರೆದು ತಮ್ಮ ಗೌರವವನ್ನು ಸೂಚಿಸಿದ ರೀತಿಯಂತೂ ಅಪ್ಯಾಯಮಾನವಾಗಿತ್ತೆನ್ನುತ್ತಾರೆ.

ಕುವೆಂಪು ಅವರ ಸವಿರಾದ ಹಾಸ್ಯದ ಬಗ್ಗೆ ಬರೆಯುತ್ತಾ, ನಿಘಂಟು ರಚನೆಯ ಸಂದರ್ಭದಲ್ಲಿ ಆಗಾಗ ಕೆಲವು ಶಬ್ದಗಳ ಅರ್ಥಗಳ ಬಗ್ಗೆ ಪತ್ರ ಬರೆದು ಕೇಳುತ್ತಿದ್ದ ಪ್ರೊ. ಜಿ. ವಿ. ಯವರಿಗೆ 'ಚಿಟ್ಟೆ' ಎಂಬುದನ್ನು ವಿವರಿಸುತ್ತಾ ಕುವೆಂಪು ಅವರು ಅದು 'ಒಂದು ಬಗೆಯ ಮೀನು' ಎಂದು ಬರೆದು, ಜೊತೆಗೆ ಕೀಟಲೆ ಮಾಡಲು 'ತಿನ್ನಲು ರುಚಿಯಾಗಿರುತ್ತದೆ' ಎಂದು ಸೇರಿಸಿದ್ದರು ಎಂಬುದನ್ನು ನೆನಪಿಸಿಕೊಳ್ಳುತ್ತಾರೆ.

**ಗೊರೂರರ ಕೊನೆಯ ಮಾತು**

ಎಂಬತ್ತೆಂಟರ ವೃದ್ಧಾಪ್ಯದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರರು ಹಾಸಿಗೆಯಿಂದ ಏಳಲಾರದ ಸ್ಥಿತಿಯಲ್ಲಿದ್ದಾಗ ಪ್ರೊ. ಜಿ. ವಿ. ದಂಪತಿಗಳು ಅವರಲ್ಲಿಗೆ ಹೋಗಿದ್ದರು. ಗೊರೂರರ ಪತ್ನಿ 'ಅವರು ಯಾರನ್ನೂ ಗುರುತಿಸುವ ಸ್ಥಿತಿಯಲ್ಲಿಲ್ಲ. ಸುಮ್ಮನೆ ಯಾಕೆ ತೊಂದರೆ ತೆಗೆದುಕೊಳ್ಳುತ್ತೀರಿ?' ಎಂದಾಗ ಬಂದಿರುವುದಕ್ಕೆ ನೋಡಿಹೋಗುತ್ತೇವೆಂದು ಹೇಳಿ, ಅವರು ಮಲಗಿದ್ದ ಕೊಠಡಿಗೆ ಹೋದಾಗ 'ಗೋರೂರರು ಎಷ್ಟು ಸೊರಗಿ ಹೋಗಿದ್ದಾರೆ!' ಎಂದು ಗಟ್ಟಿಯಾಗಿ ಹೇಳಿಕೊಂಡಾಗ ಗೊರೂರರು ಧ್ವನಿ ಬಂದ ಕಡೆಗೆ ತಿರುಗಿ 'ವೆಂಕಟಸುಬ್ಬಯ್ಯನೇ' ಎಂದು ಕೇಳಿದಾಗ ಇವರಿಗೆ ತುಂಬಾ ಆಶ್ಚರ್ಯವಾಯಿತಂತೆ. ಅದೇ ಗೊರೂರರ ಕೊನೆಯ ಮಾತಾಗಿತ್ತು ಎನ್ನುತ್ತಾ ಗೊರೂರರ ಸಾಹಿತ್ಯರಾಶಿಯಲ್ಲಿರುವ ಹಾಸ್ಯದ ಮಿನುಗನ್ನು, ಗೊರೂರ-ರೊಂದಿಗಿನ ಮಾತಿನ ಸುಖವನ್ನು ಲೇಖನದಲ್ಲಿ ಅನಾವರಣ ಮಾಡಿದ್ದಾರೆ.

**'ನಲ್ಮೆ'ಯ ಕಡೆಂಗೋಡ್ಲು**

ಬಿ. ಎಂ. ಶ್ರೀ.ಯವರು ತಮ್ಮ 'ಕನ್ನಡಬಾವುಟ' ಕವನ ಸಂಕಲನಕ್ಕೆ ಕನ್ನಡನಾಡಿನ ಎಲ್ಲಾ ಕಡೆಗಳ ಕವನಗಳನ್ನು ಆರಿಸುವಾಗ ಕಡೆಂಗೋಡ್ಲು ಶಂಕರ ಭಟ್ಟರ 'ನಲ್ಮೆ' ಕವನಸಂಕಲನದ 'ಹೊನ್ನಿಯ ಮದುವೆ'ಯನ್ನು ಆರಿಸಿಕೊಂಡರಂತೆ. 'ನಲ್ಮೆ' ಕಡೆಂಗೋಡ್ಲು ಅವರ ಅತಿಶ್ರೇಷ್ಠ ಕವನಸಂಕಲನ. ಪ್ರೊ. ಜಿ. ವಿಯವರು ಕರಾವಳಿಯ ಏಕೈಕ ವ್ಯಕ್ತಿಯ ಚಿತ್ರವನ್ನು ಕನ್ನಡದ ನಾಯಕಮಣಿಗಳಲ್ಲಿ ಒಬ್ಬರನ್ನಾಗಿ ಆಯ್ಕೆ ಮಾಡಿಕೊಂಡು 'ಮಾದ್ರಿಯ ಚಿತೆ' ಮುರಲೀನಾದ, ಕಡೆಂಗೋಡ್ಲು ವರ್ಣನೆಯ ಕಾವ್ಯಭಾಗಗಳನ್ನು ಉದ್ಧರಿಸುತ್ತಾ ಶಂಕರ ಭಟ್ಟರ ಕತೆ, ನಾಟಕಗಳ ಬಗ್ಗೆಯೂ ಸೂಕ್ಷ್ಮವಾದ ವಿಶ್ಲೇಷಣೆ ಮಾಡಿ – 'ಶಂಕರಭಟ್ಟರ ಸಾಹಿತ್ಯರಾಶಿಯನ್ನು ಕುರಿತು ಈಗಲೂ ಒಂದು ವಿಚಾರಸಂಕಿರಣವನ್ನು ನಡೆಸಿದರೆ ಒಬ್ಬ ಪ್ರತಿಭಾವಂತ ಲೇಖಕರ ಪರಿಚಯವನ್ನು ಒಟ್ಟು ಏಕೀಕೃತ ಕರ್ನಾಟಕಕ್ಕೆ ಹೊಸದಾಗಿ ಮಾಡಿಕೊಟ್ಟಂತಾಗುತ್ತದೆ. 'ನಲ್ಮೆ' ಕವನಸಂಕಲನವನ್ನು ಓದುವವರು ಎಂದೂ ಆ

ಕವಿಯನ್ನು ಮರೆಯುವುದು ಅಸಾಧ್ಯ' ಎಂದಿದ್ದಾರೆ. ಪ್ರೊ. ಜಿ. ವೆಂ. ಅವರ ಮಾತು ಕರಾವಳಿಯ ಕವಿಚೇತನಕ್ಕೆ ಸಲ್ಲಿಸಿದ ಪ್ರೀತಿಯ ಗೌರವ.

**ಕನ್ನಡಕ್ಕೆ ದಕ್ಕಿದ ಸಿರಿತನ**

ಲೇಖಕರು ಪು. ತಿ. ನರಸಿಂಹಾಚಾರ್ಯರೊಂದಿಗೆ ನಡೆಸಿದ ಸಂವಾದ ಪು. ತಿ. ನ. ಮತ್ತು ಅವರ ಕಾವ್ಯದೊಂದಿಗಿನ ಅಂತಃಸಂಬಂಧವನ್ನು ಕುರಿತಾದದ್ದು. ಕನ್ನಡದ ಹೊಸ ಛಂದಸ್ಸಿಗೆ ಪು. ತಿ. ನ. ಅವರ ಕಾವ್ಯಪ್ರಯೋಗಗಳಿಂದ ದಕ್ಕಿದ ಸಿರಿತನ ಹಾಗೂ ವೈವಿಧ್ಯದ ಜೊತೆಗೆ ಅವರ ಕಾವ್ಯಗಳ ಗಾಂಭೀರ್ಯ, ತಿಳಿಹಾಸ್ಯ, ವರ್ಣನಾರಮ್ಯತೆ, ಭಾವಸೂಕ್ಷ್ಮತೆ, ಪ್ರತೀಕಗಳ ಶಿಲ್ಪಸ್ಪಷ್ಟತೆ, ಭಾಷಾವೈಶಿಷ್ಟ್ಯಗಳೊಂದಿಗೆ ಆಧ್ಯಾತ್ಮಿಕದೃಷ್ಟಿಯ ಪಾರಮ್ಯ ಮೆರೆದಿರುವ ಕಾವ್ಯಕಲಶಗಳು ಎಂಬುದು ಪ್ರೊ.ಜಿ.ವೆಂ. ಅವರ ಸ್ಪಷ್ಟ ಅಭಿಪ್ರಾಯ.

**ಪ್ರೊ. ಡಿ.ಎಲ್.ಎನ್. ಅವರ ರಸಯಾತ್ರೆ**

ಲೇಖಕರು ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರ ತರಗತಿಯ ಪಾಠಗಳನ್ನು ನೆನಪಿಸಿಕೊಳ್ಳುತ್ತಾ ಅದೊಂದು ರಸಯಾತ್ರೆಯಂತಿದ್ದು ವಿದ್ಯಾರ್ಥಿಗಳಿಗೆ ಸೊಗಸಾದ ಅನುಭವವೆಂದಿದ್ದಾರೆ. 'ಅವರ ಕಾವ್ಯಪಾಠವೆಂದರೆ ಹೋಲಿಕೆಗಳ ಆಗರವಾಗಿತ್ತು' ಎಂದೆನ್ನುವ ಪ್ರೊ. ಜಿ. ವೆಂ. ಅವರ ಜೊತೆಗೆ ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳಲ್ಲಿ ತಾವೇ ಅದರ ಕೆಲಸ ಮಾಡಿದ್ದರೂ, ಅಚಾತುರ್ಯದಿಂದ ತಮ್ಮ ಹೆಸರು ಬಿಟ್ಟು ಹೋಗಿರುವುದನ್ನು ನೆನಪಿಸಿಕೊಂಡಿದ್ದಾರೆ. ಸಾಹಿತ್ಯ ಪರಿಷತ್ತಿನ ಬೃಹತ್ ನಿಘಂಟಿನ ಪ್ರಧಾನಸಂಪಾದಕರಾಗಿ ಪ್ರೊ. ಡಿ. ಎಲ್. ಎನ್. ಅವರು ಮೊದಲ ಸಂಪುಟವನ್ನು ಹೊರತರುವಲ್ಲಿ ಪಟ್ಟ ಶ್ರಮವನ್ನು ಪ್ರೊ. ಜಿ. ವೆಂ. ಸ್ಮರಿಸಿಕೊಂಡ ರೀತಿ ಅರ್ಥಪೂರ್ಣವಾದುದು. ಪ್ರೊ. ಡಿ. ಎಲ್. ಎನ್. ಅವರನ್ನು ಸಮಾಧಿ ಮಾಡಿದ್ದರೆ ಅಂತಹಕಡೆ ಒಂದು EPITAPH ಹಾಕಿ ಅದರಲ್ಲಿ ಹೀಗೆ ಬರೆಯಬಹುದೆಂದು ಎರಡು ಸಾಲುಗಳನ್ನು ರಚಿಸಿದ್ದರು. 'D. L. Narasimhachar wanted to finish the dictionary early. But the dictionary finished him earlier' ಎಂಬುದಾಗಿ. ಡಿ.ಎಲ್.ಎನ್. ಅವರ ಪಂಪಭಾರತದೀಪಿಕೆ, ವಡ್ಡಾರಾಧನೆ, ಶಬ್ದಮಣಿ ದರ್ಪಣ ಮುಂತಾದುವುಗಳು ಸಾರಭೂತವಾದ ಕೊಡುಗೆಗಳಾಗಿವೆ. ಡಿ.ಎಲ್.ಎನ್. ಅಂತಹ ವಿದ್ವಾಂಸರು ಶತಮಾನಕ್ಕೊಬ್ಬರು ದೊರಕುತ್ತಾರೋ ಇಲ್ಲವೋ ಎಂಬುದು ಪ್ರೊ. ಜಿ. ವೆಂ. ಅವರ ಅಂತರಂಗದ ಮಾತು.

**ಭಾರತೀಯ ಕಾವ್ಯಮೀಮಾಂಸೆಯ ತೀ.ನಂ.ಶ್ರೀ.**

ಪ್ರೊ. ತೀರ್ಥಪುರ ನಂಜುಂಡಯ್ಯ ಶ್ರೀಕಂಠಯ್ಯನವರು ಕನ್ನಡ ಸಾರಸ್ವತ ಲೋಕದ ಮೇರುಪ್ರತಿಭೆ. 'ಕಾವ್ಯಾನುಭವ', 'ಕಾವ್ಯಸಮೀಕ್ಷೆ' ಕೃತಿಗಳು ಅವರ ವಿಮರ್ಶಾಸಕ್ತಿಯ ಪ್ರತೀಕಗಳಾದರೆ, 'ಭಾರತೀಯ ಕಾವ್ಯಮೀಮಾಂಸೆ' ಭಾರತೀಯ ಭಾಷೆಗಳಲ್ಲೇ ಇದುವರೆಗೆ ಬಂದಿರದ ಅತ್ಯುತ್ತಮ ಕೃತಿಯಾಗಿದ್ದು ಅದರಲ್ಲಿರುವ

ವಿಷಯ ಪ್ರಸ್ತಾವನೆ, ವಿಸ್ತೃತ ನಿರೂಪಣೆಗೆ ಹೋಲಿಕೆಗಳೇ ಇಲ್ಲ. ಈ ಕೃತಿ ಮೇರು ಮಟ್ಟದ್ದೆನ್ನುವ ಪ್ರೊ. ಜಿ. ವೆಂ. ಅವರು, ನಿಘಂಟುರಚನೆಯೊಂದಿಗಿನ ಅವರ ಸಂಬಂಧ ಮುಂತಾದುವುಗಳನ್ನು ಆತ್ಮೀಯವಾಗಿ ಮೆಲುಕು ಹಾಕಿದ್ದಾರೆ.

**ಕನ್ನಡ ಕಾದಂಬರಿಸಾರ್ವಭೌಮ ಅ. ನ. ಕೃ.**

ಕನ್ನಡದ ಕಾದಂಬರಿ ಸಾರ್ವಭೌಮ ಅ. ನ. ಕೃ. ಅವರು ಹೊಸ ಇಂಗ್ಲಿಷ್ ಸಿನಿಮಾಗಳು ಬಂದರೆ ಅದನ್ನು ಮೊದಲ ರಾತ್ರಿಯೇ ನೋಡುತ್ತಿದ್ದರಂತೆ! ಚಿತ್ರಕಲೆ, ನಾಟಕ, ನಾಟ್ಯ, ಭಾಷಣ, ಪ್ರವಾಸ, ಸಂಗೀತಗಳಲ್ಲಿ ಅಪಾರ ಆಸಕ್ತಿ ಹೊಂದಿದ್ದ ಪ್ರಗತಿಶೀಲ ಆಂದೋಲನಕಾರ, ಚಿಂತಕ, ಅ. ನ. ಕೃ. ಅವರು ಕಾದಂಬರಿಗಳನ್ನು ಬರೆದೇ ಜೀವನ ಸಾಗಿಸುತ್ತಿದ್ದರಂತೆ. ಹೋದಲ್ಲೆಲ್ಲಾ ಅ. ನ. ಕೃ. ಅವರ ಭಾಷಣಕ್ಕೆ ಐದಾರು ಸಾವಿರ ಜನ ಕಾದುಕೂತಿರುತಿದ್ದುದನ್ನು ಮೆಲುಕುಹಾಕುವ ಪ್ರೊ. ಜಿ. ವೆಂ. ಅವರು 'ಕನ್ನಡದ ಕೆಲಸಕ್ಕೆ ಎಲ್ಲ ದೃಷ್ಟಿಯಿಂದ ದುಡಿದ ಈ ಮಹಾಚೇತನ ಇಂದು ಎದುರಿಗೆ ಇಲ್ಲದಿರಬಹುದು; ಆದರೆ ಇಂದಿಗೂ ಅವರ ಪ್ರಭಾವವಿದೆ' ಎಂಬುದಾಗಿ ಉದ್ಧರಿಸಿದ್ದಾರೆ. ಯುವಲೇಖಕರು ಬರೆದ ಕಥೆಗಳಲ್ಲಿ ಕೆಲವನ್ನು ಆರಿಸಿ 'ಕಾಮನ ಬಿಲ್ಲು' ಎಂಬ ಹೆಸರಿನಲ್ಲಿ ಪ್ರಕಟಿಸಿ ಯುವಕರಿಗೆ ಪ್ರೋತ್ಸಾಹ ನೀಡಿ ಕನ್ನಡದ ಬೆಳವಣಿಗೆಗೆ ಶ್ರಮಿಸಿದ ಈ ಮಹಾಚೈತನ್ಯಕ್ಕೆ ಅಂತರಾಳದ ನಮೋ ಎಂದಿದ್ದಾರೆ.

**ಕನ್ನಡದ ಪರ್ವತವಾಣಿ**

ಕನ್ನಡಿಗರು ಸದಾ ಸ್ಮರಿಸುವ ನಾಟಕಕಾರರಲ್ಲಿ ಇನ್ನೊಬ್ಬರು ಪರ್ವತವಾಣಿ-ಯವರು. ನೂರಕ್ಕಿಂತ ಹೆಚ್ಚು ನಾಟಕ ಬರೆದು ಆಡಿದ ಈ ಮಹನೀಯರ ನಾಟಕದ ವಸ್ತು, ಸಂಭಾಷಣೆ ತಂತ್ರವೆಲ್ಲವೂ ವಿಶಿಷ್ಟವಾಗಿದ್ದು, ವಿಡಂಬನೆ, ಸಾಮಾಜಿಕ ಕಳಕಳಿ, ಪಾತ್ರಪರಿಪೋಷಣೆ ಇವೆಲ್ಲವೂ ಅವರ ಸೃಷ್ಟಿಯ ವೈಶಿಷ್ಟ್ಯಗಳು ಎಂಬುದಾಗಿ ಪರ್ವತ ವಾಣಿಯವರ ಅಸಾಧಾರಣಪ್ರತಿಭೆಯನ್ನು ವ್ಯಾಖ್ಯಾನಿಸುತ್ತಾರೆ. ಪರ್ವತವಾಣಿಯವರ ಒಳ್ಳೆಯತನಕ್ಕೆ ಸಂಬಂಧಪಟ್ಟ ಸ್ವಾರಸ್ಯಕರ ಅಂಶವನ್ನು ಹೇಳುತ್ತಾ 'ಪರ್ವತವಾಣಿ-ಯವರ ನಾಟಕಲೋಕ' ಎಂಬ ಹೆಸರಿನಲ್ಲಿ ಅವರೇ ಸ್ವಂತನಾಟಕಗಳನ್ನು ಬೇರೆ ಬೇರೆ ಸಂಪುಟಗಳಾಗಿ ಪ್ರಕಟಿಸುವ ಸಾಹಸಕ್ಕೆ ಮುಂದಾದಾಗ ಸರಕಾರವು ಅವರಿಗೆ ನೀಡುತ್ತಿದ್ದ ಗೌರವ ವೇತನವನ್ನು ಉಪಯೋಗಿಸಿಕೊಂಡರಂತೆ' ಎಂಬ ಅಂಶವನ್ನು ಪ್ರೊ. ಜಿ. ವೆಂ. ಅವರು ಉದ್ಧರಿಸಿದ್ದಾರೆ.

**ಬಿ. ಜಿ. ಎಲ್. ಸ್ವಾಮಿಯವರ ಹಾಸ್ಯಪ್ರಜ್ಞೆ**

'ಸಂಭಾಷಣೆಗೆ ಕುಳಿತರೆ ಹಾಸ್ಯದಲ್ಲಿ ಕಾಲ ಕಳೆದುದೇ ಗೊತ್ತಾಗುತ್ತಿರಲಿಲ್ಲ. ಊಟ-ಉಪಚಾರಗಳಲ್ಲಿ ಎತ್ತಿದ ಕೈ. ಬರವಣಿಗೆಯಲ್ಲಿ ಹೊಸಪದಗಳನ್ನು ಸೃಷ್ಟಿ ಮಾಡುವ ತವಕ – 'ಜಟೆಯುಳ್ಳವರು 'ಜಟಿ' ಆದರೆ ಚಟವುಳ್ಳವರು 'ಚಟಿ': ಹೀಗೆ ಅವರ ಹಾದಿಯಾಗಿತ್ತು' ಎಂದು ಬಿ. ಜಿ. ಎಲ್. ಸ್ವಾಮಿಯವರ ಹಾಸ್ಯಪ್ರಜ್ಞೆಯನ್ನು

ಉಲ್ಲೇಖಿಸುತ್ತಾ ಅವರ ಪ್ರಮುಖಕೃತಿಗಳ ಸ್ವಾರಸ್ಯಗಳನ್ನು ಸೂಕ್ಷ್ಮವಾಗಿ ಅನಾವರಣ ಮಾಡಿದ್ದಾರೆ.

**ಸಾಹಿತ್ಯವಿಮರ್ಶಕ ನರಸಿಂಹಮೂರ್ತಿ**

ಕನ್ನಡ ಸಾರಸ್ವತಲೋಕದಲ್ಲಿ ಅಪರಿಚಿತರಾಗಿದ್ದುಕೊಂಡು ಒಳ್ಳೆಯ ಸಾಹಿತ್ಯ ವಿಮರ್ಶಕರೆಂದು ಪ್ರೊ. ಜಿ. ವೆಂ. ಅವರ ಗಮನಸೆಳೆದ ಸಹೃದಯರೆಂದರೆ ಕೆ. ನರಸಿಂಹಮೂರ್ತಿಯವರು. ಪ್ರೊ. ಜಿ. ವೆಂ. ಅವರ ನಿಕಟವರ್ತಿಯಾಗಿದ್ದ ನರ-ಸಿಂಹಮೂರ್ತಿಯವರು ತಮ್ಮ ವೃತ್ತಿಜೀವನದ ಆರಂಭದಲ್ಲಿ ಮೈಸೂರು ಕಾಲೇಜಿ-ನಲ್ಲಿ ಅಧ್ಯಾಪಕರಾಗಿದ್ದಾಗ, ಅದೇ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಅಡಿಗರ ಕಾವ್ಯೋತ್ಪತ್ತಿಗೆ ನೀರೆರೆದು ಪೋಷಿಸಿದರಂತೆ. ಅಡಿಗರ ಕಾವ್ಯಸಂಕಲನಕ್ಕೆ ನರಸಿಂಹಮೂರ್ತಿಯವರು ಬರೆದ ೧೫ ಪುಟಗಳ ಹಿನ್ನುಡಿ ಕನ್ನಡದಲ್ಲಿ ನವ್ಯತೆ ಬೇರು ಬಿಟ್ಟು ಬೆಳೆಯುತ್ತಿದ್ದುದನ್ನು ಸ್ಥಾಪಿಸಿತೆಂದು ಪ್ರೊ. ಜಿ. ವೆಂ. ಹೇಳಿದ್ದಾರೆ. ಅನಂತರದಲ್ಲಿ ಐ. ಎ. ಎಸ್. ಪರೀಕ್ಷೆ ಪಾಸಾದ ನರಸಿಂಹಮೂರ್ತಿಯವರು ಸಾಹಿತ್ಯಕ್ಷೇತ್ರದ ಒಡನಾಟ ಕಡಮೆ ಮಾಡಿಕೊಂಡರೂ ನಿವೃತ್ತರಾದ ಮೇಲೆ ಮತ್ತೆ ಬರವಣಿಗೆಯಲ್ಲಿ ತೊಡಗಿಸಿಕೊಂಡು ಮಹತ್ತ್ವದ ಕೃತಿಗಳನ್ನು ನೀಡಿಯೂ ಪ್ರಶಸ್ತಿ-ಯನ್ನು ಗಳಿಸದ ವ್ಯಕ್ತಿಯಾಗುಳಿದರು ಎಂಬ ಖೇದವನ್ನು ವ್ಯಕ್ತಪಡಿಸುತ್ತಾರೆ.

ಪ್ರೊ. ಜಿ. ವೆಂಕಟಸುಬ್ಬಯ್ಯನವರ ವ್ಯಕ್ತಿಚಿತ್ರಗಳು ಎರಡು ರೀತಿಯಲ್ಲಿ ನಿರೂಪಣೆಗೊಂಡಿವೆ. ಅವುಗಳಲ್ಲಿ ಕೆಲವೊಂದು ವಿದ್ವಾಂಸರ ಬರಹಗಳ ಅವಲೋಕನಗಳಾದರೆ, ಇನ್ನುಳಿದವು ತಾವು ಕಂಡ ವಿದ್ವಾಂಸರ ರೋಚಕಗುಣಗಳ ನೆನಕೆಗಳಾಗಿವೆ. ಇಲ್ಲಿಯ ಬರವಣಿಗೆಗಳಲ್ಲಿ ಏಕಸೂತ್ರತೆ ಮತ್ತು ಪರಿಪೂರ್ಣ ಮಾಹಿತಿಗಳ ಕೊರತೆ ಕಂಡುಬಂದರೂ, ವಿದ್ಯಾರ್ಥಿಗಳಿಗೆ ಮನವರಿಕೆ ಮಾಡುವ ಉದ್ದೇಶದಿಂದ ರಚಿತವಾದ ಈ ಹೊತ್ತಗೆ ಓದುಗರ ಕುತೂಹಲವನ್ನು ಕೆರಳಿಸುವಂತೆ ಮಾಡಿ ಆಯಾ ವ್ಯಕ್ತಿಗಳು ಮತ್ತು ಅವರ ಬರವಣಿಗೆಗಳ ಕುರಿತು ಇನ್ನಷ್ಟು ತಿಳಿದುಕೊಳ್ಳಬೇಕೆಂಬ ಜಾಗೃತಿ ಮೂಡುವಂತೆ ಮಾಡುವುದರಲ್ಲಿ ಸಫಲವಾಗುತ್ತದೆ.



# ಕನ್ನಡವನ್ನು ಉಳಿಸಿ ಬೆಳೆಸಿದವರು

ಡಾ. ಧನಂಜಯ ಕುಂಬ್ಳೆ

'ಕನ್ನಡವನ್ನು ಉಳಿಸಿ ಬೆಳೆಸಿದವರು' ಹೀಗೊಂದು ಶೀರ್ಷಿಕೆಯಡಿ ಕನ್ನಡ ನಾಡು ನುಡಿಗೆ ತಮ್ಮನ್ನು ಸಮರ್ಪಿಸಿಕೊಂಡ ಮಹನೀಯರನ್ನು ಕುರಿತ ವ್ಯಕ್ತಿಚಿತ್ರಗಳ ಗೊಂಚಲನ್ನು ವೆಂಕಟಸುಬ್ಬಯ್ಯನವರು ನಮಗೆ ನೀಡಿದ್ದಾರೆ. ಈ ಕೃತಿಯನ್ನು ಕೈಗೆತ್ತಿಕೊಂಡಾಗ ನನ್ನ ಸ್ವಂತದ ಎರಡು ನೆನಪುಗಳು ಮನವನ್ನಾವರಿಸಿದುವು. ಒಂದು ಕೃತಿಕಾರರ ಜತೆಗಿನದು. ಇನ್ನೊಂದು ಪ್ರಕಾಶಕರ ಒಡನಾಟದ್ದು. ಅಪ್ರಸ್ತುತ ಎನಿಸಿದರೂ ಅವನ್ನು ಹಂಚಿಕೊಳ್ಳದೆ ಮುಂದಡಿಯಿಡಲಾರೆ.

೨೦೦೭ರ ಆಳ್ವಾಸ್ ನುಡಿಸಿರಿಯ ಅಧ್ಯಕ್ಷರಾಗಿದ್ದ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರಿಗೆ ಆಮಂತ್ರಣ ನೀಡುವುದಕ್ಕಾಗಿ ಅವರ ಮನೆಗೆ ಡಾ. ಮೋಹನ ಆಳ್ವರ ಜತೆಗೆ ಹೋಗಿದ್ದೆ. ಹೊರಡುವಾಗ ನಾನು ಕಾಸರಗೋಡಿನವನೆಂದು ಅವರಿಗೆ ಗೊತ್ತಾಯಿತು. 'ಓ ನಮ್ಮ ಗೋವಿಂದ ಪೈಗಳ ಊರು' ಎಂದರು. ಗೊಲ್ಗೊಥಾವನ್ನು ನೆನಪಿಸಿ-ಕೊಂಡರು. ಗಡಿನಾಡಿನ ಕನ್ನಡದ ಸ್ಥಿತಿಗತಿಯ ಬಗೆಗೆ ಮಾತಾಡಿದರು. ಬಳಿಕ ಹೊರಟಾಗ ನಾನು ಬಾಗಿದೆ. ಅವರ ಪ್ರೀತಿ ಕೈಗಳ ಮೂಲಕ ನನ್ನ ತಲೆಯನ್ನು ನೇವರಿಸಿತು.

ಈ ಪುಸ್ತಕದ ಪ್ರಕಾಶಕರಾದ ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದ ಬೋಳಂತಕೋಡಿ ಈಶ್ವರ ಭಟ್ಟರೊಂದಿಗೆ ನಾನು ಐದಾರು ವರ್ಷಗಳ ಕಾಲ ಪುತ್ತೂರಿನಲ್ಲಿದ್ದಾಗ ನಿಕಟಸಂಪರ್ಕ ಹೊಂದಿದ್ದೆ. ಅವರ ಪುಸ್ತಕ ಪರಿಚಾರಿಕೆ ಕನ್ನಡ ನಾಡಿಗೆ ಮಾದರಿಯಾಗುವಂತಹುದು. ಅವರು ಒಂದು ಬಾರಿ 'ಗೋವಿಂದ ಪೈಗಳ ಕಾವ್ಯದ ಕುರಿತು ಪುಸ್ತಕ ಬರೆಯಿರಿ. ನಾನು ಪ್ರಕಟಿಸುತ್ತೇನೆ' ಎಂದಿದ್ದರು. ಅದನ್ನು ನನಗೆ ಪೂರೈಸಲಾಗಲಿಲ್ಲ ಎಂಬ ನೋವು ಈಗಲೂ ಇದೆ. ಹಿರಿಯರಾದ ವೆಂಕಟ ಸುಬ್ಬಯ್ಯನವರ ಈ ಕೃತಿಯಲ್ಲಿ 'ಅಪೂರ್ವ ವಿದ್ವಾಂಸ ಮಂಜೇಶ್ವರ ಗೋವಿಂದ ಪೈಯವರ ಕಾವ್ಯ' ಎಂಬ ಬರೆಹ ಓದುತ್ತಾ ಈ ನೆನಪುಗಳು ಕಾಡಿದುವು.

ಕನ್ನಡದಲ್ಲಿ ಸೊಗಸಾದ ವ್ಯಕ್ತಿಚಿತ್ರಗಳ ಸಂಕಲನ ಕಡಮೆಯೇ. (ಬಯೋಡಾಟ-ಗಳನ್ನೇ ಜೋಡಿಸಿ ವ್ಯಕ್ತಿಚಿತ್ರಗಳೆಂದು ಬಿಂಬಿಸುವ ಕೃತಿಗಳನ್ನು ಹೊರತುಪಡಿಸಿ)

ಡಿವಿಜಿಯವರ ಜ್ಞಾಪಕ ಚಿತ್ರಶಾಲೆ, ವಿ. ಸೀತಾರಾಮಯ್ಯನವರ ವ್ಯಕ್ತಿಚಿತ್ರ ಸಂಪುಟ-ಗಳು ಮುಖ್ಯವಾದವು. ಈ ಎರಡು ಕೃತಿಗಳು ಈ ಪ್ರಕಾರದ ಬರವಣಿಗೆಗೆ ಎರಡು ದಾರಿಗಳನ್ನು ತೆರೆದವು. ಡಿವಿಜಿಯವರಿಗೆ ವೈಯಕ್ತಿಕ ಪರಿಚಯ, ಪ್ರೀತಿ ಮುಖ್ಯ ಎನಿಸುವುದಿಲ್ಲ. ಸ್ವಲ್ಪ ದೂರ ನಿಂತು ಪ್ರಸಂಗಗಳ ಮೂಲಕ ವ್ಯಕ್ತಿತ್ವವನ್ನು ತೂಗುವ ಬರವಣಿಗೆ. ಆದರೆ ವಿ.ಸೀಯವರಿಗೆ ವ್ಯಕ್ತಿ ಮುಖ್ಯ. ಆತ್ಮೀಯತೆ, ಒಡನಾಟದ ನೆನಪು, ಸಹಾನುಭೂತಿ ಇವರ ವ್ಯಕ್ತಿಚಿತ್ರಗಳ ಮುಖ್ಯ ಸೆಲೆ. ಇವೆರಡು ಮಾರ್ಗಗಳೂ ಬೆಸೆದ ದಾರಿ ವೆಂಕಟಸುಬ್ಬಯ್ಯನವರದು. ಆ ಕಾರಣಕ್ಕೆ 'ಕನ್ನಡವನ್ನು ಉಳಿಸಿ ಬೆಳೆಸಿದವರು' ಎಂಬ ಈ ಕೃತಿ ಮೊದಲಿಗೆ ಗಮನ ಸೆಳೆಯುತ್ತದೆ.

ಕನ್ನಡ ನವೋದಯದ ಕಟ್ಟಾಳುಗಳಾದ ಹಿರಿಯರನ್ನು ನೆನಪಿಸಿಕೊಳ್ಳುವ ಈ ಕೃತಿಯಲ್ಲಿ ೧೫ ಬರೆಹಗಳಿವೆ. ಆರ್.ನರಸಿಂಹಾಚಾರ್, ಗೋವಿಂದ ಪೈ, ಬಿ.ಎಂ.ಶ್ರೀ, ವೆಂಕಣ್ಣಯ್ಯ, ಡಿವಿಜಿ, ಎ. ಆರ್. ಕೃಷ್ಣಶಾಸ್ತ್ರೀ, ಮಾಸ್ತಿ, ರಾಳ್ಳಪಳ್ಳಿ ಅನಂತಕೃಷ್ಣ ಶರ್ಮ, ಸಿ. ಕೆ. ವೆಂಕಟರಾಮಯ್ಯ, ನಾ. ಕಸ್ತೂರಿ, ಎನ್. ಲಕ್ಷ್ಮೀನಾರಾಯಣರಾಯ, ಸಂಸ, ವಿ.ಸೀ, ಸೇಡಿಯಾಪು, ಶಿವರಾಮ ಕಾರಂತ ಅವರ ಕುರಿತು ಜೀವಿಯವರು ಬರೆದಿದ್ದಾರೆ. ಇವರೆಲ್ಲರ ಜತೆಗೂ ಜೀವಿಯವರಿಗೆ ಒಡನಾಟವಿತ್ತು. ತನಗಿಂತ ಹಿರಿಯರಾದ ನವೋದಯದ ಸಂದರ್ಭದಲ್ಲಿ ಕನ್ನಡವನ್ನು ಕಟ್ಟಿ ಬೆಳೆಸಿದ ಪ್ರಾತಃ-ಸ್ಮರಣೀಯರಾದ ಮಹನೀಯರ ಕನ್ನಡ ಚಟುವಟಿಕೆಗಳ ಸಾರವನ್ನು ವೆಂಕಟ-ಸುಬ್ಬಯ್ಯರು ಈ ಕೃತಿಯಲ್ಲಿ ನೀಡಿದ್ದಾರೆ. ಇಲ್ಲಿಯ ಆಯ್ಕೆಗೆ ಮಾನದಂಡವೇನು ಎಂಬ ಪ್ರಶ್ನೆಗೆ ಕೃತಿಯ ಮೊದಲ ಮಾತಿನಲ್ಲಿ ಲೇಖಕರು ಹೀಗೆ ಹೇಳಿದ್ದಾರೆ. 'ಈ ಪುಸ್ತಕದಲ್ಲಿ ನಾನು ಯಾರು ಯಾರ ಬಗ್ಗೆ ನನ್ನ ಗೌರವವನ್ನು ಸೂಚಿಸಲು ಅವರ ಸಾಹಿತ್ಯಕೃಷಿ ಕುರಿತು ಕಿರುಲೇಖನಗಳನ್ನು ಬರೆದಿದ್ದೇನೋ ಅವರೆಲ್ಲರೂ ಒಂದಲ್ಲ ಒಂದು ಬಗೆಯಲ್ಲಿ ನನಗೆ ಗುರುಗಳು. ಗುರುಸಮಾನರು. ಎಲ್ಲರೂ ನಾಡಿನ ಹಿರಿಯ ಚೇತನಗಳು. ಕಾರಂತರನ್ನು, ಸೇಡಿಯಾಪು ಅವರನ್ನು ಬಿಟ್ಟರೆ ಮತ್ತೆಲ್ಲರೂ ಹಿಂದಿನ ಶತಮಾನದಲ್ಲಿ ಹುಟ್ಟಿದವರು' ಇಲ್ಲಿರುವ ಲೇಖನಗಳು ವಿವಿಧೆಡೆ ವೆಂಕಟಸುಬ್ಬಯ್ಯನವರು ಮಾಡಿದ ಭಾಷಣಗಳ ಸಂಗ್ರಹರೂಪ.

ಇಲ್ಲಿಯ ವ್ಯಕ್ತಿಚಿತ್ರಗಳಲ್ಲಿ ಹೆಚ್ಚಿನವು ಕನ್ನಡ ಪಂಡಿತ ಪರಂಪರೆಗೆ ಬೆಳಕು ಬೀರುತ್ತವೆ. ವ್ಯಾಕರಣ, ಛಂದಸ್ಸು, ಅನುವಾದ, ನಾಟಕ, ಕಾವ್ಯ, ಸಂಘಟನೆ, ಪತ್ರಿಕೋದ್ಯಮ,ಸಂಶೋಧನೆಯಲ್ಲಿ ತೊಡಗಿಕೊಂಡ ಹಿರಿಯರನ್ನು ವೆಂಕಟಸುಬ್ಬಯ್ಯ-ನವರು ನೆನಪಿಸಿಕೊಂಡಿದ್ದಾರೆ. ಸಾಧನೆಯ ಜತೆಗೆ ಅವರ ನಡೆ-ನುಡಿಯ ಆದರ್ಶ, ಕನ್ನಡಾಭಿಮಾನ, ಮಾನವೀಯತೆ ಹಾಗೂ ವಿದ್ವತ್ತೆಯ ಮಹತ್ತನ್ನು ಆತ್ಮೀಯವಾಗಿ ಚಿತ್ರಿಸಿದ್ದಾರೆ. ವ್ಯಕ್ತಿವಿವರಗಳ ಜತೆಗೆ ಆಯಾ ವ್ಯಕ್ತಿಗಳ ಸಾಧನೆಯ ಹಾದಿಯನ್ನು ಸವಿಸ್ತಾರವಾಗಿ ಚಿತ್ರಿಸಲಾಗಿದೆ. ಪ್ರತಿಯೊಂದು ಬರೆಹದಲ್ಲೂ ಪ್ರಬಂಧದ ಶಿಸ್ತು ಮತ್ತು ಸಂಯಮ ಎದ್ದು ಕಾಣುತ್ತದೆ.

ವ್ಯಕ್ತಿಗಳನ್ನು ಅವರು ಪರಿಚಯಿಸುವ ರೀತಿ ಮನೋಜ್ಞವಾಗಿದೆ. ಒಂದು ವಿಶಾಲವಾದ ಕ್ಯಾನ್ವಾಸಿನಲ್ಲಿ ಕುಂಚ ಹಿಡಿದು ಕುಳಿತ ಕಲಾವಿದನಂತೆ ವೆಂಕಟ-

ಸುಬ್ಬಯ್ಯನವರು ಬರೆಯಲು ತೊಡಗುತ್ತಾರೆ. ನರಸಿಂಹಾಚಾರ್ಯರ ಕುರಿತ ಲೇಖನವಲ್ಲಿ 'ನಗೆಗಡಲು' ಕುರಿತು ಬರೆಯತೊಡಗಿ ಹದಿನೇಳನೆಯ ಶತಮಾನದ ಕ್ರಿಸ್ತ ಮಿಶನರಿ ಪಾದ್ರಿ ಬೆಸ್ಕಿಯ ಕುರಿತು ಒಂದು ಪುಟದಷ್ಟು ಬರೆಯುತ್ತಾರೆ. ಬೆಸ್ಕಿ ಹೇಗೆ ತಮಿಳು ಗದ್ಯವನ್ನು ಬೆಳೆಸಿದ ಎಂದು ವಿವರಿಸುತ್ತಾರೆ. ಇಂತಹ ಹಲವು ಪೂರಕ ವಿವರಗಳು ಹೆಚ್ಚಿನ ಬರಹಗಳಲ್ಲಿ ಕಾಣಿಸಿಕೊಂಡು ಓದುಗನ ಅರಿವನ್ನು ವಿಸ್ತರಿಸುತ್ತವೆ. ಕೃತಿಯುದ್ದಕ್ಕೂ ಅಲ್ಲಲ್ಲಿ ಒದಗಿಸುವ ಅಪರೂಪದ ವಿವರಗಳು, ವಿಶೇಷ ಮಾಹಿತಿಗಳು ಗಮನ ಸೆಳೆಯುತ್ತವೆ. ಉದಾ:

೧. ಆಕಾಶವಾಣಿ ಎಂದು ಹೆಸರು ಕೊಟ್ಟವರು ರಾಳ್ಳಪಳ್ಳಿ ಅನಂತಕೃಷ್ಣ ಶರ್ಮರು. ಅದನ್ನು ಜನಪ್ರಿಯಗೊಳಿಸಿದವರು ಕಸ್ತೂರಿ,
೨. ವಿ.ಸೀ.ಯವರ ಪಂಪಾಯಾತ್ರೆ ಕನ್ನಡದ ಮೊದಲ ಪ್ರವಾಸ ಕಥನ.
೩. ಕನ್ನಡ ಸಾಹಿತ್ಯಕ್ಕೆ ಚಾರಿತ್ರಿಕನಾಟಕಗಳನ್ನು ನೀಡಿದ ಮೊದಲ ನಾಟಕಕಾರ ಸಂಸ.
೪. ಕನ್ನಡದ ಮೊದಲ ಚತುರ್ದಶಪದಿ (ಸಾನೆಟ್) ಕವಿತಾವತಾರವನ್ನು ೧೯೧೬ರಲ್ಲಿ ಗೋವಿಂದ ಪೈ ರಚಿಸಿದರು.
೫. ಕನ್ನಡಕ್ಕೆ ಮೊದಲು ಉಮರನ ರುಬಾಯಿಗಳನ್ನು ಅನುವಾದಿಸಿ, ಪರಿಚಯ ಮಾಡಿದವರು ಪೈಗಳು.
೬. ಟಿ. ಎಸ್. ವೆಂಕಣ್ಣಯ್ಯ ಮತ್ತು ಎ.ಆರ್ ಕೃಷ್ಣಶಾಸ್ತ್ರೀ ಇವರನ್ನು ಕನ್ನಡದ ಅಶ್ವಿನೀದೇವತೆಗಳು ಎನ್ನುತ್ತಾರೆ.
೭. ಗಾಂಪರೊಡೆಯ ಶಬ್ದ ರಾ. ನರಸಿಂಹಾಚಾರ್ಯರ ಸೃಷ್ಟಿ.
೮. ದಂಡಿಯಾತ್ರೆಯ ಸಂದರ್ಭದಲ್ಲಿ ಗಾಂಧಿಯ ಕೈಯಲ್ಲಿದ್ದ ವಾಕಿಂಗ್ ಸ್ಟಿಕ್ ಗೋವಿಂದ ಪೈ ಅವರ ತಾತ ಉಪಯೋಗಿಸುತ್ತಿದ್ದುದೆಂದೂ ಅದು ಪೈ ಅವರಿಂದ ಕಾಕಾ ಕಾಲೇಲ್ಕರ್ ಅವರಿಗೆ ದತ್ತವಾಗಿ ಅದು ಮಹಾತ್ಮಾ ಗಾಂಧಿಯವರಿಗೆ ಕಾಣಿಕೆಯಾಗಿ ಸೇರಿತು. –ಇತ್ಯಾದಿ ಹತ್ತಾರು ವಿವರಗಳನ್ನು ಗಮನಿಸಬಹುದು.

ಪಂಡಿತರ, ಸಾಹಿತಿಗಳ ಕುರಿತ ಬರಹಗಳಾದ್ದರಿಂದ ಅಲ್ಲಲ್ಲಿ ಆಯಾ ವ್ಯಕ್ತಿಗಳ ಚಿಂತನೆ, ಬರವಣಿಗೆಯ ಉದ್ಧರಣೆಗಳು ಕಾಣಿಸಿಕೊಳ್ಳುತ್ತವೆ. ಅಂತಹ ಸಂದರ್ಭ-ಗಳಲ್ಲಿ ಅತ್ಯಂತ ಸೊಗಸಾದ ಆಯ್ಕೆಗಳನ್ನು ಮಾಡಿರುವುದು ವೆಂಕಟಸುಬ್ಬಯ್ಯನವರ ಸಹೃದಯತೆಯನ್ನು ಎತ್ತಿ ತೋರಿಸುತ್ತದೆ. ಉದಾಹರಣೆಗೆ ಸೇಡಿಯಾಪು ಕುರಿತ ಲೇಖನದಲ್ಲಿ ಅವರ ವಿವರಣೆಯ ಸೊಗಸನ್ನು ಹೇಳುತ್ತಾ ಛಂದೋರೂಪಗಳ ಬಗೆಗೆ ಸೇಡಿಯಾಪು ಹೇಳಿದ ಮಾತನ್ನು ಉಲ್ಲೇಖಿಸುತ್ತಾರೆ. 'ಈ ನಾನಾ ಬಗೆಗಳನ್ನೆಲ್ಲಾ ನಿರ್ಮಿಸಿದವರು ಕವಿಗಳು ಕಲಾಕಾರರು ಹೊರತು ಛಂದಃಶಾಸ್ತ್ರಕಾರರಲ್ಲ. ಶಾಸ್ತ್ರಕಾರನು ಛಂದಃಶಿಶುವಿನ ತಾಯಿಯಲ್ಲ; ತಂದೆಯೂ ಅಲ್ಲ; ಕವಿಯೇ ತಾಯಿ. ನವನವೋನ್ಮೇಷಶಾಲಿಯಾದ ಪ್ರತಿಭೆಯೇ ತಂದೆ. ಶಾಸ್ತ್ರಕಾರನ ಸ್ಥಾನ ಅಕ್ಕರೆಯಿಂದ

ಶಿಶುವನ್ನು ನೋಡಿಕೊಳ್ಳುವ ದಾದಿಯದ್ದು; ನಾಮಕರಣ ಮಾಡಿ ಆಶೀರ್ವದಿಸುವ ಪುರೋಹಿತನದ್ದು ಅಷ್ಟೇ.'

ಲೇಖಕರಿಗಿರುವ ಪರಿಚಯ, ಸ್ನೇಹ ವ್ಯಕ್ತಿಚಿತ್ರಗಳಿಗೆ ವಿಶೇಷ ಪ್ರಭೆ ನೀಡಿದೆ. ಹಾಗೆಂದು ಅವರ ವಿಮರ್ಶೆ ವಿಶ್ಲೇಷಣೆಯ ಮನೋಧರ್ಮ ಮಂಕಾಗಿಲ್ಲ. ವಾಗ್ಮಿ ಸಿ. ಕೆ. ವೆಂಕಟರಾಮಯ್ಯನವರ ಕುರಿತ ಬರೆಹದಲ್ಲಿ ಅವರ ತುರಾಯಿ ಎಂಬ ಸಂಕಲನದ ಏಳು ಕತೆಗಳ ವಿವರವನ್ನು ಸಂಕ್ಷೇಪವಾಗಿ ನೀಡುವುದನ್ನು ಗಮನಿಸಿ.

"ತುರಾಯಿಯ ಏಳು ಕತೆಗಳಲ್ಲಿ ಕತೆಗಾರರ ಶಕ್ತಿ ಕುದುರಿ ರಚನೆಗೆ ಸ್ವಾರಸ್ಯ ಬಂದಿದೆ. ನಾಟಕವನ್ನು ಅಭಿನಯಿಸಬೇಕೆಂಬ ಶಾಲೆಯ ಉಪಾಧ್ಯಾಯಿನಿಗೆ ಊರಿನ ಗೌರವಸ್ಥನು ನೀಡುವ ಅವಮಾನ, ಉತ್ತಮ ನಟಿಯಾಗುವ ಶಕ್ತಿ ಹೊಂದಿದ್ದ ಬಾಲಕಿಯು ಆ ಅವಕಾಶವನ್ನು ಕಳಕೊಂಡು ಮನೋವೇದನೆಯಿಂದ ಸಾವನ್ನಪ್ಪು-ವುದು ಮುಂತಾದ ದುಃಖಾಂತವಾದ ಕತೆಗಳಿವೆ. ವೈದಿಕ ತಂದೆ ಮಗನನ್ನೂ ವೈದಿಕನನ್ನಾಗಿ ಮಾಡಬೇಕೆಂದು ಆಸೆಪಟ್ಟರೆ ಮಗನು ಸಂಗೀತಗಾರನಾಗುವ ಪ್ರಯತ್ನ, ನಾಯಿಯೇ ಸಂಸಾರವನ್ನು ರಕ್ಷಿಸಿದ ಸಾಹಸದ ಕತೆ, ಪುಸ್ತಕಪಿಶಾಚಿಯಾದ ಗಂಡ ನೇರಳೆ ಹಣ್ಣನ್ನು ತಿಂದು ಹಲ್ಲು ನೀಲಿ ಬಣ್ಣಕ್ಕೆ ತಿರುಗಿದ್ದ ಹೆಂಡತಿಗೆ ಮರಣ ಹತ್ತಿರವಾಗಿದೆಯೆಂದು ವೈದ್ಯರನ್ನು ಕರೆದು ತಂದ ಹಾಸ್ಯ...' ಹೀಗೆ ಒಂದೇ ಸಾಲಿನಲ್ಲಿ ಕತೆಯ ರುಚಿಯನ್ನು ನೀಡಿ ಮೂಲವನ್ನು ಓದುವಂತೆ ಉತ್ತೇಜಿಸುವ ನೆಲೆಯನ್ನು ಗುರುತಿಸಬಹುದಾಗಿದೆ.

ವೆಂಕಟಸುಬ್ಬಯ್ಯನವರ ವಿಮರ್ಶನಪ್ರಜ್ಞೆ ಸದಾ ಜಾಗ್ರತ. ಅದಕ್ಕೆ ಪ್ರತಿ ಲೇಖನದಲ್ಲೂ ಸಾಕ್ಷ್ಯ ಸಿಗುತ್ತದೆ. ವಿದ್ವಾಂಸ ರಾ. ನರಸಿಂಹಾಚಾರ್ ಅವರ ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳ ಮಹತ್ತ್ವವನ್ನು ವಿವರಿಸುತ್ತಲೇ ಈ ರೀತಿ ಟಿಪ್ಪಣಿ ನೀಡುತ್ತಾರೆ: 'ಈ ಮೂರು ಸಂಪುಟಗಳು ಕನ್ನಡದಲ್ಲಿ ಯಾವ ಸಾಹಿತ್ಯ ಕಾರ್ಯವನ್ನು ಮಾಡಬೇಕಾದರೂ ಆಧಾರಗ್ರಂಥಗಳಾಗಿರುವಂತೆ ಆಚಾರ್ಯರು ಇವುಗಳನ್ನು ರೂಪಿಸಿದ್ದಾರೆ. ಇಂದಿಗೂ ಸಾಹಿತ್ಯಚರಿತ್ರೆಯ ಲೇಖಕರೆಲ್ಲಾ ಈ ಗ್ರಂಥಗಳಿಗೆ ಆಭಾರಿಯಾಗಿರಬೇಕಿದೆ. ಆಚಾರ್ಯರು ಈ ವಿಷಯಗಳನ್ನು ಯಾವ ಯಾವ ಕಡೆಯಿಂದ ಸಂಗ್ರಹಿಸಿದರು ಎಂಬ ವಿಷಯದ ವಿವರಣೆ ಎಲ್ಲಿಯೂ ಸಿಗುವುದಿಲ್ಲ. ಆ ವಿಷಯವನ್ನು ಅವರು ಒಂದು ಕಡೆ ನಿರೂಪಿಸಿಬಿಟ್ಟಿದ್ದರೆ ಸಂಶೋಧಕರಿಗೆ ಮತ್ತಷ್ಟು ಸಹಾಯವಾಗುತ್ತಿತ್ತು.'

ಇಲ್ಲಿ ಚಿತ್ರಿತಗೊಂಡಿರುವ ಮಹನೀಯರು ಬಹುಮುಖ ಪ್ರತಿಭೆಯುಳ್ಳವರು ಮತ್ತು ಬಹುಭಾಷೆಗಳನ್ನು ಅರಿತವರು. ಅವರೆಲ್ಲ ಪರಸ್ಪರ ಕನ್ನಡದ ಕೆಲಸವನ್ನು ಒಗ್ಗಟ್ಟಿನಿಂದ ಹೇಗೆ ಮಾಡುತ್ತಿದ್ದರು ಎಂಬುದನ್ನು ಕೃತಿ ತೆರೆದು ತೋರಿದೆ. ಟಿ.ಎಸ್ ವೆಂಕಣ್ಣಯ್ಯ, ಎ. ಆರ್. ಕೃಷ್ಣ ಶಾಸ್ತ್ರೀ, ಬಿ.ಎಂ.ಶ್ರೀ ಮೊದಲಾದವರು ಸ್ನೇಹಗೌರವ-ಗಳೊಂದಿಗೆ ಜತೆಗೆ ಕನ್ನಡದ ಕೆಲಸವನ್ನು ಮುನ್ನಡೆಸಿದ ಆದರ್ಶ ಗಮನಿಸ-ಬೇಕಾದುದು.

ಬೇರೆ ಬೇರೆ ಸಂದರ್ಭಗಳಲ್ಲಿ ಕನ್ನಡವನ್ನು ಬಲಗೊಳಿಸಿದ ಸಂಘ ಸಂಸ್ಥೆಗಳ ವಿವರಗಳು ಕೃತಿಯಲ್ಲಿ ಪ್ರಾಸಂಗಿಕವಾಗಿ ಕಾಣಿಸಿಕೊಂಡಿವೆ. ಕನ್ನಡ ಸಾಹಿತ್ಯ ಪರಿಷತ್ತು, ಪ್ರಬುದ್ಧ ಕರ್ಣಾಟಕ ಪತ್ರಿಕೆ, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕನ್ನಡ ಸಂಘ, ಮೈಸೂರು ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘ, ಬೃಹತ್ ಕನ್ನಡ ನಿಘಂಟು ರಚನೆ ಯೋಜನೆಯ ಕಾರ್ಯ ಚಟುವಟಿಕೆ ಹೀಗೆ ಹಲವು ಚಾರಿತ್ರಿಕ ಮಹತ್ತ್ವದ ವಿವರಗಳು ಕೃತಿಯ ಒಳಗೆ ಅಲ್ಲಲ್ಲಿ ಚಿತ್ರರಗೊಂಡಿದೆ. ಈ ಬಗೆಗೆ ಸಂಶೋಧನೆ ಕೈಗೊಳ್ಳುವವರಿಗೆ ಪೂರಕ ಆಕರವಾಗುವ ಶಕ್ತಿ ಈ ಕೃತಿಗಿದೆ.

'ಮಹಾರಾಜರ ಕಾಲೇಜಿನಲ್ಲಿ ಅವರು ಅಧ್ಯಾಪಕರಾಗಿದ್ದಾಗ ಅವರು ಧರಿಸುತ್ತಿದ್ದ ಉಡುಪು ಆಕರ್ಷಕವಾಗಿತ್ತು. ನೀಳ ದೇಹದ ತೆಳು ಆಕಾರದ ಅವರು ರೇಷ್ಮೆಯ ಪಂಚೆಯುಟ್ಟು ರೇಷ್ಮೆಯ ಬಿಳಿಯ ನಿಲುವಂಗಿಯನ್ನು, ತೊಟ್ಟು ರೇಷ್ಮೆಯ ಜರತಾರಿಯುಳ್ಳದ ಪೇಟವನ್ನು ಧರಿಸಿ ಕತ್ತಿನ ಸುತ್ತ ಮಡಿಸದ ರೇಷ್ಮೆಯ ವಸ್ತ್ರವನ್ನು ಸುತ್ತಿ ಅವರು ನಡೆದು ಬರುತ್ತಿದ್ದರು' (ರಾಳ್ಳಪಳ್ಳಿ ಅನಂತಕೃಷ್ಣ ಶರ್ಮರ ವ್ಯಕ್ತಿತ್ವ - ಪುಟಸಂಖ್ಯೆ ೧೦೦) ಇಂತಹ ಸೊಗಸಾದ, ಸೂಕ್ಷ್ಮ ಸಂವೇದನೆಯ, ಸರಳಭಾಷೆಯ ನಿರೂಪಣೆ ಕೃತಿಯ ಓದನ್ನು ಮುದಗೊಳಿಸುತ್ತದೆ.

ಸಾಹಿತ್ಯಕ ಸತ್ತ್ವ ಮತ್ತು ಐತಿಹಾಸಿಕ ಮಹತ್ತ್ವದಿಂದ ಕೂಡಿದ ಈ ಕೃತಿ ಆಧುನಿಕ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದ ಚಿತ್ರಣವನ್ನು ತನ್ನೊಡಲಲ್ಲಿ ತುಂಬಿಕೊಂಡಿದೆ. ಕನ್ನಡವನ್ನು ಕಟ್ಟಿ ಬೆಳೆಸಿದ ಹಿರಿಯರ ಜತೆಗಿನ ವೆಂಕಟಸುಬ್ಬಯ್ಯನವರ ಒಡನಾಟ, ಪ್ರೀತಿಯಿಂದ ಅರಳಿದ ಇಲ್ಲಿನ ವ್ಯಕ್ತಿಚಿತ್ರಗಳು ಹೀಗೆ ಒಂದೆಡೆ ಸಂಕಲಿತಗೊಂಡದ್ದರಿಂದ ಕನ್ನಡಕ್ಕೆ ಖಂಡಿತ ಪ್ರಯೋಜನವಾಗಿದೆ.



ಒಂದು ಭಾಷೆಯನ್ನು ಆಡುವ ಜನ ರಾಜಕೀಯವಾದ ಆಕ್ರಮಣ, ವ್ಯಾಪಾರ, ಅನ್ವೇಷಣೆ, ಸಾಂಸ್ಕೃತಿಕ ಸಂಪರ್ಕ, ಇತ್ಯಾದಿಗಳ ದೆಸೆಯಿಂದ ಹೊಸ ಹೊಸ ಶಬ್ದಗಳನ್ನು ತಮ್ಮ ಭಾಷೆಗೆ ಆಮದು ಮಾಡಿಕೊಂಡು ತಮ್ಮದನ್ನಾಗಿಸಿಕೊಳ್ಳುತ್ತಾರೆ. ಆದುದರಿಂದ ನಮ್ಮ ಭಾಷೆಗೆ ಬಂದು ಸೇರುವ ಪ್ರತಿಯೊಂದು ಶಬ್ದದ ಹಿಂದೆ ನಮ್ಮ ಭಾಷೆಯ ಚರಿತ್ರೆಯೇ ಅಡಗಿದೆ. ಇದರಿಂದ ನಮ್ಮ ಜನರ ಚರಿತ್ರೆಯನ್ನು ಕೂಡ ನಾವು ಪುನಃ ರಚಿಸಬಹುದು. ಕನ್ನಡಕ್ಕೆ ಹೀಗೆ ನಾವು ಆಮದು ಮಾಡಿಕೊಂಡಿರುವ ಶಬ್ದಗಳಲ್ಲಿ ಬಹು ಹೆಚ್ಚಾಗಿರುವವು ಸಂಸ್ಕೃತ ಶಬ್ದಗಳು. ನಮ್ಮ ಆವರಣವು ಸಂಸ್ಕೃತಮಯವಾಗಿದ್ದುದೇ ಇದಕ್ಕೆ ಕಾರಣ. ಕನ್ನಡ ಯಾವುದು? ಸಂಸ್ಕೃತ ಯಾವುದು? – ಎನ್ನುವುದನ್ನು ಸಾಮಾನ್ಯರು ತಿಳಿಯುವುದಕ್ಕೆ ಆಗದಿರುವಷ್ಟು ಸಂಸ್ಕೃತ ಶಬ್ದಗಳು ನಮ್ಮಲ್ಲಿ ಸೇರಿವೆ. ಇದರ ಚರಿತ್ರೆಯನ್ನು ಬೇರೆಯ ದೃಷ್ಟಿಯಿಂದ ನಾವು ನಿರೂಪಿಸಬೇಕು. ಪರ್ಷಿಯನ್, ಅರಾಬಿಕ್ ಶಬ್ದಗಳು ನಮಗೆ ಬರಲು ಮುಖ್ಯವಾದ ಕಾರಣ ನಮ್ಮ ರಾಜ್ಯವನ್ನು ಮುಘಲರು ಆಳಿದ್ದು. ಆ ಕಾಲದಿಂದ ರಾಜ್ಯದ ಆಡಳಿತದ ಎಲ್ಲ ಹಂತಗಳಲ್ಲಿಯೂ ಅನೇಕ ಶಬ್ದಗಳು ಬಂದು ಸೇರಿವೆ. ಉರ್ದು ಮೂಲಕವೂ ಹೀಗೆಯೇ ಅನೇಕ ಶಬ್ದಗಳು ಬಂದಿವೆ. ಆಂಗ್ಲರು, ಫ್ರೆಂಚರು, ಪೋರ್ಚುಗೀಸರು ನಮ್ಮ ದೇಶವನ್ನು ಕೆಲವು ಭಾಗಗಳಲ್ಲಿ ಆಳುತ್ತಿದ್ದರು. ಇಂಗ್ಲಿಷರಂತೂ, ನಮ್ಮನ್ನು ೨೦೦ ವರ್ಷಗಳ ಕಾಲ ಗುಲಾಮರನ್ನಾಗಿ ಮಾಡಿ ಆಡಳಿತ ನಡೆಸಿದರು. ಆಕಾಲದಲ್ಲಿ ಈ ಮೂರು ಭಾಷೆಗಳ ಮೂಲಕ ಸಾವಿರಾರು ಶಬ್ದಗಳು ನಮ್ಮ ಭಾಷೆಗೆ ಬಂದು ಸೇರಿವೆ.

– ಪ್ರೊ. ಜಿ. ವೆಂಕಟಸುಬ್ಬಯ್ಯ



# ವಿದ್ವಜ್ಜೀವಿತ



## ಭಾಗ – ಎರಡು



## ನಿಘಂಟುಲೋಕ

ಪ್ರೊ. ಜಿ. ವೆಂಕಟಸುಬ್ಬಯ್ಯನವರ ನಿಘಂಟುಗಳು ಮತ್ತು ನಿಘಂಟು
ವಿಷಯಕ ಕೃತಿಗಳ ಅವಲೋಕನ

ಯಾವ ಶಬ್ದವೇ ಆಗಲಿ ಒಂದು ಭಾಷೆಯಿಂದ ನಮಗೆ ಬಂದಿದೆ ಎಂದು ಹೇಳಿದರೆ ಆ ಶಬ್ದದ ವ್ಯುತ್ಪತ್ತಿಯನ್ನು ಪೂರ್ತಿ ಹೇಳಿದಂತಾಗುವುದಿಲ್ಲ. ಏಕೆಂದರೆ ಯಾವ ಭಾಷೆಯ ಮೂಲಕ ಒಂದು ಶಬ್ದ ನಮಗೆ ಎರವಲಾಗಿದೆಯೋ ಆ ಭಾಷೆಗೆ, ಅದು ಬೇರೆ ಬೇರೆ ಭಾಷೆಗಳಲ್ಲಿ ಪ್ರಚಾರದಲ್ಲಿದ್ದು ಬಳಿಕ ಬಂದು ತಲಪಿರಬಹುದು. ಈ ಎಲ್ಲ ವಿವರಗಳನ್ನೂ ಅನೇಕ ನಿಘಂಟುಗಳ ಪರಿಶೀಲನೆಯಿಂದ ನಾವು ತೀರ್ಮಾನಿಸಬೇಕಾಗುತ್ತದೆ. ಇದೊಂದು ಸಂಶೋಧನಕಾರ್ಯ. ಕೆಲವು ವೇಳೆ ನಿಘಂಟುಗಳು ಕೂಡ ಸಮರ್ಪಕವಾದ ಉತ್ತರವನ್ನು ತಿಳಿಸುವುದಿಲ್ಲ. ನಿಘಂಟುಸಂಪಾದಕರು ಪ್ರಶ್ನಾರ್ಥಕಚಿಹ್ನೆಯನ್ನೇ ಹಾಕಿ ಅಥವಾ ಸಂದಿಗ್ಧ ಎಂಬ ಸೂಚನೆಯೊಡನೆ ಮುಕ್ತಾಯ ಮಾಡಿರುತ್ತಾರೆ. ವ್ಯುತ್ಪತ್ತಿಕ್ಷೇತ್ರದ ಸಂಶೋಧನೆ ಹೀಗೆ ಕೊನೆಯಿಲ್ಲದ್ದು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

# ಸಾಹಿತ್ಯಜೀವಿ ಜಿ.ವಿ. ಅವರ 'ಕನ್ನಡ ನಿಘಂಟು ಪರಿವಾರ'

ಡಾ. ಉಪ್ಪಂಗಳ ರಾಮ ಭಟ್ಟ

ಅಖಿಲಭಾರತ ಎಪ್ಪತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಗೆ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಸರ್ವಾನುಮತದಿಂದ ಆಯ್ಕೆಯಾದ ಸುದ್ದಿ ದೂರದರ್ಶನ ಮತ್ತಿತರ ಮಾಧ್ಯಮಗಳಲ್ಲಿ ಪ್ರಕಟವಾದ ಕೂಡಲೇ ಕೆಲವು ದಶಕಗಳಿಂದ ಅವರಿಗೆ ಪರಿಚಿತನಾದ ನಾನು ದೂರವಾಣಿ ಮೂಲಕ, ಮತ್ತೆ ಪತ್ರದ ಮೂಲಕ ಅವರನ್ನು ಅಭಿನಂದಿಸಿ ನನ್ನ ಸಂತೋಷವನ್ನು ವ್ಯಕ್ತಪಡಿಸಿದ್ದೆ. ಸಾಹಿತ್ಯದ ಸೇವೆಯಲ್ಲಿ ನಿರಂತರ ತೊಡಗಿಕೊಂಡಿದ್ದು ಶತಮಾನವನ್ನು ಸಮೀಪಿಸುತ್ತಿರುವ (ಜನನ: 23-8-1913) ಈ ಹೊತ್ತಿನಲ್ಲಿ ಅವರಿಗೆ ಈ ಗೌರವ ಸಂದುದು ಸಂತೋಷಕರವಾಗಿತ್ತು. ಅವರಿಂದ ಎಷ್ಟೋ ಕಿರಿಯರಿಗೆ, ಶಿಷ್ಯಂದಿರಿಗೆ ಇದು ಯಾವಾಗಲೋ ದೊರಕಿದ್ದು ಇವರು ಹಿಂದುಳಿದಿದ್ದರು. ಈ ಸುದ್ದಿಯ ಬೆನ್ನಿಗೇ ಬಂದ, ಆ ಸಂತಸ ಕುರಿತಾಗಿ ಅವರ ಕೃತಿಗಳ ಕುರಿತಾಗಿ ಸಿದ್ಧವಾಗುವ ಗ್ರಂಥಕ್ಕೆ ನಾನು ಅವರ 'ಕನ್ನಡ ನಿಘಂಟು ಪರಿವಾರ' ಕೃತಿಯ ಕುರಿತು ಬರೆದುಕೊಡ-ಬೇಕೆಂಬುದು, ಆ ಗಂಭೀರ ಗ್ರಂಥದ ಬಗ್ಗೆ ಬರೆಯಲು ನನ್ನ ಅರ್ಹತೆಯ ಬಗೆಗೆ ನನಗೆ "ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ" ಎಂಬಂತೆ ಅಳುಕಾದರೂ ಇಂತಹ ಅಪೂರ್ವ ಅವಕಾಶ ಸಿಕ್ಕಿತಲ್ಲಾ ಎಂಬ ಹುಮ್ಮನಸು ಅದನ್ನು ಒಪ್ಪಿಕೊಳ್ಳಲು ನನ್ನನ್ನು ಪ್ರೇರೇಪಿಸಿತು. ಅವರ ಯೋಗ್ಯತೆಗೆ ತಕ್ಕುದಾದ, ಅವರಿಗೆ ಸಾರ್ಥಕವೆನಿಸಿದ 'ಶಬ್ದಸಾಗರ' ಎಂಬ ಹೆಸರಿನ ಅಭಿನಂದನ ಗ್ರಂಥವೊಂದು ಹಿರಿಯ ಲೇಖಕರಿಂದ ಇತ್ತೀಚೆಗೆ (2004) ಸಮರ್ಪಿತವಾದುದನ್ನಿಲ್ಲಿ ನೆನೆಯಬೇಕು. ಇದು 2009ರಲ್ಲಿ ಪುನರ್ಮುದ್ರಿತವಾಗಿದೆ.

ಇತ್ತೀಚೆಗಿನ ನಿಘಂಟುಗಳಲ್ಲಿ ಗಣ್ಯತಮವೆನಿಸಿದ, ಎಂದಿಗೂ ತನ್ನ ಪ್ರಥಮಸ್ಥಾನವನ್ನು ಬಿಟ್ಟುಕೊಡಲಾರದ ಡಾ. ಫರ್ಡಿನಂಡ್ ಕಿಟ್ಟೆಲರ ಕನ್ನಡ ಇಂಗ್ಲಿಷ್ ನಿಘಂಟಿನ (1894) ಅನಂತರ ಅದನ್ನು ಪರಿಷ್ಕರಿಸಿದ ಪ್ರೊ. ಎಂ. ಮರಿಯಪ್ಪ ಭಟ್ಟರ ಅದೇ ನಿಘಂಟು ಮತ್ತು ಆ ಸಾಲಿನಲ್ಲಿ ಬಂದ, ಪ್ರೊ. ಜಿ. ವೆಂಕಟಸುಬ್ಬಯ್ಯನವರು

ಸಂಪಾದಿಸಿದ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕನ್ನಡ-ಕನ್ನಡ ನಿಘಂಟು (ಬೃಹದ್ಗಾತ್ರದ ಎಂಟು ಸಂಪುಟಗಳು 1973-1992) ಎಂದೂ ಅಳಿಯದ ಭದ್ರ ನೆಲೆಯುಳ್ಳವುಗಳು. ಪ್ರೊ. ಭಟ್ಟರ ಪರಿಷ್ಕರಣೆಯೂ ಪರಿಪೂರ್ಣವಲ್ಲವೆಂದು ಸಾಧಾರವಾಗಿ ಶ್ರೀಯುತ ಜಿ.ವಿ.ಯವರು ಪ್ರತಿಪಾದಿಸಿದ್ದಾರೆ. ನಿಘಂಟುರಚನೆ ಒಂದು ನಿರಂತರಪ್ರಕ್ರಿಯೆ; ಅದಕ್ಕೊಂದು ಶಾಖೆಯೇ ಶಾಶ್ವತವಾಗಿರಬೇಕೆಂದು ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟನ್ನು ಉದಾಹರಿಸಿ ಸಮರ್ಥಿಸಿದ್ದಾರೆ. ಶಬ್ದಸಾಗರದ ಆಳ ಅಗಲ ವಿಸ್ತಾರ ಎಷ್ಟೆಂಬುದನ್ನು ಸ್ವತಃ ಮುಳುಗಿ ಈಜಾಡಿ ನೋಡಿ ದೃಢೀಕರಿಸಿದ್ದಾರೆ.

ನಿಘಂಟುರಚನೆ ಎಷ್ಟು ಗಂಭೀರವೋ ಅದರ ಅವಗಾಹ ಅವಧಾನ ಅಧ್ಯಯನವೂ ಅಷ್ಟೇ ಗಂಭೀರ. ಅಪಾರ ತಾಳ್ಮೆ ಪರಿಶ್ರಮ-ಶ್ರದ್ಧೆ-ಪಾಂಡಿತ್ಯಗಳ ಪರಿಪೂರ್ಣ ನಿಧಿಯ ಗಂಟು ಆ ನಿಘಂಟು.

ಬರೇ ಬೃಹನ್ನಿಘಂಟನಿಂದ, ತದುಪಜೀವಿಯಾದ ಜಿ.ವಿ.ಯವರು ಅಷ್ಟು ಪ್ರಸಿದ್ಧರಾಗುತ್ತಿದ್ದಿಲ್ಲ. ಏಕೆಂದರೆ ಅದು ಸಾಮಾನ್ಯರು ಈಜಾಡುವ ಉದ್ಯಾನದ (ಪಾರ್ಕ್) ಈಜುಕೊಳವಲ್ಲ. ಅವರು ಸಿಹಿನೀರಿನ ಶಬ್ದಸಾಗರದ ಪುಣ್ಯೋದಕವನ್ನು ಇಷ್ಟಿಷ್ಟೇ ಹಗುರವಾದ 'ಇಗೋ ಕನ್ನಡ'ವೆಂಬ ಸೀಸೆಗಳಲ್ಲಿ ತುಂಬಿ, ಪ್ರಜಾವಾಣಿಯ ಅಂಕಣದ ಕಂತುಗಳಲ್ಲಿ ತುಂಬಿ ಸಾಮಾನ್ಯರೆನಿಸಿದ ಓದುಗರಿಗೂ ಕುಡಿಸಿದರು. ಸಹಜ-ಸುಲಭ-ಸರಳ ಭಾಷೆಯಲ್ಲಿ ಔಷದೋಪಮ ರುಚಿಕರ ಶಬ್ದರಸವು ಓದುಗರ ಶಬ್ದರೋಗ ಪರಿಹರಿಸಿ ಮನಸ್ಸಿಗೆ ಸಂತಸ ಆರೋಗ್ಯನೀಡಿ ಬಳೆಯಿಸಿತು, ಬದುಕಿಸಿತು, ಜಿ.ವಿ.ಯವರು ಜನಮನಜೀವಿಯಾದರು. ಆದುದರಿಂದಲೇ ಅಧ್ಯಕ್ಷಪದವಿಗಾದ ಅವರ ಆಯ್ಕೆ, ಅವಿರೋಧವಾದ ಸರ್ವಾನುಮತದ ಆಯ್ಕೆಯಾಗಿ ಸಮಸ್ತ ಕನ್ನಡಿಗರ ಮನಸ್ಸಿಗೆ ಆನಂದ ನೀಡಿತು.

೨೦೦೩ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಕಟಗೊಂಡ, ೨೮೮ ಪುಟಗಳ ೨೦ ಕೋಣೆಗಳ ಅಧ್ಯಾಯಗಳಲ್ಲಿ ಕನ್ನಡ ನಿಘಂಟುಪರಿವಾರವನ್ನು ಒಕ್ಕಲಿಸಲಾಗಿದೆ. ನಿಘಂಟುಸಾಗರವನ್ನು ತುಂಬುವ ಬೇರೆ ಬೇರೆ ನದಿ ಉಪನದಿ-ಗಳನ್ನು ಸ್ಥೂಲವಾಗಿ ಗುರುತಿಸಿ ಪರಿಚಯಿಸಿದೆ. ಪ್ರಾಧಿಕಾರದ ಪ್ರೊ. ಮಲ್ಲೇಪುರಂ. ಜಿ. ವೆಂಕಟೇಶರು "ಈ ಗ್ರಂಥವು ನಿಘಂಟುವಿಜ್ಞಾನಕ್ಕೆ ಸಂಬಂಧಿಸಿದ ಬಹುಮುಖ್ಯ ವಿಚಾರಗಳನ್ನು ಕುರಿತು ಬಹುಸೂಕ್ಷ್ಮವಾಗಿ ವಿಶ್ಲೇಷಿಸುತ್ತದೆ, ವ್ಯಾಖ್ಯಾನಿಸುತ್ತದೆ" ಎಂದು ಅಕ್ಷರಸೂರ್ಯನಿಗೆ ನಮನ ಸಲ್ಲಿಸಿದ್ದಾರೆ.

ಲೇಖಕ ಜಿ. ವಿ.ಯವರು - "ನಿಘಂಟುರಚನೆಯ ಸುತ್ತಮುತ್ತ ಇರುವ ವಿವರಗಳನ್ನು ಜೋಡಿಸಿದ್ದೇನೆ. ೨೦-೩೦ ವರ್ಷಗಳಲ್ಲಿ ಪಡೆದ ಕೆಲವು ಅನುಭವ-ಗಳಿಂದ ದೊರೆತ ಅಪರಿಪೂರ್ಣವಾದ ಅರಿವನ್ನು ಯುವ ವಿದ್ವಾಂಸರ ಗಮನಕ್ಕೆ ತರುವ ಏಕೈಕ ದೃಷ್ಟಿಯಿಂದ ಈ ಪುಸ್ತಕವನ್ನು ನಿರ್ಮಾಣಮಾಡಿದ್ದೇನೆ." ಎಂದು ವಿನಯಪೂರ್ವಕ ಅರಿಕೆ ಮಾಡಿಕೊಂಡಿದ್ದಾರೆ. ತಮ್ಮ ಅರಿವನ್ನೇ ಈ ಹಿರಿಯರು ಅಪರಿಪೂರ್ಣ ಎಂದರೆ ಅವರ ವಿನಯ ಸೌಜನ್ಯ ಏನೆನ್ನಲಿ!

ಮೊದಲಲ್ಲಿ ಐವತ್ತರಷ್ಟು ಟೀಕೆಗಳಿಗೆ ವಸ್ತುವಾಗುವಷ್ಟು ವಿದ್ವತ್ಪ್ರಿಯವೂ ಪ್ರಸಿದ್ಧವೂ ಆದ ಅಮರಸಿಂಹನ ಲಿಂಗಾನುಶಾಸನವನ್ನು ಹೆಸರಿಸಿ ಅನೇಕ ನಿಘಂಟುಗಳು ಬೆಳೆದು ಅದೊಂದು ಶಾಸ್ತ್ರವಾಗಿ ರೂಪಗೊಂಡ ಬಗೆಯನ್ನು ವಿಶ್ಲೇಷಿಸಿ ವೇದದ ಆರು ಅಂಗಗಳಲ್ಲಿ ಒಂದಾದ ನಿರುಕ್ತದಲ್ಲೇ ಅದರ ಮೂಲವನ್ನು (ಕ್ರಿ. ಪೂ. 700–500) ಗುರುತಿಸಿ ಇದನ್ನು ನಿಘಂಟುಶಾಸ್ತ್ರ (lexicolagy) ಮತ್ತು ನಿಘಂಟುರಚನೆ (lexicography) ಎಂದು ವಿಭಾಗಿಸಿದ್ದಾರೆ.

ನಿಘಂಟುಶಾಸ್ತ್ರಕ್ಕೆ ಸಂಬಂಧಿಸಿದಂತೆ (ಅಧ್ಯಾಯ೨) ಶಬ್ದಗಳ ಸಂಗ್ರಹ ಅನುಕ್ರಮ ಜೋಡಣೆ ಮೊದಲಾದ ಹಂತಗಳನ್ನು, ಎರಡು–ಮೂರು ಹೆಚ್ಚು ಭಾಷೆಗಳ ನಿಘಂಟುಗಳನ್ನು ತಿಳಿಸಿ, ಅರುವತ್ತೆರಡು ಭಾಷೆಗಳುಳ್ಳ ೩೦೦೦ ಪುಟಗಳುಳ್ಳ ವಿದ್ವಾನ್ ಮುಟ್ಟುತ್ತು ಪಿ.ದ. ಅವರ English Malayalam Multilingual Dictionary 1985 ಇದನ್ನು ಹೆಸರಿಸಿದ್ದಾರೆ. ಗ್ರಾಮ್ಯ ಶಬ್ದಗಳು, ಯಂತ್ರತಂತ್ರಗಳಿಗೆ, ಬೇರೆ ಬೇರೆ ವಿಷಯಗಳಿಗೆ, ಪ್ರತ್ಯೇಕ ನಿಘಂಟುಗಳಾಗಬೇಕು, ಆಡಳಿತ ಪದಕೋಶ, ವೈದ್ಯಪದಕೋಶ, ಬ್ಯಾಂಕಿಂಗ್, ವಿಜ್ಞಾನ ಇತ್ಯಾದಿಗಳಿಗೆ ಪದಕೋಶಗಳಾಗಬೇಕು ಆಗುತ್ತಾ ಇದೆ. ಹೀಗೆ ಲೆಕ್ಕ ಹಾಕಿದರೆ ೧೮ ಅಥವಾ ಅದಕ್ಕೂ ಹೆಚ್ಚಾಗಬಹುದು.

ಕನ್ನಡಿಗರಿಗೆ ಇತರ ಅನೇಕ ಭಾಷಿಕರ ಸಂಪರ್ಕವಾಗಿ ಆ ಭಾಷೆಯ ಶಬ್ದಗಳು ಎರವಲಾಗಿ ಬಂದಿವೆ. ಅರಬ್ಬಿ, ಪೋರ್ಚುಗೀಸ್, ಪಾರ್ಸಿ, ಇಂಗ್ಲಿಷ್, ಉರ್ದು ಮೊದಲಾದ ಭಾಷೆಗಳ ಶಬ್ದಗಳು ಪ್ರಮುಖ. ಆರಂಭದಿಂದಲೇ ಸಂಸ್ಕೃತ ಶಬ್ದಗಳು ತತ್ಸಮತದ್ಭವಗಳಾಗಿ, ಪ್ರಾಕೃತಮೂಲಕವಾಗಿಯೂ ಬಂದಿವೆ. ಕನ್ನಡಕ್ಕೆ ಬಂದ ಮೊದಲ ಅನ್ಯದೇಶ ಶಬ್ದ 'ರಬ್ಬು' ಎನ್ನಲಾಗಿದೆ. ಅಜಿತಪುರಾಣ ಮೊದಲಾದ ಕೆಲ ಹಳಗನ್ನಡ ಗ್ರಂಥಗಳಲ್ಲಿ 'ರೊಬ್ಬು' ಎಂಬ ರೂಪ ಕಂಡುಬರುತ್ತದೆ.

ನಿಘಂಟುಕಾರನಿಗೆ ಗ್ರಂಥಸಂಪಾದನೆಯ ಜ್ಞಾನವೂ ಅನಿವಾರ್ಯ ಎಂಬುದನ್ನು ಸೋದಾಹರಣ ಸಮರ್ಥಿಸಿದ್ದಾರೆ. ಪಂಪನ ಆದಿಪುರಾಣದ ೧೪ನೆಯ ಆಶ್ವಾಸದ ೮೪ನೆಯ ಪದ್ಯದ ಮುದ್ರಣದಲ್ಲಿ 'ಸೌದರ್ಯ' ಇರಬೇಕಾದುದು 'ಸೌಂದರ್ಯ' ಎಂದಾಗಿದೆ. ಇಲ್ಲಿ 'ಸೋದರ'ದ ಭಾವವಾಚಕ 'ಸೌದರ್ಯ' ಇದ್ದರೆ ಮಾತ್ರ ಅರ್ಥ ಹೊಂದುತ್ತದೆ. ೧೧ನೆ ಶತಮಾನದ ಶಾಸನವೊಂದರಲ್ಲಿ 'ಕುಂಗೆ' (ಸ್ತನ) ಬದಲು 'ಕುಗೆ' ಎಂದರೆ ಹೇಗರ್ಥವಾಗಬೇಕು? 'ಮುಖಮಂಡನ ಕ್ರೀಡೆ' (ಚಂದ್ರಪ್ರಭಪುರಾಣ) ಬಹುಮಂದಿಗೆ ಅರ್ಥವಾಗದು. ಸಂಸ್ಕೃತ ಮತ್ತಿತರ ಬಹುಭಾಷಾ ವಿದ್ವಾಂಸರಾದ ಜಿ. ವಿ.ಯವರು ಇದನ್ನು ಮಲ್ಲಿನಾಥನ ಅಮರಪಾರಿಜಾತ ಎಂಬ ಗ್ರಂಥದಿಂದ ಹುಡುಕಿತೆಗೆದು ಅದಕ್ಕೆ ತಾಂಬೂಲಚರ್ವಣ (ವೀಳ್ಯದೆಲೆ ಜಗಿಯುವುದು) ಎಂಬರ್ಥವನ್ನು ಸರಿಯಾಗಿಯೇ ನಮೂದಿಸಿದ್ದಾರೆ. 'ಶ್ರೀಧರ' ಶಬ್ದಕ್ಕೆ ಲಕ್ಷ್ಮೀರಮಣ – ವಿಷ್ಣು ಎಂಬುದಾದರೂ ಸಂದರ್ಭಕ್ಕೆ ಹೊಂದದ ಅದನ್ನು ಬಿಟ್ಟು ಬೇರೇನೋ ಅರ್ಥವಿರಬೇಕೆಂದು ಹುಡುಕಾಡಿದ್ದೇ ಒಂದು ರೋಚಕ ಕಥೆ. ಅದನ್ನು ವಿವರಿಸುತ್ತಾ ವಿವೇಕಚೂಡಾಮಣಿ ಗ್ರಂಥದಿಂದ ಶ್ರೀ ಅಂದರೆ ಚಂದ್ರನ ೧೨ನೆಯ

ಕಲೆ. ಅದನ್ನು ಧರಿಸಿದವ ಚಂದ್ರಶೇಖರ. ಶಿವ ಎಂದು ಕಂಡುಕೊಂಡಿದ್ದಾರೆ. ಇನ್ನೂ ಅನೇಕ ಗ್ರಂಥಪಾಠಗಳ ದೋಷಗಳನ್ನು ಪರಿಷ್ಕರಿಸಿದ್ದಾರೆ. ಉದಾ : ಕುಮಾರವ್ಯಾಸ ಭಾರತದಲ್ಲಿ ಮೊಗಕೆ (ಕುದುರೆಯ) ಭಾಣವ ಕಟ್ಟಿ.... ಎಂಬುದು ಏನು ಮಾಡಿದರೂ ಅರ್ಥವಾಗದೆ ಅದು 'ಭಾಣ'ವಲ್ಲ ಖಾಣ(ಖಾದನ) ಎಂದು ತಿಳಿದಾಗ ಎಷ್ಟು ಸಂತಸವಾಗುವುದಿಲ್ಲ ? ಇದೇ ಗ್ರಂಥದಲ್ಲಿ ಆನೆಯ ಎರಡು ದಾಡೆಗಳ ಮಧ್ಯದ ಹಣೆಯ ಭಾಗವನ್ನು 'ಪಂಚಕ' ವೆಂದಿರುವುದು ತಪ್ಪು ಅದು 'ಪೇಚಕ' ಎಂದಾಗ–ಬೇಕೆಂದು ಅವರ ಸೂಕ್ಷ್ಮಶೋಧಕ ದೃಷ್ಟಿ ತೋರಿಸಿತು. ದಳವಾಯಿ ಎಂದರೆ ದಳ(ಸೈನ್ಯ) ದ 'ವಾಯಿ' ಅಲ್ಲ ಸಂಸ್ಕೃತದ ದಳಪತಿ. ಪ್ರಾಕೃತದಲ್ಲಿ ದಳಪಇ ಆಗಿ ಕನ್ನಡಕ್ಕೆ 'ದಳವಾಯಿ' ರೂಪದಲ್ಲಿ ಬಂತು. ಅದುವರೆಗೂ ವಿದ್ವಾಂಸರೂ ತಿಳಿದುಕೊಂಡಿದ್ದ ಅರ್ಥ ಬದಲಾಗಿ ಮಿಂಚಿನಂತೆ ಹೊಳೆದಾಗ ಸಂಶೋಧಕನಿಗೆಷ್ಟು ಖುಷಿಯಾಗಿರಬೇಡ. ಇಂತಹ ಅನೇಕ ಸತ್ಯಗಳನ್ನು ನಿಘಂಟುಕಾರ ಜಿ. ವಿ. ಯವರು ನಮಗೆ ತೋರಿಸಿಕೊಟ್ಟಿದ್ದಾರೆ.

ಆರನೆಯ ಅಧ್ಯಾಯದಲ್ಲಿ ಹಳೆಯ ನಿಘಂಟುಗಳನ್ನೆಲ್ಲಾ ಪರಿಚಯಿಸಲಾಗಿದೆ. ಹತ್ತನೆಯ ಶತಮಾನದ ರನ್ನಕಂದದಿಂದ ಹಿಡಿದು ಕರ್ಣಾಟಕ ನಿಘಂಟು (1400), ಚತುರಾಸ್ಯನಿಘಂಟು (1450) ೧೨೦ ವಾರ್ಧಕ ಷಟ್ಪದಿಗಳ ತೋಂಟದಾರ್ಯನ ಕರ್ಣಾಟಕ ಶಬ್ದಮಂಜರಿ ಮೊದಲಾದವನ್ನು ಯಾವುದನ್ನೂ ಬಿಡದೆ ತೊಳಸಿ ಶಬ್ದಖಂಡಗಳನ್ನು ಹೆಕ್ಕಿ ತೆಗೆದಿದ್ದಾರೆ.

ರನ್ನಕಂದ ನಿಘಂಟಿನ ಸಾವಿರ ವರ್ಷದ ನಂತರ ಕಿಟಲ್ ನಿಘಂಟಿನ ಶತಮಾನೋತ್ಸವವನ್ನಾಚರಿಸಲಾಯಿತು. ರೆವರೆಂಟ್ ಎಫ್. ಕಿಟ್ಟೆಲ್ – ಏಪ್ರಿಲ್ 7, 1832 – ೧ನೇ ವರ್ಷ, 19, ಡಿಸೆಂಬರ್ 1903ರಂದು ನಿಧನ. ಡಿಸೆಂಬರ್ 18, 1903ರಲ್ಲಿ A Grammer of Kannada Language, 1894ರಲ್ಲಿ ನಿಘಂಟು A Kannada English Dictionary ಮುದ್ರಣ, 1896ರಲ್ಲಿ ಜರ್ಮನಿಯ ಟ್ಯೂಬಿಂಗನ್ ವಿಶ್ವವಿದ್ಯಾ–ಲಯದಿಂದ ಅವರಿಗೆ ಡಾಕ್ಟರೇಟ್ ಪದವಿ ಇತ್ಯಾದಿ ವಿವರಗಳನ್ನು ನೀಡಲಾಗಿದೆ.

ಕಿಟ್ಟೆಲ್ಲರ ಕಾಲದಲ್ಲಿ ಪಂಪಭಾರತ, ವಡ್ಡಾರಾಧನೆ, ಕೆಲವಾರು ವಚನಕಾರರ ಕೃತಿಗಳು ಲಭ್ಯವಾಗಿರಲಿಲ್ಲ. ಮದ್ರಾಸು ವಿಶ್ವವಿದ್ಯಾಲಯದ ಪ್ರೊಫೆಸರ್ ಮತ್ತು ನನ್ನ ಗುರುಗಳಾಗಿದ್ದ ಪ್ರೊ. ಮರಿಯಪ್ಪ ಭಟ್ಟರು ಅಂತಹವುಗಳಿಂದಲೇ ಶಬ್ದಗಳನ್ನಾಯ್ದು ಸುಮಾರು ೭,೮೦೦ ಶಬ್ದಗಳನ್ನು ಸೇರಿಸಿ ಪರಿಷ್ಕರಿಸಿದರು (1971). ಪ್ರೊ. ಜಿ. ವಿ.ಯವರು ಕಂಡುಬಂದ ಕೆಲವು ನ್ಯೂನತೆಗಳನ್ನು ಗುರುತಿಸಿದ್ದಾರೆ. ಆ + ಆನೆ = ಆಯಾನೆ, 'ಯಾನೆ' ತಮಿಳಿನಲ್ಲಿರುವಂತೆ ಪ್ರತ್ಯೇಕ ಶಬ್ದವಲ್ಲ. 'ಲವಟು' ಅಲ್ಲ ಆ ವಟು. ಪಂಪ ಭಾರತದಲ್ಲಿ ಬರುವ ಬಾಡ ಶಬ್ದಕ್ಕೆ 'ತೋಟ' ಎಂಬರ್ಥ ಕೊಡಲಾಗಿದೆ. ಅದಕ್ಕೆ ಗ್ರಾಮ ಎಂದರ್ಥ. ಬಾಡು ತರಕಾರಿ, ಫಲ – 'ಬಾಡುಕಾಯ್' ಬಾಟ್ಕಾಯ್ ಹೊಡವದು – ಹವಿಕದಲ್ಲಿ ಚೆನ್ನಾಗಿ ತಿನ್ನುವುದು ಎಂಬರ್ಥವಿದೆ. 'ಬಾಡು' ಮಾಂಸ ಎಂಬರ್ಥವೂ ಇದೆ. 'ಮುನ್ನೀರ್' ಎಂಬುದನ್ನು ಕಿಟ್ಟೆಲ್ಲರು ಮೂರು ನೀರ್ ಎಂದು ವಿಂಗಡಿಸಿದ್ದಾರೆ. ಅದನ್ನು ಮುನ್+ನೀರ್ ಎಂದು ತಿದ್ದ–

ಬೇಕಿತ್ತು. ಇತ್ಯಾದಿಗಳನ್ನು ಪ್ರೊ. ಜಿ. ವಿ ಸೂಚಿಸಿದ್ದಾರೆ. ಅವರ ಸೂಕ್ಷ್ಮ ಸಂಶೋಧಕ ದೃಷ್ಟಿಯಿಂದ ಯಾವುದೂ ತಪ್ಪಿಸಿಕೊಳ್ಳುವಂತಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಪರಿಚಯ ನೀಡಲಾಗಿದೆ. ೧೯೪೪ರಲ್ಲಿ ೭೩ ವಿದ್ವಾಂಸರಿಂದ ನಿಘಂಟು ಆರಂಭವಾಗಿ ಮುನ್ನಡೆದು ೧೯೭೩ ರಿಂದ ಜಿ. ವೆಂ. ಅದರಲ್ಲಿ ತೊಡಗಿಕೊಂಡರು. ೨೦೦೨ರ ವರೆಗೆ ಒಂದುವರೆ ಕೋಟಿ ರೂಪಾಯಿ ವೆಚ್ಚವಾಯಿತು – ಇತ್ಯಾದಿ ವಿವರಗಳೊಂದಿಗೆ ನಿಘಂಟನ್ನು ಉಪಯೋಗಿಸುವುದು ಹೇಗೆಂದು ತಿಳಿಸಿದ್ದಾರೆ. ಮೃಗಪಕ್ಷಿ ಕೃಷಿ ಮುಂತಾದವುಗಳ ನಿಘಂಟುಗಳಿಗೆ ಆಯಾ ವಿಷಯಜ್ಞರ ಸಹಕಾರ ಬೇಕೆಂದು ಕೆಲವು ವಿಶಿಷ್ಟಕೋಶಗಳನ್ನು – ಕಾವ್ಯಾರ್ಥಪದಕೋಶ, ವಾಕ್ಯಮಾಣಿಕ್ಯಕೋಶ, ವಿಮರ್ಶೆಯ ಪರಿಭಾಷೆ ಇತ್ಯಾದಿಗಳನ್ನು ಹೆಸರಿಸುವಾಗ ತುಳು ನಿಘಂಟನ್ನೂ ಬಿಡದೆ ಉಲ್ಲೇಖಿಸಿ-ದ್ದಾರೆ.

ಅರ್ಧಮಿಲಿಯ ಶಬ್ದಗಳ ಇಪ್ಪತ್ತೆರಡು ಸಾವಿರ ಪುಟಗಳ ೧೩೨ ವರ್ಷಗಳ ಇತಿಹಾಸದ ಆಕ್ಸ್‌ಫರ್ಡ್ ಇಂಗ್ಲಿಷ್ ಡಿಕ್ಷನರಿಯ ಹಿರಿಮೆಯನ್ನು ತಿಳಿಸಿ ನಿಘಂಟಿಗೆ ಶಾಶ್ವತವಾದ ಇಲಾಖೆಯೇ ಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.

ಎರವಲು (Loan words) ಪದಗಳ ಬಗೆಗೆ ಹದಿನಾಲ್ಕನೆಯ ಅಧ್ಯಾಯದಲ್ಲಿ ಸ್ವಲ್ಪ ವಿಸ್ತಾರವಾಗಿ ವಿವೇಚಿಸಲಾಗಿದೆ. ಬೇರೊಂದು ಭಾಷೆಯಿಂದ ಬಂದ ಪದ ಅನ್ಯದೇಶೀ ಅಥವಾ ಅನ್ಯದೇಶ್ಯ. ನೇರವಾಗಿ ಅನುವಾದ ಇಲ್ಲವೇ ತದ್ಭವವಾಗಿ ಇಂತಹ ಪದಗಳನ್ನು ಸ್ವೀಕರಿಸಲಾಗುತ್ತದೆ. ಕ್ರಿಸ್ತಪೂರ್ವದಲ್ಲೇ, ಮಹಾಭಾರತದಲ್ಲೇ 'ಕರ್ಣಾಟಕ' ಹೆಸರು ಕಂಡುಬರುತ್ತದೆ. ಈಜಿಪ್ಟ್, ಗ್ರೀಸ್, ಅರೇಬಿಯಾ ಪರ್ಷಿಯಾ ಇರಾನ್ ಮೊದಲಾದ ದೇಶಗಳ ಸಂಬಂಧ ಬಹಳ ಪ್ರಾಚೀನಕಾಲದಿಂದಲೇ ಕರ್ಣಾಟಕಕ್ಕಿತ್ತು. ಪುಲಕೇಶಿಗೆ ಪರ್ಷಿಯಾ ಖುಸ್ರು IIರ ಸಂಪರ್ಕವಾಗಿತ್ತು. ಅರಬ್ಬಿ ವರ್ತಕರು ಕ್ರಿ. ಶ. ೭ನೆಯ ಶತಮಾನದಲ್ಲೇ ಇಲ್ಲಿಗೆ ಬಂದಿದ್ದರು. ಮಹಮ್ಮದ ಬಿನ ಕಾಸೀಮ್ ೭೧೨ರಲ್ಲಿ ಸಿಂಧ್ ಪ್ರಾಂತಕ್ಕೆ ಬಂದಿದ್ದ. ಘಜನಿ ಮಹಮ್ಮದ್, ಘೋರಿ ಮಹಮ್ಮದ್ ಬಂದಿದ್ದರು. ಮೊಗಲರು 1200–1857ರ ವರೆಗೆ ಡಿಲ್ಲಿಯಲ್ಲಿ ಆಳಿದರು. ಮಲ್ಲಿಕ್ ಕಾಫರ್, ಮಹಮ್ಮದ್ ಬಿನ್ ತುಘಲಕ್ ಹೊಯ್ಸಳರ ಮೇಲೆ ಆಕ್ರಮಣ ನಡೆಸಿದ್ದರು. ಗೋವೆಗೆ ಬಂದ ಪೋರ್ಚುಗೀಸರಿಂದ ಕನ್ನಡದ ಸಂಪರ್ಕವಾಯಿತು. ೧೮ನೆಯ ಶತಮಾನದಿಂದ ೨೦೦ ವರ್ಷ ಇಂಗ್ಲೀಷರು ಭಾರತವನ್ನಾಳಿದರು. ಇದರಿಂದ ಭಾರತದ ಎಲ್ಲಾ ಭಾಷೆಗಳ ಮೇಲೆ ಇಂಗ್ಲಿಷ್ ಪ್ರಭಾವವಾಯಿತು. ಹೈದರಾಲಿ, ಟಿಪ್ಪು ಮೈಸೂರನ್ನಾಳಿದರು. ಹೀಗಾಗಿ ಪಾರ್ಸಿ, ಅರಬಿ, ಉರ್ದು, ಮರಾಠಿ, ಇಂಗ್ಲಿಷ್ ಭಾಷೆಗಳ ಎರವಲು ಶಬ್ದಗಳು ಹೆಚ್ಚಾಗಿವೆ. ಕ್ರಿ. ಪೂ. ಆರನೆಯ ಶತಮಾನದಲ್ಲೇ ಅಕೆಮೀನಿಯನ್ ಸಾಮ್ರಾಜ್ಯದ ಆಡಳಿತ ಭಾಷೆಯಾಗಿದ್ದ 'ಜೆಂಡ್ ಅವೆಸ್ತಾ' ಪವಿತ್ರಗ್ರಂಥವಿರುವ ಪಾರ್ಸಿ ಭಾಷೆಯಲ್ಲಿ ಕಸೀದ (ಪ್ರಗಾಥ ರೀತಿ) ಘಜಲ್, ರುಬಾಯಿ, ಮಾಸ್ನವಿ, ಪದ್ಯರೂಪಗಳಿವೆ. ನಮ್ಮಲ್ಲೀಗ ಅತಿ ಪ್ರಚಲಿತವಾಗಿರುವ 'ತಾಲೂಕು' ಪಾರ್ಸಿಯಿಂದ ಬಂದುದೆಂದರೆ ಅಚ್ಚರಿಯಾಗುವುದಿಲ್ಲವೆ? ಗಂಗಾ

ಯಮುನಾ ಮಧ್ಯದ ಹಿಂದುಸ್ತಾನಿಯಿಂದ ಹಿಂದಿ ಉರ್ದುಗಳು ಕವಲೊಡೆದವು. ಹಿಂದಿಗೆ ಸಂಸ್ಕೃತ, ಉರ್ದುವಿಗೆ ಪಾರ್ಸಿ ಅರಬಿಕ್ ಪ್ರಭಾವ. ಹಿಂದಿಗೆ ದೇವನಾಗರಿಲಿಪಿ, ಉರ್ದುವಿಗ ಅರಬ್ಬಿ ಲಿಪಿ. ಗಾಂಧೀಜಿಯವರು ಮೊದಲು 'ಹಿಂದುಸ್ತಾನೀ ಪ್ರಚಾರ ಸಭಾ' ಮಾಡಿ ಮತ್ತೆ ಅದನ್ನು 'ಹಿಂದೀ ಪ್ರಚಾರ ಸಭಾ' ಎಂದು ಬದಲಾಯಿಸಿದರು.

೧೫, ೧೬ನೇ ಅಧ್ಯಾಯಗಳಲ್ಲಿ ಶಬ್ದ ಅರ್ಥಗಳ ಬೆನ್ನು ಹತ್ತಿದಾಗಿನ ಅನುಭವಗಳ ವಿವರ, ಬಹಳ ಸರಸವಾಗಿದೆ. ಇದೆ+ಕೊಳ್-ಇಗೋ ಆಗಿ ಎಲ್ಲರೂ ಕೊಂಡಾಡುವಂತಾದುದಲ್ಲದೆ ಇದರಲ್ಲೆಲ್ಲೂ ಅವರ ಇಗೋ(Ego)ಗೆ ಅವಕಾಶವೇ ಆಗಿಲ್ಲ. ಅವರು ಓದುಗರ ಪ್ರತಿಕ್ರಿಯೆಗಳನ್ನು ಪರಿಶೀಲಿಸಿ ಸ್ವೀಕರಿಸಿಕೊಂಡಿದ್ದರು. ಹಾಗೆ ಪ್ರತಿಕ್ರಿಯೆ ನೀಡಿದವರಲ್ಲಿ ನಾನೂ ಒಬ್ಬನಾಗಿದ್ದೇನೆಂಬುದು ನನಗೆ ಹೆಮ್ಮೆಯ ವಿಷಯ. ಹನ್ನೆರಡುವರ್ಷ ಪ್ರತಿ ಭಾನುವಾರವೂ ಪ್ರಜಾವಾಣಿಯಲ್ಲಿ ಅಂಕಣ ಬರೆಹವಾಗಿ ಪ್ರಕಟವಾದ ಈ ಸಾಮಾಜಿಕ ನಿಘಂಟಿನ ೩ ಸಂಪುಟಗಳಾಗಿವೆ. ಎರವಲು ಪದಕೋಶವೇ ಮೊದಲಾದ ಅವರ ಕೋಶಸಂಬಂಧವಾದ ಎಲ್ಲಾ ಅನುಭವಗಳೂ ಇವುಗಳಲ್ಲಿ ಹರಳುಗಟ್ಟಿವೆ. ಸಾಮಾಜಿಕರ ಕೆಲವು ಪ್ರಶ್ನೆಗಳಿಗೆ ಅವರು ನೀಡಿದ ಉತ್ತರಗಳಿಗೆ ಕೆಲ ಉದಾಹರಣೆಗಳು 'ದಂಡಂ ದಶಗುಣಂ ಭವೇತ್' ಶಿಕ್ಷೆ ಹತ್ತಾರು ಗುಣವುಳ್ಳದ್ದು; 'ದಂಡೋ ದಶಗುಣೋ ಭವೇತ್' ಬೆತ್ತವು ಹತ್ತು ಪ್ರಯೋಜನವುಳ್ಳದ್ದು. 'ವಿಶ್ವಾಮಿತ್ರಾಹಿ ಪಶ್ವಾದೌ ಕರ್ದಮೇಷು ಜಲೇಷು ಚ ಅಂಧೇ ತಮಸಿ ವಾರ್ಧಕ್ಯೇ' (ಹಕ್ಕಿ, ನಾಯಿ, ಶತ್ರು, ಹಾವು, ಪಶು, ಕೆಸರು, ನೀರು, ಕುರುಡ, ಕತ್ತಲೆ, ಮುದಿತನ – ಇವುಗಳಲ್ಲಿ ಸಹಾಯಕ.)

ಗಾದೆ ಮಾತುಗಳ ವಿವರಣೆ :

ಏಳೇಳು ಜನ್ಮಗಳ ಕಥೆ : ಅನೇಕ ಜನ್ಮಗಳು ಎಂದಷ್ಟೆ. ಏಳು ಬಹಳ ಜನಪ್ರಿಯ ಅಂಕೆ.

ಮನೆನಲ್ಲಿ, ಬೀದಿನಲ್ಲಿ, ಸರಿಯಲ್ಲ; ಮನೆಯಲ್ಲಿ, ಬೀದಿಯಲ್ಲಿ ಸರಿ.

'ಋ' ಅಕ್ಷರ ಈಗಾಗಲೇ ರೂಢಿಗೆ ಬಂದಿರುವುದರಿಂದ ನಮ್ಮ ವರ್ಣಮಾಲೆ-ಯಲ್ಲಿ ಬೇಕು. ೠ ಬೇಕಾಗಿಲ್ಲ.

ಗಾಳಿನುಂಗುವ ಮಂಚ – ಆದಿಶೇಷ.

ಎರವಲು ಪದಗಳ ಕೋಶವನ್ನೇ ಬಹಳ ಅಧ್ಯಯನದಿಂದ ಸಿದ್ಧಪಡಿಸಿದ ಜೀವಿಯವರು ಓದುಗರು ಕೇಳಿದ ಹಲವಾರು ಅನ್ಯದೇಶ್ಯಗಳ ಮೂಲ ತಿಳಿಸಿದ್ದಾರೆ. ಇಸ್ತ್ರಿ–ಪೋರ್ಚುಗೀಸ್, ಪಟಾಲಂ–ಇಟಾಲಿಯನ್, ಇಗರ್ಜಿ–ಜರ್ಮನ್, ಚಾಲಾಕ್–ಪಾರ್ಸಿ, ವಕೀಲ–ಅರಬ್ಬಿ, ನಿಷ್ಕ, ಯವನಿಕಾ, ದ್ರೇಖ್ಖಾಣ–ಗ್ರೀಕ್, ಪಾರಸಿ ಅರಬ್ಬಿ-ಯಿಂದಲೇ ಸುಮಾರು ಒಂದುಸಾವಿರ ಶಬ್ದಗಳು ಬಂದಿವೆ ಎನ್ನಲಾಗಿದೆ. ಅರ್ಕಾರೊತ್ತಿನ ಬಗೆಗೆ ಸೂರ್ಯೋದಯ, ನಿರ್ದೇಶನ ಸರಿ; ಸೂರ್ಯೋದಯ, ನಿರ್ದೇಶನ ತಪ್ಪು. (ಆದರೂ ಇದನ್ನು ತದ್ವಿರುದ್ಧವಾಗಿಯೂ ಹೇಳುವವರಿದ್ದಾರೆ.) 'ಮೀ' ಸರಿ 'ಮಿ' ತಪ್ಪು ಎನ್ನುತ್ತಾರೆ.

"ಅಪಿ ಸ್ವರ್ಣಮಯೀ ಲಂಕಾ ನ ಮೇ ಲಕ್ಷ್ಮಣ ರೋಚತೇ । ಜನನೀಜನ್ಮ-ಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬ ದೇಶಭಕ್ತಿಗೆ ಉದಾಹರಿಸುವ ರಾಮಾ-ಯಣದ್ದೆನ್ನಲಾದ ಶ್ಲೋಕ ಮೂಲರಾಮಾಯಣದಲ್ಲಿಲ್ಲ. ಇದನ್ನು ಈಚೆಗಿನವರು ಯಾರೋ ಬರೆದು ಸೇರಿಸಿದ್ದಾರೆ. ಬಹುಶಃ ಒಬ್ಬ ಕನ್ನಡಿಗ ಕವಿ ಇರಬಹುದೆನ್ನುತ್ತಾರೆ, ಸಂಶೋಧಕರು. ಇದೊಂದು ಮಹತ್ತ್ವದ ಸಂಶೋಧನೆ ಅನೇಕ ವಿದ್ವಾಂಸರನ್ನು ನಿಬ್ಬೆರಗಾಗಿಸುವುದು. ಈ ಅಧ್ಯಾಯದಲ್ಲಿ ಭಾಷೆಯ ಹುಟ್ಟು ಬೆಳವಣಿಗೆಯ ಬಗೆಗೆ ವಿವರಿಸಲಾಗಿದೆ. ಇಂಗ್ಲಿಷಿನ ಎರಡು ಬಗೆಗಳು, ಅಮೇರಿಕ, ಇಂಗ್ಲಂಡು, ಅದರ ನುಡಿ, ನೈಲಿಗೆ ಆಲಂಕಾರಿಕ ಪ್ರಯೋಗ, ಅದಕ್ಕೆ ಸಂಬಂಧಿಸಿದ ಪ್ರಶ್ನೋತ್ತರಗಳಿವೆ. Acronym ಅಂದರೆ AKROS = Upper + Onoma = Name ಉದಾ : UNESCO. F2F = face to face, LOL = lots of love ಇತ್ಯಾದಿ. ಕಸಾಪ, ಕವಿಮಂ, ಇಂಗ್ಲೀಷ್‌ನಲ್ಲಿ ಸ್ತ್ರೀವಾದದ ಪರಿಣಾಮವಾಗಿ MAN ಬರುವ ಕಡೆಗಳಲ್ಲಿ Person ಹಾಕುವ ಒತ್ತಾಯವಿದೆ. Chairman - Chairperson. ಇಂಗ್ಲಿಷ್ ಭಾಷಾಪ್ರಯೋಗ-ಗಳಲ್ಲೂ ಅವರು ಪರಿಣತರೆಂಬುದರಲ್ಲಿ ಸಂದೇಹವಿಲ್ಲ.

'ಮುದ್ದಣನ ಶಬ್ದಶಿಲ್ಪ'ದಲ್ಲಿ ಅವನ್ನು ಅನೇಕ ರೀತಿಯಲ್ಲಿ ಸೃಷ್ಟಿಸಿದ ಶಬ್ದಗಳನ್ನು ಉದಾಹರಿಸಲಾಗಿದೆ. – ಗಾಳಿದೇರ್ (ವಿಮಾನ), ಮಲೆನಾಡಿಗ (ಕಪಿ), ಸನ್ನಾಹ (ಸನ್ನಣ), ಸನ್ಮಾನ (ಸಮ್ಮಣ) ಇತ್ಯಾದಿ.

ಮುಂದಿನ ಅಧ್ಯಾಯದಲ್ಲಿ ಹದಿನೈದು ಬಗೆಯ ನಿಘಂಟುಗಳನ್ನು ಹೆಸರಿಸಿ ಪರಿಚಯಿಸಲಾಗಿದೆ. ಶಾಲಾ ವಿದ್ಯಾರ್ಥಿಗಳಿಗೆ ಮಾಧ್ಯಮಿಕ, ಪ್ರೌಢ, ಪದವಿಪೂರ್ವ ಮಟ್ಟದ ನಿಘಂಟುಗಳಿರಬೇಕೆಂಬುದು ಅವರ ಮತ. ತಮ್ಮ ಸ್ವಾನುಭವದ ಹಿನ್ನೆಲೆ-ಯಲ್ಲಿ ನಿಘಂಟುಕಾರನಿಗೆ ಇರಬೇಕಾದ ಒಂಬತ್ತು ಅರ್ಹತೆಗಳನ್ನು ನಮೂದಿಸಲಾಗಿದೆ.

ಕೊನೆಯ ೨೩ನೆಯ ಅಧ್ಯಾಯದಲ್ಲಿ ಹತ್ತು ಸಣ್ಣ ದೊಡ್ಡ ಲೇಖನಗಳಿವೆ : ಇಬ್ಬರು ಹಿರಿಯ ಸಂಶೋಧಕರಾದ ಡಾ. ಚಿದಾನಂದಮೂರ್ತಿ ಮತ್ತು ಪ್ರೊ. ಜಿ. ವಿ. ಯವರ ವಾದ ಪ್ರತಿವಾದಗಳನ್ನೊಳಗೊಂಡ 'ನಡೆದೇಗುಲ' ಶಬ್ದದ ಅರ್ಥಚಿಂತನೆ ಕುತೂಹಲಕರ. ಮೂರ್ತಿಯವರು ಹೇಳುವ ಮನುಷ್ಯ ಎಂಬರ್ಥವನ್ನು ಖಂಡಿಸಿ ಜೀವಿಯವರು ಶಿಲ್ಪಶಾಸ್ತ್ರದಲ್ಲಿ ಹೇಳಿದ ಸ್ಥಿರಾಲಯ ಚರಾಲಯಗಳಲ್ಲಿ ಎರಡನೆಯದೇ ನಡೆದೇಗುಲ – ಬಂಡಿ, ತೇರು ಎಂಬುದನ್ನೇ ಆಧಾರಸಹಿತ ಸ್ಥಾಪಿಸಿರುವುದು ಮನೋಜ್ಞವಾಗಿದೆ. 'ಕಲಿಯುಗ ವಿಪರೀತನಲ್ಲ, ಕೇವಲ ಯುಗವಿಪರೀತ' ಎಂಬ ಲೇಖನದಲ್ಲಿ ಬಾದಾಮಿಯ ಕಪ್ಪೆ ಅರಭಟ್ಟನ ಶಾಸನವನ್ನು ಸರಿಯಾಗಿಯೇ ಅರ್ಥೈಸಲಾಗಿದೆ. ಸೇಡಿಯಾಪು ಕೃಷ್ಣ ಭಟ್ಟರು ಇದಕ್ಕೆ ಭಿನ್ನವಾದ ನಿಲುವನ್ನು ತಾಳಿದ್ದರು. ನಾನು ಜಿ.ವಿ.ಯವರ ಅಭಿಪ್ರಾಯವನ್ನೇ ಬೆಂಬಲಿಸಿ ಬರೆದಿದ್ದುದು ನೆನಪಾಗುತ್ತದೆ. ಕಪ್ಪೆ ಅರ ಎಂಬುದು ಆ ಭಟ್ಟನ ಕುಲವನ್ನು ಹೇಳುವುದಿರಬೇಕು. ಜೇಡರ ದಾಸಿಮಯ್ಯ ಎಂದಂತೆ. ಈ ಅಭಿಪ್ರಾಯವನ್ನು ಡಾ. ಎಂ. ಎ. ಕಲಬುರ್ಗಿ-ಯವರು ಅವರ 'ಮಾರ್ಗ' ಕೃತಿಯ ಲೇಖದಲ್ಲಿ ಹೇಳಿರುವ ನೆನಪು. ಈ

ಅನುಬಂಧದಲ್ಲಿರುವ ಕನ್ನಡ ನಿಘಂಟುರಚನೆಯ ಸ್ವರೂಪ, ಕನ್ನಡ ಪತ್ರಿಕಾಪದ ಕೋಶ ಮೊದಲಾದ ಇತರ ಲೇಖನಗಳೂ ಬಹಳಯೋಗ್ಯವಾಗಿದೆ. ಇಂದು ಬಳಕೆ-ಯಲ್ಲಿರುವ ಕನ್ನಡದ ಬಗೆಗೆ ಹೇಳುವಾಗ ಕೆಲವು ಅಸಾಧುಪದಗಳನ್ನು ಕೈಗಾರೀಕೀ-ಕರಣ, ಡಾಂಬರೀಕರಣ, ಬಾಯೋಪಚಾರ, ಪಾಶ್ಚೀಕೃತ ಇತ್ಯಾದಿ ರೂಪಗಳನ್ನು ಪ್ರಶ್ನಿಸಿದ್ದಾರೆ. ಅಗಲೀಕರಣವನ್ನು ಅಗಲಗೊಳಿಸು, ಪಾಶ್ಚರೀಕೃತ ಎಂಬಂತೆ ಉಪ-ಯೋಗಿಸಬಹುದೆಂದು ಸೂಚಿಸುತ್ತಾರೆ. ಇಲ್ಲೆಲ್ಲಾ ಭಾಷೀಯ ಸರಳಸುಭಗತೆ ಇಂಪಿನ ಬಗೆಗೆ ಅವರ ಕಾಳಜಿ ವ್ಯಕ್ತವಾಗುತ್ತದೆ.

ಪ್ರೊ. ಜಿ. ವಿ.ಯವರು ಉಡುಪಿಗೆ, ಇಲ್ಲಿಯ ಅಕ್ಕರಿಗರಿಗೆ ಚಿರಪರಿಚಿತರು. ಅವರ ಬರವಣಿಗೆ ಭಾಷೆ, ಭಾಷಣ, ಗುಣ-ಸ್ವಭಾವವನ್ನು ನಾವೆಲ್ಲ ಮೆಚ್ಚಿದವರೇ. ನಮ್ಮ ಎಂ.ಜಿ.ಎಂ. ಕಾಲೇಜಿನ ಅನೇಕ ಸಾಹಿತ್ಯಸಮಾರಂಭಗಳಿಗೆ ಅವರನ್ನು ಆಹ್ವಾನಿಸಿದ್ದೆವು. ನಮ್ಮ ಮುದ್ದಣ ಸಾಹಿತ್ಯೋತ್ಸವ (ಪ್ರತಿವರ್ಷ ನಡೆಯುವುದು). ಮುದ್ದಣನ ೧೨೫ನೆಯ ವರ್ಷದ ಉತ್ಸವ ಮೊದಲಾದವುಗಳಲ್ಲಿ ಭಾಗವಹಿಸಿ ಚೆನ್ನಾಗಿ ಮಾತಾಡಿ ಕೇಳುಗರನ್ನು ತೃಪ್ತಿಪಡಿಸಿದ್ದಾರೆ. ಮಂಗಳೂರಿನ ವಿಮಾನ ನಿಲ್ದಾಣದಿಂದ ಉಡುಪಿಗೆ ಬರುವಾಗ ಕಟೀಲು ದೇವಿಯ ದರ್ಶನ ಮಾಡಿಸಿದ್ದು ಅವರಿಗೆ ಬಹಳ ಮುದನೀಡಿತ್ತು. ಅಂಬಲ್ಪಾಡಿಯಲ್ಲಿ ತಮ್ಮ ಮಗನೊಂದಿಗೆ ವಾಸಿಸುತ್ತಿದ್ದ ಪ್ರೊ. ಎಸ್ವಿಪಿಯವರಲ್ಲಿಗೆ ನಾನವರನ್ನು ಕರೆದೊಯ್ದದ್ದು, ಅವರಿಬ್ಬರ ಬಾಲ್ಯಸ್ನೇಹದ ಮಾತನ್ನಾಲಿಸಿದ್ದು ನನ್ನ ಕಣ್ಮನಗಳಿಂದಿನ್ನೂ ಮಾಯವಾಗಿಲ್ಲ. ಮಣಿಪಾಲದಲ್ಲಿ ತಮ್ಮ ಮಗನೊಂದಿಗಿದ್ದ ಸೇಡಿಯಾಪು ಕೃಷ್ಣ ಭಟ್ಟರ ಭೇಟಿಗೂ ನಾನವರನ್ನು ಕರೆದೊಯ್ದಿದ್ದೆ. ಕೃಷ್ಣ ಭಟ್ಟರ ಪುಸ್ತಕವೊಂದನ್ನು ಅವರು ಬಿಡುಗಡೆ ಮಾಡುವಾಗಲೂ ನಾನು ಹಾಜರಿದ್ದೆ. 'ಯುಗವಿಪರೀತನ್' ಪ್ರಸಂಗ ಅಲ್ಲಿ ಬಂದಿತ್ತು. ಕಾರ್ಯಾರ್ಥವಾಗಿ ಬೆಂಗಳೂರಿಗೆ ಹೋಗಿದ್ದ ನಾನು ಅವರ ಮನೆಗೂ ಹೋಗಿ ಆ ವೃದ್ಧದಂಪತಿಗಳಿಂದ ಉಪಾಹಾರ ಉಪಚಾರ ಸ್ವೀಕರಿಸಿದ್ದೇನು ಕಡಿಮೆಯೆ? ಆಗ ಅವರ ಒಂದು ಪುಸ್ತಕವನ್ನು ಉಡುಗೊರೆಯಾಗಿತ್ತು ಹರಸಿದರು. ಅವರ 'ಶಬ್ದಸಾಗರ'ವನ್ನು ನನಗೆ ಕಳುಹಿಸಿಕೊಟ್ಟು ತಮ್ಮ ಅಪಾರಪ್ರೀತಿಯನ್ನು ಮೆರೆದಿದ್ದಾರೆ. ಆ ಸಾಗರದಲ್ಲೀಜುವ ಸಾಹಸವನ್ನು ಇನ್ನು ಕೈಗೊಳ್ಳಬೇಕಾಗಿದೆ, ಅವರ ಅರುವತ್ತರ ಆಚರಣೆಯ ಸಂದರ್ಭದಲ್ಲಿ ಸಮರ್ಪಿತವಾದ 'ಸಾಹಿತ್ಯಜೀವಿ' ಸಾರ್ಥಕ ಹೆಸರಿನ ಗ್ರಂಥ. ಅವರು ಕೇವಲ ಜೀವಿಯಲ್ಲ ಸಾಹಿತ್ಯ ಜೀವಿ ಎಂಬುದು ಈಗಾಗಲೇ ದೃಢವಾಗಿದೆ.

ಎಂದೂ ಭಿನ್ನಾಭಿಪ್ರಾಯವಿಲ್ಲದೆ ಅವರೊಂದಿಗೆ ಸಹಕರಿಸಿ ಪ್ರೋತ್ಸಾಹಿಸಿದ ತಮ್ಮಿಬ್ಬರ ಸುದೀರ್ಘ ಸರಸದಾಂಪತ್ಯದ ವಿವರಗಳನ್ನು ತೆರೆದಿಟ್ಟ ಸಾಹಿತ್ಯಜೀವಿ-ಯವರ ಜೀವನಸಂಗಾತಿ ಶ್ರೀಮತಿ ಲಕ್ಷ್ಮೀ ಮತ್ತು ಜಿ.ವಿ. ಇಬ್ಬರೂ ಹುಟ್ಟಿ ಬೆಳೆದ ಕುಟುಂಬಗಳು ವಿದ್ಯಾವಂತ ಸುಸಂಸ್ಕೃತ ದೀರ್ಘಾಯುಗಳಿಂದ ಕೂಡಿದ್ದವು. ಹೆಚ್ಚಿನವರೆಲ್ಲಾ ತೊಂಬತ್ತರ ಗಡಿದಾಟದವರು. ಒಬ್ಬರಂತೂ ನೂರ ಏಳು ವರ್ಷ ಬದುಕಿದ್ದರಂತೆ. ಈವರೆಗೂ ಸುಖ ನೆಮ್ಮದಿ ಆರೋಗ್ಯದಿಂದ ಬದುಕಿ ಸಾರ್ಥಕ

ಬಾಳನ್ನು ಸಮಾಜಕ್ಕಾಗಿ ಸಾಗಿಸಿದ ಈ ಸತಿಪತಿಯರಿಬ್ಬರೂ ಇನ್ನಷ್ಟು ಬಹುಕಾಲ ಹಾಗೆಯೇ ನಮಗೆಲ್ಲ ಸ್ಫೂರ್ತಿದಾಯಕರಾಗಿರಲಿ. ಅವರು ಕಟ್ಟಿಕೊಂಡ 'ನಿಘಂಟು ಪರಿವಾರ' ಅನೇಕ ಮೌಲಿಕಮಾಹಿತಿಗಳನ್ನು ನೀಡುವುದಲ್ಲದೆ ಅವರ ಎಲ್ಲಾ ಕೃತಿಗಳು ಅವರನ್ನು ಶಾಶ್ವತಗೊಳಿಸುವಂತಹವು. ಈ ದಂಪತಿಗಳಿಗೆ ಹಾರ್ದಿಕ ಅಭಿನಂದನೆಗಳು.



---

ಅನೇಕಾರ್ಥಗಳಿರಲಿ, ಒಂದೇ ಅರ್ಥವಿರಲಿ ಆ ಅರ್ಥವನ್ನು ದೃಢಪಡಿಸುವುದಕ್ಕೆ ಒಂದು ಪ್ರಯೋಗವಿರಲೇಬೇಕು. ಇಲ್ಲದಿದ್ದರೆ ನಿಘಂಟಿನ ಅಧಿಕಾರ ಪೂರ್ಣವಾಗುವುದಿಲ್ಲ. ಆದುದರಿಂದ ಯಾವ ಪ್ರಯೋಗವೂ ದೊರಕದೆ ಇದ್ದಾಗ ನಿಘಂಟುಕಾರನಿಗೆ ನಿಘಂಟು ರಚನೆಯ ಸಂಪ್ರದಾಯದಲ್ಲಿ ಒಂದು ಅಧಿಕಾರ ಬರುತ್ತದೆ. ಅದು ರೂಢಿಗೆ ಮರೆಹೋಗುವುದು, 'ರೂಢಿ' ಎಂದು ಸೂಚಿಸಿ ಜನರ ಆಡುಮಾತಿನಲ್ಲಿ ಕಾಣಬರುವ ಯಾವುದಾದರೂ ಉಚಿತವಾದ ವಾಕ್ಯವನ್ನು ಸೂಚಿಸಬಹುದು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಕನ್ನಡ ನಿಘಂಟುಶಾಸ್ತ್ರ ಪರಿಚಯ

ಡಾ. ಕೆ. ಪದ್ಮನಾಭ ಕೇಕುಣ್ಣಾಯ

ಶಾಸ್ತ್ರಸಾಹಿತ್ಯಪ್ರಪಂಚದಲ್ಲಿ ನಿಘಂಟುವಿನ ಕ್ಷೇತ್ರವು ಸಾಮಾನ್ಯವಿದ್ವಾಂಸರ ಪಾಲಿಗೆ ಒಂದು ದುರ್ಗಮಖಂಡ. ಇದರೊಳಗೆ ಪ್ರವೇಶವನ್ನು ಪಡೆಯಲಿಚ್ಛಿಸು-ವವರೇ ಬಹಳ ವಿರಳ. ಪ್ರವೇಶಪಡೆದ ಹಲವರು ಅದರ ಆಳ-ಅಗಲಗಳನ್ನರಿಯಲು ಕಷ್ಟಪಡುತ್ತಾರೆ; ಕೆಲವರು ಅರ್ಧಸಫಲರಾಗುತ್ತಾರೆ. ಬೆರಳೆಣಿಕೆಯಷ್ಟು ಮಂದಿ ಸಲೀಸಾಗಿ ಸಾಗಿ, ವಿಹರಿಸಿ ಅವರ್ಣನೀಯ ಆನಂದಪಡುತ್ತಾರೆ; ಇತರರಿಗೂ ಸಮ್ಯಗಾನಂದವನ್ನು ಉಣಬಡಿಸುತ್ತಾರೆ. ಅಂತಹ ಬೆರಳೆಣಿಕೆಯ ಘನವಿದ್ವಾಂಸರಲ್ಲಿ ನಿಘಂಟುಕಾರ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಓರ್ವ ಪ್ರಮುಖ ಮಹನೀಯರು.

ನಿಘಂಟುಕಾರ್ಯ ಸುಲಭದ್ದೇನೂ ಅಲ್ಲ. ಆಳವಾದ ಶಾಸ್ತ್ರಪಾಂಡಿತ್ಯ, ನಿಘಂಟುವನ್ನು ರಚಿಸಬೇಕಾದ ಭಾಷೆಯ/ಭಾಷೆಗಳ ಮೇಲೆ ಪ್ರಭುತ್ವ, ಭಾಷಾಶಾಸ್ತ್ರದ ವಿಶೇಷಜ್ಞಾನ, ಪರಿಶ್ರಮ, ಪ್ರತ್ಯುತ್ಪನ್ನಮತಿತ್ವ, ಕಾರ್ಯಾಸಕ್ತಿ, ಶ್ರದ್ಧೆ ಎಲ್ಲವೂ ಕೋಶಕಾರನಲ್ಲಿ ಮೇಳೈಸಿರಬೇಕಾಗುತ್ತದೆ. ಅಂತಹ ಎಲ್ಲ ಗುಣಗಳನ್ನೂ ಮೆಯ್ಗೂಡಿಸಿಕೊಂಡವರು ಪ್ರೊ. ವೆಂಕಟಸುಬ್ಬಯ್ಯನವರು. ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ಕನ್ನಡ ನಿಘಂಟುವಿನ ಪ್ರಧಾನಸಂಪಾದಕರಾಗಿ ಅವರು ಮಾಡಿದ ಅನನ್ಯ ವಿದ್ವತ್ಕಾರ್ಯ ಅವರ ಶಾಸ್ತ್ರಪಾಂಡಿತ್ಯವನ್ನೂ ನಿಘಂಟುರಚನಾಸಾಮರ್ಥ್ಯವನ್ನೂ ಪ್ರಕಟಗೊಳಿಸಿದೆ. ನಿಘಂಟುರಚನೆಗೆ ಮೊದಲು, ಆ ಕೆಲಸಕ್ಕೆ ತೊಡಗುವವನು ಅವಶ್ಯವಾಗಿ ತಿಳಿದಿರಬೇಕಾದ ವಿಷಯಗಳೆಂದರೆ ತಾನು ಉದ್ದೇಶಿಸಿದ ನಿಘಂಟು-ರಚನೆಯ ಸ್ವರೂಪ, ಅದರ ಹಿಂದೆ ಇರಬೇಕಾದ ಶ್ರಮ, ಬಹುಭಾಷಾಪರಿಚಯ, ಭಾಷಾವಿಜ್ಞಾನದ ಅಧ್ಯಯನ, ಕಾರ್ಯಕೌಶಲ, ಸಮರ್ಪಣ ಮನೋಭಾವ ಕೋಶಕಾರನಿಗಿರಬೇಕಾದ ಮೂಲಭೂತ ಆವಶ್ಯಕತೆ, ವಿಷಯಪ್ರಭುತ್ವ, ಅಚ್ಚುಕಟ್ಟುತನ, ಶಿಸ್ತು, ತಾಳ್ಮೆ, ಪ್ರಾಮಾಣಿಕತೆ, ಶಬ್ದಸಾಗರದ ಆಳಕ್ಕಿಳಿದು ಮುತ್ತನ್ನು ಹೆಕ್ಕಲು ಬೇಕಾದ ಛಲ, ಭಾಷಾಧ್ಯಯನ ವಿಷಯದಲ್ಲಿ ಆಸಕ್ತಿ, ಅದಕ್ಕೆ ತಕ್ಕ ಮನೋದಾರ್ಢ್ಯ, ಸೂಕ್ಷ್ಮ ವಿಷಯಗಳನ್ನು ಗಮನಿಸುವ ಶಕ್ತಿ, ಏಕಾಗ್ರತೆ – ಹೀಗೆ ಎಲ್ಲವುಗಳ ಬಗೆಗೂ ಸವಿಸ್ತಾರವಾಗಿ, ಕೂಲಂಕಷವಾಗಿ ಇದಮಿತ್ಥಂ ಎಂಬಂತೆ ನಿರೂಪಿಸಬಲ್ಲ ಪ್ರೊ. ವೆಂಕಟಸುಬ್ಬಯ್ಯನವರ ಜೀವನಾನುಭವ, ಜ್ಞಾನವಿಸ್ತಾರ ಅನ್ಯಾದೃಶ. 'ಕಿರಿದರೊಳ್

ಪಿರಿದರ್ಥಂ' ಎನ್ನುವುದನ್ನು ಸೂಚ್ಯವಾಗಿ ತಿಳಿಸುವಂತೆ, ದೈಹಿಕವಾಗಿ ಸಣ್ಣ ಗಾತ್ರದವರಾದರೂ ಅವರೊಳಗಿರುವ ಅಗಾಧ ಜ್ಞಾನಭಂಡಾರ ಮತ್ತು ನಿಘಂಟು ರಚನೆಯ ಮೇಲಿನ ಪ್ರಭುತ್ವ ನಮ್ಮನ್ನು ಬೆರಗುಗೊಳಿಸುತ್ತದೆ. ಅವರು ತಮ್ಮ ಈ ಜ್ಞಾನರಾಶಿಯನ್ನು ಕ್ರೋಢೀಕರಿಸಿ 1993ರಲ್ಲಿ ಒಂದು ಪುಸ್ತಕದ ರೂಪದಲ್ಲಿ ಪ್ರಸ್ತುತಪಡಿಸಿದರು. ಅದೇ 'ಕನ್ನಡ ನಿಘಂಟುಶಾಸ್ತ್ರ ಪರಿಚಯ'.

ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಥಾಪಕರಲ್ಲಿ ಪ್ರಮುಖರಾದ ಪ್ರೊ. ಶಿ. ಶಿ. ಬಸವನಾಳರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಮೂಲಭೂತ ವಿಚಾರೋಪನ್ಯಾಸವೊಂದನ್ನು ವಿಶ್ವವಿದ್ಯಾಲಯವು ಏರ್ಪಡಿಸಿತು. ಕನ್ನಡ ನಿಘಂಟುವಿನ ಆರು ಸಂಪುಟಗಳ ಪ್ರಧಾನಸಂಪಾದಕರಾಗಿ ಕನ್ನಡ ಸಾರಸ್ವತಲೋಕದಲ್ಲಿ ನಿಘಂಟುಕಾರ ಪ್ರಮುಖರೆಂದು ಖ್ಯಾತನಾಮರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಈ ಉಪನ್ಯಾಸವನ್ನಿತ್ತರು. ಆ ಉಪನ್ಯಾಸದ ಚಾಕ್ಷುಷರೂಪವೇ ಪೂರ್ವೋಕ್ತ ಗ್ರಂಥವಿಶೇಷ. 'ಕಿರಿದರೊಳ್ ಪಿರಿದರ್ಥಂ' ಎಂಬ ವಾಕ್ಯವನ್ನೇ ಪುನರಪಿ ಉದ್ಧರಿಸುವುದಾದರೆ ಈ ಪುಸ್ತಕವು ಗಾತ್ರದಲ್ಲಿ ಕಿರಿದು. ಆದರೆ ಅದರಲ್ಲಿ ಪ್ರಸ್ತುತಪಡಿಸಲಾದ ನಿಘಂಟುಶಾಸ್ತ್ರ ಪರಿಚಯ, ವಿಷಯವೈವಿಧ್ಯ, ಶಾಸ್ತ್ರನಿರೂಪಣೆ, ಸೋದಾಹರಣ ಪ್ರಸ್ತುತಿ – ಇವೆಲ್ಲವೂ ಸೂತ್ರರೂಪದಲ್ಲಿರುವಂತೆ ಭಾಸವಾಗುತ್ತವೆ. ಅರ್ಥಾತ್, ಇಲ್ಲಿ ನಿರೂಪಿಸಿರುವ ಪ್ರತಿಯೊಂದು ಅಂಶವನ್ನೂ ಬಹಳ ವಿಸ್ತಾರವಾಗಿ ವಿವರಿಸಲು ಸಾಕಷ್ಟು ಅವಕಾಶಗಳಿವೆ. ಆದರೆ ಪುಸ್ತಕದ ಮಿತಿಯೊಳಗೆ ಅದನ್ನು ತುಂಬಿಸಿರುವುದು ಸಹ ಅವರ ಲೇಖನಕೌಶಲಕ್ಕೆ ಸಾಕ್ಷಿಯಾಗಿದೆ.

ಈ ಕಿರುಹೊತ್ತಗೆಯಲ್ಲಿ ಪ್ರೊ. ವೆಂಕಟಸುಬ್ಬಯ್ಯನವರು ಎಂಟು ವಿವಿಧ ಶಿರೋನಾಮೆಗಳ ಮೂಲಕ ನಿಘಂಟುಶಾಸ್ತ್ರವನ್ನು ವಿವರಿಸಿದ್ದಾರೆ. ಅವುಗಳನ್ನು ಒಂದೊಂದಾಗಿ ಹೀಗೆ ಪರಿಚಯಿಸಬಹುದು:

**೧. ಭಾರತೀಯ ಭಾಷೆಗಳಲ್ಲಿ ನಿಘಂಟುವಿಗೆ ಇರುವ ಹಿನ್ನೆಲೆ.**

ಇದರಲ್ಲಿ ಕೋಶ ಶಬ್ದದ ವ್ಯುತ್ಪತ್ತಿ, ಅದಕ್ಕಿರುವ ನಾನಾರೂಪಗಳು, ಬೇರೆಬೇರೆ ಹೆಸರುಗಳು, ಪೂರ್ವಕೋಶಗಳ ಹೆಸರುಗಳು, ಅಮರಕೋಶದ ಬಗೆಗಿನ ವಿಶೇಷ ಮಾಹಿತಿ – ಇತ್ಯಾದಿ ವಿಷಯಗಳನ್ನು ನಿರೂಪಿಸಲಾಗಿದೆ.

**೨. ನಿಘಂಟುಶಾಸ್ತ್ರ**

ಭಾರತದ ಅತಿಗಹನವಾದ ಅಂತಸ್ಸತ್ತ್ವಗಳುಳ್ಳ ವೇದಗಳ ರಹಸ್ಯಾರ್ಥಗಳನ್ನು ಜನರಿಗೆ ತಿಳಿಯಪಡಿಸುವ ಉದ್ದೇಶದಿಂದ ಪ್ರಾಚೀನರು ಉಪಯೋಗಿಸಿದ ಆರು ಬಗೆಯ ಸಾಧನಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ಜ್ಯೋತಿಷ, ಕಲ್ಪ ಮತ್ತು ನಿರುಕ್ತ ಎಂಬ 'ಷಡಂಗ'ಗಳ ಬಗೆಗೆ ಸ್ಥೂಲ ವಿವರಣೆಯನ್ನು ಕೊಡಲಾಗಿದೆ. ಇಲ್ಲಿ ಕೊಟ್ಟಿರುವ 'ನಿರುಕ್ತ' ಭಾಗವು 'ನಿಘಂಟು'ಗಳೆಂಬ ಗ್ರಂಥದ ಅರ್ಥವನ್ನು ವಿವರಿಸುತ್ತದೆ ಎಂಬುದಾಗಿ ಇಲ್ಲಿ ತಿಳಿಸಲಾಗಿದೆ.

### ೩. ನಿರುಕ್ತ

ಈ ಭಾಗದಲ್ಲಿ ನಿಘಂಟು ಶಬ್ದದ ವ್ಯುತ್ಪತ್ತಿಯನ್ನು ಪೂರ್ವಸೂರಿಗಳ ವಾಕ್ಯಗಳೊಂದಿಗೆ ನಿರೂಪಿಸಲಾಗಿದೆ.

### ೪. ಭಾಷಾಶಾಸ್ತ್ರದ ಬೆಳವಣಿಗೆಯ ಪ್ರಭಾವ

ನಿಘಂಟುರಚನೆಗೆ ಮೂಲಭೂತವಾದ ಭಾಷಾಶಾಸ್ತ್ರವು ಬೆಳೆದುಬಂದ ಬಗೆಯನ್ನು ಈ ಭಾಗದಲ್ಲಿ ವಿವರಿಸಲಾಗಿದೆ. ಅನೇಕ ಕಾರಣಗಳಿಂದ ಉತ್ಪತ್ತಿಯಾಗುವ ಹೊಸ ಶಬ್ದಗಳು, ಈಗಾಗಲೇ ಬಳಕೆಯಲ್ಲಿರುವ ಶಬ್ದಗಳ ರೂಪಾಂತರ, ಅರ್ಥಾಂತರ ಮೊದಲಾದವುಗಳ ಭಾಷಾಶಾಸ್ತ್ರೀಯ ವಿವೇಚನೆಯು ನಿಘಂಟುರಚನೆಯಲ್ಲಿ ಹೇಗೆ ಸಹಾಯಕವಾಗುತ್ತವೆ ಮತ್ತು ಅವನ್ನು ಹೇಗೆ ಬಳಸಿಕೊಳ್ಳಬೇಕೆಂಬುದನ್ನು ಇಲ್ಲಿ ತಿಳಿಸಲಾಗಿದೆ. ಈ ಸಂದರ್ಭದಲ್ಲಿ ಲೇಖಕರು ಒಂದು ವಿಶೇಷಾಂಶದತ್ತ ನಮ್ಮ ಗಮನವನ್ನು ಸೆಳೆಯುತ್ತಾರೆ. ಅದೆಂದರೆ, ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ವೈಯಕ್ತಿಕ ನಿಘಂಟುವನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡಿರುತ್ತಾನೆ ಮತ್ತು ಇದೇ ಸಮಾಜದ ಸಹಾಯಕ್ಕೆ ಬರುವ ನಿಘಂಟು. ಇನ್ನೊಂದು, ವಿದ್ವಾಂಸರು ಒಟ್ಟು ಸೇರಿ ಸಿದ್ಧಪಡಿಸುವ ನಿಘಂಟು. 'ಒಂದರಲ್ಲಿ ವೈಯಕ್ತಿಕ ಸಂಸ್ಕೃತಿ ಅಡಕವಾಗಿರುತ್ತದೆ. ಇನ್ನೊಂದರಲ್ಲಿ ಸಮಾಜದ ಸಂಸ್ಕೃತಿ ಅಳವಟ್ಟಿರುತ್ತದೆ' – ಎನ್ನುತ್ತಾರೆ ಪ್ರೊ. ವೆಂಕಟಸುಬ್ಬಯ್ಯನವರು.

### ೫. ನಿಘಂಟುರಚನೆಯ ಶಾಸ್ತ್ರ

ಈ ಭಾಗದಲ್ಲಿ, ನಿಘಂಟುವಿನ ಸ್ವರೂಪದ ಕುರಿತಾಗಿ ವಿವರಿಸಿದ್ದಾರೆ. ನಿಘಂಟುಗಳ ವೈವಿಧ್ಯವನ್ನು ನಿರೂಪಿಸಿ ಕೆಲವು ಶಬ್ದಗಳನ್ನಿಟ್ಟುಕೊಂಡು ಹೇಗೆ ನಿಘಂಟುರಚನೆ ಮಾಡಬಹುದೆಂಬುದನ್ನು ಮಾದರಿಯಾಗಿ ತೋರಿಸಿಕೊಟ್ಟಿದ್ದಾರೆ. ಶಬ್ದಗಳನ್ನು ಹೇಗೆ ಉಲ್ಲೇಖಿಸಬೇಕು, ಅರ್ಥನಿರೂಪಣೆ ಹೇಗೆ, ಉದಾಹರಣವಾಕ್ಯಗಳನ್ನು ಹೇಗೆ ಕೊಡಬೇಕು, ಕೊಟ್ಟಂತಹ ಉಲ್ಲೇಖದ ವ್ಯುತ್ಪತ್ತಿ ಅಥವಾ ಜ್ಞಾತಿಪದ ಯಾವುದೆಂಬುದನ್ನು ಹೇಗೆ ಕೊಡಬೇಕು, ಉಲ್ಲೇಖಿಸಿದ ಶಬ್ದಕ್ಕೆ ಪ್ರಾಚೀನ ಹಾಗೂ ಅರ್ವಾಚೀನ ರೂಪಗಳು ಅಥವಾ ಅರ್ಥಗಳಿದ್ದರೆ ಅವನ್ನು ಹೇಗೆ ಗುರುತಿಸಬೇಕು, ಚಾರಿತ್ರಿಕ ವಿವರಗಳನ್ನು ಹೇಗೆ ಕೊಡಬೇಕು, ಭಾಷೆಯ ಬೆಳವಣಿಗೆಯಲ್ಲಿ ಅನ್ಯಭಾಷೆಗಳಿಂದ ಎರವಲಾಗಿ ಬರುವ ಅಸಂಖ್ಯಾತ ಶಬ್ದಗಳನ್ನು ನಮ್ಮ ಭಾಷಾನಿಘಂಟುವಿನಲ್ಲಿ ಹೇಗೆ ಉಲ್ಲೇಖಿಸಬೇಕು, ಅಲ್ಲದೆ ದೇಸಿ ಭಾಷೆಯಲ್ಲಿಯೇ ಕಾಲಾನುಕ್ರಮದಲ್ಲಿ ವ್ಯತ್ಯಾಸಗೊಳ್ಳುವ ರೂಪಗಳಿದ್ದು ಅನ್ವೇಷಣೆಯ ಪರಿಣಾಮವಾಗಿ ಅವುಗಳ ಮೂಲರೂಪಗಳೂ ದೊರಕಿದರೆ ಅವೆರಡನ್ನೂ ನಿಘಂಟುಕಾರ ಹೇಗೆ ಉಲ್ಲೇಖಿಸಬೇಕು – ಎಂಬಿವನ್ನೆಲ್ಲ ಸೋದಾಹರಣವಾಗಿ ಇಲ್ಲಿ ನಿರೂಪಿಸಿದ್ದಾರೆ.

ಜೊತೆಗೆ, ಒಂದು ಉಲ್ಲೇಖದ ಪ್ರಾದೇಶಿಕ ರೂಪ, ಗ್ರಾಮ್ಯರೂಪ–ಶಿಷ್ಟರೂಪ, ಅವುಗಳ ಭಿನ್ನಾಭಿನ್ನಾರ್ಥಗಳು, ಕಾಲಪ್ರತ್ಯಯ–ಪುರುಷಪ್ರತ್ಯಯಗಳ ದೆಸೆಯಿಂದ

ಶಬ್ದರೂಪದಲ್ಲಿ ಉಂಟಾಗುವ ರೂಪವೈವಿಧ್ಯ-ಅರ್ಥವೈವಿಧ್ಯ, ಪ್ರತ್ಯಯರೂಪಗಳು, ಸಮಸ್ತಶಬ್ದಗಳು - ಇವನ್ನೆಲ್ಲ ನಿಘಂಟುಕಾರ ಹೇಗೆ ತನ್ನ ನಿಘಂಟುವಿನಲ್ಲಿ ಬಳಸಿಕೊಳ್ಳಬೇಕೆಂಬುದರ ಬಗೆಗೆ ಸೂಚನೆಗಳಿವೆ.

ಅನ್ಯಭಾಷೆಗಳಿಂದ, ಮುಖ್ಯವಾಗಿ ಈಗ ಇಂಗ್ಲಿಷಿನಿಂದ ಎಷ್ಟೋ ಜೋಡು-ನುಡಿಗಳೋ ಪಾರಿಭಾಷಿಕಶಬ್ದಗಳೋ ಬಂದಾಗ ಅವುಗಳಿಗೆ ಅನುರೂಪವಾದ ಜೋಡುನುಡಿಗಳನ್ನು ಅಥವಾ ಹೊಸ ಶಬ್ದಗಳನ್ನು ದೇಸಿ ಭಾಷೆಯಲ್ಲಿ ನಿರ್ಮಾಣ ಮಾಡಿ ಬಳಸಲಾಗುತ್ತದೆ. ಅವುಗಳನ್ನು ನಿಘಂಟುವಿನಲ್ಲಿ ಸೇರಿಸಿದಾಗ ಅವುಗಳಿಗೆ ಅಧಿಕೃತತೆ ಬರುತ್ತದೆ. ಅದೇ ರೀತಿ ಹಲವು ಶಬ್ದಗಳನ್ನು ಅವುಗಳ ಮೂಲಾರ್ಥಗಳ ಜೊತೆಗೆ ಅಥವಾ ಮೂಲಾರ್ಥಗಳ ಬದಲಾಗಿ ಹಲವು ಬಗೆಯ ವ್ಯಂಗ್ಯಾರ್ಥಗಳಿಂದ ಜನರು ಪ್ರಯೋಗಿಸುತ್ತಿರಬಹುದು. ಉದಾ: ಅಂಗವಸ್ತ್ರ, ಪಾದಪೂಜೆ, ಸಹಸ್ರನಾಮ, ಚತುರ್ಭುಜ ಮೊದಲಾದ ಶಬ್ದಗಳು. (ಅದೇರೀತಿ 'ಮಂಗಳಾರತಿ' ಎನ್ನುವ ಶಬ್ದಕ್ಕೂ ನಿಜಾರ್ಥ ಮತ್ತು ವ್ಯಂಗ್ಯಾರ್ಥಗಳಿವೆ.) ಇವುಗಳನ್ನು ನಿಘಂಟುವಿನಲ್ಲಿ ಉಲ್ಲೇಖಿಸುವ ಪರಿ ಹೇಗೆನ್ನುವುದನ್ನು ಸಹ ಇಲ್ಲಿ ವಿವರಿಸಲಾಗಿದೆ.

**6. ಎಷ್ಟು ಬಗೆಯ ನಿಘಂಟುಗಳು?**

ಈ ಭಾಗದಲ್ಲಿ, ಒಂದು ಭಾಷೆಯಲ್ಲಿ ರಚನೆಗೊಳ್ಳುವ ಬಗೆಬಗೆಯ ನಿಘಂಟುಗಳ ಸ್ವರೂಪವನ್ನು, ಅವುಗಳ ಉದ್ದೇಶವನ್ನು ಸೋದಾಹರಣವಾಗಿ ನಿರೂಪಿಸಲಾಗಿದೆ. ಕನ್ನಡದಲ್ಲಿ ಬಂದ 'ಆಡಳಿತ ಪದಕೋಶ', 'ಇಂಗ್ಲಿಷ್-ಕನ್ನಡ ವೈದ್ಯಪದಕೋಶ', 'ಬ್ಯಾಂಕಿಂಗ್ ನಿಘಂಟು', 'ಇಂಗ್ಲಿಷ್-ಕನ್ನಡ ವಿಜ್ಞಾನಶಬ್ದಕೋಶ', 'ಚರಿತ್ರ ಪದಕೋಶ', 'ವೃತ್ತಿ ಪದಕೋಶ' ಮೊದಲಾದುವುಗಳ ಬಗೆಗೆ ಪರಿಚಯಾತ್ಮಕ ವಾಕ್ಯಗಳೊಂದಿಗೆ, ನಾನಾರ್ಥ ಪದಕೋಶ, ಗ್ರಾಮ್ಯಪದಕೋಶ, ಗಾದೆಗಳ ಕೋಶ - ಇತ್ಯಾದಿಗಳನ್ನು ಸಹ ಹೆಸರಿಸಿ ಇಂತಹ ವಿಶಿಷ್ಟಶಬ್ದಕೋಶಗಳನ್ನು ಹೇಗೆ ತಯಾರಿಸಬಹುದೆಂಬುದನ್ನು ಸೂಚಿಸಲಾಗಿದೆ.

**7. ನಿಘಂಟುರಚನೆಯ ವಿವಿಧ ಹಂತಗಳು**

ಇಲ್ಲಿ, ಪ್ರಮುಖವಾದ ಕೆಲವು ನಿಘಂಟುಗಳ ರಚನಾಕಾರ್ಯ ಆರಂಭಗೊಂಡ ಹಾಗೂ ಅಂತ್ಯಗೊಂಡ ವರ್ಷಗಳನ್ನು ಉಲ್ಲೇಖಿಸಿ ಅವುಗಳು ತೆಗೆದುಕೊಂಡ ಅವಧಿಯನ್ನು ಪಟ್ಟಿಮಾಡಲಾಗಿದೆ.

ನಿಘಂಟುಕಾರ್ಯ ಅತಿಸುಲಭವಲ್ಲ, ಕಾಲದ ಮಿತಿಯಲ್ಲಿ ರಚನೆಗೊಳಿಸಿ ಹೊರಹಾಕುವ ವಸ್ತುವಲ್ಲವೆಂಬುದನ್ನು ಸೂಚಿಸಲು ಕೊಟ್ಟ ಈ ಪಟ್ಟಿಯು ನಮ್ಮ ಕೆಲವು ಬೃಹನ್ನಿಘಂಟುಗಳು ಪೂರ್ಣಗೊಳ್ಳಲು ತೆಗೆದುಕೊಂಡ ದೀರ್ಘಾವಧಿಯ ಆವಶ್ಯಕತೆಯನ್ನು ತಿಳಿಸುತ್ತದೆ.

ನಿಘಂಟುರಚನೆ ಶಾಸ್ತ್ರೀಯವಾಗಿ, ಶಿಸ್ತುಬದ್ಧವಾಗಿ, ಅಚ್ಚುಕಟ್ಟಾಗಿ, ನಿರ್ದುಷ್ಟವಾಗಿ, ಸಾಕಾರಗೊಳ್ಳಲು ಕಾಲದ ಮಿತಿಯನ್ನು ಹಾಕುವುದು ಓಟಗಾರನ ಕಾಲಿಗೆ ಸರಪಳಿಯನ್ನು ತೊಡಿಸಿದಂತೆ. ಹಾಗೆಂದು ಕಾಲದ ಮಿತಿಯನ್ನು

ಹಾಕಿಕೊಳ್ಳದೆಹೋದರೆ ನಿಘಂಟುಕಾರ್ಯ ಎಂದಿಗೂ ಮುಗಿಯದು! ಯಾಕೆಂದರೆ ಪ್ರತಿದಿನವೂ, ಪ್ರತಿಕ್ಷಣವೂ ಎಂಬಂತೆ ಹೊಸ ಶಬ್ದಗಳೋ, ಹೊಸ ಅರ್ಥಗಳೋ ಚಲಾವಣೆಗೆ ಬರುತ್ತವೆ. ಅವುಗಳನ್ನು ನಿಘಂಟುಕಾರ ತನ್ನ ನಿಘಂಟುವಿನಲ್ಲಿ ಸೇರ್ಪಡೆಗೊಳಿಸುತ್ತಿರಬೇಕು. ಆದರೆ, ನಿಘಂಟುವಿನ ಸ್ವರೂಪವನ್ನು, ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ನಿಘಂಟುಕಾರ ತನಗೆ ತಾನೇ ಹಾಕಿಕೊಳ್ಳುವ ಕಾಲಮಿತಿಯಿಂದ ಪ್ರಯೋಜನವಿದೆ.

ಯಾವುದೇ ಒಂದು ನಿಘಂಟುವಿನ ರಚನೆ ಹಂತಹಂತವಾಗಿ ಸಂಪನ್ನಗೊಳ್ಳ-ಬೇಕಾದ ಕಾರ್ಯ. ನಿಘಂಟುವಿನ ಉದ್ದೇಶ ಹಾಗೂ ನಿಘಂಟುಕಾರ ಯೋಚಿಸಿದ ನಿಘಂಟುವಿನ ಸ್ವರೂಪಕ್ಕನುಗುಣವಾಗಿ ಶಬ್ದಸಂಗ್ರಹದಿಂದ ತೊಡಗಿ ನಿಘಂಟು ಪ್ರಕಟಗೊಳ್ಳುವವರೆಗೆ ಹಲವು ಮಜಲುಗಳನ್ನು ದಾಟಿಬರಬೇಕಾಗುತ್ತದೆ. ಶಬ್ದಸಂಗ್ರಹ ಮೊತ್ತಮೊದಲ ಮಹಾಕಾರ್ಯ. ಅನಂತರ ಪಟ್ಟಿಕೆಗಿಳಿಸುವಿಕೆ–ವ್ಯಾಕರಣವರ್ಗ–ನಿರ್ಧಾರ–ಶಬ್ದಪ್ರಭೇದ–ಅರ್ಥನಿರ್ಣಯ–ಅರ್ಥವೈವಿಧ್ಯದ ಉಲ್ಲೇಖ–ಅಕಾರಾದಿ ಸಂಯೋಜನೆ–ಕೋಶಶರೀರದ ರಚನೆ, ವ್ಯುತ್ಪತ್ತಿನಿರ್ಧಾರ......... –ಹೀಗೆ ನಿರ್ಮಾಣ ಕಾರ್ಯವು ಹಂತಹಂತವಾಗಿ ಸಾಕಾರಪಡೆಯುತ್ತಾ ಒಂದು ನಿಘಂಟು ಪೂರ್ಣ-ರೂಪವನ್ನು ಪಡೆದು ಜನರ ಕೈಗೆ ತಲುಪಬೇಕು.

ಇವುಗಳನ್ನೆಲ್ಲ ಈ ಭಾಗದಲ್ಲಿ ಪ್ರೊ. ವೆಂಕಟಸುಬ್ಬಯ್ಯನವರು ಸಾಕಷ್ಟು ವಿಸ್ತಾರವಾಗಿ ನಿರೂಪಿಸಿದ್ದಾರೆ.

ಕೊನೆಗೆ, ಪ್ರಕಟಗೊಂಡ ಕೆಲವು ನಿಘಂಟುಗಳ ಸ್ವರೂಪವನ್ನು ತಿಳಿಯ ಪಡಿಸಲು ಅವುಗಳ ಛಾಯಾಪ್ರತಿಗಳನ್ನು ಸಹ ಇಲ್ಲಿ ಅಳವಡಿಸಿದ್ದಾರೆ. ಕೆಲವು ನಿಘಂಟುಗಳ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ. ಜೊತೆಗೆ, ಕನ್ನಡದಲ್ಲಿ ಪ್ರಕಟಗೊಂಡ ಅನೇಕ ನಿಘಂಟುಗಳನ್ನು ಹಾಗೂ ಅವುಗಳ ಕರ್ತೃಗಳನ್ನು ಉಲ್ಲೇಖಿಸಿದ್ದಾರೆ. ಈ ಭಾಗವನ್ನು ಈ ಚಿಕ್ಕ ಗ್ರಂಥದ ತಿರುಳೆನ್ನಬಹುದು.

ಈ ಚಿಕ್ಕ–ಚೊಕ್ಕ ಕೃತಿಗೆ ಅನುಬಂಧರೂಪವಾಗಿ ಕೆಲವು ಬಹುಮುಖ್ಯವಾದ ವಿಷಯಗಳನ್ನು ಸೇರಿಸಲಾಗಿದೆ. ಅವುಗಳಲ್ಲಿ ಒಂದು– ಶ್ರೇಷ್ಠ ನಿಘಂಟುಕಾರನಾಗಲು ಇರಬೇಕಾದ ಅರ್ಹತೆಗಳು ಎಂಬ ಒಂದು ಕಿರುಬರೆಹ. ನಿಘಂಟುಕಾರನಿಗಿರಬೇಕಾದ ಮೂಲಭೂತ ಅರ್ಹತೆಗಳನ್ನು ಇಲ್ಲಿ ಸಂಖ್ಯಾಸೂಚನೆಯೊಂದಿಗೆ ನಿರೂಪಿಸಲಾಗಿದೆ. ಎರಡನೆಯದಾಗಿ, ಒಂದು ನಿಘಂಟನ್ನು ಉಪಯೋಗಿಸುವುದು ಹೇಗೆ? ಎಂಬ ಒಂದು ಲೇಖನವಿದೆ. ದುರದೃಷ್ಟವಶಾತ್, ನಿಘಂಟುವನ್ನು ಪರಾಮರ್ಶಿಸುವ ವಿಧಾನವನ್ನು ಯಾರೂ ಬೋಧಿಸುವುದಿಲ್ಲ. ಶಾಲೆಗಳಲ್ಲೂ ಈ ವ್ಯವಸ್ಥೆಯಿಲ್ಲ. ಅಲ್ಲದೆ, ಬೋಧಕ ವರ್ಗದ ಕೆಲವರಿಗೂ ನಿಘಂಟು ಪರಾಮರ್ಶನವಿಧಾನ ತಿಳಿಯದಿರುವುದು ಆಶ್ಚರ್ಯ, ಆದರೂ ನಿಜ! ಅಂತಹ ಸನ್ನಿವೇಶದಲ್ಲಿ ಇಂತಹ ಕಿರುಬರೆಹ ಬಹಳ ಉಪಯುಕ್ತವಾಗುತ್ತದೆ. 'ಮೃಗ, ಪಕ್ಷಿ, ಕ್ರಿಮಿ, ಕೀಟ, ಗಿಡ, ಮರ ಮುಂತಾದವುಗಳ ಬಗ್ಗೆ ನಿಘಂಟು ಏನು ಹೇಳೀತು?' ಎನ್ನುವುದು ಮೂರನೆಯ ಅನುಬಂಧ.



ಸಾಹಿತ್ಯ ಮತ್ತು ಶಬ್ದಶಾಸ್ತ್ರಗಳು ಬಹಳ ವಿಸ್ತಾರವಾಗಿ ಬೆಳೆದಂತಹವು. ಇವುಗಳಲ್ಲಿ ಕಂಡುಬರುವ ಅಸಂಖ್ಯಾತ ಪರಿಚಿತಾಪರಿಚಿತ ಶಬ್ದಗಳನ್ನು ನಿಘಂಟುಕಾರ ಉಲ್ಲೇಖಿಸುವುದು ಅಗತ್ಯ. ಆದರೆ ಹೇಗೆ ಎಂಬುದನ್ನು ಅವನ ನಿಘಂಟುವಿನ ಉದ್ದೇಶಕ್ಕನುಸಾರ ನಿರ್ಣಯಿಸಿಕೊಳ್ಳಬೇಕಷ್ಟೆ ಎಂಬುದನ್ನು ಲೇಖಕರು ಸೂಚಿಸುತ್ತಾರೆ. ನಾಲ್ಕನೆಯದಾಗಿ, ಕನ್ನಡದಲ್ಲಿ ಬಂದ ಕೆಲವು ವಿಶಿಷ್ಟ ಕೋಶಗಳು ಎಂಬ ಒಂದು ಸಣ್ಣ ಲೇಖನದಲ್ಲಿ ನಾಲ್ಕು ವಿಶಿಷ್ಟ ನಿಘಂಟುಗಳನ್ನು ಪರಿಚಯಿಸಲಾಗಿದೆ. ಐದನೆಯದಾಗಿ, ಭಾರತದ ನಿಘಂಟುಗಳಲ್ಲಿ ಅನ್ಯಾದೃಶವಾದ '**ತುಳು ನಿಘಂಟು**'ವಿನ ಬಗೆಗೆ ಒಂದು ಪರಿಚಯಾತ್ಮಕ ಲೇಖನವಿದೆ. ಈ ನಿಘಂಟುವಿನ ಸ್ವರೂಪ, ಶಬ್ದೋಲ್ಲೇಖನಕ್ರಮ, ವರ್ಗೀಕರಣವಿಧಾನ, ಅರ್ಥವಿಸ್ತಾರವನ್ನು ಕುರಿತು ತಿಳಿಸಲಾಗಿದೆ. ಕೊನೆಗೆ, ಈ ನಿಘಂಟುವಿನ ವೈಶಿಷ್ಟ್ಯಗಳನ್ನು ಸಂಖ್ಯಾನುಕ್ರಮದಲ್ಲಿ ಪಟ್ಟಿ ಮಾಡಲಾಗಿದೆ. ಜೊತೆಗೆ, ತುಳುನಿಘಂಟು ಆರಂಭವಾಗಿ ಬೇರೆ ಬೇರೆ ಹಂತಗಳಲ್ಲಿ ಆದ ಪ್ರಗತಿಯನ್ನು ಹಾಗೂ ಮುಖ್ಯ ಘಟ್ಟಗಳನ್ನು ಇಸವಿಯೊಂದಿಗೆ ಉಲ್ಲೇಖಿಸಲಾಗಿದೆ. (ತುಳು ನಿಘಂಟು ಯೋಜನೆ 1979ರಲ್ಲಿ ಆರಂಭವಾಗಿ 1997ರಲ್ಲಿ ಕೊನೆಗೊಂಡಿತು. ಸರಾಸರಿ ೫೦೦ ಪುಟಗಳ ೬ ಸಂಪುಟಗಳಿರುವ 'ತುಳುನಿಘಂಟು'ವಿನಲ್ಲಿ ಸುಮಾರು ಒಂದು ಲಕ್ಷ ತುಳು ಶಬ್ದಗಳಿಗೆ ಅರ್ಥನಿರೂಪಣೆ ಮಾಡಲಾಗಿದೆ.)

ಈ ಸಂದರ್ಭದಲ್ಲಿ, ಲೇಖಕರು ಪ್ರಾಯಶಃ ಮಾಹಿತಿಯ ಕೊರತೆಯಿಂದ ತಪ್ಪಾಗಿ ಉಲ್ಲೇಖಿಸಿದ ಒಂದು ಅಂಶವನ್ನು ಇಲ್ಲಿ ಉಲ್ಲೇಖಿಸಿದರೆ ಅಪ್ರಸ್ತುತವಾಗಲಾರದು ಮತ್ತು ಆ ಬಗೆಗಿನ ಸ್ಪಷ್ಟೀಕರಣದಿಂದ ಇತರ ವಿದ್ವಾಂಸರಿಗೆ ಉಪಯುಕ್ತ ಮಾಹಿತಿಯು ದೊರೆಯಬಹುದು ಎಂಬ ಕಾರಣಕ್ಕೆ ದ್ರಾವಿಡಭಾಷಾಭ್ಯಾಸಿಗಳು ತಿಳಿದಿರಬೇಕಾದ ಒಂದು ವಿಶೇಷ ಮಾಹಿತಿಯನ್ನು ಕೊಡಬಯಸುತ್ತೇನೆ. ಲೇಖಕರು ಈ ಕಿರುಬರೆಹವನ್ನು 'ತುಳುಭಾಷೆಗೆ ಲಿಪಿಯಿಲ್ಲ.' ಎನ್ನುವ ವಾಕ್ಯವೊಂದರಿಂದ ಆರಂಭಿಸಿದ್ದಾರೆ. ಇದು ಹಿಂದೆ ಹೇಳಲಾದಂತೆ ಮಾಹಿತಿಯ ಕೊರತೆಯಿಂದಾದುದಲ್ಲದೆ ಬೇರಲ್ಲ. ಯಾಕೆಂದರೆ ತುಳುವಿಗೆ ಸ್ವತಂತ್ರ ಲಿಪಿ ಇದೆ. ಆದರೆ ರಾಜಾಶ್ರಯದ ಕೊರತೆ ಹಾಗೂ ತುಳುವರ ಅವಜ್ಞೆಯಿಂದಲೋ ಔದಾಸೀನ್ಯದಿಂದಲೋ ಅದರ ಬಳಕೆ ತಪ್ಪಿ ಅದರ ಸ್ಥಾನವನ್ನು ಕನ್ನಡಲಿಪಿಯು ಆಕ್ರಮಿಸಿರುವುದು ಚಾರಿತ್ರಿಕಸತ್ಯ. ತುಳುವಿನಲ್ಲಿ ಇದು ವರೆಗೆ ಉಪಲಬ್ಧವಾದ ಪ್ರತಿಯೊಂದು ಪ್ರಾಚೀನಗ್ರಂಥವೂ ತುಳುಲಿಪಿಯಲ್ಲೇ ಬರೆಯಲ್ಪಟ್ಟದ್ದು. ಆದರೆ ಈಗಿನ ತುಳುವರು ಆ ಲಿಪಿಯನ್ನು ಮರೆತ ಕಾರಣ ಮತ್ತು ಹಲವಾರು ವರ್ಷಗಳಿಂದ ಕನ್ನಡ ಲಿಪಿಯನ್ನೇ ತುಳುವನ್ನು ಸಹ ಬರೆಯಲು ಉಪಯೋಗಿಸುವ ಕಾರಣ ಆ ಕಾವ್ಯಗಳನ್ನು ಮುದ್ರಿಸುವ ಸಂದರ್ಭದಲ್ಲಿ ಅವುಗಳನ್ನು ಕನ್ನಡ ಲಿಪಿಗೆ ಲಿಪ್ಯಂತರಗೊಳಿಸಿ ಮುದ್ರಿಸಲಾಗಿದೆ ವಿನಾ ಮೂಲತಃ ಅವು ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟುವಲ್ಲ. ಕೇವಲ ಬರೆವಣಿಗೆಯ ಹಾಗೂ ಮುದ್ರಣದ ಸೌಕರ್ಯಕ್ಕಾಗಿ ಈಗ ತುಳುವನ್ನು ಕನ್ನಡ ಲಿಪಿಯಲ್ಲಿ ಬರೆಯುತ್ತಾರೆ. ಅದೇ ಕಾರಣಕ್ಕೋಸ್ಕರ ತುಳು ನಿಘಂಟುವಿನಲ್ಲಿ ಸಹ ಕನ್ನಡ ಲಿಪಿಯನ್ನೇ

ಉಪಯೋಗಿಸಲಾಗಿದೆ. ಆದರೆ ತುಳುವಿಗೆ ಲಿಪಿ ಇದೆ ಹಾಗೂ ಅದನ್ನು ಓದಲು/ಬರೆಯಲು ಬಲ್ಲ ಹಲವರು ತುಳುವರು ಈಗಲೂ ಅಲ್ಲಲ್ಲಿ ಇದ್ದಾರೆ. ಮತ್ತು ಆಸಕ್ತರಿಗೆ ಅದನ್ನು ಕಲಿಸುವ ವ್ಯವಸ್ಥೆಯನ್ನು ಸಹ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಮಾಡುತ್ತಿದೆ. ಅಲ್ಲದೆ ತುಳುವರ್ಣಮಾಲೆಯ ಪುಸ್ತಕಗಳೂ ಲಭ್ಯ ಇವೆ.

ಈ ಕಿರುಹೊತ್ತಗೆಯ ಕೊನೆಯ ಅನುಬಂಧವಾಗಿ, 'ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿ'ಯ ಕುರಿತಾದ ಬಹಳ ಉಪಯುಕ್ತ ಹಾಗೂ ಆಶ್ಚರ್ಯಕರ ಮಾಹಿತಿ-ಗಳನ್ನೊಳಗೊಂಡ ಒಂದು ಮೌಲಿಕ ಲೇಖನವಿದೆ. ಇದು ನಿಘಂಟುಕಾರರಿಗೆ ಅತ್ಯಂತ ಪ್ರೋತ್ಸಾಹದಾಯಕವಾಗಿದೆಯೆನ್ನಬಹುದು.

ಗ್ರಂಥಾಂತ್ಯದಲ್ಲಿ 'ಆಯ್ದ ಗ್ರಂಥಸೂಚಿ' ಇದೆ. ಪ್ರೊ. ಜಿ. ವೆಂಕಟಸುಬ್ಬಯ್ಯ-ನವರ ವಿಚಾರೋಪನ್ಯಾಸದ ಲಿಖಿತರೂಪದ ಈ ಗ್ರಂಥಾರಂಭದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಶ್ರೀ ಎಸ್. ರಾಮೇಗೌಡ ಅವರ 'ಮುನ್ನುಡಿ' ಹಾಗೂ ಲೇಖಕರ 'ಲೇಖಕನ ಅರಿಕೆ'ಯ ೬ ಪೂರ್ವಪುಟಗಳಿವೆ. ಈ ಕಿರುಹೊತ್ತಗೆಯನ್ನು 'ಪ್ರೊ. ಶಿ. ಶಿ. ಬಸವನಾಳರ ಪುಣ್ಯಸ್ಮೃತಿಗೆ' ಅರ್ಪಿಸಲಾಗಿದೆ.

ಒಟ್ಟಿನಲ್ಲಿ, ಡೆಮಿ ಎಂಟನೇ ಒಂದು ಆಕಾರದಲ್ಲಿ ೧೦೨ ಪುಟಗಳ ಪುಟ್ಟ ಗ್ರಂಥವೊಂದು 'ಕನ್ನಡ ನಿಘಂಟುಶಾಸ್ತ್ರ'ದ ಪರಿಚಯವನ್ನು ಸ್ಥೂಲವಾಗಿ ಮತ್ತು ಅಚ್ಚುಕಟ್ಟಾಗಿ ಮಾಡಿದೆಯೆನ್ನಬಹುದು. ಲೇಖಕರ ಅಪಾರಪಾಂಡಿತ್ಯ, ನಿಘಂಟುಶಾಸ್ತ್ರದ ಮೇಲಿನ ಅಗಾಧಜ್ಞಾನ ಈ ಕೃತಿಯಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ನಿಘಂಟುಶಾಸ್ತ್ರ ಪರಿಚಯದ ಪುಟಪಾಕವಿದು.



# ಪರಿಷತ್ತಿನ ನಿಘಂಟು ಮತ್ತು ಶಬ್ದರ್ಷಿ ವೆಂಕಟಸುಬ್ಬಯ್ಯ

ಡಾ. ಯು. ಪಿ. ಉಪಾಧ್ಯಾಯ

ಕನ್ನಡ ಸಾರಸ್ವತಲೋಕ ಸಾವಿರ ವರ್ಷಗಳಿಂದ ತನ್ನ ಸೃಷ್ಟಿಶೀಲ ಕೃತಿಗಳಿಂದ ಪ್ರಪಂಚದಸಾಹಿತ್ಯಭಂಡಾರಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ಕೊಡುತ್ತಾ ಬಂದುದು ಮಾತ್ರವಲ್ಲದೆ ಭಾಷಾವೈಜ್ಞಾನಿಕ ಹಾಗೂ ಶಬ್ದಾರ್ಥವಿವೇಚನೆಯ/ಜಿಜ್ಞಾಸೆಯ ಬರಹಗಳ ಪರಂಪರೆಯಿಂದಲೂ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಿದೆ ಎಂಬುದು ಕನ್ನಡಿಗರಾದ ನಮಗೆ ಹೆಮ್ಮೆಯ ವಿಚಾರ. ಈ ಚಿಂತನಶೀಲತೆಯ ಉತ್ತುಂಗಶಿಖರಕ್ಕೇರಿದ ಮಹಾನ್ ಭಾಷಾಶಾಸ್ತ್ರಜ್ಞರು, ಶಬ್ದಾರ್ಥಚಿಂತಕರು ಕಳೆದ ಎರಡು ಶತಮಾನಗಳಲ್ಲಿ ದೇಶದ ಇತರ ಭಾಷೆಗಳ ಶಬ್ದಾರ್ಥಚಿಂತಕರಿಗೆ ಮಾರ್ಗದರ್ಶಕವಾಗುವಂತಹ ನಿಘಂಟುಗಳ ರಚನೆಮಾಡಿ ಆಚಾರ್ಯಪುರುಷರಾಗಿದ್ದಾರೆ. ಅಂತಹ ಆಚಾರ್ಯಪುರುಷರಲ್ಲಿ ಮುಖ್ಯವಾಗಿ ಮೂವರ ಹೆಸರುಗಳು ನಮ್ಮ ಗಮನ ಸೆಳೆಯುತ್ತವೆ. ಒಬ್ಬರು ಕ್ರಿಶ್ಚಿಯನ್ ಮಿಶನರಿಗಳಲ್ಲಿ ಅಗ್ರಮಾನ್ಯರಾದ ಫೆರ್ಡಿನಾಂಡ್ ಕಿಟ್ಟೆಲ್, ಇನ್ನೊಬ್ಬರು ಕಿಟ್ಟೆಲ್ ಕೋಶವನ್ನು ಪರಿಷ್ಕರಿಸಿ ಅಭಿನವ ಕಿಟ್ಟೆಲ್ ಎಂಬ ಬಿರುದಾಂಕಿತರಾದ ಪ್ರೊ. ಎಂ. ಮರಿಯಪ್ಪ ಭಟ್ ಹಾಗೂ ಮತ್ತೊಬ್ಬರು ಇವರಿಬ್ಬರಿಗಿಂತಲೂ ಹೆಚ್ಚು ಶಬ್ದಾರ್ಥಚಿಂತನೆ ನಡೆಸಿ ನಡೆದಾಡುವ ನಿಘಂಟು, ಶಬ್ದರ್ಷಿ, ಶಬ್ದಬ್ರಹ್ಮ, ಶಬ್ದಸಾಗರ ಮುಂತಾದ ಬಿರುದಾಂಕಿತರಾದ ಪ್ರೊ. ಜಿ. ವೆಂಕಟಸುಬ್ಬಯ್ಯ. ಮೊದಲ ಇಬ್ಬರು ಕ್ರಮವಾಗಿ ಹತ್ತೊಂಬತ್ತನೆಯ ಶತಮಾನದ ಕೊನೆ ಹಾಗೂ ಇಪ್ಪತ್ತನೆಯ ಶತಮಾನದಲ್ಲಿ ಶಬ್ದತಪಸ್ಸನ್ನು ಮಾಡಿ ಕೀರ್ತಿಶೇಷರಾಗಿದ್ದಾರೆ. ಮೂರನೆಯವರು ವಿವೇಚನೆಯಲ್ಲಿ ತಲ್ಲೀನರಾಗಿ ಮುಂದಿನ ಪೀಳಿಗೆಗೆ ಸ್ಫೂರ್ತಿ ನೀಡುವ ಕಾಯಕದಲ್ಲಿ ಈಗಲೂ ನಿರತರಾಗಿದ್ದಾರೆ ಎನ್ನುವುದು ನಮ್ಮ ಭಾಗ್ಯವೆಂದೇ ಹೇಳಬೇಕು. ಭಾರತದ ಯಾವುದೇ ಭಾಷೆಯ ನಿಘಂಟುಕಾರರು ಇವರಿಂದ ಸ್ಫೂರ್ತಿ ಪಡೆಯುವ ಅಂಶಗಳು ಬೇಕಾದಷ್ಟಿವೆ. ಶಬ್ದಗಳ ಮೂಲ, ಉಚ್ಚಾರಕ್ರಮ, ಐತಿಹಾಸಿಕವಾಗಿ ಶಬ್ದಗಳು ನಡೆದುಬಂದ ದಾರಿ, ಅರ್ಥ ಮತ್ತು ಅರ್ಥಗಳ ಪದರುಗಳು, ಅರ್ಥಪಲ್ಲಟಗಳು, ಜ್ಞಾತಿಪದಗಳು ಅನ್ಯಭಾಷೆಗಳಿಂದ

ಸ್ವೀಕೃತವಾದ ಪದಗಳು ಹಾಗೂ ಅವುಗಳಲ್ಲಿ ನಡೆದ ರೂಪಪರಿವರ್ತನೆ ಹಾಗೂ ಅರ್ಥಪರಿವರ್ತನೆ ಮುಂತಾದ ವಿಶೇಷವಿಷಯಗಳಿಗೆ ಸಂಬಂಧಿಸಿದ ಚಿಂತನೆ-ಗಳಿಂದ ಅವರು ವಿದ್ವಜ್ಜನರ ಗೌರವಾದರಗಳಿಗೆ ಭಾಜನರಾಗಿದ್ದಾರೆ. ಒಂದು ಶಬ್ದವನ್ನು ಹಲವು ದೃಷ್ಟಿಕೋನಗಳಿಂದ ವೀಕ್ಷಿಸಿ ಕರಾರುವಾಕ್ಕಾದ ನಿರೂಪಣೆ ಮಾಡಿ ಪ್ರಸಿದ್ಧರಾದ ವೆಂಕಟಸುಬ್ಬಯ್ಯ ಒಬ್ಬ ವ್ಯಕ್ತಿಯಲ್ಲ; ಒಂದು ಶಕ್ತಿ. ಒಬ್ಬ ಸಂಶೋಧಕನಲ್ಲ; ಒಂದು ವಿಶ್ವವಿದ್ಯಾಲಯ.

ಕನ್ನಡದ ನಿಘಂಟುಪರಂಪರೆಗೆ ಒಂದು ಸಾವಿರ ವರ್ಷಗಳ ಇತಿಹಾಸವಿದೆ. ಮೊದಲ ನಿಘಂಟನ್ನು 'ರನ್ನಕಂದ' ಅಥವಾ ರನ್ನಕವಿವಿರಚಿತ ಕೋಶ ಎಂದು ವಿದ್ವಾಂಸರು ಗುರುತಿಸುತ್ತಾರೆ. ಇದು ಸಂಸ್ಕೃತದ ಶ್ಲೋಕರೂಪಗಳ ನಿಘಂಟಿನಂತಿದೆ. ಕಂದ, ಚಂಪಕಮಾಲಾ ಮುಂತಾದ ವೃತ್ತಗಳಲ್ಲಿ ರಚಿತವಾದ ಕಠಿಣಶಬ್ದಗಳ ಅರ್ಥವಿಶ್ಲೇಷಣೆ ಇದರಲ್ಲಿದೆ. ಮುಂದೆ ಶಬ್ದಮಣಿದರ್ಪಣವೆಂಬ ವ್ಯಾಕರಣಗ್ರಂಥದಲ್ಲಿ ವರ್ಗೀಕೃತ ಶಬ್ದಗಳ ಪಟ್ಟಿ ದೊರೆಯುತ್ತದೆ. ಶಕಟರೇಫ ರಳಗಳನ್ನೊಳಗೊಂಡ ನೂರ ಎಂಬತ್ತೊಂದು ಪದಗಳು ಹಾಗೂ ಒಂಬೈನೂರ ಎಂಬತ್ತೈದು ಧಾತುಗಳು, ಪ್ರಾಚೀನ ಕವಿಗಳು ಬಳಸಿದ ಇನ್ನೂರ ಮೂವತ್ತಮೂರು ಗೂಢಪದಗಳ ಅರ್ಥವಿವರಣೆ ಇದರಲ್ಲಿದೆ.

ಅಂತೆಯೇ ಅಜ್ಞಾತಕವಿಯ ಕರ್ನಾಟಕ ನಿಘಂಟು, ಬೊಮ್ಮರಸನ ಚತುರಾಸ್ಯ ನಿಘಂಟು, ಹದಿನಾರನೆಯ ಶತಮಾನದಲ್ಲಿ ರಚಿತವಾದ ಲಿಂಗಮಂತ್ರಿಯ ಕಬ್ಬಿಗರ ಕೈಪಿಡಿ, ತೋಂಟದಾರ್ಯನ ಕರ್ನಾಟಕ ಶಬ್ದಮಂಜರಿ, ಶೃಂಗಾರ ಕವಿಯ ಕರ್ನಾಟಕ ಸಂಜೀವನಂ, ಭಾರತನಿಘಂಟು ಮುಂತಾದವುಗಳೂ ಪ್ರಸಿದ್ಧವಾಗಿವೆ. ಹನ್ನೊಂದನೆಯ ಶತಮಾನದಿಂದ ಹದಿನಾರನೆಯ ಶತಮಾನದ ವರೆಗೆ ಅನೇಕ ಸಂಸ್ಕೃತ ನಿಘಂಟುಗಳೂ ಅವುಗಳ ಟೀಕೆ ವಿವರಣೆಗಳೂ ನಮ್ಮ ಕರ್ನಾಟಕದಲ್ಲಿ ರಚಿತವಾಗಿವೆ. ಅಲ್ಲದೆ ವೈದ್ಯನಿಘಂಟು, ಧನ್ವಂತರಿನಿಘಂಟು, ತತ್ವಾಭಿನಯನಿಘಂಟು, ನಾನಾರ್ಥ ನಿಘಂಟು ಮುಂತಾದ ವಿಶಿಷ್ಟಜಾತಿಯ ಪದಗಳ ಅರ್ಥಗ್ರಹಿಕೆಗಾಗಿ ರಚಿಸಿದ ನಿಘಂಟುಗಳೂ ಕನ್ನಡ ಸಾಹಿತ್ಯದ ಮಧ್ಯಕಾಲದಲ್ಲಿ ಬೆಳಕಿಗೆ ಬಂದಿವೆ.

ಆಧುನಿಕ ಕಾಲದಲ್ಲಿ ಶಬ್ದಗಳನ್ನು ಅಕಾರಾದಿಯಾಗಿ ಉಲ್ಲೇಖಿಸಿ ಆಂಗ್ಲಭಾಷೆಯಲ್ಲಿ ಅಥವಾ ಕನ್ನಡದಲ್ಲಿ ಅರ್ಥ ವಿವರಣೆ ನೀಡಿ ಬರೆದ ನಿಘಂಟುಗಳ ಪರಂಪರೆ ಕ್ರೈಸ್ತ ಮಿಶನರಿಗಳಿಂದ ಪ್ರಾರಂಭವಾಗಿ ದೇಶೀಯ ವಿದ್ವಾಂಸರುಗಳಿಂದ ಮುಂದುವರಿಯಿತು.

ಕ್ರೈಸ್ತ ಮತಬೋಧಕರು ಧರ್ಮಪ್ರಚಾರಕ್ಕಾಗಿ ಭಾರತಕ್ಕೆ ಬಂದರೂ ಭಾರತದ ಭಾಷೆಗಳ ಅಧ್ಯಯನ ನಡೆಸಿ ಅನೇಕ ವಿದ್ವತ್ಕಾರ್ಯಗಳಿಗೆ ನಾಂದಿಹಾಡಿದರು. ಕರ್ನಾಟಕದಲ್ಲಂತೂ ಅವರು ಕನ್ನಡ-ತುಳು ಭಾಷೆಗಳಲ್ಲಿ ನಿಘಂಟು-ವ್ಯಾಕರಣಗಳನ್ನು ರಚಿಸಿ ಭಾಷೆಗಳ ಆಧುನಿಕೀಕರಣಕ್ಕೆ ಪ್ರೇರಣೆ ನೀಡಿದ್ದನ್ನು ನಾವು ಸ್ಮರಿಸಬೇಕು. ಈ ದಿಶೆಯಲ್ಲಿ ಬಾಸೆಲ್ ಮಿಷನ್ನಿನವರ ಸೇವೆ ಅಮೂಲ್ಯವಾದುದು. ನಿಘಂಟುರಚನೆ ಮಾಡಿದವರಲ್ಲಿ ರೀವ್ ಎಂಬುವರು ಮೊದಲಿಗರು. ಅವರ A Dictionary of

Carnataka and English 1832ರಲ್ಲಿ ಪ್ರಕಟವಾಗಿ ಕನ್ನಡದ ಮೊದಲ ಆಧುನಿಕ ನಿಘಂಟು ಎನಿಸಿದೆ. ಆದರೆ ಈ ಪರಂಪರೆಯಲ್ಲಿ ಮೂಡಿಬಂದ ಪ್ರಾರಂಭದ ಕೃತಿಯಾದುದರಿಂದ ಇದು ಅನೇಕ ನ್ಯೂನತೆಗಳನ್ನೊಳಗೊಂಡಿದೆ.

ಕ್ರಿ.ಶ. 1832ರಲ್ಲಿ ಜನಿಸಿದ ರೆವರೆಂಡ್ ಕಿಟ್ಟೆಲ್ ಮಹಾಶಯರು ಕ್ರೈಸ್ತ ಧರ್ಮಗುರುವಾಗಿ ಕರ್ನಾಟಕಕ್ಕೆ ಬಂದಾಗ ಬಾಸೆಲ್ ಮಿಶನ್ನಿನ ಡಾ. ಮೊಗ್ಲಿಂಗ್ ಮಹಾಶಯರು ಕನ್ನಡಕ್ಕೊಂದು ವೈಜ್ಞಾನಿಕವಾದ ಕೋಶವನ್ನು ತಯಾರಿಸಬೇಕೆಂದು ಪ್ರೋತ್ಸಾಹಿಸಿದರು. ಕಿಟ್ಟೆಲ್ಲರು ಈ ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ಕೈಗೊಂಡು 1892ರಲ್ಲಿ ನಿಘಂಟಿನ ಮುದ್ರಣಪ್ರತಿಯನ್ನು ತಯಾರಿಸಿದರು. ಈ ಮಹಾಕಾರ್ಯಕ್ಕೆ ಟ್ಯೂಬಿಂಗನ್ ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ಕೊಡುವಷ್ಟು ಗಮನಾರ್ಹವಾದ ಕೆಲಸವಿದಾಯಿತು.

ಕಿಟ್ಟೆಲ್ಲರ ಕೊಡುಗೆ ಕನ್ನಡದ ನಿಘಂಟು ಕ್ಷೇತ್ರಕ್ಕೆ ಅಪಾರ ಬೆಲೆಯುಳ್ಳದ್ದಾಗಿದೆ. ಅವರ ತರುವಾಯ ಇತರ ವಿದ್ವಾಂಸರು ನಿಘಂಟಗಾಗಿ ದುಡಿದರೂ ಇಂದೂ ಕಿಟ್ಟೆಲ್ ನಿಘಂಟಿನ ಗೌರವಾನ್ವಿತ ಸ್ಥಾನಕ್ಕೆ ಕುಂದು ಬರುವುದಿಲ್ಲ. ಈ ನಿಘಂಟನಲ್ಲಿ. ಶಬ್ದಗಳನ್ನು ಕನ್ನಡ ಲಿಪಿಯಲ್ಲಿಯೂ ಧ್ವನ್ಯಾತ್ಮಕ ಲಿಪಿಯಲ್ಲಿಯೂ (ಪರಿವರ್ತಿತ ರೋಮನ್ ಲಿಪಿಯಲ್ಲಿ) ಉಲ್ಲೇಖಿಸಿ, ಆಂಗ್ಲಭಾಷೆಯಲ್ಲಿ ವಿವಿಧ ಅರ್ಥಗಳನ್ನು ನೀಡಿ, ಪರ್ಯಾಯಶಬ್ದಗಳನ್ನೂ ಇತರ ದ್ರಾವಿಡಭಾಷೆಗಳ ಜ್ಞಾತಿಶಬ್ದಗಳನ್ನೂ ನೀಡಿ, ಅನ್ಯದೇಶ್ಯ ಶಬ್ದಗಳಿಗೆ ಅವುಗಳ ಮೂಲರೂಪಗಳನ್ನು ಸೂಚಿಸಿ. ಲಿಖಿತ ಸಾಹಿತ್ಯದಿಂದ ಉದ್ಧರಣೆಗಳನ್ನೂ ಕೊಟ್ಟು, ಉತ್ತರ ಕರ್ನಾಟಕ–ದಕ್ಷಿಣ ಕರ್ನಾಟಕ–ಕರಾವಳಿ ಕರ್ನಾಟಕದಲ್ಲಿ ಆ ಶಬ್ದಗಳು ಪಡೆಯುವ ರೂಪಗಳನ್ನು ಸಾಧ್ಯವಾದ ಕತೆ ಉಲ್ಲೇಖಿಸಿ, ವೈಜ್ಞಾನಿಕ ಮತ್ತು ಮಾದರಿಯೆನ್ನುವಂತೆ ರಚಿಸಿರುವುದು ಭಾಷಾ–ವೈಜ್ಞಾನಿಕತತ್ತ್ವಗಳು ಪ್ರಚಾರಕ್ಕೆ ಬರದ ಆ ಕಾಲದಲ್ಲಿ ಒಂದು ಮಹತ್ತರವಾದ ಸಾಧನೆಯೇ ಸರಿ. ಇದಕ್ಕಾಗಿ ಕಿಟ್ಟೆಲ್ಲರು ಹದಿನೆಂಟು ಹಳಗನ್ನಡ ಗ್ರಂಥಗಳನ್ನೂ ನಾಲ್ಕು ಹೊಸಗನ್ನಡ ಗ್ರಂಥಗಳನ್ನೂ ಜಾಲಾಡಿ ಶಬ್ದಸಂಗ್ರಹ ಮಾಡಿದ್ದಾರೆ. ನಾಲ್ಕು ಸಂಸ್ಕೃತ ನಿಘಂಟುಗಳನ್ನೂ ಐದು ದ್ರಾವಿಡಭಾಷಾನಿಘಂಟುಗಳನ್ನೂ ಪರಿಶೀಲಿಸಿದ್ದಾರೆ.

ಭಾಷಾಶಾಸ್ತ್ರದಲ್ಲಿ ಆಸಕ್ತಿ ಹೊಂದಿದ್ದ ಕಿಟ್ಟೆಲ್ಲರು ಸಂಸ್ಕೃತಭಾಷೆಗೆ ದ್ರಾವಿಡ ಭಾಷೆಗಳಿಂದ ಹೋಗಿರಬಹುದಾದ ಶಬ್ದಗಳನ್ನು ಗುರುತಿಸಿ ಕೂಲಂಕಶವಾಗಿ ಚರ್ಚಿಸಿದ್ದಾರೆ; ಮುಂದಿನ ಸಂಶೋಧಕರಿಗೆ ಪ್ರೇರಣೆ ನೀಡಿದ್ದಾರೆ. ಇದೂ ಒಂದು ಮಹತ್ತ್ವದ ಸಾಧನೆ. ಅವರ ನಿಘಂಟು ದಕ್ಷಿಣ ಭಾರತದ ಭಾಷೆಗಳಿಗೆ ಇತರ ಕ್ರೈಸ್ತ ಮಿಷನರಿಗಳು ತಯಾರಿಸಿದ ನಿಘಂಟುಗಳಿಗಿಂತ ತಂತ್ರ, ವಿಧಾನ, ಗಾತ್ರ, ಪ್ರಮಾಣ, ಉಪಯುಕ್ತತೆಗಳ ದೃಷ್ಟಿಯಿಂದ ಬಹಳ ಭಿನ್ನವಾಗಿಯೂ ಪರಿಪೂರ್ಣವಾಗಿಯೂ ಇವೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಕಿಟ್ಟೆಲ್ಲರ ಹೆಸರು ಕನ್ನಡ ವಿದ್ವಲ್ಲೋಕದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ.

ಕಿಟ್ಟೆಲ್ಲರು ದೇಶೀಶಬ್ದ, ಸಂಸ್ಕೃತ ಶಬ್ದ, ಅನ್ಯದೇಶ್ಯ ಶಬ್ದ ಇವುಗಳನ್ನು ಪ್ರತ್ಯೇಕವಾಗಿ ಗುರುತಿಸಿ ಉಲ್ಲೇಖಿಸಿದ್ದಾರೆ. ಕಾವ್ಯಪ್ರಯೋಗಗಳನ್ನೂ, ಗಾದೆ

ನುಡಿಗಟ್ಟುಗಳನ್ನೂ ಸಾಕಷ್ಟು ಕೊಟ್ಟಿದ್ದಾರೆ. ಆದರೆ ನ್ಯೂನತೆಗಳು ಇಲ್ಲವೆಂದು ಹೇಳಲಿಕ್ಕಾಗುವುದಿಲ್ಲ. ಆ ಕಾಲಕ್ಕೆ ಹಳಗನ್ನಡದ ಪಂಪಭಾರತ, ವಡ್ಡಾರಾಧನೆ ಕವಿರಾಜಮಾರ್ಗದಂತಹ ಕೃತಿಗಳು ಲಭ್ಯವಿರಲಿಲ್ಲ. ವೀರಶೈವಸಾಹಿತ್ಯದ ಪೂರ್ಣ ಶಬ್ದಸಂಪತ್ತು ಅದರಲ್ಲಿ ಸೇರಲಿಲ್ಲ.

ಇದನ್ನು ಮನಗಂಡು ಮದರಾಸು ವಿಶ್ವವಿದ್ಯಾಲಯದ ಪ್ರೊ. ಮರಿಯಪ್ಪ ಭಟ್ಟರು ಅನಂತರ ಪ್ರಕಟವಾದ ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯದಿಂದ ಶಬ್ದ ಹಾಗೂ ಉದಾಹರಣೆಗಳನ್ನು ಸಂಗ್ರಹಮಾಡಿ ನಿಘಂಟಿನ ಪರಿಷ್ಕೃತ ರೂಪವನ್ನು ಹೊರತಂದರು. ಒಟ್ಟು ಏಳು ಸಾವಿರದ ಎಂಟುನೂರು ಹೊಸ ನಮೂದುಗಳನ್ನೂ ಅವುಗಳಿಗೆ ಬೇಕಾದ ಉದ್ಧರಣೆಗಳನ್ನೂ ಸೇರಿಸಿದರು. ಅರ್ಥಗಳನ್ನೂ ಸಾಕಷ್ಟು ಪರಿಷ್ಕರಿಸಿದರು. ತುಳುವಿನಿಂದ ಸಂಗ್ರಹಿಸಿದ ಜ್ಞಾತಿಪದಗಳನ್ನೂ ಸೇರಿಸಿದರು. ಪರಿಷ್ಕೃತ ನಿಘಂಟನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿ 'ಅಭಿನವ ಕಿಟ್ಟೆಲ್' ಎಂಬ ಗೌರವಕ್ಕೆ ಪಾತ್ರರಾದರು.

ಕನ್ನಡಕ್ಕೆ ಆ ಕಾಲದಲ್ಲಿ ಸಾಕಷ್ಟು ಶಾಸ್ತ್ರೀಯವಾದ ನಿಘಂಟನ್ನು ಕಿಟ್ಟೆಲರು ಕೊಟ್ಟರೂ ಕನ್ನಡದ ಲಭ್ಯವಿರುವ ಎಲ್ಲ ಲಿಖಿತ ಗ್ರಂಥಭಂಡಾರದಿಂದ ಪದಗಳನ್ನು ಹೆಕ್ಕಿ ರಚಿಸಿದ ಸರ್ವಸಂಗ್ರಾಹಕ ನಿಘಂಟಿನ ಕೊರತೆ ನಿವಾರಿಸಬೇಕೆಂದು ಆಧುನಿಕ ವಿದ್ವಾಂಸರಿಗೆ ಅನಿಸಿತು. ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಸೇರಿದ ಎ. ಆರ್. ಕೃಷ್ಣ ಶಾಸ್ತ್ರೀ, ತೀ. ನಂ. ಶ್ರೀಕಂಠಯ್ಯ, ಬಿ. ಎಂ. ಶ್ರೀಕಂಠಯ್ಯ, ಕ. ವೆಂ. ರಾಘವಾಚಾರ್ ಮುಂತಾದ ವಿದ್ವಾಂಸರು ಸಮಗ್ರವಾದ ನಿಘಂಟುಯೋಜನೆಯನ್ನು ಹಾಕಿಕೊಂಡರು. ಅದರ ಪರಿಣಾಮವಾಗಿ 1943ನೇ ಇಸವಿಯಲ್ಲಿ ಬೃಹತ್ ನಿಘಂಟು ಯೋಜನೆ ರೂಪುಗೊಂಡಿತು. ಅದರ ಮುಖ್ಯ ಉದ್ದೇಶಗಳೆಂದರೆ (೧) ಆಧುನಿಕ ಭಾಷಾಶಾಸ್ತ್ರದ ತತ್ತ್ವಗಳಿಗನುಸಾರವಾಗಿ ನಿಘಂಟು ರಚಿಸುವುದು, (೨) ಹಲ್ಮಿಡಿ ಶಾಸನದಿಂದ 1250ನೇ ಇಸವಿ ವರೆಗಿನ ಎಲ್ಲ ಶಾಸನಗಳಿಂದಲೂ ಶಬ್ದಸಂಗ್ರಹ ಮಾಡುವುದು, (೩) 1900 ವರೆಗೆ ಪ್ರಕಟವಾದ ಎಲ್ಲ ಕನ್ನಡ ಕೃತಿಗಳಿಂದ ಪದಸಂಗ್ರಹ ಮಾಡುವುದು. (೪) ಹಳೆಯ ನಿಘಂಟುಗಳಿಂದಲೂ ತತ್ತ್ವಜ್ಞಾನ, ಸಂಗೀತ. ನೃತ್ಯ, ಕಾವ್ಯಮೀಮಾಂಸೆ, ವ್ಯಾಕರಣ. ಛಂದಸ್ಸು, ಜ್ಯೋತಿಷ, ಕಾಮಶಾಸ್ತ್ರ, ಗಣಿತ, ಚಿತ್ರಕಲೆ, ಮುಂತಾದ ಶಾಸ್ತ್ರೀಯ-ವೈಚಾರಿಕ ಸಾಹಿತ್ಯಕೃತಿಗಳಿಂದಲೂ ಪದಸಂಗ್ರಹ ಮಾಡುವುದು (೫) ಶಬ್ದಗಳ ಪರ್ಯಾಯರೂಪಗಳನ್ನೂ, ಸಾಮಾನ್ಯ ಅರ್ಥಗಳ ಜೊತೆ ಆಲಂಕಾರಿಕಾರ್ಥ ವಿಶೇಷಾರ್ಥಗಳನ್ನೂ ಗೂಢಾರ್ಥಗಳನ್ನೂ ನಮೂದಿಸುವುದು (೬) ಹಳೆಯ ಗ್ರಂಥಗಳ ಉದ್ಧರಣೆಗಳನ್ನು ನಮೂದಿಸುವುದು (೭) ವ್ಯುತ್ಪತ್ತಿ ಹಾಗೂ ಇತರ ಸಹೋದರ ಭಾಷೆಗಳ ಜ್ಞಾತಿಪದಗಳನ್ನು ಸಂಗ್ರಹಿಸುವುದು (೮) ಸಾಧ್ಯವಾದಷ್ಟು ಕಡೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಹಾಗೂ ಕರಾವಳಿ ಕರ್ನಾಟಕದ ಆಡುಭಾಷೆಗಳಿಂದ ಪರ್ಯಾಯ ಪದಗಳನ್ನು ಶಬ್ದ ಸಂಗ್ರಹಣಕಾರರ ಅನುಭವದ ಆಧಾರದ ಮೇಲೆ ಸಂಗ್ರಹ ಮಾಡುವುದು ಇತ್ಯಾದಿ.

ಸಂಪಾದಕ ಮಂಡಳಿಯವರಲ್ಲದೆ ಇತರ ಎಪ್ಪತ್ತೈದು ಮಂದಿ ಸಹಾಯಕರು ಈ ಯೋಜನೆಯಂತೆ ಶಬ್ದಸಂಗ್ರಹಕಾರ್ಯದಲ್ಲಿ ಸಹಕರಿಸಿದರು. ಮೇಲಿನ ಧ್ಯೇಯ ಧೋರಣೆಗಳಿಗನುಸಾರವಾಗಿ ಹದಿನೈದು ಲಕ್ಷ ಪಟ್ಟಿಕೆಗಳ ತಯಾರಿ ನಡೆಯಿತು. ಹಲ್ಮಿಡಿ ಶಾಸನದ ಕಾಲದಿಂದ 1250ನೆಯ ಇಸವಿಯ ವರೆಗಿನ ಸುಮಾರು ಹತ್ತು ಸಾವಿರ ಶಾಸನಗಳಿಂದ ಶಬ್ದಸಂಗ್ರಹ ನಡೆಯಿತು. ಎರಡು ಸಾವಿರ ಲಿಖಿತ ಸಾಹಿತ್ಯದ ಗ್ರಂಥಗಳಿಂದಲೂ ಶಬ್ದಸಂಗ್ರಹ ನಡೆಯಿತು.

ಎ. ಆರ್. ಕೃಷ್ಣ ಶಾಸ್ತ್ರೀ, ತೀ. ನಂ. ಶ್ರೀ., ಬಿ. ಎಂ. ಶ್ರೀ., ಡಿ. ಎಲ್. ನರಸಿಂಹಾಚಾರ್ ಅವರುಗಳು ದೈವಾಧೀನರಾದ ಮೇಲೆ ಪ್ರೊ. ಮರಿಯಪ್ಪ ಭಟ್ಟರು ಒಂದು ವರ್ಷ ಕಾರ್ಯ ನಿರ್ವಹಿಸಿ ಅನಾರೋಗ್ಯಕಾರಣದಿಂದ ನಿವೃತ್ತರಾದರು. ನಿಘಂಟಿನ ಮೊದಲ ಸಂಪುಟ 1970ರಲ್ಲಿ ಪ್ರಕಟವಾಯಿತು. ಜಿ. ವೆಂಕಟಸುಬ್ಬಯ್ಯನವರು ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತರಾದ ಮೇಲೆ 1973ರಲ್ಲಿ ಈ ನಿಘಂಟಿನ ಸಂಪಾದಕತ್ವದ ಪೂರ್ಣ ಜವಾಬ್ದಾರಿ ವಹಿಸಿಕೊಂಡು ಅದು ಕೊನೆಗೊಳ್ಳುವ ವರೆಗೂ ಶಬ್ದಾರ್ಥತಪಸ್ಸಿನಲ್ಲಿ ತಲ್ಲೀನರಾದರು. ಇತರ ಸಂಪುಟಗಳು ಒಂದಾದ ಮೇಲೊಂದರಂತೆ ಪ್ರಕಟಗೊಂಡುವು.

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಸಂಪುಟಗಳು ಎಷ್ಟು ವಿಸ್ತೃತವಾದುವೆಂಬುದಕ್ಕೆ ಬರಿಯ ಗಾತ್ರವನ್ನೇ ಗಮನಿಸಬಹುದು. ಪುಟಸಂಖ್ಯೆಗಳೊಡನೆ ಪರಿಷತ್ತಿನ ನಿಘಂಟು ಸಂಪುಟಗಳ ವಿವರ ಹೀಗಿದೆ:

| ಕ್ರ ಸಂ. | ಎಲ್ಲಿಂದ ಎಲ್ಲಿಯವರೆಗೆ | ಪ್ರಧಾನ ಸಂಪಾದಕರು | ಪ್ರಕಟನ ವರ್ಷ | ಪುಟ |
|---|---|---|---|---|
| 1 | ಅ – ಔಳಿ | ಡಿ. ಎಲ್. ನರಸಿಂಹಾಚಾರ್ | 1970 | 1321 |
| 2. | ಕ–ಗಾಢಿಕೆ | ಜಿ. ವೆಂಕಟಸುಬ್ಬಯ್ಯ | 1976 | 1152 |
| 3. | ಗಾಢಿಸು–ತಿಮಿರ್ | ಜಿ. ವೆಂಕಟಸುಬ್ಬಯ್ಯ | 1977 | 1007 |
| 4. | ತಿಮಿರ್$_2$–ನಾಭಿ | ಜಿ. ವೆಂಕಟಸುಬ್ಬಯ್ಯ | 1979 | 1007 |
| 5. | ನಾಭಿಕಮಲ–ಪಜ್ಜುಟಿನೆ | ಜಿ. ವೆಂಕಟಸುಬ್ಬಯ್ಯ | 1988 | 980 |
| 6. | ಪಾಉಗ್ಗವಣ–ಬಿಲ್ಲ | ಜಿ. ವೆಂಕಟಸುಬ್ಬಯ್ಯ | 1990 | 1007 |
| 7. | ಬಿಲ್ಲ$_2$–ಲೌಹಿತ್ಯ | ಎನ್. ಬಸವಾರಾಧ್ಯ | 1993 | 1266 |
| 8. | ವ–ಱಾಂತ | ಎನ್. ಬಸವಾರಾಧ್ಯ | 1995 | 1289 |

ಕನ್ನಡ ನಿಘಂಟು ಯೋಜನೆಯು ಬಹಳ ವರ್ಷಗಳ ಯೋಜನೆಯಾಗಿದ್ದು ಅದರ ಮೊದಲ ಸಂಪುಟವು ಪ್ರೊ. ಜಿ. ವೆಂಕಟಸುಬ್ಬಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಕಾಲದಲ್ಲಿ ಪ್ರಕಟಗೊಂಡಿತು. ಮೊದಲ ಸಂಪುಟದಿಂದ ಕೊನೆಯ ಸಂಪುಟದವರೆಗೂ ಅವರು ನಿಘಂಟು ಸಮಿತಿಯ ಸಕ್ರಿಯಸದಸ್ಯರಾಗಿಯೇ ಇದ್ದರು. ಐದು ಸಂಪುಟಗಳಿಗೆ ಅವರೇ ಪ್ರಧಾನ ಸಂಪಾದಕರಾಗಿದ್ದರು.

ಮೊದಲನೆಯ ಸಂಪುಟದ ಪ್ರಸ್ತಾವನೆಯಲ್ಲಿ ಈ ನಿಘಂಟಿಗಾಗಿ ನಾನಾಗ್ರಂಥಗಳಿಂದ ಶಬ್ದಗಳನ್ನು ಹೆಕ್ಕಿ ಪಟ್ಟಿ ಮಾಡಿದವರ ಯಾದಿಯಿದೆ. ಅದರಲ್ಲಿ ಅರವತ್ತನಾಲ್ಕು ಜನ ಕನ್ನಡ ವಿದ್ವಾಂಸರ ಮತ್ತು ಭಾಷಾಧ್ಯಯನಾಸಕ್ತರ ಹೆಸರುಗಳಿದ್ದು ಅದರಲ್ಲಿ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಹೆಸರೂ ಇರುವುದು ಗಮನಾರ್ಹ. ಎಂದರೆ, ಹಿರಿಯರಾದ ಎ. ಆರ್. ಕೃಷ್ಣ ಶಾಸ್ತ್ರೀ, ಡಿ. ಎಲ್. ನರಸಿಂಹಾಚಾರ್, ತೀ.ನಂ.ಶ್ರೀ. ಮೊದಲಾದವರೇ ವೆಂಕಟಸುಬ್ಬಯ್ಯನವರ ಶ್ರಮವನ್ನು ಆ ಕಾಲದಲ್ಲಿ ಅಪೇಕ್ಷಿಸಿದ್ದರು. ಆಗ ಕೊಟ್ಟ ಹೊಣೆಯನ್ನು ಸಮರ್ಥವಾಗಿ ನಿರ್ವಹಿಸಿದ ಅವರು ಅನಂತರದ ನಿಘಂಟು ಕಾರ್ಯದ ಹೆಚ್ಚಿನ ಹೊಣೆಯನ್ನೂ ಮುಂದೆ ಹೊರುವಂತಾಯಿತು. ಎಂಟೂ ಸಂಪುಟಗಳಲ್ಲಿ ಅವರ ಶ್ರಮವಿದ್ದರೂ ಐದು ಸಂಪುಟಗಳಲ್ಲಿ ಮಾತ್ರ ಅವರು ಪ್ರಧಾನ ಸಂಪಾದಕರೆಂದು ನಮೂದಾಗಿದೆ. ಆ ಐದು ಸಂಪುಟಗಳ ಒಟ್ಟು ಪುಟಸಂಖ್ಯೆ ೫೧೫೩ ಆಗಿದೆಯೆಂಬುದೇ ಈ ಮಹನೀಯರು ವಹಿಸಿದ ಹೊಣೆಯ ಅಗಾಧತೆಯನ್ನು ಪರಿಚಯ ಮಾಡಿಕೊಡುವುದರಲ್ಲಿ ಸಂದೇಹವಿಲ್ಲ. (ಒಟ್ಟು ನಿಘಂಟು ಪುಟಗಳು ೯೦೨೧)

ನಿಘಂಟಿನ ಕೆಲಸ ಕಳೆದ ಶತಮಾನದ ಕೊನೆಗೆ ಸಂಪೂರ್ಣಗೊಂಡರೂ ಜಿ. ವೆಂಕಟಸುಬ್ಬಯ್ಯನವರ ಶಬ್ದಾರ್ಥಚಿಂತನೆಯ ಕೈಂಕರ್ಯ ಈ ಶತಮಾನದಲ್ಲಿಯೂ ಮುಂದುವರಿಯುತ್ತಿದೆ ಎಂಬುದು ಭಾಷಾಶಾಸ್ತ್ರಜ್ಞರಿಗೆ ತುಂಬ ಸಂತೋಷದ ವಿಚಾರ. ಶಬ್ದಾರ್ಥವಿವೇಚನೆಯನ್ನೇ ಉಸಿರಾಗಿ ಬಳಸಿಕೊಂಡು ಬರುತ್ತಿರುವ ಜಿ. ವಿ. ಶಬ್ದಬ್ರಹ್ಮನ ಅವತಾರವೇ ಆಗಿದ್ದಾರೆ. ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಎಲ್ಲ ಭಾರತೀಯ ಭಾಷೆಗಳ ನಿಘಂಟುಕಾರರಿಗೆ ಮಾದರಿಯಾಗಿದೆ, ಆಕರಗ್ರಂಥವಾಗಿದೆ. ಈ ನಿಘಂಟಿನ ವೈಶಿಷ್ಟ್ಯವೆಂದರೆ ಅದೊಂದು ಶಬ್ದಸಾಗರ. ಸಾವಿರ ವರ್ಷಗಳಿಂದ ವಿಪುಲವಾಗಿ ಬೆಳೆದು ಬಂದ ಕನ್ನಡ ವಾಙ್ಮಯದ ಶಬ್ದರಾಶಿ ಇಲ್ಲಿದೆ. ಒಂದು ಶಬ್ದ ಬೇರೆ ಬೇರೆ ಶತಮಾನಗಳಲ್ಲಿ ವಿವಿಧ ರೂಪಗಳಲ್ಲಿ ವಿವಿಧ ಅರ್ಥಗಳನ್ನು ಹೊಂದಿ ಬೆಳೆದು ಬಂದ ದಾರಿಯನ್ನು ತೋರಿಸುವ ಈ ನಿಘಂಟು ಇತ್ತೀಚೆಗಿನ ಕಾಲಘಟ್ಟದಲ್ಲಿ ಭಾರತದಲ್ಲಿ ನಿರ್ಮಿತವಾದ ಅತಿಶ್ರೇಷ್ಠ ನಿಘಂಟುಗಳಲ್ಲೊಂದು ಎಂಬುದು ಕನ್ನಡಿಗರಾದ ನಮ್ಮ ಹೆಗ್ಗಳಿಕೆ. ಶಬ್ದವೈಶಾಲ್ಯ ಹಾಗೂ ಅರ್ಥವೈಶಾಲ್ಯ ಈ ನಿಘಂಟಿನ ವೈಶಿಷ್ಟ್ಯ. ಇದನ್ನು ನೋಡಬೇಕಾದರೆ ಒಂದೆರಡು ನಮೂದುಗಳನ್ನು ನೋಡಿದರೂ ಸಾಕು. ತೆಗೆ ಎಂಬ ಶಬ್ದಕ್ಕೆ ಇಲ್ಲಿ ನಲುವತ್ತೊಂದು ಅರ್ಥಗಳಿವೆ ಮತ್ತು ಪ್ರತಿಯೊಂದು ಅರ್ಥಕ್ಕೆ ಆಧಾರವಾಗಿ ವಿವಿಧ ಸಾಹಿತ್ಯಕೃತಿಗಳಿಂದ ಎತ್ತಿಕೊಂಡ ಉದ್ಧರಣೆಗಳಿವೆ. ಉದಾ: ೧) ಈಚೆಗೆ ತರು, ಹೊರತರು. ೨) ಎತ್ತಿಕೊಳ್ಳು, ತೆಗೆದುಕೊಳ್ಳು, ೩. ಎಬ್ಬಿಸು, ೪) ಉದ್ಧರಿಸು, ೫) ಆಕರ್ಷಿಸು, ಎಳೆಯು, ೬) ಗಾಳಿಯನ್ನು ಎಳೆದುಕೊಳ್ಳು, ೭) ಬಿಲ್ಲಿನ ಹೆದೆಯನ್ನು ಸೆಳೆಯು, ೮) ಕೀಳು, ಕಿತ್ತು ಹಾಕು, ೯) ಕಿತ್ತುಕೊಳ್ಳು, ದೋಚು, ೧೦) ಕದಿ, ಕಳವು ಮಾಡು, ೧೧) ಕಳಚು, ಬಿಚ್ಚು, ೧೨) ಪ್ರಕಟವಾಗು, ೧೩) ತೋರ್ಪಡಿಸು, ೧೪) ಹೊರಬರು, ೧೫) ಸಂಹರಿಸು, ನಾಶಮಾಡು, ೧೬) ನಾಶವಾಗು, ಹಾಳಾಗು, ೧೭) ಆಕ್ರಮಿಸು, (೧೮)

ತಡೆ, ಅಡ್ಡಿಪಡಿಸು, ೧೯) ನಿವಾರಿಸು, ೨೦) ತೊಡಗು, ೨೧) ಉಂಟುಮಾಡು, ೨೨) ಮಾಡು, ನಿರ್ಮಿಸು, ೨೩) ಬರೆ, ಚಿತ್ರಿಸು, ೨೪) ಸರಿಸು, ತಳ್ಳು, ೨೫) ಓರೆಯಾಗು, ೨೬) ಒಯ್ಯು, ಸಾಗಿಸು, ೨೭) ತೆರಳಿಸು, ೨೮) ಹಿಂತೆಗೆದುಕೊಳ್ಳು, ೨೯) ಹೋಗು, ೩೦) ಹಿಮ್ಮೆಟ್ಟು, ೩೧) ಮುಚ್ಚು, ರದ್ದುಪಡಿಸು, ೩೨) ಹಿಡಿದುಕೊಳ್ಳು, ೩೩) ಆರಿಸಿಬಿಡು, ೩೪) ಬಳಸು, ಉಪಯೋಗಿಸು, ೩೫) ಕೊಂಡುಕೊಳ್ಳು, ೩೬) ಉಚ್ಚರಿಸು, ೩೭) ತೋರಿಬಿಡು, ೩೮) ನಿಲ್ಲಿಸು, ೩೯) ಸುಡು, ಮರಳಿಸು, ೪೦) ತೇಯು, ಅರೆಯು, ೪೧) ಭಾಗಿಸು.

ಈ ಎಲ್ಲ ಅರ್ಥಗಳಿಗೆ ಸರಿಯಾಗಿ ಪ್ರಯೋಗಗಳನ್ನು ವಿವಿಧ ಗ್ರಂಥಗಳಿಂದ ಕೊಡಲಾಗಿದೆ.

ಶಬ್ದಾರ್ಥವೈಶಾಲ್ಯದ ದೃಷ್ಟಿಯಿಂದ ಇಷ್ಟು ಪರಿಪೂರ್ಣವಾದ ನಿಘಂಟುಗಳು ಸಿಗುವುದು ವಿರಳವಾದರೂ ಸಾಹಿತ್ಯ ಪರಿಷತ್ತಿನ ನಿಘಂಟು ಸಂಪುಟಗಳಲ್ಲಿ ನ್ಯೂನತೆ-ಗಳಿಲ್ಲ ಎಂದು ಹೇಳಲಿಕ್ಕಾಗುವುದಿಲ್ಲ. ಅಂತಾರಾಷ್ಟ್ರೀಯ ಮಟ್ಟದ ಬಳಕೆದಾರರಿಗಾಗಿ ಧ್ವನಿಲಿಪಿ(ಪರಿಷ್ಕೃತ ರೋಮನ್ ಲಿಪಿ)ಯಲ್ಲಿ ಉಲ್ಲೇಖಿಸಿ ಕನ್ನಡದಲ್ಲಿ ಅರ್ಥ ಕೊಡುವುದರ ಜೊತೆ ಆಂಗ್ಲಭಾಷೆಯಲ್ಲಿಯೂ ಅರ್ಥ ಕೊಡದಿರುವುದರಿಂದ ಕನ್ನಡೇತರರಿಗೆ ಈ ನಿಘಂಟು ಉಪಯುಕ್ತವಾಗುವುದಿಲ್ಲ ಎನ್ನಬೇಕಾಗುತ್ತದೆ. ಸಾಮಾನ್ಯವಾಗಿ ಸಾಹಿತ್ಯಗ್ರಂಥಗಳಲ್ಲಿ ಬರುವ ಶಬ್ದರೂಪಗಳು ಮಾತ್ರ ಇದರಲ್ಲಿ ಪ್ರವೇಶ ಪಡೆದಿವೆ. ಉಪಭಾಷೆಗಳಲ್ಲಿ ಆಡುನುಡಿಗಳಲ್ಲಿ ಬಳಕೆಯಲ್ಲಿರುವ ರೂಪಗಳು ಇಲ್ಲದಿರುವುದೂ ಒಂದು ಕೊರತೆಯೇ. ಜ್ಞಾತಿಪದಗಳ ಉಲ್ಲೇಖದಲ್ಲಿಯೂ ದೋಷ-ವಿದೆ. ಕನ್ನಡ ಭಾಷೆಯಲ್ಲಿಲ್ಲದ ಎಷ್ಟೋ ಧ್ವನಿಗಳು ಇತರ ಸಹೋದರ ಭಾಷೆಗಳಲ್ಲಿದೆ. ಅವುಗಳನ್ನು ಕನ್ನಡ ಲಿಪಿಯಲ್ಲಿ ಬರೆಯುವಾಗ ಸಾಕಷ್ಟು ತೊಂದರೆಗಳಾಗುತ್ತವೆ. ಹೀಗಾಗಿ ಈ ಉಲ್ಲೇಖಗಳು ದೋಷಪೂರ್ಣವಾಗಿವೆ.

ಆದರೆ ಈ ನ್ಯೂನತೆಗೆ ಕಾರಣ ನಿಘಂಟು ಪ್ರಾರಂಭವಾದಾಗ ಹಾಕಿಕೊಂಡ ಧ್ಯೇಯ-ಧೋರಣೆಗಳು. ಹೀಗಾಗಿ ವೆಂಕಟಸುಬ್ಬಯ್ಯನವರಿಗೆ ಈ ಕಟ್ಟುಪಾಡುಗಳನ್ನು ಉಲ್ಲಂಘಿಸಿ ಅದರಿಂದ ಹೊರಗೆ ಹೋಗಲಾಗಲಿಲ್ಲ. ಜಿ. ವಿ. ಅವರು ಈ ಲೋಪದೋಷಗಳ ನಿವಾರಣೆಗೆ ಸಮರ್ಥರಾದರೂ ಹಾಗೆ ಮಾಡಲಿಕ್ಕಾಗಲಿಲ್ಲ. ಆಡುನುಡಿಗಳಲ್ಲಿ ಬರುವ ಪದಗಳು ಭಾಷಾವೈಜ್ಞಾನಿಕ ದೃಷ್ಟಿಯಿಂದ ಎಷ್ಟು ಮುಖ್ಯವಾದರೂ ಆರ್ಥಿಕ ಸಂಪನ್ಮೂಲದ ಕೊರತೆ, ಮಾನವ ಸಂಪನ್ಮೂಲದ ಕೊರತೆ ಮುಂತಾದುವುಗಳಿಂದ ಕಾರ್ಯಗತ ಮಾಡಲಿಕ್ಕಾಗಲಿಲ್ಲ. ಉಪಭಾಷಾ ಸರ್ವೇಕ್ಷಣೆ ನಡೆಸಬೇಕಿದ್ದರೆ ಕೆಲವು ದಶಕಗಳಷ್ಟು ಕಾಲ ಶ್ರಮಿಸಬೇಕಾಗಿ ಬರುತ್ತಿತ್ತು.

ಇಂಗ್ಲಿಷ್-ಕನ್ನಡ ನಿಘಂಟು, ಕನ್ನಡ ಕ್ಲಿಷ್ಟಪದಕೋಶ, ಮುದ್ದಣ ಭಂಡಾರ (೨ ಸಂಪುಟಗಳು), ಇಗೋ ಕನ್ನಡ (೩ ಸಂಪುಟಗಳು), ಎರವಲು ಪದಕೋಶ ಮುಂತಾದ ಅಮೂಲ್ಯರತ್ನಗಳನ್ನು ಕನ್ನಡ ಸಾರಸ್ವತಲೋಕಕ್ಕೆ ಅರ್ಪಿಸಿದ ಪ್ರೊ. ವೆಂಕಟಸುಬ್ಬಯ್ಯನವರು ಈ ಎಲ್ಲ ನ್ಯೂನತೆಗಳನ್ನು ಪರಿಹರಿಸಲಿಕ್ಕೆ ಸಮರ್ಥರೇ ಆಗಿದ್ದರು. ಆದರೆ ಪ್ರಾರಂಭದಲ್ಲಿ ಅಂಗೀಕರಿಸಿದ ಧ್ಯೇಯ ಧೋರಣೆ ನಿಯಮಾವಳಿ-

ಗಳ ಗಡಿಮೀರಿ ಹೋಗಲಿಕ್ಕಾಗಲಿಲ್ಲವೆಂಬುದರಿಂದಲೇ ಆ ಚೌಕಟ್ಟಿನಿಂದ ಹೊರ ಬಂದು ಸಾಮಾಜಿಕ ನಿಘಂಟು ನಿರ್ಮಾಣ ಮಾಡಿದರು. ಇಗೋ ಕನ್ನಡ ಮಾಲಿಕೆಯಲ್ಲಂತೂ ಶಬ್ದಾರ್ಥಗಳ ಆಳವಾದ ವಿವೇಚನೆ ವಿಶ್ಲೇಷಣೆಗಳನ್ನು ಮಾಡಿ ವಿದ್ವಲ್ಲೋಕದಲ್ಲಿ ಅಸಾಮಾನ್ಯವಾದ ಮನ್ನಣೆ ಗಳಿಸಿದ ಜಿ.ವಿ. ಅವರು ನಿಘಂಟಿನ ಪರಿಷ್ಕೃತ ರೂಪವನ್ನು ಸಿದ್ಧಪಡಿಸಲು ಮುಂದಿನ ಪೀಳಿಗೆಯ ಸಂಶೋಧಕರಿಗೆ ಸರಿಯಾದ ಮಾರ್ಗದರ್ಶನ ಮಾಡಲು ಯೋಗ್ಯರಾಗಿದ್ದಾರೆ. ಶತಾಯುಷಿಗಳಾಗ-ಲಿರುವ ಅವರು ಈ ಕೆಲಸಕ್ಕೆ ಅತ್ಯಂತ ಸಮರ್ಥರಾಗಿದ್ದಾರೆ. ಈ ಮಹಾಸಾಧಕರಿಗೆ ನಮೋ ಎನ್ನೋಣ.



---

ಭಾಷೆಯ ಮೇಲೆ ಸಮಕಾಲದ ಸಾಮಾಜಿಕ, ವೈಜ್ಞಾನಿಕ, ರಾಜಕೀಯ, ಒತ್ತಡಗಳು ಬಿದ್ದೇ ಬೀಳುತ್ತವೆ. ಇದರ ಫಲವಾಗಿ ಭಾಷೆಯ ಸ್ವರೂಪದಲ್ಲಿ ಬದಲಾವಣೆ ಅನಿವಾರ್ಯ. ಇಂತಹ ಸಂದರ್ಭದಲ್ಲಿ ಕೆಲವೊಮ್ಮೆ ನಿರ್ದಿಷ್ಟ ಭಾಷೆಯೊಂದರ ಸ್ವರೂಪ-ಜಾಯಮಾನಕ್ಕೆ ಮೀರಿ ಅದು ಬೆಳೆಯುವುದುಂಟು. ಆಗ ಕೋಶಕಾರ ಅವುಗಳನ್ನೆಲ್ಲ ದಾಖಲಿಸಿಕೊಂಡು ಅಂಥ ಬದಲಾವಣೆಯ ಸಾಮಾಜಿಕ ಸನ್ನಿವೇಶಗಳನ್ನು ವಿವರಿಸಬೇಕಾಗುತ್ತದೆ. ಭಾಷೆ ಬೆಳೆಯಬೇಕಾದರೆ ಸ್ವೀಕರಣ ಭಾಷೆಯಾಗಬೇಕು. ಹೊರಗಿನ ಪದ-ಗಳನ್ನು ಅರಗಿಸಿಕೊಳ್ಳುವ ಸಂದರ್ಭದಲ್ಲಿ ಭಾಷಾಂತರ ಮಾಡಿಕೊಳ್ಳ-ಬೇಕಾಗಿಲ್ಲ. ವೈಜ್ಞಾನಿಕ/ತಾಂತ್ರಿಕ ಪದಕೋಶಗಳನ್ನು ನೇರವಾಗಿ ಸ್ವೀಕರಿಸಬೇಕು. ಅಗ ಭಾಷೆ ಶ್ರೀಮಂತವಾಗುತ್ತದೆ. ಜೀವಂತವಾಗುತ್ತದೆ.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಐ. ಬಿ.ಎಚ್. ಪ್ರಕಾಶನದ ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು

ಡಾ. ಎನ್. ತಿರುಮಲೇಶ್ವರ ಭಟ್

ಕನ್ನಡ ಭಾಷಾಮೂಲವಾಗಿರುವ ದ್ವಿಭಾಷಾನಿಘಂಟುಗಳು ಇಲ್ಲವೇ ಇಲ್ಲವೆಂಬಷ್ಟು ಕಡಿಮೆ. ಕನ್ನಡದ ಶಬ್ದಗಳಿಗೆ ಕನ್ನಡದಲ್ಲೂ, ಇಂಗ್ಲಿಷಿನಲ್ಲೂ ಅರ್ಥ ನೀಡುವ ಮೊದಲ ಪ್ರಯತ್ನವೇ ಐ.ಬಿ.ಎಚ್. ಪ್ರಕಾಶನದ ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು ಎಂದು ಇದನ್ನು ಸಂಪಾದಿಸಿದ ಪ್ರೊ. ಜಿ. ವೆಂಕಟಸುಬ್ಬಯ್ಯ, ಪ್ರೊ. ಎಲ್. ಎಸ್. ಶೇಷಗಿರಿ ರಾವ್, ಪ್ರೊ. ಎಚ್. ಕೆ. ರಾಮಚಂದ್ರಮೂರ್ತಿ ಅವರನ್ನೊಳಗೊಂಡ ಸಮಿತಿಯ ಮುನ್ನುಡಿ 'ಮೊದಲ ಮಾತಿ'ನಿಂದ ತಿಳಿಯುತ್ತದೆ. 1981ರಲ್ಲಿ ಮೊದಲು ಪ್ರಕಟವಾದ ಈ ನಿಘಂಟು 2000 ಕಾಲಕ್ಕೆ ೧೧ ಮರುಮುದ್ರಣಗಳನ್ನು, 2000ದಿಂದ 2009ರ ವರೆಗೆ ಮತ್ತೆ ಆರು ಮರುಮುದ್ರಣಗಳನ್ನು ಕಂಡಿದೆ–ಯೆಂಬುದು ಇದರ ಅನನ್ಯತೆಗೂ ಉಪಯುಕ್ತತೆಗೂ ಗುಣಾತಿಯಶಕ್ಕೂ ಸಾಕ್ಷಿ.

ಕನ್ನಡ ಶಬ್ದಗಳಿಗೆ ಇಂಗ್ಲಿಷಿನಲ್ಲಿ ಅರ್ಥಕೊಟ್ಟು ಕನ್ನಡ ಕಲಿಯುವ ಅಥವಾ ಕನ್ನಡ ಪತ್ರಗಳನ್ನು ಇಂಗ್ಲಿಷಿಗೆ ಅನುವಾದ ಮಾಡುವ ಪಾಶ್ಚಾತ್ಯ–ದೇಶೀಯ ವಿದ್ವಾಂಸರಿಗೆ ಅನುಕೂಲತೆಗಳನ್ನು ಮೊದಲಾಗಿ ಮಾಡಿಕೊಟ್ಟವರು ಜರ್ಮನ್ ವಿದ್ವಾಂಸ ರೆ. ಫಾ. ಕಿಟ್ಟೆಲ್ ಅವರು. ಅವರ ಕನ್ನಡ ಇಂಗ್ಲಿಷ್ ನಿಘಂಟನ್ನು ಮೀರಿಸುವ ಅಥವಾ ಸರಿಗಟ್ಟುವ ಬೇರೆ ಕನ್ನಡ ನಿಘಂಟು ಇನ್ನೂ ರಚಿತವಾಗಿಲ್ಲ ಎಂದರೆ ನಿಘಂಟು ರಚನಾಕಾರ್ಯದಲ್ಲಿ ಸಾಮಾನ್ಯವಾಗಿ ನಾವೆಷ್ಟು ಅನಾಸಕ್ತ–ರೆಂಬುದನ್ನೂ, ಅದರಿಂದಾಗಿ ಈ ಕ್ಷೇತ್ರದಲ್ಲಿ ಎಷ್ಟು ಹಿಂದುಳಿದಿದ್ದೇವೆಂಬುದನ್ನೂ ಎತ್ತಿತೋರಿಸುತ್ತದೆ. ಪ್ರೊ. ವೆಂಕಟಸುಬ್ಬಯ್ಯನವರಂತಹ ನಿಘಂಟುರಚನೆಯಲ್ಲಿ ಆಸಕ್ತರೂ ಪರಿಣತರೂ ವಿರಳರೆಂಬುದನ್ನು ಕೆಲವೇ ಸಂಖ್ಯೆಯಲ್ಲಿರುವ ನಿಘಂಟುಗಳು ಸಾರಿಹೇಳುತ್ತವೆ.

ಮೇಲೆ ಉಲ್ಲೇಖಿಸಿದ ಮೊದಲ ಮಾತಿನಲ್ಲಿ ಹೇಳಿದಂತೆ ಕನ್ನಡ – ಕನ್ನಡ – ಇಂಗ್ಲಿಷ್ ನಿಘಂಟು ಎರಡು ರೀತಿಯ ಓದುಗರಿಗೆ ಉಪಯುಕ್ತವಾಗಿದೆ. ಮೊದಲನೆಯ ವರ್ಗದ ಓದುಗರು ಕನ್ನಡ ಶಬ್ದಗಳ ಅರ್ಥ, ವಿವರಣೆ, ಅಥವಾ ಕನ್ನಡ ಪದಗಳಿಗೆ ಪರ್ಯಾಯ ಪದಗಳನ್ನು ಬಯಸುವವರು; ಇನ್ನೊಂದು ವರ್ಗದ ಓದುಗರೆಂದರೆ

ಕನ್ನಡ ಪಠ್ಯಗಳನ್ನು ಬೋಧಿಸುವ ಅಗತ್ಯ ಬೀಳಬಹುದಾದ ಅನ್ಯ ಭಾಷಾಶಿಕ್ಷಕರು ಅಥವಾ ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರ ಮಾಡಬೇಕಾದ ವಿದ್ವಾಂಸರು. ಈ ಇಬ್ಬರ ಅಗತ್ಯಗಳು ಬೇರೆ ಬೇರೆ, ಅವನ್ನು ಪೂರೈಸಬೇಕಾದ ವಿಧಾನಗಳೂ ಬೇರೆ ಬೇರೆ. ಅವರೆಡು ಉದ್ದೇಶಗಳನ್ನೂ ಒಂದೇ ನಿಘಂಟನಲ್ಲಿ ಈಡೇರಿಸಲು ಪ್ರಯತ್ನಿಸುವ ವಿಶಿಷ್ಟನಿಘಂಟು ಈ ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು.

ಕನ್ನಡ ಶಬ್ದಗಳಿಗೆ ಕನ್ನಡದಲ್ಲಿ ವಿವರಣೆ ಬಯಸುವ ಜನವರ್ಗ ಯಾವುದಿರಬಹುದು ಎಂದು ವಿವೇಚಿಸುವುದು ತುಂಬ ಸುಲಭವಲ್ಲ. ಬಹುಶಃ ವಾರ್ತಾ ಪತ್ರಿಕೆಗಳನ್ನು, ಮೆಗಝಿನ್‌ಗಳನ್ನಷ್ಟೇ ಓದುವ ಓದುಗ, ನಿಘಂಟಿಗೆ ಶರಣು ಹೋಗುವ ಪ್ರಮೇಯ ಬರಲಾರದು. ಹಾಗೆಯೆ ಸಾಮಾನ್ಯ ಕತೆಕಾದಂಬರಿಗಳನ್ನು ಓದುವ ಕನ್ನಡ ಮನೆಮಾತಾಗಿ ಉಳ್ಳ ಓದುಗನಿಗೂ ನಿಘಂಟಿನ ಅಗತ್ಯ ಬೀಳಲಾರದು. ನಿಘಂಟಿನ ಮುಖ್ಯ ಅಗತ್ಯ ಬೀಳುವುದು ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ, ಗ್ರಂಥರಚನಾಕಾರರಿಗೆ, ಸಂಶೋಧಕರಿಗೆ. ಈ ಬಗೆಯ ಓದುಗರಿಗೆ ಮಿತ ಸಂಖ್ಯೆಯ ಸಾಮಾನ್ಯ ಬಳಕೆಯ ಶಬ್ದಗಳನ್ನಷ್ಟೇ ಒಳಗೊಂಡ ನಿಘಂಟು ಹೆಚ್ಚು ಪ್ರಯೋಜನ–ಕಾರಿಯಾಗದು. ವಿದ್ಯಾರ್ಥಿಗಳು ಓದುವ ಪಠ್ಯಗಳಲ್ಲಿ ಹಳಗನ್ನಡ ನಡುಗನ್ನಡ ಬರಹಗಳು ಸಾಮಾನ್ಯವಾಗಿರುವುದರಿಂದ ಈ ಬಗೆಯ ಪಠ್ಯಗಳಲ್ಲಿ ಬರುವ ಶಬ್ದಗಳನ್ನು ನಿಘಂಟಿನಲ್ಲಿ ನಮೂದಿಸುವುದು ಅಗತ್ಯವಾಗುತ್ತದೆ. ಅಲ್ಲದೆ ನಮ್ಮ ಕನ್ನಡ ಗ್ರಂಥಗಳಲ್ಲಿ ಹೇರಳವಾಗಿ ಸಂಸ್ಕೃತಮೂಲದ ಶಬ್ದಗಳೂ, ಸಂಸ್ಕೃತಶಬ್ದಗಳೂ ಬಳಕೆಯಾಗಿರುವುದರಿಂದ ಈ ಶಬ್ದಗಳೂ ನಿಘಂಟಿನಲ್ಲಿ ಒಳಗೊಂಡಿರುವುದು ಅಗತ್ಯ. ಈ ಅಗತ್ಯಗಳನ್ನು ಈ ನಿಘಂಟು ಲಕ್ಷ್ಯದಲ್ಲಿಟ್ಟುಕೊಂಡಿದೆಯೆಂಬುದು ಸ್ಪಷ್ಟ. ಶಬ್ದಗಳು ಯಾವ ಮೂಲದವೆಂಬುದನ್ನು ಈ ನಿಘಂಟಿನಲ್ಲಿ ಪ್ರತ್ಯೇಕವಾಗಿ ನಮೂದಿಸಲಾಗಿಲ್ಲ–ವಾದರೂ ಸಂಸ್ಕೃತಮೂಲದ ಬಹುಸಂಖ್ಯೆಯ ಶಬ್ದಗಳು ಇಲ್ಲಿ ಒಳಗೊಂಡಿವೆ. ಇತರ ಭಾಷೆಗಳಿಂದ ಎರವಲು ಪಡೆದ ಶಬ್ದಗಳೂ ಇಲ್ಲಿ ನಮೂದಾಗಿವೆ. ಈ ದೃಷ್ಟಿಯಲ್ಲಿ ಬಹು ಸಮರ್ಪಕವಾಗಿ ಈ ನಿಘಂಟು ರಚಿತವಾಗಿದೆ.

ಕನ್ನಡದ ಎಲ್ಲ ಸಾಮಾನ್ಯ ನಿಘಂಟುಗಳಂತೆ ಇದೂ ಮುಖ್ಯವಾಗಿ ಗ್ರಂಥಾವ–ಲೋಕನದಿಂದ ಸಂಗ್ರಹಿಸಲಾದ ಪದಗಳಿಂದ ಒಂದು ನಿರ್ದಿಷ್ಟ ಪರಿಧಿಯೊಳಗೆ ಆಯ್ಕೆಗೊಂಡ ಪದಗಳ ಆಧಾರದ ಮೇಲೆ ರಚಿತವಾದ ನಿಘಂಟು. ನಿಜವಾದ ನಿಘಂಟು ಜನರಾಡುವ ಮಾತನ್ನು ದಾಖಲಿಸಿಕೊಂಡು ಸಿದ್ಧವಾಗಬೇಕು. ತುಳು–ವಿನಂತಹ ಸೀಮಿತಕ್ಷೇತ್ರದಲ್ಲಿ ಆಡುವ ಮಾತನ್ನು ಕ್ಷೇತ್ರಕಾರ್ಯದ ಮೂಲಕ ದಾಖಲಿಸಿ ನಿಘಂಟು ರಚಿಸಲು ತುಳುನಿಘಂಟು ಯೋಜನೆಗೆ ೧೮ ವರ್ಷಗಳೇ ಬೇಕಾದುವು. ಈ ಅವಧಿಯಲ್ಲಿ ತುಳುವಿನಲ್ಲಿ ಅನೇಕ ಹೊಸ ಶಬ್ದಗಳು ಸೇರಿಕೊಂಡಿರುವ ಸಾಧ್ಯತೆಯಿದೆ. ಕನ್ನಡ ಭಾಷೆಗೂ ಇಂತಹ ಒಂದು ನಿಘಂಟು ಸಿದ್ಧವಾದರೆ ಎಂಬುದು ದೊಡ್ಡ ಕನಸಿನ ಮಾತೇ ಆಗುತ್ತದೆ. ಕನ್ನಡದಲ್ಲಿ ಆಡುನುಡಿಯ ಪ್ರಾದೇಶಿಕ ಪ್ರಭೇದಗಳು ಅಸಂಖ್ಯವಾಗಿದ್ದು ಈ ಕಾರಣಕ್ಕಾಗಿ ಯಾವುದೇ ಪ್ರಾದೇಶಿಕ ಮಿತಿಯೊಳಗೆ ಕಂಡುಬರುವ ಕೆಲವು ಶಬ್ದಗಳು ಇನ್ನೊಂದು

ಪ್ರಾದೇಶಿಕ ಮಿತಿಯಲ್ಲಿ ರಚಿತವಾದ ನಿಘಂಟುಗಳಲ್ಲಿ ಕಾಣಿಸದೇ ಹೋಗಬಹುದು. ಇದು ಯಾರ ಪ್ರಮಾದವೂ ಅಲ್ಲ. ಭಾಷೆಯ ಸ್ವಭಾವವೇ ಈ ಮಿತಿಗೆ ಕಾರಣವಾಗುತ್ತದೆ. ಇಂಗ್ಲಿಷ್ ಭಾಷೆಯ ಖ್ಯಾತ ನಿಘಂಟುರಚನಾಕಾರ ಡಾ. ಜಾನ್‌ಸನ್ ಹೇಳುವ ಮಾತು ಅಕ್ಷರಶಃ ದಿಟ! "ನಿಘಂಟುಗಳನ್ನು ಗಡಿಯಾರಗಳಿಗೆ ಹೋಲಿಸಬಹುದು. ಅತ್ಯಂತ ಅಬದ್ಧವಾದ ನಿಘಂಟು ಕೂಡ ಯಾವ ನಿಘಂಟುಗಳೂ ಇಲ್ಲದಿರುವುದಕ್ಕಿಂತ ಮೇಲು. ಅತ್ಯಂತ ಶ್ರೇಷ್ಠವಾದ ನಿಘಂಟು ಕೂಡ ತೋರಿಸುವ ಅರ್ಥ ಸರಿ, ತಪ್ಪು ಎಂದು ಹೇಳಲಾಗುವುದಿಲ್ಲ". ಪ್ರೊ. ವೆಂಕಟಸುಬ್ಬಯ್ಯನವರ ಮುಖ್ಯ ಸಂಪಾದಕತ್ವದಲ್ಲಿ ರಚಿತವಾದ ಈ ಸಣ್ಣ ನಿಘಂಟಿನಲ್ಲಿ ಕೆಲವು ಶಬ್ದಗಳು ಬಾರದೇ ಹೋದರೆ ಅದು ಚೋದ್ಯವೇನಲ್ಲ. ಮುಖ್ಯವಾಗಿ ಕರಾವಳಿ ಕನ್ನಡ ಜಿಲ್ಲೆಗಳಲ್ಲಿ ನಮಗೆ ಪರಿಚಿತವಾಗಿರುವ ಸಾಮಾನ್ಯ ಶಬ್ದಗಳು ಸಮಾನಾರ್ಥವಾಗಿ ಕೆಲವೆಡೆ ನಮೂದಾಗಿಲ್ಲ. 'ಅರಳ್' ಎಂಬುದು pop-corn ಎಂಬರ್ಥದಲ್ಲಿ ನಾಮಪದವಾಗಿ ನಮೂದಾಗಿದೆ. ನಮಗೆ ಪರಿಚಿತವಾಗಿರುವ ಕ್ರಿಯಾಪದ 'ಅರಳು' ಹೂವು 'ಅರಳುವುದು' ಎಂಬರ್ಥದ ನಮೂದು ಕಾಣುವುದಿಲ್ಲ. 'ಹೆರಳು' ಎಂಬ ಶಬ್ದಕ್ಕೆ 'ಜಡೆ' ಎಂಬುದು ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಜನಬಳಕೆಯಲ್ಲಿರುವ ಶಬ್ದ. ನಿಘಂಟಿನಲ್ಲಿ ಇದು ಸಮಾನಾರ್ಥಕ ಪದವಾಗಿ ಕಾಣಸಿಗುವುದಿಲ್ಲ. 'ಒಸರು' ಎಂಬ ಶಬ್ದಕ್ಕೆ ಸಮಾನಾರ್ಥಕವಾಗಿ ನಮ್ಮಲ್ಲಿ ಪ್ರಚಲಿತವಿರುವ 'ಒರತೆ' ಎಂಬ ಶಬ್ದ ಇಲ್ಲಿ ನಮೂದಾಗಿಲ್ಲ. ಆದರೆ ಪ್ರೊ. ವೆಂಕಟಸುಬ್ಬಯ್ಯನವರದೇ ಇನ್ನೊಂದು ನಿಘಂಟು ಕ್ಲಿಷ್ಟಪದಕೋಶದಲ್ಲಿ 'ಒರತೆ' ನಮೂದಾಗಿದೆ. ಒಂದು ಪ್ರದೇಶದಲ್ಲಿ ಸಾಮಾನ್ಯವಾಗಿ ಪರಿಚಿತವಾದ ಶಬ್ದ ಇನ್ನೊಂದು ಪ್ರದೇಶದಲ್ಲಿ ಕ್ಲಿಷ್ಟಪದವಾಗುವುದು ಸಾಮಾನ್ಯ. ಈ ದೃಷ್ಟಿಯನ್ನಿಟ್ಟುಕೊಂಡೇ ವಿಸ್ತಾರವಾದ ಓದಿನ ಹರಹು ಉಳ್ಳ ಅಭ್ಯಾಸಿಗಳ ಉಪಯೋಗಕ್ಕಾಗಿ ಕ್ಲಿಷ್ಟಪದಕೋಶದ ರಚನೆಯಾಗಿದೆ. ಎರಡೂ ನಿಘಂಟುಗಳು ಜತೆಯಾಗಿಯೇ ಇರುವುದು ಓದುಗರ ದೃಷ್ಟಿಯಿಂದ ಹೆಚ್ಚು ಉಪಯೋಗಕರ.

ನಿಘಂಟಿನಲ್ಲಿ ಪದಗಳ ಅರ್ಥ ನೀಡುವಾಗ ಸಮಾನಾರ್ಥಕ ಪದಗಳನ್ನಷ್ಟೇ ನೀಡಿದರೆ ಸಾಕೆ? ಅಥವಾ ಅವುಗಳನ್ನು ನಿರ್ವಚಿಸಬೇಕೆ? ಈ ನಿಟ್ಟಿನಲ್ಲಿ ಈ ನಿಘಂಟಿನಲ್ಲಿ ಒಂದೇ ತರದ ದೃಷ್ಟಿಕೋನ ಕಾಣುವುದಿಲ್ಲ. 'ಅವಲಕ್ಕಿ' ಎಂಬ ಶಬ್ದಕ್ಕೆ "*ಭತ್ತವನ್ನು ಕುದಿಯುವ ನೀರಿನಲ್ಲಿ ಸ್ವಲ್ಪ ಮಾತ್ರ ಬೇಯಿಸಿ, ಸೋರು ಹಾಕಿ (ಸೋಸಿ?) ಹುರಿದು ಕೂಡಲೆ ಒರಳಲ್ಲಿ ಕುಟ್ಟುವುದರಿಂದ ಒದಗುವ ಚಪ್ಪಟೆಯಾದ ಅಕ್ಕಿ*' ಎಂಬ ದೀರ್ಘವಿವರಣೆ ನೀಡಿದೆ. 'ಅವಲಕ್ಕಿ' ಸಾಧಾರಣವಾಗಿ ಎಲ್ಲರಿಗೂ ಪರಿಚಿತವಾದ ಪದ. 'ಕಪ್ಪೆ' ಎಂಬ ಶಬ್ದವೂ ಸಾಧಾರಣ ಎಲ್ಲರಿಗೂ ಪರಿಚಿತವಾದ ಪದ. ಅದಕ್ಕೆ ಅರ್ಥವಾಗಿ 'ಮಂಡೂಕ' ಎಂದು ಬರೆದರೆ ಸಮಾನಾರ್ಥಕ ಪದವೊಂದು ಸಿಕ್ಕಿದಂತಾಗುತ್ತದೆ ವಿನಾ ಶಬ್ದದ ಅರ್ಥ ನೀಡಿದಂತಾಗುವುದಿಲ್ಲ. 'ಅವಲಕ್ಕಿ'ಗೆ ವಿವರಣೆ ಮೂಲಕ ಅರ್ಥ ನೀಡಬೇಕಾದರೆ 'ಕಪ್ಪೆ'ಯನ್ನೂ ಅದೇ ರೀತಿ ನಿರ್ವಚಿಸಬೇಕೇನೋ. ಇಂಥ ಸಂದಿಗ್ಧಗಳು ನಿಘಂಟುಕಾರನಿಗೆ ಎದುರಾಗುವುದು ಸ್ವಾಭಾವಿಕ.

ಇನ್ನೊಂದು ಸಮಸ್ಯಾತ್ಮಕವಾದ ಅಂಶ ಪಾರಿಭಾಷಿಕ ಪದಗಳ ಅರ್ಥ ವಿವರಣೆ ನೀಡುವುದು. 'ನಿಘಂಟು' ಎಂಬುದು ಒಂದು ಪರಾಮರ್ಶನಗ್ರಂಥವಾಗಿ ಅರ್ಥವಿವರಣೆಯಲ್ಲಿ ನಿಷ್ಕೃಷ್ಟತೆಯನ್ನು ಅಪೇಕ್ಷಿಸುವುದೇನೋ ಸರಿ. ಆದರೆ 'ಕರ್ತೃಪದ' ವನ್ನು ವ್ಯಾಕರಣಕ್ಕೆ ಸಂಬಂಧಿಸಿದ ಶಬ್ದವೆಂದು ಹೇಳಿ 'ಕರ್ತೃವಾಚಕವಾದ ಪದವೆಂದೋ' ಕರ್ಮಣಿಪ್ರಯೋಗವನ್ನು 'ಕರ್ಮರೂಪಾರ್ಥವ ಆಖ್ಯಾತ ಅಥವಾ ಕೃತ್ತ್ರತ್ಯಯವನ್ನುಳ್ಳ ಪ್ರಯೋಗ'ವೆಂದೋ ಅರ್ಥ ಕೊಟ್ಟರೆ ಅರ್ಥವಾಗುವುದಿಲ್ಲ. ಇಲ್ಲಿ ಉದಾಹರಣೆಗಳಿಂದ ವಿವರಿಸುವುದೇ ಲೇಸು.

ಇನ್ನೊಂದು ಸಮಸ್ಯೆ ಒಂದೇ ಪದಕ್ಕೆ ಹಲವಾರು ಅರ್ಥಗಳಿರುವಾಗ ಯಾವ ಅರ್ಥವನ್ನು ಮೊದಲು ಸೂಚಿಸಬೇಕು, ಯಾವ ಅರ್ಥವನ್ನು ಆ ಮೇಲೆ ಸೂಚಿಸಬಹುದು ಎಂಬುದು. 'ಸ್ನೇಹ' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ 'ಎಣ್ಣೆ' ಎಂದರ್ಥವಿರುವುದಾದರೂ ಕನ್ನಡ ಕಾವ್ಯಗಳಲ್ಲಿ ಈ ಅರ್ಥದಲ್ಲಿ ಪ್ರಯೋಗವಾಗಿರಬಹುದಾದರೂ, ಬಳಕೆಯಲ್ಲಿ 'ಮಿತ್ರತ್ವ' ಎಂಬುದು ಕೂಡಲೇ ಹೊಳೆಯುವ ಅರ್ಥ. ಬಹುಶಃ ಈ ಅರ್ಥದಲ್ಲೇ ಈ ಪದ ಹೆಚ್ಚು ಸಲ ಪ್ರಯೋಗವಾಗುತ್ತದೆ. ಕ್ವಚಿತ್ತಾಗಿ ಬರುವ 'ಎಣ್ಣೆ' ಎಂಬ ಅರ್ಥವನ್ನು ಮೊದಲು ಕೊಟ್ಟು ಹೆಚ್ಚಿನ ಸಂದರ್ಭಗಳಲ್ಲಿ ಸಂವಾದಿಯಾಗಿರಬಹುದಾದ 'ಮಿತ್ರತ್ವ' ಎಂಬ ಅರ್ಥಕ್ಕಾಗಿ ಮುಂದಿನ ನಮೂದುಗಳಲ್ಲಿ ಹುಡುಕಬೇಕಾದ ಪ್ರಮೇಯ ಸಾಧುವಲ್ಲ ಎನಿಸುತ್ತದೆ. (ಈ ಶಬ್ದಕ್ಕೆ ಸಂವಾದಿಯಾಗಿ ಕೊಟ್ಟ ಇಂಗ್ಲಿಷ್ ಪದದಲ್ಲಿ ಅಕ್ಷರದೋಷವಿದೆ. Comrderie ಎಂಬುದು Cameraderie (ಅಬ್ಬಾ ಇಂಗ್ಲಿಷೆ!) ಎಂದಾಗಬೇಕು.)

ಹಾಗೆಯೇ 'ಸ್ಪಂದಿಸು' ಎಂಬ ಶಬ್ದವು ಅಲಂಕಾರಿಕವಾಗಿ ಉಪಯೋಗಿಸಲ್ಪಟ್ಟಾಗ ಈಗಿನ ಪರಿಭಾಷೆಯಲ್ಲಿ respond ಎಂಬ ಇಂಗ್ಲಿಷ್ ಪದಕ್ಕೆ ಸಮಾನಾರ್ಥಕವಾಗಿ ಬಳಕೆಗೆ ಬಂದಿರುವಾಗ 'ಅಲುಗಾಡಿಸು', 'ಕಂಪಿಸು' ಎಂಬ ವಾಚ್ಯಾರ್ಥಗಳನ್ನಷ್ಟೇ ನಮೂದಿಸಿದರೆ ಸಾಲದು ಎಂದೆನಿಸುತ್ತದೆ.

ಸರ್ವಾತ್ಮನಾ ಉತ್ಕೃಷ್ಟವಾಗಿರುವ ನಿಘಂಟಿನಲ್ಲಿ ಒಂದೆರಡು ನ್ಯೂನತೆಗಳನ್ನು ತೋರಿಸಿದರೆ ಅದು ಮುಂದಿನ ಮುದ್ರಣಗಳಲ್ಲಿ ಅವುಗಳಿಗೆ ಪರಿಹಾರ ಕಂಡುಕೊಳ್ಳಬಹುದು ಎಂಬ ಉದ್ದೇಶದಿಂದ. ಹಾಗಾಗಲಿ ಎಂಬುದು ನಮ್ಮ ಹಾರಯಿಕೆ. ನಿಘಂಟುರಚನೆ ಸುಲಭಸಾಧ್ಯವಲ್ಲ. ಅದು ತುಂಬ ಶ್ರಮವನ್ನಪೇಕ್ಷಿಸುವಂತಹದು. ಶ್ರಮವಹಿಸಿ ಸಿದ್ಧಗೊಳಿಸುವ ಈ ನಿಘಂಟು ತುಂಬ ಜನಪ್ರಿಯವೂ ಆಗಿರುವುದು ಅದರ ಹಿರಿಮೆಯನ್ನು ತೋರಿಸುತ್ತದೆ. ಮಧ್ಯಮ ಗಾತ್ರದ ಈ ನಿಘಂಟು ಇಂತಹ ಇನ್ನೂ ಕೆಲವು ನಿಘಂಟುಗಳ ರಚನೆಗೆ ಪ್ರೇರಣೆ ನೀಡುವಂತಿದೆ.



# ಇಗೋ ಕನ್ನಡ – ಸಂಪುಟ : ೧

## (ಸಾಮಾಜಿಕ ನಿಘಂಟು)

ಪಾದೆಕಲ್ಲು ನರಸಿಂಹ ಭಟ್ಟ

**ಭಾರತದಲ್ಲಿ ನಿಘಂಟು ರಚನೆ :**

'ನಿಘಂಟು' ಎಂದರೆ ಸಾಮಾನ್ಯವಾಗಿ ಶಬ್ದ-ಅರ್ಥಗಳ ಪರಸ್ಪರ ಸಂಬಂಧವನ್ನು ನಿಷ್ಕೃಷ್ಟಗೊಳಿಸುವ ಉದ್ದೇಶದಿಂದ ಮಾಡಲಾಗುವ ನಿರೂಪಣೆ. ಭಾರತ ದೇಶದ ಮಟ್ಟಿಗೆ ಹೇಳುವುದಾದರೆ, ಇಂತಹ ಪ್ರಯತ್ನ ನಡೆದುದರ ಮೊತ್ತ ಮೊದಲನೆಯ ಆಧಾರ ದೊರೆಯುವುದು ವೇದದಲ್ಲಿಯ ಶಬ್ದಗಳ ಅರ್ಥನಿರ್ಣಯ ಸಂದರ್ಭದಲ್ಲಿ. ವೇದಾರ್ಥನಿರ್ಣಯದ ಕುರಿತು ಉಪಲಬ್ಧವಾಗಿರುವ ಆದ್ಯಕೃತಿಗಳೆಂದರೆ ವೇದಾಂಗಗಳು. ಅವುಗಳಲ್ಲಿ ವೇದಶಬ್ದಗಳ ಕುರಿತು ವಿವರಣೆ ನೀಡುವ ಗ್ರಂಥವೆಂದರೆ 'ನಿರುಕ್ತವೇದಾಂಗ'. ಉಪಲಬ್ಧ ಸಂಸ್ಕರಣವೊಂದರಲ್ಲಿ ಕಾಣುವಂತೆ, ಇದು ಕಶ್ಯಪಮುನಿ ಎಂಬವನಿಂದ ರಚಿತವಾದ ನಿಘಂಟುವಿಗೆ ಯಾಸ್ಕನಿಂದ ವಿರಚಿತವಾದ ಭಾಷ್ಯ. ಮೂಲ-ವಿವರಣೆಗಳೆರಡರ ಸಂಯುಕ್ತಸ್ವರೂಪದಲ್ಲಿ ಸಂಸ್ಕರಿಸಲಾದ ಈ ಕೃತಿಯಲ್ಲಿ ಪ್ರಸ್ತುತ ಹನ್ನೆರಡು ಅಧ್ಯಾಯಗಳಿದ್ದರೆ ಅದರ ಪ್ರಸ್ತಾವನಾದಿಗಳಿಂದ ತಿಳಿಯುವಂತೆ ಇದರಲ್ಲಿ ಮೂಲ ಅಧ್ಯಾಯಗಳು ಐದು ಮಾತ್ರವಾಗಿದ್ದು ಉಳಿದುವು ವಿವರಣೆಯ ರೂಪದಲ್ಲಿ ಇದಕ್ಕೆ ಸೇರಿದಂತಹವು. ಟಿಪ್ಪಣಿ ಮೊದಲಾದುವುಗಳಲ್ಲಿ ಸೂಚಿತವಾಗಿರುವಂತೆ ಈ ಗ್ರಂಥಕ್ಕೆ ಎರಡು ಅಧ್ಯಾಯಗಳ ಪರಿಶಿಷ್ಟವೂ ಇದೆ. ಪರಂಪರೆಯ ಪ್ರಕಾರ ಯಾಸ್ಕನು ಭಾಷ್ಯಕಾರನಾಗಿದ್ದರೂ ಐತಿಹಾಸಿಕ ಕ್ರಮದಲ್ಲಿ ಯಾಸ್ಕನಿರುಕ್ತವೆಂದು ನಿರ್ದೇಶಿಸುವುದು ರೂಢಿ.

ಇದು ಮೂರು ಕಾಂಡಗಳಲ್ಲಿ ವಿಭಜಿತವಾಗಿದೆ: ೧) ನೈಘಂಟುಕ, ೨) ನೈಗಮ, ೩) ದೈವತ. ಕಾಂಡಗಳ ಹೆಸರುಗಳೇ ಅವುಗಳಲ್ಲಿಯ ವಿಷಯಗಳನ್ನು ಸೂಚಿಸುತ್ತವೆ; ಮೊದಲನೆಯ ಕಾಂಡದಲ್ಲಿ ಸಾಮಾನ್ಯಶಬ್ದಗಳ ನಿಷ್ಪತ್ತಿ ಮತ್ತು ಅರ್ಥ ವಿವೇಚನೆಗಳಿವೆ. ಎರಡನೆಯದರಲ್ಲಿ ವೇದದ ಶಬ್ದಗಳು ವಿವೇಚನೆಗೊಳಗಾಗಿವೆ. ಮೂರನೆಯದು ವೇದಾಂತರ್ಗತ ದೇವತೆಗಳಿಗೆ ಸಂಬಂಧಿಸಿದುದು. 'ನಿಘಂಟು' ಶಬ್ದವನ್ನು ಇಲ್ಲಿ 'ನಿಗಂತೃ' (ನಿರ್ಣಾಯಕ) ಎಂಬುದರ ರೂಪಾಂತರವೆಂದು ವ್ಯಾಖ್ಯಾನಿಸಲಾಗಿದೆ.

ಶಬ್ದಾರ್ಥವಿಷಯದಲ್ಲಿ ಗ್ರಂಥವಾಗಲಿ ಶಾಸ್ತ್ರವಾಗಲಿ ನಿರ್ಣಾಯಕವೆಂದೆನಿಸ-ಬೇಕಾದರೆ ಶಬ್ದಗಳಲ್ಲಾಗುವ ಪರಿವರ್ತನೆಗಳು ಮತ್ತು ತದನುಸಾರಿ ಅರ್ಥಪರಿ-ವರ್ತನೆಗಳನ್ನು ಗಮನಿಸಬೇಕು. ಆದುದರಿಂದ ನಿರುಕ್ತಶಾಸ್ತ್ರವು ಐದು ವಿಧದ ವ್ಯತ್ಯಯಗಳನ್ನು ತನ್ನ ವಿಷಯವಾಗಿಸಿಕೊಂಡಿದೆ. ಅವೆಂದರೆ: (೧) ವರ್ಣಾಗಮ = ಶಬ್ದದಲ್ಲಿರುವ ವರ್ಣಗಳಿಗೆ ಹೊಸ ವರ್ಣಗಳು ಬಂದು ಸೇರುವುದು. (೨) ವರ್ಣ-ವಿಪರ್ಯಯ = ಶಬ್ದದಲ್ಲಿರುವ ವರ್ಣಗಳು ಸ್ಥಾನಪಲ್ಲಟ ಹೊಂದುವುದು (೩) ವರ್ಣವಿಕೃತಿ = ಶಬ್ದದಲ್ಲಿರುವ ವರ್ಣಗಳು ವಿಕೃತಿಹೊಂದುವುದು (೪) ವರ್ಣನಾಶ = ಶಬ್ದದಲ್ಲಿರುವ ವರ್ಣಗಳಲ್ಲಿ ಕೆಲವು ಲೋಪಹೊಂದುವುದು (೫) ಇಂತಹ ವ್ಯತ್ಯಯಗಳುಂಟಾಗುವುದರಿಂದವಾಗಿ ಶಬ್ದಮೂಲವಾಗಿರುವ ಧಾತುವಿನಲ್ಲಿ ಅರ್ಥ ವಿಶೇಷ ಉಂಟಾಗುವುದು.

ಇಂತಹ ವ್ಯತ್ಯಯಗಳು ವ್ಯಾಕರಣದಲ್ಲಿಯೂ ಇರುವಂತಹವೇ. ವ್ಯಾಕರಣದಲ್ಲಿ ಪ್ರಕೃತಿ-ಪ್ರತ್ಯಯವಿವೇಚನೆಯು ವಿಶ್ಲೇಷಣತತ್ತ್ವವಾದರೆ ನಿರುಕ್ತದಲ್ಲಿ ಅಕ್ಷರಸಾಮ್ಯವು ಪ್ರಧಾನಸ್ಥಾನವನ್ನು ಹೊಂದುತ್ತದೆ ಎಂಬುದನ್ನು ವಿದ್ವಾಂಸರು ಗಮನಿಸಿದ್ದಾರೆ. ಅಕ್ಷರವಿವೇಚನೆಯು ಶಿಕ್ಷಾವೇದಾಂಗ - ಛಂದೋವೇದಾಂಗಗಳಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತದೆ. ಶಿಕ್ಷಾಧಾರಿತವಾದ ವೇದಪಠನಪ್ರಕಾರಗಳು ಅಕ್ಷರಪುನರಾವರ್ತನೆ ಯಂತಹದನ್ನು ಅವಲಂಬಿಸಿರುತ್ತವೆ. ಛಂದೋವಿನ್ಯಾಸವೂ ಅಕ್ಷರವಿನ್ಯಾಸ - ಮಾತ್ರಾ ವಿನ್ಯಾಸಗಳನ್ನವಲಂಬಿಸಿರುತ್ತದೆ. ಅಕ್ಷರಘಟಕವು ಭಾಷೆಯಲ್ಲಿ ಇಷ್ಟೊಂದು ಪ್ರಮುಖ ಪಾತ್ರ ವಹಿಸುವುದರಿಂದ 'ಅಮಂತ್ರಮಕ್ಷರಂ ನಾಸ್ತಿ' (ಅಕ್ಷರವು ಮಂತ್ರಸ್ವರೂಪದ್ದೇ) ಎಂಬ ಹೇಳಿಕೆಗೂ ಎಡೆಯಾಗಿದೆ.

'ಅಕ್ಷರ' ಎಂಬ ಶಬ್ದಕ್ಕೆ 'ನಾಶವಿಲ್ಲದುದು' ಎಂದರ್ಥ. ಆದುದರಿಂದ ಪರ-ತತ್ತ್ವವನ್ನು ಅಕ್ಷರವೆಂದು ನಿರ್ದೇಶಿಸಲಾಗುತ್ತದೆ. ಭಾಷೆಗೆ ಸಂಬಂಧಿಸಿದ ವ್ಯವಹಾರ-ದಲ್ಲಿ 'ಅಕ್ಷರ' ಎಂಬುದು ಸ್ಪಷ್ಟೋಚ್ಚಾರಣೆಗೆ ನಿಲುಕಬಹುದಾದವುಗಳಲ್ಲಿ ಅತಿ ಸಣ್ಣದಾದ ಭಾಷಾಘಟಕ. ಭಾಷೆಯ ಮೂಲಾಂಶಗಳಿಗೆ ಸಂಬಂಧಿಸಿದಂತೆ 'ಅಕ್ಷರ'ವೆಂದೂ 'ವರ್ಣ'ವೆಂದೂ ಎರಡು ಪದಗಳಿವೆ. ಎರಡನ್ನೂ ಪರ್ಯಾಯಪದಗಳೆಂಬಂತೆ ಸಮಾನಾರ್ಥದಲ್ಲಿ ಗ್ರಂಥಕಾರರು ಪ್ರಯೋಗಿಸಿದ್ದಿದೆ. ಇವೆರಡೂ ಸರ್ವಸಮವಾಗಿದ್ದಲ್ಲಿ ಒಂದು ಪದವು ಅವನಶ್ಯವೆಂದು ತೀರ್ಮಾನಿಸಬಹುದಾಗಿತ್ತು. ಹಾಗೆ ತೀರ್ಮಾನಿಸು-ವುದು ಸಮಂಜಸವಾಗುವುದಿಲ್ಲ. ಏಕೆಂದರೆ ಮೇಲಿಂದ ಮೇಲಿನ ದೃಷ್ಟಿಯಲ್ಲಿ ಇವೆರಡೂ ಪರ್ಯಾಯಪದಗಳೆಂಬಂತೆ ಉಪಯೋಗವಾಗುತ್ತಿದ್ದರೂ ನಿಷ್ಕೃಷ್ಟವಾಗಿ ಯೋಚಿಸಿದಾಗ ಇವೆರಡಕ್ಕೂ ಅಂತರವಿದೆ. 'ಅಕ್ಷರಮಾಲೆ' ಎಂದು ನಾವು ಇಂದಿಗೆ ನಿರ್ದೇಶಿಸುವ ಮಾಲಿಕೆಯಲ್ಲಿರುವವುಗಳೆಲ್ಲವೂ ಉಚ್ಚಾರಣಸಾಧ್ಯವಾದ ಧ್ವನಿಸಂಕೇತ-ಗಳಾದರೂ ಸ್ವರವರ್ಣಗಳಿಗಿರುವ ಸ್ಪಷ್ಟೋಚ್ಚಾರಣೆ ವ್ಯಂಜನವರ್ಣಗಳಿಗಿಲ್ಲ. ವ್ಯಂಜನ-ವರ್ಣಗಳಿಗೆ ಸ್ಪಷ್ಟೋಚ್ಚಾರಣೆ ಬರುವುದು ಅವು ಸ್ವರಗಳೊಂದಿಗೆ ಸೇರಿದಾಗ. ಆದುದರಿಂದ ನಿಷ್ಕೃಷ್ಟವಾದ ಅರ್ಥದಲ್ಲಿ ಸ್ವರವ್ಯಂಜನಗಳೆರಡೂ ವರ್ಣಪದ ನಿರ್ದೇಶನಕ್ಕೆ ಯೋಗ್ಯವೆಂದೂ ಸ್ವರಗಳು ಮಾತ್ರ ವರ್ಣ-ಅಕ್ಷರಗಳೆಂಬ ಎರಡೂ

ನಿರ್ದೇಶನಕ್ಕೆ ಯೋಗ್ಯವೆಂದೂ ವಿದ್ವಾಂಸರು ಸ್ಪಷ್ಟಪಡಿಸಿರುತ್ತಾರೆ. ಇಂತಹ ವಿವೇಚನೆಗಳೆಲ್ಲವೂ ಭಾಷೆಯ ವ್ಯಕ್ತಸ್ವರೂಪಕ್ಕೆ ಮಾತ್ರ ಸಂಬಂಧಿಸಿದವುಗಳಾಗಿದ್ದು ಈ ಸ್ವರೂಪವನ್ನು ಮೀರಿದ ಮೂರು ಅವ್ಯಕ್ತಸ್ತರಗಳು ಭಾಷೆಗೆ ಇವೆ ಎಂಬುದು ಋಷಿಪರಂಪರೆಯ ನಿಲುವು. ಈ ವ್ಯಕ್ತಸ್ವರೂಪವನ್ನು 'ವೈಖರೀ' ಎಂದೂ ಇದನ್ನು ದಾಟಿ ಇರುವ ಮೂರು ಸ್ತರಗಳನ್ನು ಅವರೋಹಣ ಕ್ರಮದಲ್ಲಿ 'ಪರಾ', 'ಪಶ್ಯಂತೀ' ಮತ್ತು 'ಮಧ್ಯಮಾ' ಎಂದೂ ನಿರ್ದೇಶಿಸಲಾಗುತ್ತದೆ. ಕೆಲವು ದಾರ್ಶನಿಕರು ಪರಾ ಎಂಬುದನ್ನು ಪ್ರತ್ಯೇಕಸ್ತರವಾಗಿ ಇಡದೆ ಪಶ್ಯಂತೀಸ್ತರದಲ್ಲಿಯೇ ಅಂತರ್ಗತಿಸಿ ಒಟ್ಟು ಮೂರು ಸ್ತರಗಳೆಂದು ಗಣಿಸಿರುವುದೂ ಇದೆ. ಸಂಖ್ಯೆಯಲ್ಲಿ ಈ ರೀತಿಯ ಭೇದವು ಕಂಡುಬಂದರೂ ಅತಿಸೂಕ್ಷ್ಮಸ್ತರವೆಂಬುದು ಎಲ್ಲಾ ದಾರ್ಶನಿಕರೂ ಇಟ್ಟುಕೊಂಡಿರುವ ಪರತತ್ತ್ವದೊಂದಿಗೆ ಸಮೀಕೃತಗೊಳ್ಳುವಂತಹದು. ಆದುದರಿಂದಲೇ ಅದು 'ಅಕ್ಷರ', ಅರ್ಥಾತ್ ಅವಿನಾಶಿ. ಈ ಅವಿನಾಶಿತ್ವವು ಸ್ಥೂಲಭಾಷಾಸ್ತರದ ಅತಿ ಸಣ್ಣ ಉಚ್ಚಾರಣ ಘಟಕದ ಮೇಲೂ ಉಪಚರಿತವಾಗಿರುವುದರಿಂದ ಭಾಷಾಧ್ಯಯನದ ಸಂದರ್ಭದಲ್ಲಿ ರೂಢವಾಗಿರುವ ಅಕ್ಷರಪದದ ಪ್ರವೇಶವಾಯಿತು. ಇಷ್ಟು ವಿವೇಚನೆಯ ಅವಶ್ಯಕತೆ ಏನೆಂದರೆ – ಋಷಿಪರಂಪರೆಯ ಪ್ರಕಾರ, ಭಾಷೆ ಎಂಬುದು ಕೇವಲ ವ್ಯವಹಾರ ಮಾಧ್ಯಮವಲ್ಲ; ಬದಲಾಗಿ ಇದರ ಅತಿ ಸಣ್ಣ ಘಟಕವನ್ನು ಅನುಭಾವಿಸಿದರೂ ಆ ಅನುಭಾವನದ ಗಮ್ಯಸ್ಥಾನವೆಂಬುದು ಪರತತ್ತ್ವ ಸಾಕ್ಷಾತ್ಕಾರ. ಈ ಕಾರಣದಿಂದ ಭಾಷಾಧ್ಯಯನವೆಂಬುದು ವಿಷಯಸಂವಹನಕ್ಕಿರುವ ಮಧ್ಯವರ್ತಿ ಮಾತ್ರ ಆಗಿರುವುದರಿಂದ ಅದುವೇ ಒಂದು ಅಧ್ಯಯನೋದ್ದೇಶವಲ್ಲ ಎಂಬ ಆಧುನಿಕಯುಗದ ನಿಲುವು ಈ ಪರಂಪರೆಗೆ ಸ್ವೀಕಾರ್ಯವಾಗುವುದಿಲ್ಲ. ಅದೂ ಒಂದು ದಾರ್ಶನಿಕಸಾಧನೆಯೇ ಆಗಿ ನಿಲ್ಲುತ್ತದೆ.

ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।
ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋ ಯತಃ ॥
– ಭರ್ತೃಹರಿ

ಭಾಷೆಯಲ್ಲಿ ಸ್ಥೂಲ–ಸೂಕ್ಷ್ಮಸ್ತರಗಳಿವೆ ಎಂಬ ಋಷಿಪರಂಪರಾಗತ ಹೇಳಿಕೆ ವ್ಯವಹಾರಪ್ರಪಂಚದ ಸಾಮಾನ್ಯಾನುಭವಕ್ಕೆ ವಿರುದ್ಧವಾದುದಲ್ಲ. ಹೇಗೆಂದರೆ – ಒಬ್ಬ ವ್ಯಕ್ತಿಯು ಒಂದು ವಿಷಯದ ಕುರಿತು ನಿರೂಪಿಸುವಾಗ ಆ ವಿಷಯದ ಎಲ್ಲ ಅಂಶಗಳೂ ಅವನ ನಿರೂಪಣೆಯಲ್ಲಿ ಹೊರಬರುವುದಿಲ್ಲ. ಹೊರಬಂದ ವಿಷಯಕ್ಕಿಂತ ಹೆಚ್ಚು ಸೂಕ್ಷ್ಮವಾದುವು ಅವನ ವ್ಯಕ್ತಿತ್ವದಲ್ಲಡಗಿರುತ್ತವೆ. ನಿರೂಪಣೆ ಎಂಬುದು ವ್ಯಕ್ತಿತ್ವದ ಸ್ಥೂಲ ಅಂಶವಾಗಿರುವುದರಿಂದ ಒಮ್ಮೆ ನಿರೂಪಿಸಲಾದುದರ ಸ್ಪಷ್ಟನೆಗಳು ಆ ವ್ಯಕ್ತಿಯಿಂದಲೇ ಇತರ ಸಂದರ್ಭಗಳಲ್ಲಿ ಸಾಧ್ಯವಾಗುವುದು. ಕೆಲವೊಮ್ಮೆ ಸೂಕ್ಷ್ಮಸ್ತರದ ಅಂಶಗಳು ವ್ಯಾಖ್ಯಾತೃಗಳಿಗೆ ಹೊಳೆದು ನಿರೂಪಣಕಾರನನ್ನೂ ಆಶ್ಚರ್ಯಗೊಳಿಸುವ ವ್ಯಾಖ್ಯಾನಗಳು ಇತರರಿಂದ ಸಾಧ್ಯವಾಗುವುದು – ಇಂತಹ ವಿದ್ಯಮಾನಗಳಿಗೆ ಅವಕಾಶವಾಗುತ್ತದೆ. ನಿರೂಪಕನಲ್ಲಿ ಪ್ರತಿಭಾಂಶಗಳು ಹೆಚ್ಚಿದಂತೆ

ಸೂಕ್ಷ್ಮತೆಗಳು ಹೆಚ್ಚು ಹೆಚ್ಚು ಅಭಿವ್ಯಕ್ತವಾಗುವುದು, ವ್ಯಾಖ್ಯಾತೃಗಳ ಪ್ರತಿಭೆಗಳಿಗನು- ಸಾರವಾಗಿ ಹೆಚ್ಚು ಹೆಚ್ಚು ಒಳನೋಟಗಳುಳ್ಳ ವ್ಯಾಖ್ಯಾನಗಳು ಅವರಿಂದ ಸಾಧ್ಯವಾಗುವುದು – ಇಂತಹ ವಿದ್ಯಮಾನಗಳು ಅಧ್ಯಯನಕ್ಷೇತ್ರದಲ್ಲಿ ವ್ಯವಸಾಯ ಮಾಡುವವರ ಅನುಭವಕ್ಕೆ ಸದಾ ಬರತಕ್ಕಂತಹವೇ ಎಂಬುದು ಸರ್ವವೇದ್ಯ.

ಆಧುನಿಕ ಭಾಷಾಶಾಸ್ತ್ರಜ್ಞರು ಭಾಷೆಯ ಉಗಮದ ಬಗೆಗೆ ಕೆಲವೊಂದು ಅಭಿಪ್ರಾಯಗಳನ್ನು ರೂಪಿಸಿರುತ್ತಾರೆ: ಬೌ–ವೌ ಸಿದ್ಧಾಂತ, ಡಿಂಗ್–ಡೋಂಗ್ ಸಿದ್ಧಾಂತ, ಯೋ ಹೇ ಹೋ ಸಿದ್ಧಾಂತ – ಇಂತಹವು.

ಬೌ–ವೌ ಸಿದ್ಧಾಂತವೆಂದರೆ – ಪ್ರಾಣಿಗಳ ಕೂಗು ಮೊದಲಾದುವನ್ನನುಸರಿಸಿ ಮನುಷ್ಯನ ಭಾಷೆ ಸೃಷ್ಟಿಯಾಯಿತು ಎಂದು ನಿಗಮಿಸುವುದು. ಡಿಂಗ್–ಡೋಂಗ್ ಸಿದ್ಧಾಂತವೆಂದರೆ – ಘಂಟೆ ಮೊದಲಾದ ಉಪಕರಣಗಳ ಸ್ವರವನ್ನನುಕರಿಸಿ ಭಾಷೆಯ ಸೃಷ್ಟಿಯಾಯಿತು ಎಂದಭಿಪ್ರಾಯಿಸುವುದು. ಯೋ ಹೇ ಹೋ... ಎಂದರೆ ಮನುಷ್ಯಜೀವನದಲ್ಲಿ ಒಬ್ಬನು ಇನ್ನೊಬ್ಬನನ್ನು ಕರೆಯುವುದು ಮೊದಲಾದುವು- ಗಳಿಂದ ಭಾಷಾಭಿವ್ಯಕ್ತಿ ಬೆಳವಣಿಗೆಯಾಯಿತು ಎಂದು ತೀರ್ಮಾನಿಸುವುದು.

ಈ ಸಿದ್ಧಾಂತಗಳಲ್ಲಿಯೂ ಸತ್ಯಾಂಶ ಇರಬಾರದೆಂದಿಲ್ಲ. ಪ್ರಕೃತಿಯಲ್ಲಿರುವ ಎಲ್ಲಾ ವಿದ್ಯಮಾನಗಳು ಮನುಷ್ಯಜೀವನದ ಮೇಲೆ ಪ್ರಭಾವ ಬೀರುವಂತಹವೇ. ಮನುಷ್ಯಜೀವಿಯು ಪ್ರಕೃತಿಯ ಎಲ್ಲಾ ಅಂಶಗಳಿಂದಲೂ ಪಡೆಯಬೇಕಾದುದು ಇದೆ ಎಂದು ಭಾಗವತ ಮೊದಲಾದ ಪುರಾಣಗಳಲ್ಲಿ ವ್ಯಕ್ತವಾಗಿಯೇ ಇದೆ. ಆದುದರಿಂದ ಋಷಿಪರಂಪರೆಗೆ ತ್ಯಾಜ್ಯವೆಂಬುದಿಲ್ಲ. ಅದರದರ ಮಿತಿಯನ್ನರ್ಥಮಾಡಿಕೊಂಡು ಅದು ಎಲ್ಲದರ ಅಂಶಗಳನ್ನೂ ಸ್ವೀಕರಿಸುತ್ತದೆ, ಅದರ ಒತ್ತು ಇರುವುದು ಮಾತ್ರ ದಾರ್ಶನಿಕತೆಯ ಮೇಲೆ. ಎಲ್ಲವನ್ನೂ ಅದು ಆ ಮಟ್ಟಕ್ಕೆ ಕೊಂಡುಹೋಗುತ್ತದೆ. ಆಧುನಿಕ ಭಾಷಾಶಾಸ್ತ್ರಜ್ಞರಾದ ಬ್ಲೂಮ್ ಫೀಲ್ಡ್‌ನಂತಹವರು ಪಾಣಿನಿಯ ವ್ಯಾಕರಣ- ವನ್ನು ಭಾಷಾಶಾಸ್ತ್ರದ ಮೂಲಸ್ಫೂರ್ತಿಯೆಂಬಂತೆ ಹೊಗಳಿದ ಸಂದರ್ಭಗಳಿವೆ. ಒಟ್ಟಿನಲ್ಲಿ ಯಾವ ಸಂವೇದನೆಯೂ ಇತರ ಯಾವುದೇ ಸಂವೇದನೆಗಿಂತ ಭಿನ್ನವಲ್ಲ. ಎಲ್ಲಾ ಸಂವೇದನೆಗಳೂ ಪರಸ್ಪರ ಪೂರಕಗಳೆಂಬುದೇ ಋಷಿಪರಂಪರೆಯ ನಿಲುವು.

ಎಲ್ಲಾ ಭಾಷೆಗಳಿಗೂ ಮತ್ತು ಎಲ್ಲಾ ಸಂವೇದನೆಗಳಿಗೂ ಸಮ್ಮತವಾಗಿರು- ವಂತಹದು ಋಷಿಗಳ ವೈಖರೀಸ್ತರ. ಇಂದಿಗೆ ಪ್ರಚಲಿತವಿರುವ ಎಲ್ಲಾ ವ್ಯವಹಾರಗಳೂ ಎಲ್ಲಾ ಸಾಹಿತ್ಯಪ್ರಕಾರಗಳಿಗೂ ಸಂವಾಹ್ಯವಾಗುವುದು ಈ ಸ್ತರದಲ್ಲಿ. ಋಷಿ ಪರಂಪರೆಯವರು ಭಾಷೆಯನ್ನು ತತ್ತ್ವವಾಗಿ ಸಾಕ್ಷಾತ್ಕರಿಸುವುದರೊಂದಿಗೆ ಅದಕ್ಕೆ ಬೇರೆ ಬೇರೆ ಆಯಾಮಗಳನ್ನು ತೊಡಿಸುತ್ತಾ ಹೋದರು. ವೇದಗಳಂತಹ ಸಾರ್ವ- ಕಾಲಿಕ ಉಕ್ತಿಗಳು, ಅವುಗಳ ಮೇಲೆ ಸ್ಮೃತಿ–ಇತಿಹಾಸ–ಪುರಾಣಗಳಂತಹ ವ್ಯಾಖ್ಯಾ ವಿಶೇಷಗಳು, ಪುರುಷಾರ್ಥಗಳ ಪರಿಕಲ್ಪನೆಗಳು, ದೃಶ್ಯಶ್ರವ್ಯಾದಿ ಕಾವ್ಯಗಳು ಉಪವೇದಗಳು – ಇಂತಹ ವಿಕ್ಷೇಪಗಳೆಲ್ಲವೂ ಸಾಕ್ಷಾತ್ಕಾರದ ಮುಂದುವರಿಕೆಗಳೇ.

ದೇಶ – ಕಾಲ ಪ್ರಭೇದಗಳಿಂದಲಾಗಿ ಸಂವೇದನಾಭೇದಗಳೂ ಉಂಟಾಗಿ ಪರಸ್ಪರ ಸಂವಹನಕ್ಕೆ ಸಹಾಯವಾಗುವ ರಚನೆಗಳೂ ಅವಶ್ಯವೆಂದು ತೋರಿಬಂದುವು.

ವ್ಯಾಖ್ಯಾನಗಳು ಒಂದು ರೀತಿಯಲ್ಲಿ ಇಂತಹ ಕೆಲಸಗಳನ್ನು ಮಾಡುತ್ತಿದ್ದರೂ ಭಾಷಾ-ವಿಷಯಕವಾದ ಶಬ್ದಗಳ ಮೇಲಿನ ವಿವರಣೆಗಳೂ ಅವಶ್ಯವಾದುವು. ವೇದಮಂತ್ರಗಳ ವಿವರಣೆಗೆ ನಿರುಕ್ತಾದಿ ವೇದಾಂಗಗಳು ಅವಶ್ಯವಾದಂತೆ ಲೋಕಸಂವಹನಗಳನ್ನು ದೇಶಕಾಲಾನುಗುಣವಾಗಿ ವಿವರಿಸುವ – ಅರ್ಥೈಸುವ ಸಂದರ್ಭಗಳುಂಟಾಗುವ್ರು-ದರಿಂದ ನಿರುಕ್ತದಂತಹವುಗಳ ಲೌಕಿಕಮುನ್ನಡೆಗಳಾದ ನಿಘಂಟುಗಳು ಉಂಟಾದುವು. ಅವುಗಳಲ್ಲಿ ಅಧಾಕೃತಿಯಾದ ಅಮರಕೋಶವೆಂಬುದು ಅದರ ವಿಶಿಷ್ಟವಾದ ವಿಷಯ ವಿನ್ಯಾಸವಿಶೇಷದಿಂದಲಾಗಿ ಅತ್ಯಂತಜನಪ್ರಿಯವಾಗಿ ಉಳಿದುಬಂದಿದೆ. ಋಷಿ ಪರಂಪರೆಯು ಮುಖ್ಯವಿಷಯಗಳಾದ ಲೌಕಿಕ–ಪಾರಮಾರ್ಥಿಕ ಅಂಶಗಳನ್ನು ಪ್ರಾರಂಭದಲ್ಲೇ ಪ್ರಸ್ತಾಪಿಸುವುದು ಅತ್ಯಂತ ಮಾರ್ಮಿಕ ಮತ್ತು ಆಕರ್ಷಕ. 'ಸ ಶ್ರಿಯೇ ಚ ಅಮೃತಾಯ ಚ ಸೇವ್ಯತಾಂ' = ಲೌಕಿಕಸಂಪನ್ನತೆಗಾಗಿ ಮತ್ತು ಪಾರಮಾರ್ಥಿಕ ಅಮರತ್ವಕ್ಕಾಗಿ ಅವನು (ಪರಮಾತ್ಮನು) ಸೇವಿಸಲ್ಪಡಲಿ – ಎಂಬುದು ಗ್ರಂಥಾರಂಭ ಮಂಗಲ. ಅದೇ ರೀತಿಯಲ್ಲಿ ಮೂರು ಕಾಂಡಗಳಲ್ಲಿ ವಿಭಜಿತವಾದ ಈ ಗ್ರಂಥ ಒಂದು ಕಾಂಡದಲ್ಲಿ ಅಲೌಕಿಕ – ಅಮೂರ್ತ ವಿಷಯಗಳ ಕುರಿತಾದ ಪರ್ಯಾಯ-ಪದಗಳ ಪಟ್ಟಿಯನ್ನು ಒಳಗೊಂಡಿವೆ. ಇನ್ನೊಂದು ಕಾಂಡದಲ್ಲಿ ಭೂಲೋಕಕ್ಕೆ ಸಂಬಂಧಪಟ್ಟ ವಿಷಯಗಳನ್ನು ಅದೇ ರೀತಿಯಲ್ಲಿ ನಿರೂಪಿಸುತ್ತದೆ. ಮತ್ತೊಂದು ಕಾಂಡದಲ್ಲಿ ಭಾಷೆ, ವ್ಯಾಕರಣ – ಇಂತಹವುಗಳಿಗೆ ಸಂಬಂಧಪಡುವಂತೆ ಪದಗಳ ವಿವರಣೆಯನ್ನು ನೀಡಲಾಗಿದೆ. ಮಂಗಲಶ್ಲೋಕದಲ್ಲಿ ಸೂಚಿಸಲಾದಂತೆಯೇ ಲೌಕಿಕತೆ – ಪಾರಮಾರ್ಥಿಕತೆಗಳನ್ನು ಸಂಕೇತಿಸುವಂತೆ ಇಹ–ಪರಲೋಕಗಳಿಗೆ ಸಂಬಂಧಪಟ್ಟ ಅಂಶಗಳು, ಮೂರ್ತ – ಅಮೂರ್ತ ವಿಷಯಗಳಿಗೆ ಸಂಬಂಧಪಟ್ಟ ಅಂಶಗಳು – ಇಂತಹವನ್ನು ಒಳಗೊಂಡಿದೆ.

ಇಂತಹ ಪರಂಪರಾಗತ ನಿಘಂಟುಗಳಲ್ಲದೆ, ಪಾಶ್ಚಾತ್ಯರಿಗೆ ಸಂಸ್ಕೃತದ ಹಾಗೂ ಭಾರತೀಯ ಭಾಷೆಗಳ ಸಂಪರ್ಕ ಬಂದಂದಿನಿಂದ ಸಂಸ್ಕೃತ– ಇಂಗ್ಲಿಷ್, ಇಂಗ್ಲಿಷ್–ಸಂಸ್ಕೃತ – ಇಂತಹ ಭಾಷಾವೈವಿಧ್ಯಗಳನ್ನೊಳಗೊಳ್ಳುವ ನಿಘಂಟುಗಳ ರಚನೆಯಾಗಿದೆ. ಇತ್ತೀಚೆಗಿನ ದಿನಗಳಲ್ಲಿ ಕನ್ನಡದಂತಹ ಪ್ರಾದೇಶಿಕಭಾಷೆಗಳಲ್ಲಿ ಮತ್ತು ತುಳುವಿನಂತಹ ಅಷ್ಟೊಂದು ಪ್ರಸಿದ್ಧವಲ್ಲದ ಭಾಷೆಗಳಲ್ಲಿಯೂ ನಿಘಂಟು ರಚನೆ ದೊಡ್ಡ ಪ್ರಮಾಣದಲ್ಲಿಯೇ ನಡೆಯುತ್ತಿದೆ.

ಶಬ್ದಾರ್ಥನಿಷ್ಕರ್ಷೆಯೇ ನಿಘಂಟುರಚನೆಯ ಉದ್ದೇಶವಾಗಿರುವುದರಿಂದ ಭಾಷಾಶಾಸ್ತ್ರದ ನಾಲ್ಕು ಶಾಖೆಗಳಾದ ಧ್ವನಿಶಾಸ್ತ್ರ (phonology), ಶಬ್ದಮೂಲಶಾಸ್ತ್ರ (etymology), ಪ್ರಕೃತಿ–ಪ್ರತ್ಯಯಶಾಸ್ತ್ರ (morphology), ಅರ್ಥವ್ಯತ್ಯಯಶಾಸ್ತ್ರ (semantics) - ಈ ನಾಲ್ಕರಲ್ಲಿಯೂ ನಿಘಂಟುಕಾರನು ಪರಿಶ್ರಮಿಯಾಗಿರಬೇಕಾಗುತ್ತದೆ. ಆಧುನಿಕ ಶಾಸ್ತ್ರಶಾಖೆಗಳಾದ ಈ ನಾಲ್ಕು ಸ್ಥೂಲವಾಗಿ ಶಿಕ್ಷಾ – ನಿರುಕ್ತ – ವ್ಯಾಕರಣಗಳಿಗೆ ಸಂವಾದಿಯಾಗುತ್ತದೆ. ಆದುದರಿಂದ ಪ್ರಾಚೀನಜ್ಞಾನವು ಮತ್ತು ಆಧುನಿಕಜ್ಞಾನವು ಎರಡೂ ಸೇರಿದಾಗ ಉತ್ತಮ ನಿಘಂಟುವು ಹೊರಬರಬಲ್ಲುದು.

ಈ ದಿಶೆಯಲ್ಲಿ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಒಂದು ಹೊಸ ಹಾದಿಯನ್ನು ತುಳಿದಿದ್ದಾರೆ. ಅವರು 'ಇಗೋ ಕನ್ನಡ' ಎಂಬ ಹೆಸರಿನಲ್ಲಿ ಮೂರು ನಿಘಂಟುಸಂಪುಟಗಳನ್ನು ಹೊರತಂದಿದ್ದಾರೆ. ಇವುಗಳು 'ಸಾಮಾಜಿಕ ನಿಘಂಟು'-ಗಳೆಂದು ಅವುಗಳ ಪರಿಚಯಭಾಗದಲ್ಲಿ ಉಲ್ಲಿಖಿತವಾಗಿದೆ. ಎಂದರೆ, ಶಬ್ದ - ಅರ್ಥಗಳ ಮೂಲದಂತಹದನ್ನು ಸ್ಪಷ್ಟಪಡಿಸುವುದಕ್ಕಿಂತ ಹೆಚ್ಚಾಗಿ ಸಮಾಜದಲ್ಲಿ ಪ್ರಚಲಿತವಾಗಿರುವ ಪ್ರಯೋಗಗಳು, ಅವುಗಳುಂಟಾಗಿರುವ ಹಿನ್ನೆಲೆ, ಲಾಘವದೃಷ್ಟಿ-ಯಿಂದ ಅವುಗಳನ್ನು ಅಬದ್ಧವೆಂದು ನಿರಾಕರಿಸುವ ಬದಲು ಉಳಿಸಿಕೊಳ್ಳುವ ಅವಶ್ಯಕತೆ ಇಂತಹದನ್ನು ಈ ಸಂಪುಟಗಳು ಉದ್ದೇಶವಾಗಿ ಹೊಂದಿವೆ. ಹಾಗೆಂದು ಅಪಪ್ರಯೋಗಗಳೆಲ್ಲವನ್ನೂ ಸಾಧುವೆಂದು ಪರಿಗಣಿಸುವ ಉದ್ದೇಶವಿಲ್ಲ. ಸ್ವಲ್ಪ ಮಟ್ಟಿಗೆ ಅಶಾಸ್ತ್ರೀಯವೆನ್ನಬಹುದಾಗಿದ್ದರೂ ಸಹ್ಯವಾಗಿರುವುದನ್ನು ರೂಢಿಯಲ್ಲಿ ಇಟ್ಟುಕೊಳ್ಳುವ ಉದ್ದೇಶವು ಈ ಕೃತಿಗಳ ರಚನೆಯಲ್ಲಿ ಕಂಡುಬರುತ್ತದೆ. ಆದುದರಿಂದ ಇವು ಶಾಸ್ತ್ರೀಯತೆಗಿಂತ ಹೆಚ್ಚು ಸಾಮಾಜಿಕತೆಯನ್ನು ಮೌಲ್ಯವಾಗಿ ಸ್ವೀಕರಿಸುವಂತಹವು. ಅಸಹ್ಯಪ್ರಯೋಗಗಳನ್ನು ತ್ಯಜಿಸಬೇಕೆಂದು ಪ್ರಸ್ತುತರಚನೆಯೇ ಅಭಿಪ್ರಾಯಪಡುತ್ತದೆ. ಉದಾಹರಣೆಗೆ, 'ಸೃಜನಶೀಲ' ಎಂಬ ಪ್ರಯೋಗವು ಅಶಾಸ್ತ್ರೀಯವಾಗಿದ್ದರೂ ಶ್ರುತಿಸಹ್ಯವಾಗಿರುವುದರಿಂದ ಪ್ರಯೋಗಸಿದ್ಧವೆಂದು ಅದನ್ನು ಉಳಿಸಿಬಿಡಬಹುದು. ಕೆಲವರು 'ಸೃಷ್ಟಿಶೀಲ' ಎಂದು ಪರಿವರ್ತಿಸಿಕೊಳ್ಳಲೂಬಹುದು. 'ಸರ್ಜನಶೀಲ' ಎನ್ನುವುದರಲ್ಲಿ ಸ್ವಲ್ಪ ಶ್ರುತಿಕಟುತ್ವ ಅನುಭವಕ್ಕೆ ಬರುತ್ತದೆ. 'ರಾಷ್ಟ್ರೀಕರಣ' 'ವೈಭವೀ-ಕರಣ' - ಇಂತಹವು ಉಳಿದು ಬಿಡಬಹುದು. 'ನೈರ್ಮಲ್ಯೀಕರಣ' (sanitation) ಎಂಬುದನ್ನು ರೂಢಿಗೆ ತಾರದೆ ಬಿಡಬಹುದು; ಏಕೆಂದರೆ 'ನಿರ್ಮಲೀಕರಣ'ವೆನ್ನು-ವುದು ಶಾಸ್ತ್ರೀಯವೂ ಅಕ್ಲಿಷ್ಟವೂ ಎರಡೂ ಆಗುತ್ತದೆ. 'ಅಗಲೀಕರಣ' ಎಂಬ ಸಂಸ್ಕೃತ-ಕನ್ನಡ ಮಿಶ್ರಣ ಸಾಧುವಾಗದು. ಏಕೆಂದರೆ ಸಂಸ್ಕೃತೀಕರಣ ಮತ್ತು ಸಮಾನಾರ್ಥಕ ಕನ್ನಡರೂಪ - ಎರಡೂ ಇರುವಲ್ಲಿ ಸಂಸ್ಕೃತೀಕರಣ ಅವಶ್ಯವಾಗು-ವುದು ಏನಾದರೊಂದು ಅರ್ಥಗಾಂಭೀರ್ಯದ ಅವಶ್ಯಕತೆ ಇದ್ದಾಗ. 'ಅಗಲ ಮಾಡುವುದು' ಎಂಬುದನ್ನು ಸಂಸ್ಕೃತೀಕರಣಗೊಳಿಸಬೇಕಾದ ಅವಶ್ಯಕತೆ ಏನೂ ಇಲ್ಲ. ಅಗಲೀಕರಣವೇ ಮೊದಲಾದ ಪ್ರಯೋಗಗಳನ್ನು ಉಳಿಸಿಕೊಳ್ಳುವುದೆಂದರೆ ಹಾಸ್ಯಾಸ್ಪದವಾದ ಅಶಾಸ್ತ್ರೀಯತೆಯನ್ನೇ ಪ್ರೋತ್ಸಾಹಿಸಿದಂತಾಗಬಹುದು.

ಪ್ರಸ್ತುತನಿಘಂಟುವಿನ ಧೋರಣೆ ಈ ರೀತಿ ಎಂದು ಸ್ಪಷ್ಟಪಡಿಸುವುದಕ್ಕಾಗಿ-ಯಷ್ಟೇ ಈ ಮೇಲಿನ ಉದಾಹರಣೆ-ವಿವರಣೆಗಳು ಹೊರತು ಈ ಎಲ್ಲ ಶಬ್ದಗಳೂ ನಿಘಂಟುವಿನಲ್ಲಿ ಚರ್ಚಿತವಾಗಿವೆ ಎಂದು ಭಾವಿಸುವುದು ತಥ್ಯವಲ್ಲ.

ಭಾಷಾಶಾಸ್ತ್ರದ ನಾಲ್ಕು ಪ್ರಧಾನಶಾಖೆಗಳನ್ನು ಮೇಲೆ ಹೆಸರಿಸಲಾಗಿದೆ. ಇವುಗಳಲ್ಲಿ ರೂಪನಿಷ್ಪತ್ತಿಶಾಸ್ತ್ರ(etymology)ವು ನಿಘಂಟುರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಋಷಿಪರಂಪರೆಯಲ್ಲಿ ಸೂತ್ರ-ಭಾಷ್ಯರೂಪದ ಗ್ರಂಥಪರಂಪರೆ ಬಹಳ ಪ್ರಸಿದ್ಧವಾದುದು. ಇವುಗಳನ್ನನುಸರಿಸಿ ಶಾಸ್ತ್ರೀಯೇತರ ಕೃತಿಗಳೂ ಮೂಲ-

ವ್ಯಾಖ್ಯಾನಗಳಲ್ಲಿ ರಚಿತವಾದುದು ಕಾವ್ಯಗಳಂತಹವುಗಳ ಸಂದರ್ಭದಲ್ಲಿ ಕೂಡ ಸ್ಪಷ್ಟವಾಗಿಯೇ ಇದೆ. ಕಾವ್ಯಗಳಂತಹ ಸರಳನಿರೂಪಣೆಗಳಿಗೆ ವ್ಯಾಖ್ಯೆಯ ಅವಶ್ಯಕತೆಯೇನು ಎಂದು ಇಂಗ್ಲಿಷಿನಂತಹ ವಿದೇಶೀಯ ಭಾಷೆಗಳ ಅಧ್ಯೇತೃಗಳು ಆಕ್ಷೇಪಿಸುವುದುಂಟು. ಇಂಗ್ಲಿಷಿನಂತಹ ಸಾಹಿತ್ಯದಲ್ಲಿ ವಿಮರ್ಶಕೃತಿಗಳಿಗಿರುವ ಸ್ಥಾನ ಕೆಲವು ಮಟ್ಟಿಗೆ ಸಂಸ್ಕೃತ ವ್ಯಾಖ್ಯಾಕೃತಿಗಳಿಗೆ ಇರುತ್ತದೆ. ಕಾವ್ಯಾಂಶ-ಶಾಸ್ತ್ರಾಂಶಗಳ ಪರಸ್ಪರ ಅವಿನಾಭಾವ ಸಂಸ್ಕೃತದಲ್ಲಿ ಅನಿವಾರ್ಯವಾಗಿರುವುದರಿಂದ ಈ ವಿಲಕ್ಷಣತೆ ಉಂಟಾಗಿದೆ. ಭಾಷ್ಯಗಳಂತಹ ಗಂಭೀರಕೃತಿಗಳಿರಲಿ – ಕಾವ್ಯವ್ಯಾಖ್ಯೆ-ಗಳಂತಹ ಲಘುಕೃತಿಗಳಿರಲಿ ರೂಪ ನಿಷ್ಪತ್ತಿಶಾಸ್ತ್ರದ ಮತ್ತು ಇತರ ವ್ಯಾಕರಣಾಂಶಗಳ ಸಹಾಯ ಪಡೆಯುವುದು ಸಂಸ್ಕೃತದಲ್ಲಿ ಸಾಮಾನ್ಯ.

ಉದಾಹರಣೆಗಳನ್ನು ಪರಿಶೀಲಿಸುವುದಿದ್ದರೆ, ನಿರುಕ್ತಗ್ರಂಥವು ಅತ್ಯಂತ ಪ್ರಾಚೀನವೂ ಅತ್ಯಂತ ಅಧಿಕೃತವೂ ಆಗಿರುವ ರೂಪನಿಷ್ಪತ್ತಿಗಳ ದಾಖಲೆ. ರೂಪ ನಿಷ್ಪತ್ತಿಗಳನ್ನು ಅರ್ಥನಿರ್ಣಯಕ್ಕಾಗಿ ಬಳಸುವಲ್ಲಿ ಋಷಿಪರಂಪರೆಯ ಸಂವೇದ್ಯಾಂಶ-ಗಳನ್ನು ಗಮನಿಸಬೇಕಾಗಿದೆ. ನಿರುಕ್ತದಲ್ಲಿ ರೂಪನಿಷ್ಪತ್ತಿಗಳಿಗೆ ವಿಕಲ್ಪಗಳನ್ನು ಹೇಳಲಾಗಿದೆ. ಎಂದರೆ, ನಿರ್ದಿಷ್ಟಪದವನ್ನು ಬೇರೆ ಬೇರೆ ಧಾತುಗಳಿಂದ ನಿಷ್ಪನ್ನಗೊಳಿಸಿ ಇವುಗಳ ವೈಕಲ್ಪಿಕತೆಯನ್ನೇ ಹೇಳಿದುದಿದೆ.

ಇದನ್ನು ಗಮನಿಸಿದ ಪಾಶ್ಚಾತ್ಯ ವಿದ್ವಾಂಸರು ನಿರುಕ್ತಕಾರನಿಗೂ ವೇದಗಳಿಗೂ ಕಾಲಿಕವಾಗಿ ಬಹಳ ಅಂತರವಿದ್ದುದರಿಂದ ನಿರುಕ್ತದ ಕಾಲಕ್ಕೇ ವೇದಾರ್ಥಗಳ ಸಂದಿಗ್ಧತೆ ಪ್ರಾರಂಭವಾಗಿತ್ತು ಎಂದು ನಿರ್ಣಯಿಸಿ ಈ ವೈಕಲ್ಪಿಕತೆಗಳು ಗ್ರಂಥ-ಕಾರನಲ್ಲಿದ್ದ ಸಂದೇಹಗಳ ಸೂಚಕಗಳು ಎಂದು ಅಭಿಪ್ರಾಯಪಟ್ಟಿದ್ದಾರೆ. ಇದೇ ರೀತಿ ಶಂಕರಾಚಾರ್ಯರು ಗೀತಾಭಾಷ್ಯದಲ್ಲಿ ಒಂದು ಶಬ್ದವನ್ನು ಬೇರೆ ಬೇರೆ ಧಾತು-ಗಳಿಂದ ನಿಷ್ಪನ್ನವಾಗುವ ಸಾಧ್ಯತೆಯೊಂದಿಗೆ ಸೇರಿಸಿದ್ದಿದೆ. ಉದಾಹರಣೆಗೆ ಕ್ಷೇತ್ರ-ಕ್ಷೇತ್ರಜ್ಞ ವಿಚಾರದಲ್ಲಿ ಬರುವ 'ಕ್ಷೇತ್ರ' ಶಬ್ದ. ಇದರಿಂದ ಆಧುನಿಕ ಭಾಷಾಶಾಸ್ತ್ರ-ಪರಿಣತರು ಶಂಕರಾಚಾರ್ಯರ ರೂಪನಿಷ್ಪತ್ತಿಗಳು ಪ್ರಮಾದಸೂಚಕಗಳೇ ಹೊರತು ವಿಶ್ವಾಸಾರ್ಹವಲ್ಲ. (ಇದು ಭಾಷ್ಯಕ್ಕೇ ಕಳಂಕ) ಎಂಬಂತೆ ಅಭಿಪ್ರಾಯಿಸಿದ್ದಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಒಂದು ಕಾಲದಲ್ಲಿ ಧಾತುಗಳು ಮಾತ್ರ ಇದ್ದು ನಿಷ್ಪನ್ನಶಬ್ದಗಳು ಅನಂತರದ ಕಾಲಕ್ಕೆ ಸೇರಿದುವು ಎಂದು ನಿಗಮಿಸುವುದು ಸಾಧುವಾಗಿ ತೋರುವುದಿಲ್ಲ. ಪಾಣಿನಿಯ ಧಾತುಪಾಠದಲ್ಲಿ ಧಾತುವನ್ನೂ ಧಾತ್ವರ್ಥ-ವನ್ನೂ ಸೇರಿಸಿ ಪಠಿಸುವಾಗ ಧಾತ್ವರ್ಥಕ್ಕೆ ಬಳಸಲಾದ ಪದ ಆ ಧಾತುವಿನಿಂದಲೇ ನಿಷ್ಪನ್ನ. ಉದಾಹರಣೆಗೆ, 'ಗಮ್ಲ್ ಗತೌ'. ಧಾತುವನ್ನು ತನ್ನಿಷ್ಪನ್ನಪದದಿಂದಲೇ ವಿವರಿಸುವುದರಿಂದ ಅರ್ಥಜ್ಞಾನವು ಧಾತುಪಾಠದಿಂದಲೇ ಸಾಧ್ಯವಾಗುವಂತಹದೂ ಆಗುವುದಿಲ್ಲ. ಹಾಗಿದ್ದರೆ ಧಾತುವೆಂದರೇನು ಎಂದು ವಿಚಾರಿಸುವಾಗ ಪದವಿಶ್ಲೇಷಣ ಸಂದರ್ಭದಲ್ಲಿ ನಿಷ್ಪನ್ನಪದಗಳೆಲ್ಲವಕ್ಕೂ ಸಮಾನಬಿಂದುವಾಗಿ ನಿಲ್ಲುವ ಪದಸಂಬಂಧಿ ಅತಿಸಂಕ್ಷಿಪ್ತರೂಪ ಎಂದಷ್ಟೇ ಅರ್ಥವಾಗುತ್ತದೆ. ಪದವಿಶ್ಲೇಷಣೆಗೆ ಅರ್ಥನಿರ್ಣಯದ ಸಂದರ್ಭದಲ್ಲಿ ಅದ್ವಿತೀಯಸ್ಥಾನವಿದ್ದರೂ ಪೂರಕವಾದ ಸಂವೇದ್ಯಾಂಶಗಳ ಹೊರತಾಗಿ

ಅದು ಪರಿಪೂರ್ಣವಾಗುವುದಿಲ್ಲ ಎಂಬುದನ್ನು ಸಂಸ್ಕೃತಗ್ರಂಥಕಾರರು ತಾತ್ತ್ವಿಕ-ವಾಗಿಯೂ ಆಚರಣೆಯಲ್ಲಿಯೂ ತಿಳಿಯಪಡಿಸಿದರೆಂದು ಇದರಿಂದ ನಿಗಮಿಸ-ಬಹುದು. ಹೀಗೆಯೇ ರೂಪನಿಷ್ಪತ್ತಿಯನ್ನು ವಿವರಿಸುವ ವ್ಯಾಖ್ಯಾನಕಾರರು ಕೃತಿಯಲ್ಲಿ ಆ ಪದ ಮೊತ್ತಮೊದಲಿಗೆ ಎದುರಾದಾಗ ನಿಷ್ಪತ್ತಿವಿವರಣೆಯನ್ನು ಮಾಡದೆ ತುಂಬ ಅನಂತರ ಆ ಕೆಲಸವನ್ನೆ ಮಾಡಿದ್ದಿದೆ. ಇದರಿಂದಲೂ ನಿಷ್ಪತ್ತಿಜ್ಞಾನದೊಂದಿಗೆ ಇತರ ಅಂಶಗಳು ಸೇರಿಕೊಂಡೇ ಅಧ್ಯಯನ ಮುಂದುವರಿಯುತ್ತದೆ ಎಂಬುದನ್ನು ತೋರಿಸಿದಂತಾಗುತ್ತದೆ. ಉದಾಹರಣೆಗೆ, ಕುಮಾರಸಂಭವದಲ್ಲಿ 'ದ್ವಿರೇಫ' ಶಬ್ದವು ಮೊದಲಿಗೆ ಎದುರಾಗುವಲ್ಲಿ ಮಲ್ಲಿನಾಥನ ವ್ಯಾಖ್ಯೆ ಅದರ ನಿಷ್ಪತ್ತಿಯನ್ನು ಹೇಳುವು-ದಿಲ್ಲ. ಬದಲಾಗಿ ಎಷ್ಟೋ ಶ್ಲೋಕಗಳ ಅನಂತರ ಆ ಕೆಲಸವನ್ನು ಮಾಡಲಾಗಿದೆ. ಇವೆಲ್ಲವೂ ಭಾಷಾಧ್ಯಯನದಲ್ಲಿ ಸಂವೇದನೆಯ ಪಾತ್ರ ಅನಿರ್ದಿಷ್ಟವಾದರೂ ಅನಿವಾರ್ಯ ಎಂಬುದನ್ನು ತೋರಿಸತಕ್ಕವು.

ಪ್ರೊ. ವೆಂಕಟಸುಬ್ಬಯ್ಯನವರು ಇಂತಹ ವಿಚಾರಗಳೆಲ್ಲವನ್ನು ತಮ್ಮ ನಿರೂಪಣೆಗೆ ಪೂರ್ವದಲ್ಲಿ ಗಮನಿಸಿಯೇ ಪ್ರಸ್ತುತ ಸಂಪುಟಗಳನ್ನು ತಯಾರಿಸಿದಂತಿದೆ. ಭಾಷಾಶಾಸ್ತ್ರದಲ್ಲಿ ಅವರು ವಿಶೇಷಪರಿಶ್ರಮಿಗಳೆಂದು ಅವರ ಗ್ರಂಥಗಳ ಪೀಠಿಕಾ-ಭಾಗದ ಪ್ರಾರಂಭಿಕ ಅಂಶಗಳಿಂದಲೇ ಸ್ಪಷ್ಟವಾಗುತ್ತದೆ. ಭಾಷಾಶಾಸ್ತ್ರದಲ್ಲಿ ಇಂದಿಗೆ ಸ್ವೀಕೃತವಾದ ಕುಟುಂಬವಿಭಜನೆಗಳಿಗೆ ಹಿನ್ನೆಲೆಯಾಗಿ ಇವುಗಳನ್ನು ಏಕೀಕರಿಸುತ್ತಾ ಹೋಗುವ ಸಾಧ್ಯತೆಯನ್ನು ಅವರ ನಿರೂಪಣೆ ತಿಳಿಸುತ್ತದೆ. ಭಾಷಾವಿಷಯದಲ್ಲಿ ಸೂಕ್ಷ್ಮಘಟಕಗಳನ್ನೂ ಅರಿತುಕೊಳ್ಳಲು ಬೇಕಾಗುವ ಸಂವೇದ್ಯಾಂಶಗಳ ಅವಶ್ಯಕತೆ-ಯನ್ನು 'ಸಾಮಾಜಿಕ' ಎಂಬ ಅಂಶವೇ ತಿಳಿಸುತ್ತದೆ.

ಲೇಖಕರು ಅರಿಕೆಯ ಮಾತುಗಳ ಅನಂತರ ನಿಘಂಟುವಿಗೆ ಒಂದು 'ಪ್ರವೇಶಸಿದ್ಧತೆ'ಯನ್ನು ನೀಡಿರುತ್ತಾರೆ. ಇದನ್ನು ಎರಡು ಭಾಗಗಳಲ್ಲಿ ಸಮೀಕ್ಷಿಸುವುದು ಉತ್ತಮ. ಮೊದಲನೆಯ ಭಾಗವು ಭಾಷಾಶಾಸ್ತ್ರೀಯ ಅಂಶಗಳಿಂದ ಪ್ರಾರಂಭವಾಗಿ ಭಾಷೆಯ ಆಧುನಿಕೀಕರಣದ ವರೆಗೆ ಸಾಗುತ್ತದೆ. ಭಾಷಾಶಾಸ್ತ್ರದ ಸಾಮಾನ್ಯ ನಿಲುವಿನಂತೆ ಭಾಷೆಗಳು ಬೇರೆ ಬೇರೆ ಕುಟುಂಬವ್ಯವಸ್ಥೆಗೆ ಒಳಗಾದುವು. ಇದಕ್ಕೆ ವಿರೋಧವಾಗಿ ಈ ಕುಟುಂಬಗಳನ್ನು ಒಂದುಗೂಡಿಸುವ ಪ್ರಯತ್ನವೂ ಇತ್ತೀಚೆಗೆ ನಡೆದುದನ್ನು ಲೇಖಕರು ಪ್ರಸ್ತಾವಿಸುತ್ತಾರೆ. ವೈಜ್ಞಾನಿಕವಾಗಿ ಮನುಷ್ಯಚೇತನವೇ ಏಕಮೂಲವೆಂದು ಸಿದ್ಧವಾಗುವುದರೊಡನೆ ಭಾಷೆಗಳನ್ನೂ ಏಕಮೂಲಗೊಳಿಸುವುದು ಅಸಾಧ್ಯವಲ್ಲವೆಂಬ ನಿಲುವನ್ನು ಈ ಲೇಖನಭಾಗ ಒಳಗೊಳ್ಳುತ್ತದೆ. ಭಾಷೆಗಳಿಂದಲಾಗಿ ಬೇರೆ ಬೇರೆಯಾಗಿ ಒಡೆದ ಜನಾಂಗದಲ್ಲಿಯೂ ಒಂದು ವಿಶಾಲ ಐಕ್ಯ ಹುದುಗಿದೆ ಎಂದು ಈ ಭಾಗ ನಿಗಮಿಸುತ್ತದೆ.

ಅನಂತರ ಭಾಷಾಪರಿವೀಕ್ಷಣೆಗಳು ನಡೆದುದನ್ನು ಪ್ರಸ್ತಾವಿಸಿ ಆಂಧ್ರಪ್ರದೇಶ-ದಲ್ಲಿಯ ಪರಿವೀಕ್ಷಣೆ ಹೆಚ್ಚು ಯಶಸ್ವಿಯಾದುದನ್ನು ಲೇಖನ ನಿರೂಪಿಸುತ್ತದೆ. ಭಾಷಾವೈವಿಧ್ಯವನ್ನು ಅನಂತರ ಪ್ರಸ್ತಾವಿಸಿ ಪ್ರಾಂತಗಳ ಗಡಿಗಳಲ್ಲಿರುವವರು ಹೇಗೆ ದ್ವಿಭಾಷಿಗಳಾಗಿರುತ್ತಾರೆ ಎಂಬುದನ್ನು ಉಲ್ಲೇಖಿಸುತ್ತದೆ. ಅನಂತರದ ಭಾಗ ಬಹಳ

ಮುಖ್ಯವಾದುದು 'ಭಾಷೆಯ ಆಧುನಿಕೀಕರಣ'. ಈ ವಿಷಯದಲ್ಲಿ ಪತ್ರಿಕೆಗಳ ಪಾತ್ರ ಬಹಳ ದೊಡ್ಡದು. ಹಿಂದೆ ಕನ್ನಡದಲ್ಲಿ ಪ್ರಚಲಿತವಿಲ್ಲದಿದ್ದ ಎಷ್ಟೋ ಶಬ್ದಗಳನ್ನು ಪತ್ರಿಕೆಗಳು ಕೊಡುಗೆ ಮಾಡಿವೆ. ಇಂತಹ ಶಬ್ದಗಳ ಒಂದು ಪಟ್ಟಿಯನ್ನೇ ಈ ಭಾಗ ಒಳಗೊಂಡಿದೆ. ಸುಗ್ರೀವಾಜ್ಞೆ, ಕಳ್ಳಸಂತೆ – ಇಂತಹವು ಕನ್ನಡದಕ್ಕೆ ಆಂಗ್ಲಮೂಲದಿಂದ ಆಮದಾದುವು ಎಂದು ಈ ಪಟ್ಟಿಯಲ್ಲಿ ಸೇರ್ಪಡೆಯಾಗಿವೆ.

ಸಮೀಕ್ಷಿತಕೃತಿಯ ಎರಡನೆಯ ಭಾಗ ಬಹಳ ಸ್ವಾರಸ್ಯಕರವಾಗಿದ್ದು ಪ್ರಸ್ತುತ ನಿಘಂಟುವಿನ ಕೆಲವು ಮಾದರಿಗಳನ್ನು ನೀಡುತ್ತದೆ. ಇಲ್ಲಿ ನೆನಪಿಡಬೇಕಾದ ಒಂದು ಅಂಶವೆಂದರೆ ಈ ನಿಘಂಟುವಿನಲ್ಲಿ ಆಯ್ಕೆಮಾಡಲಾದ ವಿಷಯಗಳೆಂದರೆ ಪತ್ರಿಕೆ-ಯೊಂದರ ಅಂಕಣಲೇಖನಗಳಲ್ಲಿ ನಡೆದ ಸಂವಾದಗಳ ಮೂಲಕ ಲಭ್ಯವಾದುವು. ಸಂವಾದದಲ್ಲಿ ಪತ್ರಿಕೆಯ ಓದುಗರು ಕೇಳಿದ ಪ್ರಶ್ನೆಗಳ ಮಾದರಿಯನ್ನು ಈ ಎರಡನೆಯ ಭಾಗ ನೀಡುತ್ತದೆ. ನಿಘಂಟುಕಾರರು ಈ ಪ್ರಶ್ನೆಗಳನ್ನು ಮೂರು ವರ್ಗ-ಗಳಾಗಿ ವಿಂಗಡಿಸಿರುತ್ತಾರೆ. (೧) ಆಸಕ್ತ ವಿದ್ವಾಂಸರ ಪ್ರಶ್ನೆಗಳು, (೨) ಅಧ್ಯಾಪಕ-ವಿದ್ಯಾರ್ಥಿಗಳಿಗೆ ತಲೆದೋರಿದ ಸಂಶಯಗಳು, (೩) ಶ್ರೀಸಾಮಾನ್ಯರ ಪ್ರಶ್ನೆಗಳು.

ವಿದ್ವಾಂಸರ ಪ್ರಶ್ನೆಗಳಲ್ಲಿ ಕೆಲವು ಅಪರೂಪದ ಬರಹಗಳ ಭಾಷೆ-ಅರ್ಥ ಮೊದಲಾದುವು, ಕ್ಲಿಷ್ಟವಚನಗಳ ಅರ್ಥ, ಕುಮಾರವ್ಯಾಸನಂತಹವರ ಕಾವ್ಯಗಳಲ್ಲಿಯೇ ಮೇಲ್ನೋಟಕ್ಕೆ ಕಂಡುಬರುವ ಕೆಲವು ಅರ್ಥಕ್ಲೇಶ, ರೂಢಿಯಲ್ಲಿರುವ ಕೆಲವು ಗಾದೆಯ ಮಾತುಗಳ ಸಂದರ್ಭ, ಕೆಲವು ಒಗಟುಗಳಂತಹ ನಿರೂಪಣೆಗಳು – ಇಂತಹವುಗಳಿಗೆ ಸಂಬಂಧಿತವಾಗಿದ್ದು ಇದನ್ನು ನಿಘಂಟುಕಾರರು ಉತ್ತರಿಸಿದ ರೀತಿಗಳು ನಿಘಂಟು-ವಿನಲ್ಲಿ ಮುದ್ರಿತವಾಗಿವೆ. ಅಧ್ಯಾಪಕ-ವಿದ್ಯಾರ್ಥಿಗಳೊಳಗಿನ ಪ್ರಶ್ನೆಗಳಲ್ಲಿ ಸಮೀಪಾರ್ಥದ ಕೆಲವು ಪದಗಳೊಳಗಿನ ಅರ್ಥಗಳಲ್ಲಿರುವ ಸೂಕ್ಷ್ಮವ್ಯತ್ಯಾಸ, ವಿರುದ್ಧಪದ, ಪರ್ಯಾಯ ಪದ – ಇಂತಹವನ್ನು ಹುಡುಕುವಲ್ಲಿರುವ ಸಮಸ್ಯೆಗಳು, ವರ್ಣಮಾಲೆಯಂತಹ ಮೂಲಭೂತವಿಷಯಗಳಲ್ಲಿ ವಿದ್ವಾಂಸರಲ್ಲೂ ಉಳಿದುಕೊಂಡಿರುವ ಸಂದೇಹಗಳು – ಇಂತಹವು ಕಾಣಿಸುತ್ತವೆ. ಶ್ರೀಸಾಮಾನ್ಯರ ಪ್ರಶ್ನೆಗಳಲ್ಲಿ ದಿನನಿತ್ಯವೂ ಬಳಸಲ್ಪಡುವವು-ಗಳಾದರೂ ಕೆಲವು ಶಬ್ದಗಳ ನಿಜವಾದ ಅರ್ಥ ತಿಳಿಯದಿರುವುದು – ಇಂತಹವು ಕಂಡುಬರುತ್ತವೆ. ಹೆಚ್ಚಿನ ಸಂದರ್ಭಗಳಲ್ಲಿಯ ಉತ್ತರಗಳು ಸಮರ್ಪಕವೂ ಸಮಾಧಾನಕರವೂ ಆಗಿದ್ದು ನಿಘಂಟುವಿನ ತೂಕವನ್ನು ಹೆಚ್ಚಿಸುತ್ತಲೇ ಮುಂದೆ ಸಾಗುತ್ತವೆಯಾದರೂ ಕೆಲವೊಂದು ಅನವಧಾನಗಳನ್ನು ಗಮನಕ್ಕೆ ತರುವುದು ನಿಘಂಟುವಿನ ಪುನರ್ಮುದ್ರಣ ಮೊದಲಾದ ಸಂದರ್ಭಗಳಲ್ಲಿ ಪರಿಷ್ಕರಣಕ್ಕೆ ಸಹಕಾರಿಗಳಾಗಬಹುದೆಂಬ ಸದುದ್ದೇಶದಿಂದ ಪ್ರಸ್ತುತಲೇಖನವು ಕೆಲವೊಂದು ಸಮೀಕ್ಷಾಸೂಚನೆಗಳನ್ನು ವಿನಮ್ರವಾಗಿ ನೀಡಬಯಸುತ್ತದೆ.

ವಿದ್ವಾಂಸರ ಪ್ರಶ್ನೆಗಳಲ್ಲಿ ಸರ್ವಜ್ಞವಚನರೂಪದಲ್ಲಿ ಒಂದು ಪ್ರಹೇಳಿಕೆ ಇದೆ. ಅದರ ಪ್ರಕಾರ, ಬ್ರಹ್ಮನು ಆಡಾಗಿಯೂ ವಿಷ್ಣುವು ಕೋತಿಯಾಗಿಯೂ ಶಿವನು ನರಿಯಾಗಿಯೂ ಕಾಣಿಸುತ್ತಾರೆ – ಎಂದರೇನು? ಬ್ರಹ್ಮಪರ್ಯಾಯವಾದ ಅಜಶಬ್ದಕ್ಕೆ 'ಆಡು' ಎಂಬ ಅರ್ಥ ಇದೆ. ವಿಷ್ಣುಪರ್ಯಾಯವಾದ ಹರಿಶಬ್ದಕ್ಕೆ 'ಕೋತಿ' ಎಂಬ

ಅರ್ಥ ಇದೆ. ಶಿವನಿಗೆ 'ನರಿ' ಎಂಬ ಅರ್ಥದ ಪರ್ಯಾಯನಾಮವಿಲ್ಲ. ನಿಘಂಟು–ಕಾರರು ಬಿಡಿಸಿದಂತೆ 'ಶಿವಾ' ಎಂದು ಹೆಣ್ಣುನರಿಗೆ ಹೆಸರಿರುವುದರಿಂದ ಅದರ ಪುಂಲಿಂಗರೂಪವಾದ 'ಶಿವ' ಪದಕ್ಕೆ 'ನರಿ' ಎಂದರ್ಥ ಮಾಡಬಹುದು. ಇಲ್ಲಿ ಕಾಣುವ ಅನವಧಾನವೆಂದರೆ – 'ಶಿವಾ' ಎಂಬುದು ಹೆಣ್ಣು ನರಿಗೆ ಮಾತ್ರ ಅನ್ವಯಿಸುವ ಶಬ್ದವೆಂದು ಭ್ರಮಿಸಿರುವುದು. ಅದು ನರಿ ಎಂಬ ಅರ್ಥ ಕೊಡುವ ಸ್ತ್ರೀಲಿಂಗ ಶಬ್ದ ಮಾತ್ರ. ನಿಘಂಟುಕಾರನು 'ಶಿವ' ಎಂಬುದು 'ಶಿವಾ' ಎಂಬುದಕ್ಕೆ ಮಾಡಲಾದ ತದ್ಭವವೆನ್ನುತ್ತಾರೆ. ಅದೂ ಸಮರ್ಪಕವಾಗಿ ಕಾಣುವುದಿಲ್ಲ. 'ಶಿವ' ಎಂಬುದು 'ಶಿವಾ' ಎಂಬ ಸ್ತ್ರೀಲಿಂಗಶಬ್ದದಿಂದುಂಟಾದ ಪುಂಲಿಂಗರೂಪವೆಂದು ಕೃತಕವ್ಯಾಖ್ಯಾನವನ್ನು ಮಾಡಿಕೊಂಡು ಒಗಟಿನ ಸಮಸ್ಯೆಯನ್ನು ಪರಿಹರಿಸಬೇಕು ಎಂಬುದು ವಿವರಣೆ. ಇಂತಹ ಅನವಧಾನಗಳು ಹೆಚ್ಚು ಇರಲಾರವು. ಆದರೂ ಗ್ರಂಥಪರಿಷ್ಕರಣ ಸಂದರ್ಭದಲ್ಲಿ ಗಮನಾರ್ಹವಾದವು.

ಅಧ್ಯಾಪಕ–ವಿದ್ಯಾರ್ಥಿಗಳ ಸಂದೇಹಗಳಿಗೆ ಉತ್ತರ ಹೇಳುವಲ್ಲಿ ವರ್ಣಮಾಲೆ–ಯಲ್ಲಿಯ ಋ–ೠ ವಿಚಾರ ಬರುತ್ತದೆ. (ಪು. ೨೦–೩೧) ಅ–ಆ..... ಋ–ೠಗಳ ಅನಂತರದ ಸ್ವರವನ್ನು ಆವರಣದಲ್ಲಿ (ಲ್ರು ಎಂದು ಉಚ್ಚರಿಸಬೇಕು) ಎಂದಿದೆ. 'ಌ' ಕಾರ(ಸ್ವರವರ್ಣ – ಅದಕ್ಕೆ ಪ್ರತ್ಯೇಕ ಲಿಪಿ ಇದೆ) – ಅದರ ಉಚ್ಚಾರಣೆಯ ಬಗೆಗಿನ ಸೂಚನೆ ಸರಿಯಲ್ಲವೆಂದು ತೋರುತ್ತದೆ. ದಿ. ಸೇಡಿಯಾಪು ಕೃಷ್ಣ ಭಟ್ಟರಂತಹ ವಿದ್ವಾಂಸರು ಅದನ್ನು 'ಲ್ರು' ಎಂದು ಉಚ್ಚರಿಸಬಾರದೆಂದೂ ಹೇಳಿರುತ್ತಾರೆ. ಪಾಶ್ಚಾತ್ಯವಿದ್ವಾಂಸರೂ ಇದನ್ನೇ ಸಮರ್ಥಿಸುತ್ತಾರೆ: The ṛ and ḷ vowels. To the three simple vowels (a, i, u) the Sanskrit adds two others, the ṛ vowel and the ḷ vowel. (W.D. Whitney - Sanskrit Grammar - Harward Varsity Press - 1955, p 11) ಭಾಷಾಶಾಸ್ತ್ರಜ್ಞರು ಹೇಳುವಂತೆ, ಈ ವರ್ಣ ಪ್ರಯುಕ್ತವಾಗುವುದು 'ಕ್ಲೃಪ್ತ' ಎಂಬ ಒಂದು ಶಬ್ದದಲ್ಲಿ ಮಾತ್ರ; ಅದರ ಉಚ್ಚರಣೆ ಅಲ್ಲಿಯೇ ಸ್ಪಷ್ಟವಾಗುತ್ತದೆ.

ಶ್ರೀಸಾಮಾನ್ಯನು ಕೇಳಿದ ಪ್ರಶ್ನೆಗಳಲ್ಲಿ ಕೃಷಿಭೂಮಿಗೆ ಸಂಬಂಧಿಸಿದಂತೆ ದಾಖಲೆ ಪತ್ರಗಳಲ್ಲಿ ಪ್ರಯುಕ್ತವಾಗುವ ಕೆಲವು ಶಬ್ದಗಳಿವೆ. ಅವುಗಳ ಅರ್ಥವನ್ನು ನಿಘಂಟು ಸುಂದರವಾಗಿ ವಿವರಿಸುತ್ತದೆ. ಅವುಗಳ ಮೂಲಭಾಷೆಯನ್ನು ಸಾಧ್ಯ–ವಾದಷ್ಟು ಗುರುತಿಸುತ್ತದೆ. ಕಾವ್ಯಾದಿಗಳನ್ನು ಓದುವವರಿಗೆ ಅಪರಿಚಿತವಾದ ಒಂದು ಶಬ್ದಪ್ರಪಂಚ ಕನ್ನಡದಲ್ಲಿರುವುದನ್ನು ನಿಘಂಟು ಸಮರ್ಪಕವಾಗಿ ದಾಖಲಿಸುತ್ತದೆ.

ಹೀಗೆಯೇ ಸಂಸ್ಕೃತವ್ಯಾಕರಣದಲ್ಲಿ ಬರುವ 'ಉಪಸರ್ಗ' ಎಂಬ ಪಾರಿಭಾಷಿಕ ಶಬ್ದವನ್ನು ಅನೇಕ ವಿದ್ವಾಂಸರು 'preposition' ಎಂದು ಇಂಗ್ಲಿಷಿಗೆ ಅನುವಾದಿಸುತ್ತಾರೆ. ಪ್ರಸ್ತುತ ನಿಘಂಟುವೂ ಇದನ್ನು ಗತಾನುಗತಿಕವಾಗಿ ಅನುಸರಿಸುತ್ತದೆ. ಇದು ಯಾವರೀತಿಯಲ್ಲಿಯೂ ಸಮರ್ಪಕವಾಗಿ ಕಂಡುಬರುವುದಿಲ್ಲ. ಪ್ರಸ್ತುತ ನಿಘಂಟುವಿನ (ಪ್ರ.ಮು. 1996) ಸಂಪುಟ ೧೮ ೯೫೫ನೆಯ ಪುಟದಲ್ಲಿ ಈ ಶಬ್ದವನ್ನು ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ. ಇಲ್ಲಿ ಉಪಸರ್ಗವನ್ನು ಅವ್ಯಯದ ಒಂದು ಪ್ರಭೇದವೆಂದು ಹೇಳಿ ಈ ಅನುವಾದವನ್ನು ಮಾಡಲಾಗಿದೆ. ಅಲ್ಲದೆ, ಸಂಸ್ಕೃತದಲ್ಲಿ

ಅವ್ಯಯಗಳನ್ನು ಐದು ಬಗೆಯಾಗಿ ವಿಂಗಡಿಸಿದ್ದಾರೆಂದು ಮೇಲೆ ಉಪಸರ್ಗ, ಕ್ರಿಯಾವಿಶೇಷಣ, ಸಮುಚ್ಚಯಾರ್ಥಕನಿಪಾತ, ಭಾವಾರ್ಥಕನಿಪಾತ, ಪದಪೂರಣಾರ್ಥ ಎಂದು ಅವುಗಳನ್ನು ವಿಂಗಡಿಸಿ ಪಟ್ಟಿಮಾಡಲಾಗಿದೆ. ಈ ಐದು ಪ್ರಭೇದರೂಪದ ವರ್ಗೀಕರಣ ವೈಜ್ಞಾನಿಕವಾಗಿ ಕಾಣುವುದಿಲ್ಲ. ಸಮುಚ್ಚಯಾರ್ಥಕ ನಿಪಾತಗಳನ್ನು ಹೇಳಲಾಗಿದೆ. – ವಿರೋಧಾರ್ಥವವುಗಳನ್ನು ಹೇಳಿಲ್ಲ. ವಿರೋಧಾರ್ಥಕವಾದ 'ತು' – ಇಂತಹ ಅವ್ಯಯಗಳಿಗೆ ಎಲ್ಲಿ ಸ್ಥಾನವೆಂದು ತಿಳಿಯುವುದಿಲ್ಲ. ಕ್ರಿಯಾ ವಿಶೇಷಣಾವ್ಯಯಗಳೆಂಬ ಒಂದು ವರ್ಗವನ್ನು ಹೇಳಲಾಗಿದೆ. ಸಂಸ್ಕೃತದಲ್ಲಿ ಇಂತಹ ವರ್ಗವಿದ್ದಂತೆ ಕಾಣುವುದಿಲ್ಲ. ನಾಮರೂಪಗಳು ಸಾಂದರ್ಭಿಕವಾಗಿ ಕ್ರಿಯಾ-ವಿಶೇಷಣಗಳಾಗುವ ಸಂದರ್ಭಗಳು ಹೆಚ್ಚು. ಆಶ್ಚರ್ಯಾದಿಗಳನ್ನು ಸೂಚಿಸುವ ಅವ್ಯಯಗಳನ್ನು 'ಭಾವಾರ್ಥಕ'ವೆಂದು ಹೇಳಲಾಗಿದೆ. ಇದರ ಬದಲಿಗೆ 'ಭಾವನಾ-ವಿಶೇಷಸೂಚಕ' ಎಂದರೆ ಸರಿಹೋಗಬಹುದೋ ಏನೋ. 'ಭಾವ' ಎಂಬ ವ್ಯಾಕರಣ ಶಬ್ದ ಅಮೂರ್ತತೆ ಮೊದಲಾದುವನ್ನು ಸೂಚಿಸುವಂತಹುದು. ಕೆಲವೊಮ್ಮೆ 'ಕ್ರಿಯೆ' ಎಂಬರ್ಥವನ್ನು ಕೊಡುವಂತಹುದು. ಹೀಗೆ ಈ ಅಂಶ ಅನೇಕ ಗೊಂದಲಗಳಿಂದ ಕೂಡಿದ್ದು ಪುನರ್ವಿಮರ್ಶೆಗೆ ಯೋಗ್ಯವಾಗಿದೆ ಎಂದು ನಮ್ರತೆಯಿಂದ ಸೂಚಿಸ-ಬಹುದೆನಿಸುತ್ತದೆ. 'preposition' ಎನ್ನುವ ಇಂಗ್ಲಿಷ್ ಪದವನ್ನು ವಿಟ್ನಿಯವರ Sanskrit Grammar ಎಂಬ ಪುಸ್ತಕ ಈ ರೀತಿ ಪರಿಚಯಿಸುತ್ತದೆ: There is no proper class of prepositions (in the modern sense of the term), no body of words having for their prevailing office of the 'government' of nouns. But many of the adverbial words are used with nouns in a way, which approximates them to the more fully developed prepositions of other languages….'

If one and another of such words as vinā, ṛtē - occurs almost solely in prepositional use.....

ಹೀಗೆ ಪರಿಷ್ಕರಣೀಯಾಂಶಗಳನ್ನು ಸೂಚಿಸುವುದು ನಿಘಂಟುವಿನ ಪುನ-ರ್ಮುದ್ರಣಾದಿ ಸಂದರ್ಭಗಳ ಹಿತಕ್ಕಾಗಿ ಹೊರತು ನಿಘಂಟುವನ್ನು ಲಘೂಕರಿಸು-ವುದಕ್ಕಲ್ಲವೆಂದು ಪುನಃ ಪುನಃ ಹೇಳಬಯಸುತ್ತೇನೆ.

ನಿಘಂಟುವಿನ ಪ್ರವೇಶ ಸಿದ್ಧತೆಯಲ್ಲಿ ಅನೇಕ ಒಗಟುಗಳಂತಹ ಅಂಶಗಳನ್ನು ಸ್ಪಷ್ಟಪಡಿಸಿರುವುದು ನಿಘಂಟುವಿನ ಸಾಮಾಜಿಕತ್ವವನ್ನು ಎತ್ತಿ ತೋರಿಸುತ್ತದೆ. ಉದಾಹರಣೆಗೆ 'ಗಾಳಿ ನುಂಗುವ ಮಂಚ', 'ದಂಡಂ ದಶಗುಣಂ ಭವೇತ್' – ಇಂತಹ ಅಂಶಗಳು. ಹೆಚ್ಚಿನ ಕನ್ನಡ ನಿಘಂಟುಗಳು ಶುದ್ಧ ಕನ್ನಡ ಮತ್ತು ಸಂಸ್ಕೃತ ಮೂಲತ್ವ ಎಂಬ ಎರಡು ಅಂಶಗಳನ್ನು ಅವಧರಿಸಿ ರಚಿತವಾಗಿದ್ದವೆ. ಪ್ರಸ್ತುತ ನಿಘಂಟು ಬಹುಭಾಷಾಜ್ಞತ್ವದ ಹಿನ್ನೆಲೆಯಿಂದ ಉಂಟಾದುದೆಂಬುದು ಅಲ್ಲಲ್ಲಿ ಗಮನಾರ್ಹವಾಗಿದೆ. ನಿಘಂಟುವಿನಲ್ಲಿ ಇದೊಂದು ಅಪೇಕ್ಷಣೀಯವಾದ ಅಂಶ. ಉದಾಹರಣೆಗೆ 'ಐಷಾರಾಮು' ಎಂಬ ಶಬ್ದ. ಇದರ ಬಗೆಗೆ ಕೆಲವರು ಚಿಂತಿಸಿರು-

ವುದು ನನ್ನ ಗಮನಕ್ಕೆ ಬಂದಿದೆ. ಅಂತಹ ಅಂಶಗಳನ್ನು ಪ್ರಸ್ತುತ ನಿಘಂಟು ಸಮರ್ಪಕವಾಗಿ ವಿವರಿಸಿದೆ : ಇದರಲ್ಲಿ ಎರಡು ಶಬ್ದಗಳಿವೆ. 'ಐಷ' ಎಂಬುದು ಅರಬ್ಬಿ, 'ಆರಾಮ್' ಎಂಬುದು ಪಾರ್ಸಿ. ಎರಡೂ ಸೇರಿ ಒಂದೇ ಪದವಾಗಿದೆ. ಅರ್ಥ – ಸುಖೋಪಭೋಗ.

ಹೀಗೆಯೇ 'ಅಪಿ ಸ್ವರ್ಣಮಯೀ ಲಂಕಾ....' ಎಂಬ ಶ್ಲೋಕ ರಾಮಾಯಣದ್ದು ಹೌದೇ ಅಲ್ಲವೇ ಎಂದು ಅನೇಕರು ತಲೆಕೆಡಿಸಿಕೊಂಡಿದ್ದಾರೆ. ಪ್ರಸ್ತುತ ನಿಘಂಟು ಅದು ರಾಮಾಯಣದ್ದಲ್ಲವೆಂದೂ ಇತ್ತೀಚೆಗಿನ ದೇಶಭಕ್ತರ ರಚನೆ ಇರಬಹುದೆಂದೂ ಸೂಚಿಸುತ್ತದೆ. ಸೂಚನೆ ಸರಿಯಿದ್ದಂತೆ ತೋರುತ್ತದೆ. ಆದರೂ ಇನ್ನೂ ಹೆಚ್ಚು ಸಂಶೋಧನಾತ್ಮಕವಾಗಿ ನೋಡಬಹುದು ಎನಿಸುತ್ತದೆ.

ಒಬ್ಬ ವ್ಯಕ್ತಿಯು ವಿಷಯನಿರೂಪಣೆ ಮಾಡುವಾಗ ಆ ವಿಷಯದ ಎಲ್ಲ ಅಂಶಗಳೂ ನಿರೂಪಣೆಯಲ್ಲಿ ಬರುವುದಿಲ್ಲವೆಂಬುದನ್ನು ಈ ಲೇಖನದಲ್ಲಿ ಹಿಂದೆಯೇ ನಿರೂಪಿಸಲಾಗಿದೆ. ನಿಘಂಟುವಾದರೂ ಅಷ್ಟೆ. ಅದರಲ್ಲಿ ನಿಘಂಟುಕಾರ ಶಬ್ದವೊಂದಕ್ಕೆ ಸಂಬಂಧಿಸಿ ಎಲ್ಲ ವಿಚಾರಗಳನ್ನು ತಿಳಿಸಿದ್ದಾನೆಂದರ್ಥವಲ್ಲ; ಪ್ರಸ್ತುತ ಸಂದರ್ಭಕ್ಕೆ ಬೇಕಷ್ಟನ್ನು ತಿಳಿಸಿದ್ದಾನೆಂದು ತಿಳಿಯಬೇಕು. ಇಲ್ಲಿಯ ಎಷ್ಟೋ ಶಬ್ದಗಳ ವಿವರಣೆಗಳನ್ನು ಕಂಡಾಗ 'ಇನ್ನೊಂದಿಷ್ಟು ವಿವರಗಳಿರಬಹುದಿತ್ತು' ಎಂಬ ಅಭಿಪ್ರಾಯ ಬರುವಂತಿದೆ. ಆದರೆ ನಿಘಂಟುಕಾರರು ಯಾವುದೋ ಮಿತಿಯನ್ನಿರಿಸಿಕೊಂಡು ನಿರೂಪಿಸಿದ್ದಾರೆ. ಆ ವಿಷಯಕ್ಕೆ ಸಂಬಂಧಿಸಿದಂತೆ ಅವರಲ್ಲಿ ಸರಕು ಇನ್ನೂ ಇರಬಹುದು. ಅಲ್ಲದೆ ಇವುಗಳಲ್ಲಿ ಎಷ್ಟೋ ವಿವರಣೆಗಳು ಯಾರದೋ ಪತ್ರರೂಪದ ಪ್ರಶ್ನೆಗಳಿಗೆ ಉತ್ತರಗಳು. ಪ್ರಶ್ನೆಗಳಾಗಲಿ, ಅವುಗಳನ್ನು ಕೇಳಿದ ವ್ಯಕ್ತಿಗಳಾಗಲಿ ಇದಿರಿನಲ್ಲಿಲ್ಲ. ಆದರೂ ಕಲ್ಪಿಸಿಕೊಂಡು ಅವರವರ ಮಟ್ಟಕ್ಕನುಗುಣವಾದ ವಿವರಗಳನ್ನು ನೀಡಲಾಗಿದೆ. ಆದುದರಿಂದ ಈ ನಿಘಂಟು ಏಕರೂಪದ ಲಕ್ಷ್ಯಸಮುದಾಯಕ್ಕೆ ಹೇಳಿದಂತಿಲ್ಲ. ಮೂರೂ ಸಂಪುಟಗಳನ್ನು ಒಟ್ಟು ಸೇರಿಸಿ ಅಕಾರಾದಿಗೊಳಿಸಿ ಪುನಃ ಸಂಪಾದಿಸುವಾಗ ಇವುಗಳನ್ನು ಸರಿಪಡಿಸಿಕೊಳ್ಳಲು ಅವಕಾಶಗಳಿವೆ.

ಪುನರ್ಮುದ್ರಣಾದಿ ಸಂದರ್ಭಗಳಲ್ಲಿ ಗಮನದಲ್ಲಿರಿಸಬಹುದಾದ ಇನ್ನೂ ಕೆಲವು ಅಂಶಗಳನ್ನು ಸೂಚಿಸಬಯಸುತ್ತೇನೆ :

೧) ಮೂರು ಸಂಪುಟಗಳನ್ನು ರಚಿಸುವಾಗ ಮೊದಲ ಸಂಪುಟದ ಮುಂದುವರಿಯುವಿಕೆಗಳಂತೆ ಮುಂದಿನ ಸಂಪುಟಗಳನ್ನು ಯೋಜಿಸಬಹುದಾಗಿತ್ತು. ಪ್ರಸ್ತುತ ಯೋಜನೆಯಲ್ಲಿ ಮೂರರಲ್ಲಿಯೂ ಶಬ್ದಗಳು ಅಕಾರದಿಂದ ಪ್ರಾರಂಭಿಸಿ ಹಕಾರದ ತನಕ ಮುಂದುವರಿಯುತ್ತವೆ. ಇದಕ್ಕೆ ಅಂಕಣ ಬರಹಗಳ ಸಂಯೋಜನೆ ಕಾರಣವಾಗಿರಬಹುದಾದರೂ ಈ ವಿಷಯದಲ್ಲಿ ಇತರ ನಿಘಂಟುಗಳ ಮಾದರಿಯನ್ನು ಅನುಸರಿಸಬಹುದಾಗಿತ್ತು. ಪ್ರಸ್ತುತಸ್ಥಿತಿಯಲ್ಲಿ ಒಂದು ಶಬ್ದ ಇದೆಯೋ ಇಲ್ಲವೋ ಎಂದು ಮೂರೂ ಸಂಪುಟಗಳನ್ನು ನೋಡಿಯೇ ನಿರ್ಣಯಿಸಬೇಕಷ್ಟೆ.

೨) ಪ್ರವೇಶಪದ್ಧತಿಗಳು ಮೂರಕ್ಕೂ ಸಮಾನವಾಗಿ ಅನ್ವಯಿಸುವುದರಿಂದ ಮೊದಲನೆಯದಕ್ಕೆ ವಿವರವಾಗಿ ಬರೆದು ಮುಂದಿನವುಗಳಿಗೆ ಸಂಕ್ಷಿಪ್ತವಾಗಿ ಬರೆಯಬಹುದಿತ್ತು.

೩) 'ಸಾಮಾಜಿಕ ನಿಘಂಟು' ಎಂಬ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿ ಉಳಿದ ನಿಘಂಟುಗಳಿಗೆ ಹೋಲಿಸಿದಾಗ ಯಾವ ಅನನ್ಯತೆ ಸಾಮಾಜಿಕ ನಿಘಂಟುವಿನ ವ್ಯಾವರ್ತಕವಾಗಿದೆ ಎಂಬ ಅಧ್ಯಯನವನ್ನು ಮಾಡಬಹುದಾಗಿತ್ತು.

೪) ಸಾಮಾಜಿಕ ನಿಘಂಟುಗಳು ಎಂಬ ವಿಭಾಗ ಬೇರೆ ಭಾಷೆಗಳಲ್ಲಿ ಇದ್ದಲ್ಲಿ ಅವುಗಳ ಸ್ವರೂಪವೇನೆಂಬುದನ್ನು ವಿವರಿಸಿ ಅವುಗಳೊಂದಿಗೆ ಪ್ರಸ್ತುತ ಕೃತಿಯನ್ನು ಹೋಲಿಸಿ ಇದರ ಸ್ಥಾನ ಮತ್ತು ಮಹತ್ತ್ವವನ್ನು ನಿರೂಪಿಸಬಹುದಿತ್ತು.



---

ಶಬ್ದಾರ್ಥವನ್ನು ತಿಳಿಸುವ ಕೆಲವು ಬೇರೆ ಬೇರೆ ಮಾರ್ಗಗಳಿವೆ ೧. ವಿವರಿಸುವುದು ಮತ್ತು ಸೂತ್ರಪ್ರಾಯವಾಗಿ ನಿರೂಪಿಸುವುದು. ೨. ನಿಘಂಟಿನಲ್ಲಿರುವ ಇತರ ಶಬ್ದಗಳನ್ನು ಸಮಾನಾರ್ಥಕವಾಗಿ ಸೂಚಿಸು-ವುದು. ೩. ಅರ್ಥಸ್ಫುಟೀಕರಣಕ್ಕಾಗಿ ದೃಷ್ಟಾಂತಗಳನ್ನು ನೀಡುವುದು. ೪. ಚಿತ್ರಗಳನ್ನು ಮುದ್ರಿಸುವುದು. ಒಳ್ಳೆಯ ಅರ್ಥವೆಂಬುದು ಸಂಗ್ರಹವಾಗಿ, ನಿರ್ಧಾರಿತವಾಗಿ, ಸ್ಪಷ್ಟವಾಗಿ ಇರಬೇಕು. ಓದುವವರಿಗೆ ಸಂಪೂರ್ಣ-ವಾಗಿ ತಿಳಿಯುವಂತಿರಬೇಕು. ಅನೇಕಾರ್ಥಗಳಿದ್ದರೆ, ಅವುಗಳ ಪರಸ್ಪರ ಸಂಬಂಧ ತಿಳಿಯುವಂತಿರಬೇಕು. ಇವುಗಳ ನಿರೂಪಣೆಯಲ್ಲಿ ಯಾವುದಾದರೂ ಒಂದು ಕ್ರಮವಿರಬೇಕು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಇಗೋ ಕನ್ನಡ - ಸಂಪುಟ : ೨

ಪ್ರೊ. ಮುರಳೀಧರ ಉಪಾಧ್ಯ, ಹಿರಿಯಡಕ

ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟ'ನ ಮೊದಲ ಸಂಪುಟದಲ್ಲಿ 'ಇಗೋ' ಶಬ್ದದ ಎದುರು 'ಇದೆಕೊಳ್ ನೋಡು' ಎಂದು ಕೊಂಡಿ ನೀಡಲಾಗಿದೆ. 'ಇದೆಕೊಳ್' ಹುಡುಕಿದಾಗ ಅದರ ಎದುರು ಮುದ್ದಣನ 'ಅದ್ಭುತ ರಾಮಾಯಣ'ದ ವಾಕ್ಯ ಸಿಕ್ಕಿತು. 'ನಿನ್ನೀ ಅದ್ಭುತರೂಪಮಂ ಕಾಣುತೆ ಇದೆಕೊಳ್! ಮುನಿಗಳೆಲ್ಲರುಂ ಬೆದರ್ಕೆಯಿಂದಂ ನಡುಗುವರ್' (ಅದ್ಭುತ ೫೨-೧೯)

ಪ್ರಜಾವಾಣಿಯಲ್ಲಿ 1991ರಿಂದ ಪ್ರಕಟವಾಗುತ್ತಿದ್ದ ಪ್ರೊ. ಜಿ. ವೆಂಕಟಸುಬ್ಬಯ್ಯ-ನವರ 'ಇಗೋ ಕನ್ನಡ' ಅಂಕಣ ತುಂಬ ಜನಪ್ರಿಯವಾಗಿತ್ತು. ಓದುಗರ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಜಿ.ವಿ ಅವರು ಕನ್ನಡದ ಹೊಸ ಬಗೆಯ ನಿಘಂಟನ್ನು-ಸಾಮಾಜಿಕ ನಿಘಂಟು - ಬರೆದರು. 'ಇಗೋ ಕನ್ನಡ'ದ ಮೊದಲ ಸಂಪುಟದ 'ಈ ನಿಘಂಟಿಗೆ ಒಂದು ಪ್ರವೇಶಸಿದ್ಧತೆ'ಯಲ್ಲಿ ಅವರು ಬರೆದಿರುವಂತೆ, -

'ಇಗೋ ಕನ್ನಡ' ನಿಘಂಟಿನಲ್ಲಿ ಆರಿಸಿರುವ ಶಬ್ದಗಳೂ, ಅವುಗಳ ವ್ಯುತ್ಪತ್ತಿ, ಅರ್ಥವಿಸ್ತಾರ, ಶಬ್ದಸ್ವರೂಪ, ರೂಢಿ, ಪ್ರಯೋಗ ಇವುಗಳೂ ಸಾಮಾನ್ಯ ಜೀವನಕ್ಕೆ ಸಂಬಂಧಪಟ್ಟವು. ಜನರು ಪ್ರಶ್ನೆಗಳನ್ನು ಕಳುಹಿಸಿದಾಗ ಅವನ್ನು ನಾನು ಮೂರು-ವಿಧವಾಗಿ ವಿಂಗಡಿಸುತ್ತಿದ್ದೆ.

೧. ಆಸಕ್ತ ವಿದ್ವಾಂಸರಿಗೆ ತಲೆದೋರುವ ಪ್ರಶ್ನೆಗಳು
೨. ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಗೆ ತೋರುವ ಸಂಶಯಗಳು
೩. ಸಾಮಾನ್ಯ ಓದುಗರು ಎದುರಿಸುವ ಪ್ರಶ್ನೆಗಳು

ಇದಲ್ಲದೆ ಶಬ್ದಗಳ ಅರ್ಥವಿಶೇಷ, ಗಾದೆಗಳ ಅರ್ಥ, ಕವಿಪ್ರಯೋಗಗಳ ಅಂತರಾರ್ಥ ಇತ್ಯಾದಿಗಳನ್ನು ಕುರಿತು ಈ ನಿಘಂಟಿನಲ್ಲಿ ವಿವರಿಸಿದ್ದೇನೆ.'

'ಅಂತರ ಪಿಶಾಚಿ' ಶಬ್ದದ ಕತೆಯನ್ನು ವಿವರಿಸಿದ ಬಳಿಕ ಜಿ. ವಿ. ಅವರು 'ಸಂಸ್ಕೃತದಲ್ಲಿ 'ಅಂತರಪಿಶಾಚಿ' ಎಂಬ ಶಬ್ದವೇ ಪ್ರಯೋಗದಲ್ಲಿಲ್ಲ' ಎಂದು ಸ್ಪಷ್ಟಪಡಿಸಿದ್ದಾರೆ. ಜೈನಪುರಾಣಗಳಲ್ಲಿ 'ವ್ಯಂತರ' ಶಬ್ದವಿದೆ. ವ್ಯಂತರ ಈ ವರ್ಗದಲ್ಲಿ ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ, ಪಿಶಾಚ

ನಿಜ. ಎಂಟು ಬಗೆ. ಕೆಲವರು ಸತ್ತ ಮನುಷ್ಯರು ಸ್ವತಂತ್ರರಾಗಿ ಹುಟ್ಟುತ್ತಾರೆ ಎಂಬುದು ಜೈನರ ನಂಬಿಕೆ. 'ಹೀಗೆ ಸ್ವತಂತ್ರರಾಗಿರುವುದು ಕೂಡ, ಮರ್ಮರಣ ಹೊಂದಿದವರು ತೇಲಲಾಗುವುದು ಕೂಡ ಯಾವುದೋ ಸಂಬಂಧ ಬೆಳೆದು 'ಅಂತರಪಿಶಾಚಿ' ಎಂಬ ಮಾತು ಸೃಷ್ಟಿಯಾಗಿರಬೇಕು.' ಎನ್ನುತ್ತಾರೆ ಜಿ. ವೆಂಕಟ-ಸುಬ್ಬಯ್ಯ.

ಕೈದಿ, ಅಹವಾಲು, ಫಜೀತಿ(ಅರಬಿ) ಉಸ್ತುವಾರಿ, ಉಸ್ತಾದ್(ಪಾರಸಿ) ಇಂಥ ಅನ್ಯದೇಶ್ಯ ಶಬ್ದಗಳ ವಿವರಣೆ ಗಮನಸೆಳೆಯುತ್ತವೆ. 'ಪ್ರೋಡಿ' ಎಂಬ ತುಳು ಶಬ್ದಕ್ಕೆ 'ಒಂದು ಚೂರು, ಸಣ್ಣ ಭಾಗ' ಎಂದು ಅರ್ಥ ನೀಡಿದ್ದಾರೆ. ಆದರೆ ತುಳುವಿನಲ್ಲಿ ಈ ಶಬ್ದಕ್ಕೆ ಬೇರೆ ಅರ್ಥಗಳಿವೆ. ಒಂದು – 'ಪ್ರೋಡಿಗೆ' – ಭಯ, ಬೆದರಿಕೆ. ಇನ್ನೊಂದು ಗೆಣಸು, ಬಾಳೆಕಾಯಿ, ಬಟಾಟೆ ಮೊದಲಾದುವುಗಳನ್ನು ಕಡಲೆಹಿಟ್ಟಿನಲ್ಲಿ ಮುಳುಗಿಸಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ.

'ಊರ್ಮಿಳೆಯ ಸ್ನಾನ'ದ ವಿವರಣೆ ಕುತೂಹಲಕಾರಿಯಾಗಿದೆ. ಜನಕರಾಜನ ಮಗಳು, ಲಕ್ಷ್ಮಣನ ಹೆಂಡತಿ ಊರ್ಮಿಳೆ, ಗಂಡ ಕಾಡಿಗೆ ಹೋದದ್ದರಿಂದ ಅಯೋಧ್ಯೆಯಲ್ಲಿ ಒಂಟಿಯಾದಳು. 'ಏನೂ ಕೆಲಸವಿಲ್ಲದವಳು ಮಾಡುವುದಾದರೂ ಏನು? ಅಂಥ ಹೆಣ್ಣು ಸ್ನಾನಕ್ಕೆ ಇಳಿದರೆ, ಸ್ನಾನವನ್ನು ಬೇಗ ಮುಗಿಸಿ ಆಕೆ ಏನು ಮಾಡಬೇಕಾಗಿದೆ? ಅವಳು ನಿಶ್ಚಿಂತೆಯಾಗಿ ಬೇಕಾದಷ್ಟು ಕಾಲವನ್ನು ಸ್ನಾನಗೃಹದಲ್ಲಿ ಕಳೆದಿರಬೇಕೆಂಬುದು ಲೌಕಿಕ ಸ್ತ್ರೀಯರ ನಿರ್ಧಾರವಾಯಿತು. ಇವನ್ನು ಈ ರೀತಿ ತಿಳಿದು ಸ್ನಾನಗೃಹದಲ್ಲಿ ತಡಮಾಡಿದವರನ್ನು ಊರ್ಮಿಳೆಯ ಸ್ನಾನ ಮಾಡುತ್ತಿದ್ದಾಳೆ. ಎಂದು ಕರೆಯಲು ಪ್ರಾರಂಭ ಮಾಡಿದರು. ಬಹುಮರುಕಕ್ಕೆ ಕಾರಣವಾಗಬೇಕಾಗಿದ್ದ ಊರ್ಮಿಳೆಯ ಬದುಕನ್ನು ಕೆಲವರು ಸ್ತ್ರೀಯರು ಹೀಗೆ ಹಾಸ್ಯಕ್ಕೆ ತಿರುಗಿಸಿದ್ದರು. ಇದು ಹಿಂದಿನ ತಲೆಮಾರುಗಳ ಹೆಂಗಸರು ಮಾತನಾಡುತ್ತಿದ್ದ ರೀತಿ. ಈಗ ಹೀಗೆ ಯಾರೂ ಮಾತನಾಡುವುದಿಲ್ಲ. ಅಷ್ಟೇ ಅಲ್ಲ. ಊರ್ಮಿಳೆಯನ್ನು ಕುರಿತು ವಾಲ್ಮೀಕಿಯಿಂದ ಆದ ಔದಾಸೀನ್ಯವನ್ನು ಇಂದಿನ ಕವಿಗಳು ತಿದ್ದಿ ಸರಿಪಡಿಸಲು ಪ್ರಯತ್ನ ಮಾಡಿದ್ದಾರೆ. ಕುವೆಂಪು ಅವರ ರಾಮಾಯಣ ದರ್ಶನಂ ಕಾವ್ಯವನ್ನು ಓದಿ ನೋಡಿ' ('ಇಗೋ ಕನ್ನಡ' ಸಂ. ೨, ಪುಟ ೭೮)

ಅರಿಸಮಾಸವನ್ನು ವಿವರಿಸುತ್ತ ಜಿ. ವೆಂಕಟಸುಬ್ಬಯ್ಯನವರು ನೀಡುವ ಸಲಹೆ ಅನುಷ್ಠಾನಯೋಗ್ಯವಾಗಿದೆ. 'ಕನ್ನಡ ಭಾಷೆ ಬೆಳೆಯುತ್ತ ಬಂದಂತೆಲ್ಲ ಕನ್ನಡ ಶಬ್ದಗಳ ಜತೆ ಇಂಗ್ಲಿಷ್, ಉರ್ದು, ಮುಂತಾದ ಭಾಷೆಯ ಶಬ್ದಗಳೇ ಬಳಕೆಗೆ ಬರುತ್ತವೆ. ಅವು ಹೊಸ ಸಮಾಸಗಳು. ಉದಾಹರಣೆಗೆ ಕಾಫಿ ತಿಂಡಿ, ಸ್ಕೂಲು ಪರೀಕ್ಷೆ, ಬಿಳಿಚಾಕ್ ಪೀಸ್, ಕಪ್ಪುಬುಕ್ಕು, ರಶೀತಿಪುಸ್ತಕ, ಮಸೀದಿಕಟ್ಟಡ ಇತ್ಯಾದಿ. ಜನತೆಯಲ್ಲಿ ಅಧಿಕವಾಗಿ ಪ್ರಯೋಗವಾಗುವುದರಿಂದ ಇವುಗಳನ್ನು ಒಪ್ಪಿ ಇವುಗಳಿಗೆ ವ್ಯಾಕರಣದಲ್ಲಿ ಸ್ಥಾನಕೊಡಬೇಕು.

ಇದು ಹೇಗೆ ಎಂಬ ಪ್ರಶ್ನೆ ಏಳಬಹುದು. ನನ್ನ ದೃಷ್ಟಿಯಲ್ಲಿ ಅರಿಸಮಾಸದ ಸೂತ್ರವನ್ನು ವಿಸ್ತರಿಸಿ ಕನ್ನಡದಲ್ಲಿರುವ ಶಬ್ದದೊಡನೆ ಬೇರೆ ಯಾವುದೇ ಭಾಷೆಯ

ಶಬ್ದವು ಸೇರಿ ಆಗುವ ಸಮಾಸವನ್ನು ಅರಿಸಮಾಸವೆಂದೇ ಕರೆಯಬೇಕು. ಕನ್ನಡದ್ದಲ್ಲದ ಬೇರೆ ಬೇರೆ ಭಾಷೆಗಳ ಶಬ್ದಗಳು ಸೇರಿ ಕನ್ನಡದ ಶಬ್ದವಾಗಿ ಬಳಕೆಗೆ ಬಂದರೆ ಅಂಥವುಗಳನ್ನು ಅರಿಸಮಾಸವೆಂದೇ ಕರೆದು ಆ ಬಳಿಕ ಸಮಾಸದ ಯಾವ ಪಂಗಡಕ್ಕೆ ಅವು ಸೇರುತ್ತವೆ ಎಂದು ತೀರ್ಮಾನ ಮಾಡಬಹುದು.

ಆದುದರಿಂದ ಬೆಳೆಯುತ್ತಿರುವ ಭಾಷೆಗೆ ಅನೇಕ ಹೊಸ ವಿಷಯಗಳನ್ನು ವಿವರಿಸುವ ಹೊಸ ವ್ಯಾಕರಣದ ಅಗತ್ಯವಿದೆ. ಇದು ಸಮಾಸಪ್ರಕರಣಕ್ಕೆ ಮಾತ್ರ ಸೇರಿದುದಲ್ಲ. ವ್ಯಾಕರಣದ ಎಲ್ಲ ಪ್ರಕರಣಗಳಿಗೂ ಸಂಬಂಧಿಸಿದಂತೆ ಕೆಲವು ಹೊಸ ಸೂತ್ರಗಳನ್ನು ನಿರ್ಮಾಣ ಮಾಡಬೇಕು' (ಇಗೋ ಕನ್ನಡ ಸಂ. ೨, ಪುಟ ೫೧)

'ಗೋವಿನ ಹಾಡು' ಕುರಿತು ಬರೆಯುವಾಗ ಜಿ. ವೆಂಕಟಸುಬ್ಬಯ್ಯನವರು ನಮ್ಮ ಇಂದಿನ ಪಠ್ಯಪುಸ್ತಕಗಳಲ್ಲಿ ಇಂಥ ಹಾಡುಗಳು ನಾಪತ್ತೆಯಾಗಿರುವುದನ್ನು ಗಮನಿಸುತ್ತಾರೆ. 'ಮನಸ್ಸನ್ನು ಪಕ್ವಮಾಡುವ ಇಂಥ ಕವನಗಳನ್ನು ಮಕ್ಕಳ ಪುಸ್ತಕಗಳಲ್ಲಿ ಶಾಶ್ವತವಾಗಿ ಮುದ್ರಿಸುತ್ತಿರಬೇಕು. ಹಾಗೆ ಮಾಡಿಬಿಟ್ಟರೆ, ಪಠ್ಯಪುಸ್ತಕ ಸಮಿತಿಯ ಸದಸ್ಯರ ಲೇಖನಗಳಿಗೆ ಸ್ಥಳ ಕಡಿಮೆಯಾಗಿಬಿಡುವುದಲ್ಲವೇ?' ನವ್ಯಕಾವ್ಯವನ್ನು ಕುರಿತು ಬರೆಯುವಾಗ ಅವರು 'ಈ ಚಳುವಳಿಯಿಂದ ಕನ್ನಡ ಭಾಷೆಯ ಪ್ರಯೋಗಕ್ಕೆ ತುಂಬ ಹೊಸತನ ಬಂದಿತೆಂದು ನಿರ್ವಿವಾದ' ಎನ್ನುತ್ತಾರೆ.

'ಇಗೋ ಕನ್ನಡ'ದ ಅಂಕಣದ ಓದುಗರು ಕೆಲವು ಶಬ್ದಗಳಿಗೆ ಇರುವ ಜೀವಂತಪ್ರಯೋಗ ಹಾಗೂ ಅರ್ಥಗಳನ್ನು ಬರೆದು ತಿಳಿಸಿದ್ದರು. 'ನಿನ್ನ ಮಂಜಾಳಾಗ' ಎಂಬುದು ಒಂದು ಬೈಗಳ ಪ್ರಯೋಗ. 'ಮನೆ ಜೋಳ ಆಗಲಿ' ಎಂದರೆ ಜೋಳದ ಹೊಲ, ಮನೆ ಹೊಲವಾಗುವುದು ಎಂದರೆ ಮನೆ ಬಿದ್ದು ಸಂಪೂರ್ಣವಾಗಿ ಕಾಣದಂತಾಗುವುದು.

'ಅಲಗುಪ್ತಿ' ಶಬ್ದವನ್ನು ಅರ್ಥೈಸುವಾಗ ಸಂಶೋಧಕನ, ನಿಂಘಟುಕಾರನ ವಿನಯ ಕಾಣಿಸುತ್ತದೆ. 'ಈ ಶಬ್ದದ ವಿಚಾರವನ್ನು ಕುರಿತ ಪ್ರಶ್ನೆ ನನಗೆ ಆಶ್ಚರ್ಯವನ್ನುಂಟುಮಾಡಿತು. ಎಲ್ಲ ಪಾಠಾಂತರಗಳ ಊಹೆಗಳನ್ನು ಹಿಂದಕ್ಕೆ ತಳ್ಳಿ ಇದನ್ನು ಕನ್ನಡ ನಾಡಿನ ಅನೇಕ ವಿದ್ವನ್ಮಣಿಗಳ ಅಂಜಲಿಗೆ ಹಾಕಿದ್ದೇನೆ.'

'ಆಂಗ್ಲೋ ಇಂಡಿಯನ್', 'ಗಿರಿಜಾಮೀಸೆ' – ಇಂಥ ಶಬ್ದಗಳ ವಿವರಣೆಯಲ್ಲಿ ಹಾಸ್ಯಪ್ರಿಯ ಜಿ. ವಿ. ಕಾಣಿಸುತ್ತಾರೆ. 1950ರಲ್ಲಿ ಭಾರತದ ಸಂವಿಧಾನವನ್ನು ರಚಿಸಿದಾಗ ಆಂಗ್ಲೋ–ಇಂಡಿಯನ್ ಶಬ್ದಕ್ಕೆ ಒಂದು ಸೂಕ್ತ ಅರ್ಥ ನಿರ್ಧಾರವಾಯಿತು. ಆತ ಭಾರತದಲ್ಲಿ ವಾಸಿಸುವ ಯುರೋಪಿಯನ್ ಜನಾಂಗದ ತಂದೆಯಿಂದ ಭಾರತದ ಸ್ತ್ರೀಯಲ್ಲಿ ಹುಟ್ಟಿದವನು. ಆಂಗ್ಲೋ ಇಂಡಿಯನ್ ಜನಾಂಗಕ್ಕೆ ರಕ್ಷಣೆ ಕೊಡುವ ಬಗ್ಗೆ ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನಲ್ಲಿ ಚರ್ಚಿಲ್ ಹೇಳಿದ ಮಾತು ನೆನಪಿಗೆ ಬರುತ್ತದೆ. "We must provide for them, for they are the result of our mischief" (ಇಗೋ ಕನ್ನಡ ಸಂ. ೨, ಪುಟ – ೬೧) 'ಗಿರಿಜಾಮೀಸೆ ಇದೊಂದು ಪ್ರೇತ ಶಬ್ದ (Ghost word)..... ಗುಜುರುಮೀಸೆ ಎಂಬ ಶಬ್ದದಲ್ಲಿರುವ ಗುಜರು ಜನಸಾಮಾನ್ಯರಿಗೆ ತಿಳಿಯದೆ ಇದ್ದುದರಿಂದ, ತಿಳಿದಿರುವ ಗಿರಿಜಾ – ಹತ್ತಿರವಾಗಿರುವುದರಿಂದ ಗುಜುರು

ಮೇಲೆ. ಗಿರಿಜಾ ಮೇಲೆ. ಆಗಿರಬೇಕು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. (ಇಗೋ ಕನ್ನಡ ಸಂ. ೨, ಪುಟ ೧೩೪)

ಕುಮಾರ ವ್ಯಾಸನ 'ವೇದಪುರುಷನ ಸುತನ' (ಪೀಠಿಕಾಸಂಧಿ. ಪದ್ಯ ೨೩) ಪದ್ಯದ ಸಂಬಂಧಗಳ ಗೋಜಲನ್ನು ಬಿಡಿಸಿ ವಿವರಿಸುವ ಜಿ.ವಿ. ಅವರು 'ಆದರೂ ಚಮತ್ಕಾರ ಚಮತ್ಕಾರವೇ ಹೊರತು ಕಾವ್ಯಸೌಂದರ್ಯವಿಲ್ಲ' ಎನ್ನುತ್ತಾರೆ. ಆದರೆ ಇದು ಚಮತ್ಕಾರಪದ್ಯವಲ್ಲ ಎಂದು ನನಗೆ ಅನಿಸುತ್ತದೆ. ಒಂದು ಕುಟುಂಬದಲ್ಲಿ ದೇವತೆಗಳು, ಋಷಿಗಳು, ಮಾನವರು, ರಾಕ್ಷಸರು, ಎಲ್ಲರೂ ಇರುವುದನ್ನು ಕುಮಾರವ್ಯಾಸ ಇಲ್ಲಿ ಸೂಚಿಸುತ್ತಿದ್ದಾನೆ. ನಾವು ರಾಕ್ಷಸರನ್ನು ಹುಡುಕುತ್ತಿರುತ್ತೇವೆ. ನಮ್ಮ ಕುಟುಂಬದಲ್ಲೆ ಇರುವ, ನಮ್ಮೊಳಗೆ ಇರುವ ರಾಕ್ಷಸರು ನಮ್ಮ ಅರಿವಿಗೆ ಬರುವುದಿಲ್ಲ. ಕುಮಾರವ್ಯಾಸನ ಈ ಪದ್ಯ, ಧ್ವನಿಪೂರ್ಣವಾದ, ಚಿಂತನೆಗೆ ಪ್ರೇರಣೆ ನೀಡುವ ಪದ್ಯ.

ಬೆಂಗಳೂರಿನಲ್ಲಿ ನಡೆಯಲಿರುವ ೭೭ನೆಯ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷತೆ ವಹಿಸಲಿರುವ 'ಇಗೋ ಕನ್ನಡ'ದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ, 'ಅದ್ಭುತ ರಾಮಾಯಣ'ದ ಸಾಲುಗಳನ್ನು ಪಾಠಾಂತರಿಸುತ್ತ, ಅಭಿವಂದನೆ ಸಲ್ಲಿಸುತ್ತೇನೆ 'ನಿನ್ನೀ ಅದ್ಭುತರೂಪಮಂ ಕಾಣುತೆ ಇದೆಕೊಳ್! ಕನ್ನಡದ ಜಾಣ ಜಾಣೆಯಲ್ಲೆರುಂ, ಅಭಿಮಾನದಿ ಪೊಗಳುವರ್!' ಇಗೋ ಕನ್ನಡ ಸಂಪುಟಗಳು, ಕನ್ನಡ ನಿಘಂಟುಸಾಹಿತ್ಯಕ್ಕೆ ಜಿ. ವೆಂಕಟಸುಬ್ಬಯ್ಯನವರ ಮಹತ್ತ್ವದ ಕೊಡುಗೆಗಳು.



# ಇಗೋ ಕನ್ನಡ – ಸಂಪುಟ : ೩

ಡಾ. ಬಿ. ಜನಾರ್ದನ ಭಟ್

ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ' ನಿಘಂಟು, ಒಂದು 'ಸಾಮಾಜಿಕ ನಿಘಂಟು' ಎಂದು ಕರೆಯಲ್ಪಟ್ಟಿದೆ. ನಿಘಂಟುಗಳಲ್ಲಿ ಹಲವಾರು ಬಗೆಯ ನಿಘಂಟುಗಳಿದ್ದರೂ 'ಸಾಮಾಜಿಕ ನಿಘಂಟು' ಎನ್ನುವ ಹೆಸರು, ಪರಿಕಲ್ಪನೆ-ಗಳು ಹೊಸದು ಅನಿಸುತ್ತವೆ. ಅಲ್ಪಸ್ವಲ್ಪ ವ್ಯತ್ಯಾಸವಿರುವ ಕೆಲವು ಪ್ರಯತ್ನಗಳು ಕನ್ನಡದಲ್ಲಿಯೂ ಇತರ ಭಾಷೆಗಳಲ್ಲಿಯೂ ನಡೆದಿದೆ. ಇಂಗ್ಲಿಷಿನಲ್ಲಿ Brewer's Dictionary of Phrase and Fables (ಪರಿಷ್ಕರಣೆ : John Ayto) ಇಂತಹ ಒಂದು ನಿಘಂಟು.

ಕನ್ನಡದಲ್ಲಿ ಹಿಂದೆ, ಪಾ. ವೆಂ. ಅವರು 'ಪದಾರ್ಥ ಚಿಂತಾಮಣಿ' ಎಂಬ ಪದಚರಿತ್ರೆಯ ನಿಘಂಟನ್ನು ಪ್ರಕಟಿಸಿದ್ದರು. ಅದರಲ್ಲಿ ಪಾ.ವೆಂ. ಅವರು ಒಂದೊಂದು ಲೇಖನಗಳಲ್ಲಿ ಒಂದು ಶಬ್ದವನ್ನೆತ್ತಿಕೊಂಡು ಅದರ ಮೂಲ, ಅದರ ಅವಸ್ಥಾಂತರ-ಗಳು, ಪ್ರಯೋಗಗಳು ಇತ್ಯಾದಿಗಳನ್ನು ಕೊಟ್ಟು, ಅದಕ್ಕೆ ಸಂಬಂಧಿಸಿದ ಇತರ ಕೆಲವು ಶಬ್ದಗಳನ್ನೂ ಕೊಡುತ್ತಿದ್ದರು. ಉದಾಹರಣೆಗೆ ಪಾ. ವೆಂ. ಅವರು 'ಸೀರೆ' ಎಂಬ ಶಬ್ದದ ಕುರಿತು ಹೇಳುವಾಗ, ಅದು ಸಂಸ್ಕೃತದ 'ಚೀರ' ಶಬ್ದದ ತದ್ಭವ ಎಂದು ಹೇಳುತ್ತಾರೆ. ಚೀರವೆಂದರೆ ಉದ್ದವಾದ ಹೊಲಿಯದ ಬಟ್ಟೆಯಂತೆ. ಕುಮಾರವ್ಯಾಸನ ಕಾಲದಲ್ಲಿ ಗಂಡುಸರುಡುವ ಬಟ್ಟೆಗೂ ಸೀರೆಯೆಂದೇ ಹೆಸರಿತ್ತಂತೆ. ಅದು ಸ್ತ್ರೀಯರು ಉಡುವ ಬಟ್ಟೆಯನ್ನಷ್ಟೇ ಸೂಚಿಸತೊಡಗಿ, ಗಂಡಸರು ಉಡುವ ಬಟ್ಟೆಗೆ 'ಧೋತಿ', 'ಧೋತ್ರ' ಎಂಬ ಶಬ್ದಗಳು ಬಳಕೆಗೆ ಬಂದುದನ್ನು ಹೇಳಿ, ಇಂಗ್ಲಿಷಿನ 'ಸಾರಿ' ಅನ್ನುವುದು ಮಾತ್ರ ಹಿಂದಿಯ 'ಸಾಡಿ' ಅಥವಾ 'ಸಾಢಿ'ಯ ಮಗು ಎನ್ನುತ್ತಾರೆ! ಅದು ನಮಗೆ ತಿಳಿದಿರುವ 'ಶಾಟಿ' ಸಂಸ್ಕೃತ ಪದದ ತದ್ಭವವಂತೆ. ಹೀಗೆ ಶಬ್ದಮೂಲವನ್ನರಸುತ್ತಾ ಹೋದ ಋಷಿಯೊಬ್ಬರು ಕನ್ನಡದಲ್ಲೇ ಸಿಗುತ್ತಾರೆ. (ಬೇರೆ ಭಾಷೆಗಳಲ್ಲಿಯೂ ಇಂತಹ ಪ್ರಯತ್ನಗಳು ನಡೆದಿವೆ).

ಆದರೆ ಜಿ. ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ' ಈ ರೀತಿಯ ಶಬ್ದ ಚರಿತ್ರೆಯ ಶೋಧನೆಗೆ ಹೊಸ ಆಯಾಮವೊಂದನ್ನು ಕೊಟ್ಟಿದೆ. ಅದೇನೆಂದರೆ ಜಿ. ವೆಂ. ಅವರು ಓದುಗರ ಸಮಸ್ಯೆಗಳಿಗೆ ಉತ್ತರ ಕೊಡುತ್ತಾ ಆ ಮೂಲಕ ಸಂಕಲಿಸಿದ

ಪದಪುಂಜಗಳ ನಿಘಂಟು ಇದು ಹಾಗೇ. ಅವರು ತಮಗೆ ಮುಖ್ಯವೆನಿಸಿದ ಶಬ್ದಗಳ ಚರಿತ್ರೆಯನ್ನು ಬಿಡಿಸಿಟ್ಟಿದ್ದರು. ಹಾಗಾಗಿ ಅದು 'ಪದಾರ್ಥ ಚಿಂತಾಮಣಿ'; ಇದು 'ಸಾಮಾಜಿಕ ನಿಘಂಟು'. ಎರಡೂ ಕನ್ನಡದ ಹೆಮ್ಮೆಗಳು.

'ಇಗೋ ಕನ್ನಡ'ವನ್ನೇ ಆಧಾರವಾಗಿಟ್ಟುಕೊಂಡು 'ಸಾಮಾಜಿಕ ನಿಘಂಟು' ಎನ್ನುವುದರ ಅರ್ಥವ್ಯಾಪ್ತಿಯನ್ನು ವಿವರಿಸುವುದಾದರೆ ಸಾಮಾಜಿಕರ ಜತೆಗೆ ಮುಖಾಮುಖಿಯಾಗುತ್ತಾ, ಜನರ ಕುತೂಹಲಕ್ಕೆ ಸ್ಪಂದಿಸುತ್ತಾ ಶಬ್ದಗಳ ಅರ್ಥ ಮತ್ತು ಮೂಲಗಳ ಬಗೆಗೆ ನಿರಂತರ ಹುಡುಕಾಟ ನಡೆಸುತ್ತಾ, ಜನರ ಜತೆಗೆ ಸಂವಾದ ನಡೆಸುತ್ತಾ ಬೆಳೆಸಿದ ಕೋಶ ಇದಾಗಿರುವುದರಿಂದ ಇದು ನಿಜವಾದ ಅರ್ಥದಲ್ಲಿ 'ಸಾಮಾಜಿಕ ನಿಘಂಟು'. ಇದರ ಸ್ವರೂಪ – ವ್ಯುತ್ಪತ್ತಿ ಕೋಶ, ತೌಲನಿಕ ಕೋಶ ಮತ್ತು ಈಡಿಯಮ್ ಮತ್ತು ಫ್ರೇಸ್ (ಪದಪುಂಜ) – ಫೇಬಲ್‌ಗಳ ಕೋಶ ಮತ್ತು ಅರ್ಥವಿವರಣೆ ಕೋಶ – ಇವೆಲ್ಲಗಳ ಲಕ್ಷಣಗಳು ಜತೆಜತೆಗೆ, ಅಥವಾ ಅಲ್ಲಲ್ಲಿ ಕಾಣಿಸುವ ಶಬ್ದಚಿಂತನೆಗಳ ಸಂಕಲನದಂತಿದೆ. ಇವೆಲ್ಲವನ್ನೂ ಒಂದೇ ಕೋಶದಲ್ಲಿ ಕೊಡುವ ಕನ್ನಡದ ಈ ಪ್ರಯತ್ನ ಇತರ ಭಾಷೆಗಳಿಗೂ ಒಂದು ವಿಶಿಷ್ಟವಾದ ಮಾದರಿಯಾಗಬಲ್ಲದು.

ಜಿ. ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ' ಒಂದು ವಿಶ್ವವಿದ್ಯಾಲಯದ ವಿದ್ವಾಂಸರ ಸಮಿತಿ ಮಾಡಿದ ಕೆಲಸವೇನೋ ಅನ್ನುವಷ್ಟರ ಮಟ್ಟಿಗೆ ಬೆರಗುಹುಟ್ಟಿಸುವ ಕೆಲಸ. ಇವರೊಳಗೆ ವಿರಳವಾಗಿ ಏಕವ್ಯಕ್ತಿಯ ಅನುಭವಕ್ಕಿರುವ ಮಿತಿ ಕಂಡು-ಬರುವುದಾದರೂ ಅದು ಗಮನಾರ್ಹವಲ್ಲ. ಅಲ್ಲದೆ ಜಿ. ವೆಂ. ಅವರು ತಮ್ಮ ವಿವರಣೆಗಳಿಗೆ ವ್ಯತಿರಿಕ್ತವಾದ ಅಭಿಪ್ರಾಯ, ಮಾಹಿತಿಗಳನ್ನು ಯಾರಾದರೂ ಕಳುಹಿಸಿಕೊಟ್ಟಲ್ಲಿ ಅವುಗಳನ್ನು ಪರಿಶೀಲಿಸಿ, ಸರಿಯಿದ್ದರೆ ಒಪ್ಪಿಕೊಂಡು, ತಮ್ಮ ಹಿಂದಿನ ಅಭಿಪ್ರಾಯಗಳನ್ನು ಪರಿಷ್ಕರಿಸಿ ಮುಂದಿನ ಸಂಪುಟದಲ್ಲಿ ನೀಡುವ ಆರೋಗ್ಯಕರ ನಿಲುವನ್ನು ತೋರಿಸುತ್ತಾರೆ.

ಉದಾಹರಣೆಗೆ ಈ ವಿವರ ಗಮನಿಸಿ : 'ಆನೆಯನ್ನು ಪಳಗಿಸುವ ಸ್ತ್ರೀಗೆ ಏನು ಹೆಸರು – ಹಿಂದಿನ ಮತ್ತೊಂದು ಅಂಕಣದಲ್ಲಿ ಮಾವುತ ಶಬ್ದ ಪುರುಷರಿಗೆ ಅನ್ವಯಿಸುತ್ತದೆ ಎಂದು ಬರೆದಿದ್ದೆ. ಆದರೆ ಒಬ್ಬ ಸ್ತ್ರೀ ಆ ಕೆಲಸವನ್ನು ಮಾಡಿದರೆ ಅವಳಿಗೆ ಏನು ಹೆಸರು ಎಂಬ ಪ್ರಶ್ನೆ ಬಂದಿದ್ದಿತು. ನಾನು ದೀರ್ಘವಾದ ಉತ್ತರ-ವನ್ನು ನೀಡಿದ್ದೆ. ಅದರಲ್ಲಿ 'ಆನೆಯನ್ನು ಪಳಗಿಸುವ ಸ್ತ್ರೀಯರು ಯಾರೂ ನಮ್ಮ ಇತಿಹಾಸ – ಪುರಾಣಗಳಲ್ಲಿ ಕಾಣಬರುವುದಿಲ್ಲ' ಎಂದು ಬರೆದಿದ್ದೆ. ಇತಿಹಾಸದಲ್ಲಿ ಇಲ್ಲದಿದ್ದರೇನು? ಈಗ ಯಾರೂ ಇಲ್ಲವೇ? ಎಂಬ ಪ್ರಶ್ನೆಯನ್ನು ಮತ್ತೊಬ್ಬರು ಕೇಳಿದ್ದರು. ಈಚಿನ ನನ್ನ ಹುಡುಕಾಟದ ಪರಿಣಾಮವಾಗಿ ಹೊಸ ವರ್ತಮಾನವು ಪತ್ತಾರ ಅವರ ಮೂಲಕ ನನಗೆ ದೊರಕಿದೆ...... ಡಿ. ಕೆ. ಚೌಟ ಅವರು ನನ್ನೊಡನೆ ಸಂಭಾಷಣೆ ಮಾಡುವಾಗ ಈ ವರ್ತಮಾನಕ್ಕೆ ಪುಷ್ಟಿ ನೀಡಿದರು. ಅವರ ಮಗಳಾದ ಶ್ರೀಮತಿ ಪ್ರಜ್ಞಾ ಚೌಟ ಅವರು ಆನೆಯನ್ನು ಪಳಗಿಸಿ ಅದರಿಂದ ಬೇಕಾದ ಕೆಲಸವನ್ನು ಮಾಡಿಸುವ ಕಲೆಯಲ್ಲಿ ಪರಿಣತರಾಗಿದ್ದಾರೆ ಎಂದು ಹೇಳಿದರು .....

ಕನ್ನಡದಲ್ಲಿ ಮಾವುತೆ, ಮಾವಂತೆ ಎಂಬ ಪದಗಳಿಂದಲೂ ಕರೆಯಬಹುದು ಎಂದು ನನ್ನ ಸೂಚನೆಗಳನ್ನು ನೀಡುತ್ತಿದ್ದೇನೆ.' ಈ ರೀತಿಯ ಹುಡುಕಾಟ, ವಿನಯಗಳು ವಿದ್ವಾಂಸರಿಗೆ ಶೋಭೆ ತರುವಂತಹವು, ಇತರರಿಗೆ ಮಾದರಿಯಾಗಿರುವಂತಹವು.

ಇನ್ನೊಂದು ಉದಾಹರಣೆ : ಜಿ. ವೆಂ. ಅವರು ಸಂಪುಟ ಎರಡರಲ್ಲಿ Iron Curtain ಎನ್ನುವುದು ಚರ್ಚಿಲ್‌ನಿಂದ ಪ್ರಾರಂಭಿಸಲ್ಪಟ್ಟ ಪದಪುಂಜ ಎಂದಿದ್ದರು. ಅದಕ್ಕೆ ದಕ್ಷಿಣ ಕನ್ನಡದ ವಿದ್ವಾಂಸ ತುದಿಯಡ್ಕ ವಿಷ್ಣ್ವಯ್ಯನವರು ಪತ್ರ ಬರೆದು ಆಧಾರಸಹಿತವಾಗಿ ಅದು 1920ರಲ್ಲಿ ರಷ್ಯಾದಲ್ಲಿ ಟಂಕಿಸಲ್ಪಟ್ಟ ಶಬ್ದ ಎಂದು ತೋರಿಸಿಕೊಟ್ಟದ್ದನ್ನು ಜಿ.ವೆಂ. ಅವರು ಒಪ್ಪಿಕೊಂಡು ಆ ವಿವರಗಳನ್ನು ಯಥಾವತ್ತಾಗಿ ಮೂರನೆಯ ಸಂಪುಟದಲ್ಲಿ ದಾಖಲಿಸಿದ್ದಾರೆ. ಇದು ಬಹಳ ಮುಖ್ಯವಾದ ಗುಣ ಎಂದು ಖಂಡಿತವಾಗಿ ಹೇಳಬಹುದು. ನನ್ನ ಅನುಭವವೊಂದು ಹೀಗಿದೆ : ಹಿಂದೆ ಒಂದು ಪತ್ರಿಕೆಯಲ್ಲಿ ವಿದ್ವಾಂಸರೆನಿಸಿಕೊಂಡವರೊಬ್ಬರು ಭಾಷೆಯ ಸರಿಯಾದ ಬಳಕೆಯ ಬಗ್ಗೆ ಕೆಲವು ಅಪ್ಪಣೆಗಳನ್ನು ಕೊಡುತ್ತಿದ್ದರು. ಅಂತಹ ಒಂದು ಅಪ್ಪಣೆ ಸರಿಯಲ್ಲವೆಂದು ನಾನು ಸಾಧಾರವಾಗಿ ವಾದಿಸಿ ಅವರಿಗೆ ಪತ್ರ ಬರೆದೆ. ಅದರ ಪ್ರತಿಯನ್ನು ಪತ್ರಿಕೆಯ ಸಂಪಾದಕರಿಗೂ ಕಳುಹಿಸಿದ್ದೆ. ಆದರೆ ಅದರ ಬಗ್ಗೆ ಪತ್ರಿಕೆಯಲ್ಲಿ ಚಕಾರವೂ ಕಾಣಿಸಿಕೊಳ್ಳಲಿಲ್ಲ.

ಸಾಮಾಜಿಕರ ಜತೆಗೆ ಮುಖಾಮುಖಿಯಾಗುತ್ತ ಶಬ್ದಗಳ ಅರ್ಥ ಮತ್ತು ಮೂಲಗಳ ಬಗ್ಗೆ ಓದುಗರ ಜತೆಗೆ ನಡೆಸುವ ಸಂವಾದಕ್ಕೆ ಒಂದು ಉದಾಹರಣೆ : 'ತೆಪರ' ಎಂಬ ಶಬ್ದದ ಮೂಲವು ಅನಿಶ್ಚಿತ ಎಂದು ಜಿ. ವೆಂ. ಅವರು ಬರೆದಿದ್ದರು. ಅದಕ್ಕೆ ಪುಟ್ಟು ಕುಲಕರ್ಣಿ ಎಂಬವರು 'ತೆಪರ'ದ ಬಗ್ಗೆ ಹಲವಾರು ವಿವರಗಳನ್ನು ಕೊಟ್ಟರಂತೆ. ಜಿ. ವೆಂ. ಅದನ್ನೆಲ್ಲ ದಾಖಲಿಸಿ. 'ಹೀಗೆ ಪುಟ್ಟು ಕುಲಕರ್ಣಿಯವರ ವಿವರ ನನಗೆ ಸರಿ ಎಂದು ಕಂಡುಬರುತ್ತದೆ. ಈಗ ಅವರ ಸೂಚನೆಯನ್ನು ನಾನು ಒಪ್ಪುತ್ತೇನೆ. ಅಲ್ಲದೆ 'ತ್ಯಾಪರ್ಲಿ' ಶಬ್ದದ ವ್ಯುತ್ಪತ್ತಿಗೆ ಗಮನಹರಿಸುತ್ತೇನೆ ಎಂದು ತಿಳಿಸಬಯಸುತ್ತೇನೆ' ಎನ್ನುತ್ತಾರೆ. ಹೀಗೆ ಶಬ್ದಾರ್ಥಶೋಧ ಕೆಲವೊಮ್ಮೆ ಸಾಮೂಹಿಕ ಸಾಮಾಜಿಕ ಜವಾಬ್ದಾರಿಯೂ ಹೌದು ಎನ್ನುವುದನ್ನು ಅವರು ತಮ್ಮ ವಿನಯದಲ್ಲಿ ತೋರಿಸಿಕೊಡುತ್ತಾರೆ.

ವಿದ್ವಾಂಸರ ಮಾತುಗಳು ಯಾವಾಗಲೂ ಹೊಸಹೊಸ ಒಳನೋಟಗಳನ್ನು ಕೊಡುತ್ತವೆ. ಜಿ. ವೆಂ. ಅವರ 'ಇಗೋ ಕನ್ನಡ'ದಲ್ಲಿ ಇಂತಹ ಒಳನೋಟಗಳು ಯಥೇಷ್ಟವಾಗಿ ನಮಗೆ ದೊರಕುತ್ತವೆ. ಓದುಗರು ಈ ಒಳನೋಟಗಳನ್ನು ಬಳಸಿಕೊಂಡು ಶಬ್ದಮೂಲಗಳನ್ನು ಕಂಡುಹುಡುಕುವ ಬೌದ್ಧಿಕ ಚಟುವಟಿಕೆಯಲ್ಲಿ ತೊಡಗಿದರೆ ನಿಘಂಟುಕಾರನ ಶ್ರಮ ಸಾರ್ಥಕವಾಗುತ್ತದೆ. ಉದಾಹರಣೆಗೆ ಈ ಸಂಪುಟದಲ್ಲಿ 'ಅಯ್ಯಂಗಾರ್' ಎಂಬ ಶಬ್ದದ ವ್ಯುತ್ಪತ್ತಿಯನ್ನು ಹೇಳುತ್ತಾ ಹೀಗೆ ಹೇಳುತ್ತಾರೆ : 'ಕನ್ನಡದಲ್ಲಿ ಅವರು ಎಂಬುದು ಬಹುವಚನ ಪ್ರತ್ಯಯ. ರಾಮಯ್ಯ + ಅವರು = ರಾಮಯ್ಯನವರು ಎಂದೇ ಆಗುತ್ತದೆ. ಇದಕ್ಕೆ ಕಾರಣ ರಾಮಯ್ಯನ್ ಎನ್ನುವುದು ಹಳಗನ್ನಡದ ಪ್ರಥಮಾವಿಭಕ್ತಿಯ ರೂಪ. ಅದಕ್ಕೆ ತೆಲುಗಿನ 'ಗಾರು'

ಸೇರಿದರೆ ರಾಮಯ್ಯಂಗಾರ್ ಆಗುತ್ತದೆ. ಅಷ್ಟೆ!' ಇದನ್ನು ಕುರಿತು ಯೋಚಿಸಿದರೆ ತಮಿಳು, ಮಲಯಾಳಿಗಳಲ್ಲಿ ಗಂಡುಸರ ಹೆಸರಿನ ಮುಂದೆ ಅನ್ -ಸಚ್ಚಿದಾನಂದನ್ ಇತ್ಯಾದಿ - ಇರುವುದು ಪ್ರಥಮಾವಿಭಕ್ತಿ ಪ್ರತ್ಯಯವೇ ಎನ್ನುವುದು ಹೊಳೆಯುತ್ತದೆ. ಹೀಗೆ ಓದುಗರಲ್ಲಿ ವಿವೇಚನಾಸಾಮರ್ಥ್ಯವನ್ನೂ, ಭಾಷೆಯ ಬಗ್ಗೆ ಕುತೂಹಲವನ್ನೂ ಬೆಳೆಸುವುದು ಜಿ. ವೆಂ. ಅವರ ನಿಘಂಟಿನ ಹೆಚ್ಚುಗಾರಿಕೆ.

ಕನ್ನಡ ಭಾಷೆಗೆ ಅನ್ಯಮೂಲದಿಂದ ಬಂದವುಗಳಾದರೂ ಕೆಲವು ಆಕರ್ಷಕವಾದ ಶಬ್ದಗಳು ಕನ್ನಡದಲ್ಲಿದ್ದುವು. ಅವುಗಳನ್ನು ನೆನಪಿಸುವ, ಅವುಗಳ ಮೂಲವನ್ನು ಶೋಧಿಸುವ ಕೆಲಸ ಈ ಸಂಪುಟಗಳಲ್ಲಿ ನಡೆದಿದೆ. ಅಂತಹ ಒಂದು ಶಬ್ದ 'ಗುಳಾಪು'. ಈ ಶಬ್ದ ಇಂಗ್ಲಿಷಿನ ಗ್ಲೋಬ್ ಅಥವಾ ಭೂಗೋಳ ಎಂಬುದ-ರಿಂದ ಬಂದದ್ದು. ಆ ಆಕಾರದ, ಮಾಡಿನಿಂದ ನೇತಾಡುವ, ಒಳಗೆ ದೀಪವಿಡುವ ಗ್ಲಾಸಿನ ಉಪಕರಣಕ್ಕೆ ಗುಳಾಪು (ಗೋಳಾಕಾರದ ಗಾಜಿನ ಬುರುಡೆ) ಎಂದು ಹೆಸರು. (ನನ್ನ ಅಜ್ಜನ ಮನೆಯಲ್ಲಿ ಈ ಗುಳಾಪು ಇತ್ತು!). ಈ ರೀತಿ ಕನ್ನಡದ್ದೇ ಆಗಿಹೋಗಿರುವ 'ಇಸ್ಪೀಟು' (ಜಿ. ವೆಂ. ಅವರು ತಮ್ಮ 'ಎರವಲು ಪದಕೋಶ'ದಲ್ಲಿ ಇದು ಇಂಗ್ಲಿಷಿನ 'ಸ್ಪೇಡ್‌ಸ್'ನಿಂದ ಬಂದ ಶಬ್ದ ಎನ್ನುತ್ತಾರೆ / ಪಾವೆಂ ತಮ್ಮ 'ಪದಾರ್ಥಚಿಂತಾಮಣಿ'ಯಲ್ಲಿ ಇದು ಪೋರ್ಚುಗೀಸರ 'ಇಸ್ಪದಾ'ದಿಂದ ಬಂದಿದೆ ಎಂದು ಹೇಳುತ್ತಾರೆ), ಪಿಕ್ಕಾಸು / ಪಿಕಾಸಿ (ಪಿಕ್ ಆ್ಯಕ್ಸ್) ಮುಂತಾದ ಶಬ್ದಗಳೂ ಇವೆ. ( ಜಿ.ವೆಂ. ಅವರು ತಮ್ಮ 'ಎರವಲು ಪದಕೋಶ' ಮತ್ತು 'ಕನ್ನಡ ಕ್ಲಿಷ್ಟಪದ ಕೋಶ'ಗಳಲ್ಲಿ ಪಿಕಾಸಿ ಇಂಗ್ಲಿಷ್ ಮೂಲದ ಶಬ್ದ ಎಂದು ದಾಖಲಿಸಿದ್ದಾರೆ.)

ಜಿ. ವೆಂ. ಅವರು ತಮ್ಮ 'ಇಗೋ ಕನ್ನಡ'ದಲ್ಲಿ ಅರ್ಥಗಳನ್ನು ಹೇಳುವಾಗ ಎತ್ತಿಕೊಂಡ ಶಬ್ದವು ಮೂಲ ಕನ್ನಡ ಶಬ್ದ ಎಂದಾದರೆ ಅದನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ. ಇದು ಬಹಳ ಮುಖ್ಯವಾದ ಸೂಚನೆ. ಕನ್ನಡ ಭಾಷೆಯೂ ಇಂಗ್ಲಿಷಿನಂತೆ ಇತರ ಭಾಷೆಗಳಿಂದ ಶಬ್ದಗಳನ್ನು ಧಾರಾಳವಾಗಿ ಸ್ವೀಕರಿಸಿ ತನ್ನ ಶಬ್ದ ಸಂಪತ್ತನ್ನು ಹೆಚ್ಚಿಸಿಕೊಂಡಿರುವುದು ಜಿ. ವೆಂ. ಅವರ ನಿಘಂಟನ್ನು ಓದಿದವರಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ಸಾಮಾನ್ಯವಾಗಿ ಪದಗಳ ಅರ್ಥ ತಿಳಿಸುವ ನಿಘಂಟುಗಳಲ್ಲಿ ಈ ಸೌಕರ್ಯ ಇರುವುದಿಲ್ಲ.

ಕೆಲವು ಬಾರಿ, ಬಹಳ ವಿರಳವಾಗಿ, ಜಿ. ವೆಂ. ಅವರು ಶಬ್ದಗಳ ಬಹು ಅರ್ಥಗಳನ್ನು ಗಮನಿಸುವುದಿಲ್ಲ ಎನ್ನುವ ಅಂಶವನ್ನು ಕೂಡಾ ಇಲ್ಲಿ ದಾಖಲಿಸ-ಬೇಕು. ಬಹುಶಃ ಪ್ರಶ್ನೆ ಕೇಳುವವರು ಶಬ್ದಗಳು ಬಳಕೆಯಾದ ಸಂದರ್ಭಗಳನ್ನು ಸ್ಪಷ್ಟವಾಗಿ ಸೂಚಿಸಿದಾಗಲೂ (ಆ ಸಂದರ್ಭಕ್ಕಿರುವ ಒಂದೇ ಅರ್ಥವನ್ನು ಅಂಕಣ-ವನ್ನು ನಡೆಸುವ ಸಾಮಾಜಿಕ ನಿಘಂಟುಕಾರರು ಹೇಳಿ ಮುಗಿಸುವುದರಿಂದ), ಸೂಚಿಸದೆ ಇದ್ದಾಗಲೂ (ಅದು ಕನ್ನಡದಲ್ಲಿ ಹೇಗೆ ಬಳಕೆಯಾಗಿರಬಹುದು ಎಂದು ನಿಘಂಟುಕಾರರಿಗೆ ತಕ್ಷಣಕ್ಕೆ ಹೊಳೆಯದೆ) ಇಂತಹ ಕೊರತೆಗಳು ಕಂಡುಬರಬಹುದು. ಎರಡು ಬಗೆಯ ಕೊರತೆಗಳಿಗೂ ಒಂದೊಂದು ಉದಾಹರಣೆಗಳನ್ನು ಗಮನಿಸುವು-ದಾದರೆ: ೧. 'ಅಂಜಿಲ' – 'ಅಂಬಲಿ' ಅಲ್ಲ. ಗಮನಿಸಿ – ಎನ್ನುವ ಶಬ್ದಕ್ಕೆ

ಅರ್ಥವೇನೆಂದು ಜಿಜ್ಞಾಸುಗಳು ಕೇಳಿದಾಗ ಜಿ.ವೆಂ. ಅವರು ಅದನ್ನು 'ಅಂಬಲಿ' ಎನ್ನುವ ಶಬ್ದವೆಂದು ಪರಿಗಣಿಸಿ 'ಅಂಬಲಿ' ಅನ್ನುವುದಕ್ಕಿರುವ ಸಾಮಾನ್ಯ ಅರ್ಥ-ಗಳನ್ನು ಕೊಡುತ್ತಾರೆ. (ಕಿಟ್ಟೆಲ್ ಕೂಡಾ ಇದೊಂದೇ ಅರ್ಥವನ್ನು ಕೊಟ್ಟಿದ್ದಾರೆ ಎನ್ನುವುದನ್ನು ಗಮನಿಸಬಹುದು). ಅದರ ಜತೆಗೆ ಜಿ. ವೆಂ. ಅವರು ಈ ಅರ್ಥವನ್ನೂ ಪರಿಗಣಿಸಬಹುದಿತ್ತು : 'ಅಂಬಿಲ' ಅಥವಾ 'ಅಂಬೆಲ' ಅನ್ನುವ ಶಬ್ದ ತುಳುನಾಡಿನಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಶಬ್ದ. ದೇವಸ್ಥಾನದ ಚಾವಡಿಯನ್ನು ಹಾಗೆ ಕರೆಯುತ್ತಾರೆ. ಕನ್ನಡದಲ್ಲಿ ಕೂಡ 'ಅಂಬಲ' ಅನ್ನುವ ಶಬ್ದವಿದ್ದು ಅದಕ್ಕೆ : ೧. ಸಭೆ ಸೇರುವ ಸ್ಥಳ; ಚಾವಡಿ; ಮಂಟಪ. ೨. ಅಂಗಳ; ಹಜಾರ. ೩. ಅಂಬಲಿ; ಗಂಜಿ. – ಎಂಬ ಅರ್ಥಗಳಿವೆ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ 'ಸಂಕ್ಷಿಪ್ತ ಕನ್ನಡ ನಿಘಂಟು' ಕೂಡಾ ಹೇಳುತ್ತದೆ. ಹಾಗಾಗಿ ಜಿ. ವೆಂ. ಅವರು 'ದೇವಸ್ಥಾನದ ಚಾವಡಿ' ಎನ್ನುವ ಅರ್ಥವನ್ನು ಗಮನಿಸಬೇಕಿತ್ತು ಅಂತ ಅನಿಸುತ್ತದೆ.

ಜಿ. ವೆಂ. ಅವರು ಅರ್ಥವ್ಯಾಪ್ತಿಯನ್ನು ಸಂಪೂರ್ಣವಾಗಿ ಗಣನೆಗೆ ತೆಗೆದುಕೊಳ್ಳದೆ ಇರುವ ಇನ್ನೊಂದು ಉದಾಹರಣೆಯೆಂದರೆ 'ಪಗೋಡ' ಎಂಬ ಶಬ್ದ. ಪ್ರಶ್ನೆ ಕೇಳುವವರು ಯಾವ ಸಂದರ್ಭದಲ್ಲಿ ಈ ಶಬ್ದ ಹೇಗೆ ಬಳಕೆಯಾಗಿದೆ ಎನ್ನುವುದನ್ನು ಸ್ಪಷ್ಟಪಡಿಸದೆ ಇದ್ದುದರಿಂದ ಹೀಗಾಗಿರಬೇಕು. ಜಿ. ವೆಂ. ಅವರು 'ಪಗೋಡ' ಪೋರ್ಚುಗೀಸ್ ಶಬ್ದವೆಂದೂ, ಬೌದ್ಧರ ದೇವಾಲಯ, ಭಾರತದ ದೇವಾಲಯಗಳ 'ಗೋಪುರ' ಎಂಬ ಅರ್ಥಗಳಲ್ಲಿ ಬಳಕೆಯಾಗುತ್ತದೆಂದೂ ತಿಳಿಸಿದ್ದಾರೆ. ಆದರೆ. ಪಗೋಡ ಅನ್ನುವುದು ಕರ್ನಾಟಕದಲ್ಲಿ ಬಳಸಲ್ಪಡುತ್ತಿದ್ದ ಒಂದು ಹಣದ ಹೆಸರೂ ಹೌದು ಎನ್ನುವುದನ್ನು ಅವರು ಗಮನಿಸುವುದೇ ಇಲ್ಲ. ಬಹುಶಃ ನಮಗೆ ಈ ಅರ್ಥವೇ ಹೆಚ್ಚು ಮುಖ್ಯ. ಈ ವಾಕ್ಯವನ್ನು ಗಮನಿಸಿ : 'ಕೆಳದಿ ಅರಸರ ಆಳ್ವಿಕೆಯ ಕೊನೆಯಲ್ಲಿ ಇಡೀ ಕೆನರಾದಿಂದ ಸಂಗ್ರಹಿಸುತ್ತಿದ್ದ ಒಟ್ಟು ಭೂಕಂದಾಯವು ೩೨೦೮೨೭ ಪಗೋಡಗಳಾಗಿದ್ದವು.' ('ತುಳುವ' ತ್ರೈಮಾಸಿಕ : ರಾ. ಗೋ. ಪೈ. ಸಂಶೋಧನ ಕೇಂದ್ರ; ಜುಲೈ – ಸಪ್ಟಂಬರ್ 2010)

ಇನ್ನೊಂದು ಕಡೆ ಜಿ. ವೆಂ. ಅವರು 'ತಗ್ಗಿ' ಎಂಬ ಇಂಗ್ಲಿಷ್‌ನಲ್ಲಿ ಪ್ರಚಾರದಲ್ಲಿರುವ ಶಬ್ದದ ಬಗ್ಗೆ ಬರೆಯುತ್ತಾ ಇದು 'ಸ್ಥಗ' ಎಂಬ ಸಂಸ್ಕೃತ ಶಬ್ದದ ರೂಪಾಂತರ ಎನ್ನುವ ಮಾಹಿತಿಯನ್ನು ನೀಡುತ್ತಾರೆ. 'ಕನ್ನಡದ ಸಮಾಜಶಾಸ್ತ್ರದ ಪಠ್ಯವನ್ನು ರಚಿಸಿದವರು ಈ Thuggee ಶಬ್ದವನ್ನು ತಗ್ಗಿ ಎಂದು ಉಚ್ಚರಿಸಿ ಅದರ ಅರ್ಥವನ್ನು ಬರೆಯದೆ ಇಂಗ್ಲಿಷಿನ ರೂಪವನ್ನು ಉಪಯೋಗಿಸಿದ್ದಾರೆ. ಕನ್ನಡ ಪುಸ್ತಕಗಳನ್ನು ಬರೆಯುವಾಗ ಇಂಥ ಶಬ್ದಗಳನ್ನು ನೇರವಾಗಿ ಇಂಗ್ಲಿಷಿನಲ್ಲಿ ಉಪಯೋಗಿಸಿದರೆ ಅದರ ಅರ್ಥವನ್ನಾದರೂ ತಿಳಿಸಬೇಕು. ಇಲ್ಲದಿದ್ದರೆ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ತುಂಬ ತೊಂದರೆಯಾಗುತ್ತದೆ' ಎಂದಿದ್ದಾರೆ. ಆದರೆ ನಾವು ಕಲಿಯುವಾಗ ಪಾಠ ಪುಸ್ತಕಗಳಲ್ಲಿ ಇವರನ್ನು 'ಠಕ್ಕರು' ಎನ್ನುತ್ತಿದ್ದರು. ಠಕ್ಕರನ್ನು ಅಡಗಿಸಿದ ಸ್ಲೀಮನ್ ಎನ್ನುವ ಬ್ರಿಟಿಷ್ ಅಧಿಕಾರಿಗೆ ಥಗ್ಗೀ ಸ್ಲೀಮನ್ ಎಂಬ ಹೆಸರಿತ್ತು ಎಂದೂ ಓದಿದ್ದೇವೆ. ಆದುದರಿಂದ ಜಿ. ವೆಂ. ಅವರ ವಿವೇಚನೆಯಲ್ಲಿ

'ತಕ್ಕ' ಎನ್ನುವ ಶಬ್ದ ಕಾಣಿಸಿಕೊಂಡಿದ್ದರೆ ಆ ಶಬ್ದದ ಮೂಲವೂ ತಿಳಿದಂತಾಗುತ್ತಿತ್ತು. ಅಲ್ಲದೆ ಮುಂದೆ ಸಮಾಜಶಾಸ್ತ್ರ ಪುಸ್ತಕ ಬರೆಯುವವರು 'ತಕ್ಕ' ಎಂಬ ಕೆಟ್ಟ ಅರ್ಥದ ಒಳ್ಳೆಯ ಶಬ್ದವನ್ನು ಬಳಸಲು ಪ್ರೇರಣೆ ಉಂಟಾಗುತ್ತಿತ್ತು.

ಸಾಮಾಜಿಕ ನಿಘಂಟಿನಲ್ಲಿ ಜಿ. ವೆಂ. ಅವರು ಭಾಷೆ, ಸಾಹಿತ್ಯ, ಸಮಾಜ, ರಾಜಕೀಯ ಕ್ಷೇತ್ರಗಳಲ್ಲಿ ಕಾಣುತ್ತಿರುವ ಅಪಸವ್ಯಗಳಿಗೆ ಮೆಲುಮಾತಿನ ಟೀಕೆಗಳನ್ನು, ಹಾಲಿನಲ್ಲಿ ಸಕ್ಕರೆ ಬೆರೆಸಿದಂತೆ ಬೆರೆಸಿ ಸಮಾಜಶಿಕ್ಷಣ ನೀಡುತ್ತಿರುವುದು ಬಹಳ ಮುಖ್ಯವಾದ ಸಂಗತಿ. ಕೆಲವು ಉದಾಹರಣೆಗಳೆಂದರೆ: ೧. ಅಷ್ಟೊತ್ತಿಗೆ : '... ಈಚೆಗೆ ಕನ್ನಡದ ಕಾದಂಬರಿಗಳಲ್ಲಿ ಹೆಂಗೆ, ಹಂಗೆ, ಒಂಚೂರು, ಒಚ್ಚೂರು, ಅಷ್ಟೊತ್ತಿಗೆ, ಎಷ್ಟೊತ್ತಿಗೆ, ಇಷ್ಟೊತ್ತಿಗೆ, ಮುಂತಾದ ಪ್ರಯೋಗಗಳ ಜೊತೆಗೆ ಪೂರ್ಣವಾಗಿ ಗ್ರಾಮ್ಯ ಶಬ್ದಗಳನ್ನು ಉಪಯೋಗಿಸಲು ಪ್ರಾರಂಭಿಸಿದ್ದಾರೆ. ಅದು ನಾಡಿನ ಎಲ್ಲ ಕಡೆಗಳಲ್ಲಿ ಆಯಾ ಭಾಷೆಯ ಆಡುನುಡಿಗೆ ಅವಕಾಶ ಮಾಡಿಕೊಟ್ಟರೆ ಒಂದು ಸಾಮಾನ್ಯವಾದ ಗ್ರಾಂಥಿಕ ಭಾಷೆ ಕೂಡ ಇಲ್ಲದೆ ಹೋಗಬಹುದು. ಈ ಬಗ್ಗೆ ಲೇಖಕರು ಆಲೋಚನೆ ಮಾಡಬೇಕು. ಕಾದಂಬರಿಗಳ ಒಳಗಿನ ಸಂಭಾಷಣೆಗಳಿಗೆ ಮಾತ್ರ ಈ ಆಡುಮಾತಿನ ಪ್ರಯೋಗವನ್ನು ಮಿತಿಗೊಳಿಸಿದರೆ ಸರಿಯಾದೀತೇನೋ!' (ಪುಟ ೩೬ –೩೭). ಇದು ನಮ್ಮ ಸಾಹಿತಿಗಳು ಅಗತ್ಯವಾಗಿ ಗಮನಿಸಬೇಕಾದ ಸಲಹೆಯಾಗಿದೆ.

ಇನ್ನು ಕೆಲವು ಬಾರಿ ಜಿ. ವೆಂ. ಅವರು ಹಾಸ್ಯವಾಗಿ ಸಮಾಜದ ವಿಕೃತಿಗಳನ್ನು ತೋರಿಸಿಕೊಡುತ್ತಾರೆ : (ಉದಾಹರಣೆ ೨). 'ಉಂಡಾಡಿ : ಚೆನ್ನಾಗಿ ಉಂಡು ಏನನ್ನೂ ಮಾಡದೆ ಅಲೆದಾಡಿಕೊಂಡಿರುವ ವ್ಯಕ್ತಿಗೆ, ಮಹಾ ಸೋಮಾರಿಗೆ ಈ ಶಬ್ದವು ಅನ್ವಯವಾಗುತ್ತದೆ. ಮನೆಯ ಹಿರಿಯರು ಕಿರಿಯರಿಗೆ ಈ ಶಬ್ದವನ್ನು ಉಪಯೋಗಿಸಿದರೆ ತಾವು ಹುಟ್ಟಿದ್ದು ಸಾರ್ಥಕವಾಯಿತು ಎಂದು ಸಂತೋಷಪಡುವ ಯುವಕರು ಕೆಲವರಿದ್ದಾರೆ. ಇವರ ಸಂತತಿ ಹೆಚ್ಚುತ್ತಾ ಇದೆ ಎಂದು ಹಿರಿಯರು ಆತಂಕಪಡುತ್ತಿದ್ದಾರೆ. ಹಾಗೆ ಆತಂಕಪಡಬೇಕಾದ್ದು ಏನೂ ಇಲ್ಲ. ಕಾದು ನೋಡಿ, ಅವರೆಲ್ಲ ನಮ್ಮ ರಾಜಕೀಯಪಟುಗಳಾಗಿ, ನಾಡಿನ ನಾಯಕಮಣಿಗಳಾಗಿ ಬೆಳಗುತ್ತಾರೆ. ಯಾವುದಕ್ಕೂ ಸ್ವಲ್ಪ ಕಾಲ ಬೇಕಲ್ಲವೇ? ಆಗ ಅವರು ಉಂಡದ್ದು ಕಂಡುಹಿಡಿಯುವುದೇ ಕಷ್ಟವಾಗುತ್ತದೆ.' (ಪುಟ ೫೧ –೫೨). ಇಂತಹ ಕಡೆಗಳಲ್ಲಿ ಸಾಮಾಜಿಕ ನಿಘಂಟುಕಾರ ಲಲಿತಪ್ರಬಂಧಕಾರನಂತೆ ಕಾಣುತ್ತಾನೆ. ಸಾಮಾಜಿಕ ನಿಘಂಟುಕಾರನು ನಾಡೋಜನೂ ಹೌದಾಗಿರುವುದರಿಂದ ಈ ರೀತಿಯ ಛೇಡಿಸುವಿಕೆಯೂ ಸಮಾಜ ಶಿಕ್ಷಣಕ್ಕೆ ಅಗತ್ಯವೆಂದು ಭಾವಿಸಬಹುದು.

ಜಿ. ವೆಂ. ಅವರು ತಮ್ಮ ನಿಘಂಟುಗಳಲ್ಲಿ, ಅವುಗಳಿಗೆ ಬರೆದಿರುವ ಮುನ್ನುಡಿಗಳಲ್ಲಿ ಹಾಗೂ ಅನ್ಯತ್ರ ಭಾಷೆಯ ಬಗ್ಗೆ ಹಾಗೂ ಭಾಷಾಭಂಡಾರದ ಬಗ್ಗೆ ಸಾಕಷ್ಟು ವಿಚಾರಗಳನ್ನು ಹೇಳಿದ್ದಾರೆ. ಕನ್ನಡದ ಪದಸಂಪತ್ತನ್ನು ದಾಖಲಿಸುವುದರಲ್ಲಿ, ವಿವರಿಸುವುದರಲ್ಲಿ, ಜನರೊಡನೆ ಹಂಚಿಕೊಂಡು ಅವುಗಳನ್ನು ಉಳಿಸುವುದರಲ್ಲಿ ಸದಾ ಮಗ್ನರಾಗಿರುವ ಪ್ರೊ. ಜಿ. ವೆಂಕಟಸುಬ್ಬಯ್ಯನವರು ನಿಜವಾದ ನಾಡೋಜರು.

◈◈◈

# ಮುದ್ದಣ ಪದಪ್ರಯೋಗ ಕೋಶ

ಪ್ರೊ. ಎ. ವಿ. ನಾವಡ

ಸಂಸ್ಕೃತದಲ್ಲಿ ನಿಘಂಟುಶಾಸ್ತ್ರದ ಹರಹು ದೊಡ್ಡದು. ಪಡುವಣ ದೇಶದಲ್ಲೂ ಆ ಶಾಸ್ತ್ರ ವೈಜ್ಞಾನಿಕವಾಗಿ ಬೆಳೆದಿದೆ. ಅದು ಭಾಷಾವಿಜ್ಞಾನದ ಆನ್ವಯಿಕ ಕವಲಾಗಿ ಅನೇಕ ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗದ ವಿಷಯವಾಗಿದೆ. ಕೆಲವೊಂದು ವಿಶ್ವವಿದ್ಯಾಲಯಗಳಲ್ಲಿ ನಿಘಂಟುಶಾಸ್ತ್ರ ಹಾಗೂ ನಿಘಂಟುರಚನಾಶಾಸ್ತ್ರದ ಅಧ್ಯಯನ ಹಾಗೂ ಅನುಸಂಧಾನಕ್ಕಾಗಿಯೇ ಪ್ರತ್ಯೇಕ ವಿಭಾಗವಿರುವುದೂ ಉಂಟು. ಕರ್ನಾಟಕದಲ್ಲಿ ರೀವ್, ಕಿಟೆಲ್, ಜಿ. ವೆಂಕಟಸುಬ್ಬಯ್ಯ, ಡಿ. ಎಲ್. ಎನ್., ಡಿ. ಎನ್. ಶಂಕರ ಭಟ್ಟ, ಮರಿಯಪ್ಪ ಭಟ್ಟ, ಯು. ಪಿ. ಉಪಾಧ್ಯಾಯರಂತಹ ನಿಘಂಟು ರಚನಾನಿಪುಣರು ಸಾಕಷ್ಟು ಸಲುವಳಿ ಮಾಡಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ನಿಘಂಟುಶಾಸ್ತ್ರಕ್ಕೆ ಅಷ್ಟೊಂದು ಮನ್ನಣೆ ತೋರುತ್ತಿಲ್ಲ. ಇದರ ಫಲವಾಗಿ ನಿಘಂಟು-ಶಾಸ್ತ್ರದ ಅರಿವಿಲ್ಲದೆ 'ಹಾದಿಬೀದಿಯ ನಿಘಂಟುಗಳು' ನಮ್ಮ ಸುತ್ತಿನಲ್ಲಿ ಹುಟ್ಟಿಕೊಳ್ಳು-ತ್ತವೆ. ಕಠಿಣ ಪದಗಳಿಗೆ ಅರ್ಥ ಬರೆಯುವುದಷ್ಟೇ ನಿಘಂಟಿನ ಗುರಿ ಎಂದೇ ಅನೇಕರು ತಿಳಿದುಕೊಂಡಂತಿದೆ. ಇಷ್ಟಾಗಿಯೂ ಕನ್ನಡದಲ್ಲಿ ನಾನಾ ಸ್ವರೂಪದ, ನಾನಾ ವ್ಯಾಪ್ತಿಯ, ನಾನಾ ಉದ್ದೇಶಗಳುಳ್ಳ ನಿಘಂಟುಗಳು ರೂಪುಗೊಂಡಿವೆ, ರೂಪುಗೊಳ್ಳತೊಡಗಿವೆ. ಬ್ಯಾಂಕಿಂಗ್ ನಿಘಂಟು, ವೈದ್ಯಪದಕೋಶ, ವಿಜ್ಞಾನಪದ ಕೋಶ, ವೃತ್ತಿಪದಕೋಶ, ನಾನಾರ್ಥಪದಕೋಶ, ಗಾದೆಗಳ ಕೋಶ, ನಾಣ್ಣುಡಿಗಳ ಕೋಶ, ಸರ್ವಪದಪ್ರಯೋಗಕೋಶ, ವಿಷಯಪದಕೋಶ ಇತ್ಯಾದಿ. ಇಂತಹ ಒಂದೊಂದು ಕೋಶವೂ ನಮ್ಮ ನುಡಿಯ ಅಸಾಧಾರಣ ಶಬ್ದಶಕ್ತಿಯನ್ನು ಹೇಳುತ್ತವೆ. ಭಾಷೆಯ ಬಳಕೆಯ ವಲಯವನ್ನು ವಿಸ್ತರಿಸುತ್ತವೆ.

ನಿಘಂಟುಪರಿವಾರದಲ್ಲಿ ಸರ್ವಪದಪ್ರಯೋಗ ಕೋಶ (concordance) ಒಂದು ಬಗೆಯದು. ಇಲ್ಲಿ ಒಬ್ಬ ಕವಿಯ ಒಂದು ಅಥವಾ ಹಲವು ಕೃತಿಗಳ ಎಲ್ಲ ಶಬ್ದಪ್ರಯೋಗಗಳನ್ನು ಒಂದೆಡೆ ಅಕಾರಾದಿಯಲ್ಲಿ ಕ್ರೋಡೀಕರಿಸಿ ಅಂಥ ಪದಗಳು ಒಂದು ಅಥವಾ ಬೇರೆ ಬೇರೆ ಅರ್ಥದ ಛಾಯೆಗಳನ್ನು ಪ್ರಕಟಪಡಿಸಿರುವ ಬಗೆಯನ್ನು ಹುಡುಕಾಡುವ ಆ ಮೂಲಕ ಕವಿಯ 'ಶಬ್ದಾನುರಾಗ'ದ ಒಲುವೆಯನ್ನು ಅರಿಯುವ ಪ್ರಯತ್ನ ಮಾಡಲಾಗುತ್ತದೆ. ಇಂಗ್ಲಿಷ್‌ನಲ್ಲಿ ಬೈಬಲ್ ಸರ್ವಪದಕೋಶ ಹಾಗೂ ಷೇಕ್ಸ್‌ಪಿಯರನ ಸರ್ವಪದಕೋಶದ ಹಿಂದಿನ ಶ್ರಮ, ಅಲ್ಲಿಯ ವೈಜ್ಞಾನಿಕತೆ

ನಮ್ಮಲ್ಲಿ ದಂಗುಬಡಿಸುತ್ತವೆ. ಕನ್ನಡದಲ್ಲೂ ಡಿ. ಎಲ್. ಎನ್. ಅವರ ಪಂಪಭಾರತಟೀಕೆ, ತೆಕ್ಕುಂಜ ಗೋಪಾಲಕೃಷ್ಣ ಭಟ್ಟರ ಶ್ರೀರಾಮಾಶ್ವಮೇಧಂ ಕಾವ್ಯಕ್ಕೆ ಬರೆದ ಅರ್ಥವ್ಯಾಖ್ಯಾನ ಬಹುಮಟ್ಟಿಗೆ ಈ ಮಾದರಿಯದು. ಎಸ್. ಆರ್. ಗುಂಜಾಳ ಮತ್ತು ಬಿ. ಎಲ್. ಬ್ಯಾಡಗಿ ಸಂಪಾದಿಸಿದ ತೋಂಟದ ಸಿದ್ಧಲಿಂಗ ಯತಿಗಳ ಪದಪ್ರಯೋಗ ಕೋಶ, ಹಾಗೂ ಅಲ್ಲಮನ ಪದಕೋಶ, ಎ. ವಿ. ನಾವಡ ಹಾಗೂ ಉಪೇಂದ್ರ ಸೋಮಯಾಜಿ ಜೊತೆಸೇರಿ ಸಿದ್ಧಪಡಿಸಿದ ಗೋವಿಂದ ಪೈ ಪದಪ್ರಯೋಗ ಕೋಶ, ಎನ್. ಕೆ. ಕುಲಕರ್ಣಿಯವರ ಕುಮಾರವ್ಯಾಸ ನಿಘಂಟು, ಬಸವರಾಜ ಮಲಶೆಟ್ಟಿಯವರ 'ಮಹಾಕವಿ ಹರಿಹರನ ಕೃತಿಗಳ ಪದಕೋಶ', ಹಾವನೂರ ಹಾಗೂ ಕೃಷ್ಣ ಸಂರಚಿಸಿದ 'ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶ' ಈ ಯಾದಿಯದು. ಇದೇ ಮಾದರಿಯ ಇನ್ನೊಂದು ಕೋಶ ನಿಘಂಟಿಗ ಪ್ರೊ. ಜಿ. ವೆಂಕಟಸುಬ್ಬನವರ 'ಮುದ್ದಣ ಪದಪ್ರಯೋಗ ಕೋಶ'. ಕನ್ನಡದ ಏರೆತ್ತರದ ನಿಘಂಟುರಚನಾನಿಪುಣರೂ ನಿಘಂಟುಶಾಸ್ತ್ರಜ್ಞರೂ ಆದ ಅವರ ಈ ಕೃತಿ ಮುದ್ದಣನ ಪದನಿರ್ಮಿತಿಕೌಶಲವನ್ನು ಅರಿಯುವಲ್ಲಿ ಸಫಲವಾಗಿದೆ.

'ಮುದ್ದಣ ಪದಪ್ರಯೋಗಕೋಶ' ಮುದ್ದಣನ ಎರಡು ಯಕ್ಷಗಾನ ಪ್ರಸಂಗ-ಗಳು, ಪದ್ಯಕೃತಿ ಶ್ರೀರಾಮಪಟ್ಟಾಭಿಷೇಕ, ಗದ್ಯಕೃತಿಯಾದ 'ಅದ್ಭುತ ರಾಮಾಯಣ' ಹಾಗೂ 'ರಾಮಾಶ್ವಮೇಧ' ಕೃತಿಗಳಲ್ಲಿ ಬಳಕೆಯಾದ 'ಪದಪ್ರಯೋಗ' (ಸರ್ವಪದ-ಪ್ರಯೋಗಗಳಲ್ಲಿ)ಗಳನ್ನು ಸರಿಜೋಡಿಸಿ ಅಕಾರಾದಿಗೆ ಒಳಪಡಿಸಿ, ಪದಗಳು ಕಾವ್ಯದೊಳಗೆ ಬಳಕೆಗೊಂಡ ಪುಟಗಳ ವಿವರಗಳೊಂದಿಗೆ ಅರ್ಥವನ್ನು ನೀಡಿದ್ದಾರೆ. ಒಂದೇ ಪದಕ್ಕೆ ಭಿನ್ನ ಅರ್ಥಗಳ ಹೊಳಹುಗಳಿದ್ದಾಗ ಅವುಗಳನ್ನು ದಾಖಲಿಸಿದ್ದಾರೆ. ಈ ಕೋಶದಲ್ಲಿ ಮುದ್ದಣ ತನ್ನ ಕಾವ್ಯಗಳಲ್ಲಿ ಬಳಸಿದ ಪದಗಳಿಗೆ ಅವನ ಅರ್ಥೈಸುವಿಕೆಯ ವಿವರಗಳನ್ನಷ್ಟೇ ನೀಡಲಾಗಿದೆ. ಆ ಪದಗಳಿಗೆ ಇನ್ನಿತರ ಸಂದರ್ಭಗಳಲ್ಲಿ ಇದ್ದಿರಬಹುದಾದ ಅರ್ಥಗಳನ್ನು ನೀಡಿಲ್ಲ. ಒಂದೇ ರೂಪದ ಶಬ್ದವು ಕ್ರಿಯಾಪದವೂ ನಾಮಪದವೂ ಬೇರೆ ಬೇರೆ ಕಡೆಗಳಲ್ಲಿ ಪ್ರಯೋಗಗೊಂಡಿದ್ದರೆ ಅವುಗಳನ್ನು [ಕ್ರಿ], [ನಾ] ಎಂದು ವಿಂಗಡಿಸಿ ದಾಖಲಿಸಿದ್ದಾರೆ.

ಮುದ್ದಣನಿಗೆ ಕಥಾಸಂವಿಧಾನ, ಅಭಿವ್ಯಕ್ತಿತಂತ್ರ ಹಾಗೂ ಕಥಾನಿರ್ವಹಣೆಯಲ್ಲಿ ಹೊಸತನ ತರಬೇಕೆನ್ನುವ ತಹತಹ ಇದ್ದಂತೆ ಪದನಿರ್ಮಾಣ ಕೌಶಲ್ಯ ಹಾಗೂ ಅವುಗಳ ಬಳಕೆಯಲ್ಲಿನ ನಾವೀನ್ಯದ ಬಗೆಗೂ ಕುತೂಹಲವಿದ್ದಿತ್ತು. ತನ್ನ ಹೊಸಜಾಡಿನ ಅಭಿವ್ಯಕ್ತಿಗೆ ತಕ್ಕ ಪದಗಳನ್ನು ಟಂಕಿಸುವ ಕುತೂಹಲದಿಂದ ಆತ ಶಬ್ದಮಣಿದರ್ಪಣ, ಕಬ್ಬಿಗರ ಕಾವ, ಕುಮಾರವ್ಯಾಸ ಭಾರತ, ಜೈಮಿನಿ ಭಾರತ ಮುಂತಾದ ವಿಶೇಷವಾಗಿ ನಡುಗನ್ನಡದ ಕಾವ್ಯಗಳನ್ನು ಅರೆದುಕುಡಿದಿದ್ದನು. ಕಿಟ್ಟೆಲ್ ನಿಘಂಟು ಆತನಿಗೆ 'ನಿತ್ಯ ಪಾರಾಯಣ'ದ ಗ್ರಂಥವಾಗಿತ್ತು ಎಂಬ ಹೇಳಿಕೆ ಇದೆ. (ಹುರುಳಿ ಭೀಮರಾಯರ ಮಾತು)

ಮುದ್ದಣ ಪದನಿರ್ಮಾಣ ಕೌಶಲದ ಹಿಂದಿನ ತಾತ್ತ್ವಿಕತೆಯನ್ನು ಅರಿತು-ಕೊಳ್ಳುವುದು ಪದಕೋಶದ ಪರಾಮರ್ಶನಕ್ಕೆ ಅನುಕೂಲವಾಗಬಹುದು. ಹೊಸದಾದ

ಜೋಡುನುಡಿಗಳನ್ನು ಕಟ್ಟುವುದು (ಉದಾ: ಮಜೆಕೊಂಬು, ಬೆಳ್ಕಕ್ಕರಿಗರ್, ಕಿನ್ನೆಲ ಇ.) ಕ್ರಿಯಾಪದಗಳಣ್ನು ರೂಢಿಯ ರೂಪಗಳಿಗಿಂತ ಭಿನ್ನವಾಗಿಬಳಸುವುದು (ಉದಾ: ಕುವಿದು, ಅವಲ್ (ಕುಟ್ಟು), ಸಸಿದು (= ಸಸಿಗೊಂಡು), ಇಸು ಪ್ರತ್ಯಯಗಳ ಬಳಕೆಯ ಮೂಲಕ ತುತ್ತಿಸು, ಬಿಚ್ಚಳಿಸು, ಮೂರ್ಛಿಸು, ತುಂಡಿಸು ಮುಂತಾದ ಪದಗಳ ನಿರ್ಮಾಣ, ಅಪೂರ್ವವಾದ ಸಂಸ್ಕೃತಪದಗಳನ್ನು ಮತ್ತೆ ಚಲಾವಣೇಗೆ ತರುವುದು (ಉದಾ: ಪುಣ್ಯಾಜನ್ಮ (=ರಾಕ್ಷಸ), ಯಾತುಧಾನ (= ರಾಕ್ಷಸ), ಕನ್ನಡದ ಪದಗಳನ್ನು ಸೌಮ್ಯೋಕ್ತಿಯ ನೆಪದಲ್ಲಿ ಸಂಸ್ಕೃತಕ್ಕೆ ಮಾರ್ಪಡಿಸಿ ಹೇಳುವ ಕೌಶಲ (ಉದಾ: ವಿದ್ರವ = ನೀರಿಲ್ಲದವನು, ಶಿಖಂಡಿ), ಪರಿಸರದ ಆಡುಮಾತಿನ ದೇಸಿ ನುಡಿಗಳನ್ನು ಕಾವ್ಯವಲಯದೊಳಗೆ ಉಸಿರಾಡಿಸುವುದು, ಚಲಾವಣೆಯಲ್ಲಿ ಜಾರಿ ಹೋಗಿರುವ ಪದಗಳಿಗೆ ಮತ್ತೆ ಜೀವತುಂಬಿ ಬಳಸುವುದು, ಸುತ್ತಿನ ತುಳು, ಮಲೆಯಾಳಂ, ಕೊಂಕಣಿ ಪದಗಳನ್ನು ಕನ್ನಡದೊಳಗೆ ಬೆಸೆಯುವುದು (ಉದಾ: ಕೆಲೆ = ಕೂಗು, ಮುಟ್ಟಯಿಸು (= ಸಮೀಪಿಸು, ಸೇಂಕು/ತೇಂಕು (= ಮೇಲುಸಿರು ಬಿಡು, ಮಲ್ಲಗಿಳಿ (= ರಾಜಗಿಳಿ), ಜರಿ (= ಕುಸಿಯು) ಅಣಿಗಟ್ಟು (= ಸಿದ್ಧವಾಗು) ಇತ್ಯಾದಿ. ಪ್ರಾದೇಶಿಕ ವಿಶಿಷ್ಟಪದಗಳಿಗೆ ಅರ್ಥಹೇಳುವಾಗ ಮುದ್ದಣನ ಕೃತಿಗಳನ್ನು ಹಿಂದೆ ಸಂಪಾದನೆ ಮಾಡಿದ ರಾಮಾನುಜಯ್ಯಂಗಾರ್, ಕ. ನರಸಿಂಹ ಶಾಸ್ತ್ರೀ ಮುಂತಾದವು ಸಹಜವಾಗಿ ಎಡವಿದುದುಂಟು. ಜಿ. ವೆಂಕಟಸುಬ್ಬಯ್ಯನವರು ಈ ಪದಕೋಶದ ನಿರ್ಮಾಣಕ್ಕೆ ತೊಡಗುವ ಮುನ್ನ ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರ 'ಶ್ರೀರಾಮಾಶ್ವಮೇಧಂ' ವ್ಯಾಖ್ಯಾನಸಹಿತ ಪ್ರಕಟವಾಗಿತ್ತು. ಅದನ್ನು ಜಿ. ವೆಂ. ಅವರು ಪರಾಮರ್ಶಿಸಿದ್ದರು. ಹಾಗೆಂದು ತೆಕ್ಕುಂಜದ ಅರ್ಥವಿವರಣಕ್ಕೆ ಭಿನ್ನವಾದ ಆಲೋಚನೆಗಳನ್ನು ಮಾಡಿದ್ದೂ ಉಂಟು.

ಒಂದು ಪದ ಒಂದೇ ಕಾವ್ಯದೊಳಗೆ ಬೇರೆ ಬೇರೆ ಅರ್ಥಛಾಯೆಗಳನ್ನು ಪಡೆದಿರುವುದುಂಟು. ಈ ಭಿನ್ನ ಅರ್ಥಛಾಯೆಗಳನ್ನು ಗುರುತಿಸುವುದು ನಿಘಂಟಿಗನ ಕೆಲಸ. ಇಂತಹ ಕೆಲಸವನ್ನು ಜಿ. ವೆಂ. ತಮ್ಮ 'ಪದಪ್ರಯೋಗಕೋಶ'ದಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದರು.

ಉದಾ: **ಪಾರ್** (ರಾಮಾಶ್ವಮೇಧ ೧೯, ೧೭೭, ೧೮೦)
ಹಾರೈಸು, ಎದುರುನೋಡು, ತಪ್ಪನ್ನು ಗುರುತಿಸು, ಕಾಣು, ನೋಡು
(೨೩೩೨, ಪುಟ ೧೦೫)

**ಅಚಲಾತ್ಮಭವೆ** (ಶ್ರೀರಾಮಪಟ್ಟಾಭಿಷೇಕ ೨೯೧)
ಭೂಜಾತೆಯಾದ ಸೀತೆ, ಗಿರಿಸುತೆಯಾದ ಪಾರ್ವತಿ,
ಅಚಲ = ಭೂ ಮತ್ತು ಬೆಟ್ಟ

**ದಿನಪಡಿ** (ರಾಮಾಶ್ವಮೇಧ) ೧. ಪ್ರತಿದಿನದ ದಾನವನ್ನು ಬೇಡುವುದು.
೨. ಪ್ರತಿದಿನಕ್ಕೂ ಭೋಜನಕ್ಕೆ ಬೇಕಾದ ಆಹಾರದ ವಸ್ತುಗಳು
(೧೮೨೩, ಪುಟ ೮೩)

ಈ ಪದಕೋಶದಲ್ಲಿ ಕೆಲವೊಂದು ಪದಗಳಿಗೆ ವಿವರಣಾತ್ಮಕವಾಗಿ ಅರ್ಥ ನೀಡುವ ಪ್ರಯತ್ನ ಮಾಡಿದ್ದಾರೆ. ಇದು ಸಹಜ ಮತ್ತು ಅನಿವಾರ್ಯ. ಉದಾ:

**ಅಂಟುವಲೆ** (ರಾಮಾಶ್ವಮೇಧ) ಅಂಟುಬಲೆ. ಬೇಡರು ಪಕ್ಷಿಗಳನ್ನು ಪ್ರಾಣಿಗಳನ್ನೂ ಹಿಡಿಯಲು ಉಪಯೋಗಿಸುವ ಅಂಟಿನ ಒಂದು ಬಗೆಯ ಬಲೆ. (೧೨ ಪುಟ ೧)

**ಅರಸಿನೆಣ್ಣೆ** (ಕುಮಾರವಿಜಯ) ವಿವಾಹದಲ್ಲಿ ಮೊದಲ ನೀರಿಗೆ ಮುಂಚೆ ಎಣ್ಣೆಯಲ್ಲಿ ಅರಸಿನವನ್ನು ಕಲಸಿ ವಧೂವರರಿಗೆ ಮೈಗೆ ಲೇಪಿಸುವ ಶಾಸ್ತ್ರ. (೧೪೬ ಪುಟ ೭)

**ಕಣ್ಣಿವಲೆ** (ರಾಮಾಶ್ವಮೇಧ) ದಾರ, ಹಗ್ಗ ಮುಂತಾದವುಗಳಿಂದ ಮಾಡಿದ ಪ್ರಾಣಿಗಳನ್ನು ಹಿಡಿಯುವ ಬಲೆ. (೭೦೫ ಪುಟ ೩೩)

ಕೆಲವೊಮ್ಮೆ ಪದಗಳಿಗೆ ಅರ್ಥನೀಡುವುದರಲ್ಲೇ ವಿರಮಿಸದೆ ಆ ಅರ್ಥಕ್ಕೆ ಮುದ್ದಣನಿಗೆ ಆಕರ ಏನು, ಅವನು ನೀಡಿದ ಆ ಅರ್ಥಕ್ಕೆ ನಿಖರತೆ ಇದೆಯೇ ಮುಂತಾದುವನ್ನು ನಿಘಂಟನೊಳಗೆ ಚರ್ಚಿಸುತ್ತಾರೆ. ಇದು ಅವರ ನಿಘಂಟುತಜ್ಞತೆಗೆ ಸಾಕ್ಷಿ. ಉದಾ:

**ಖಳಿಲೆ** (ರಾಮಾಶ್ವಮೇಧ) ಗ್ರೀಷ್ಮಋತು. ಈ ಅರ್ಥವನ್ನು ಮುದ್ದಣನು ಕಿಟ್ಟೆಲ್ ಕೋಶದಿಂದ ಎತ್ತಿಕೊಂಡಿದ್ದಾನೆ. ಆದರೆ ಕಿಟೆಲ್ಲನೇ ತಪ್ಪಿರುವಂತಿದೆ. ಆ ಶಬ್ದ ಬರುವ ಗ್ರಂಥದಲ್ಲಿ ಅಂದರೆ ಭಾಗವತದಲ್ಲಿ ಆ ಪದವು ಖಳಿಲೆನೆ ಎಂಬ ಅನುಕರಣವಿರುವುದು ಕಂಡುಬಂದಿದೆ. ಭಾಗವತ ೧೦-೧೮೨.

ಹಾಗೆಂದು 'ಮುದ್ದಣ ಪದಪ್ರಯೋಗಕೋಶ' ಪರಿಪೂರ್ಣ ಎಂದು ನಾನು ಹೇಳುತ್ತಿಲ್ಲ. ವಾಸ್ತವವಾಗಿ ಪದಪ್ರಯೋಗಕೋಶದಲ್ಲಿ ಕವಿ ಬಳಸಿದ ಪದಗಳಿಗೆ ಕವಿಯ ಪ್ರಯೋಗ (Citation) ನೀಡುವುದಿದೆ. ಆದರೆ ಇಲ್ಲಿ ಜಿ. ವೆಂ. ಅವರು ಆ ವಿಧಾನವನ್ನು ಅನುಸರಿಸಿಲ್ಲ. ಕಾರಣ, ನಾನು ಊಹಿಸುವಂತೆ ಈ ಪದಕೋಶವನ್ನು ಅವರು ತಾವು ಸಂಪಾದಿಸಿದ 'ಮುದ್ದಣ ಭಂಡಾರ'(ಎರಡು ಸಂಪುಟಗಳು)ದಲ್ಲಿ ಬಳಸಿದ ಅರ್ಥಕೋಶವನ್ನೇ ಇಲ್ಲಿ ಪುನರ್ಮುದ್ರಿಸಿದ್ದಾಗಿದೆ. ಸಂಪುಟದೊಳಗೆ ಅನುಬಂಧವಾಗಿದ್ದ ಅರ್ಥಕೋಶ ಪ್ರತ್ಯೇಕ ನಿಘಂಟಾದಾಗ ಅಲ್ಲಿ ಪ್ರಯೋಗವನ್ನು ಜ್ಞಾತಿಪದಗಳನ್ನು ನೀಡಿದ್ದರೆ ಕೋಶದ ಬೆಲೆ ಏರುತ್ತಿತ್ತು. ನಿಘಂಟುತಜ್ಞರಾದ ಜಿ. ವೆಂ. ಅವರಿಗೆ ಅದು ಅಸಾಧ್ಯವಾದ ಕೆಲಸವೇನೂ ಅಲ್ಲ.

'ನಡೆವರೆಡಹದೆ ಕುಳಿತರೆಡಹುವರೆ' ಎಂಬ ಮಾತಿನಂತೆ ಜಿ.ವೆಂ. ಅವರು ಮುದ್ದಣನ 'ಪದಪ್ರಯೋಗಕೋಶ'ದಲ್ಲಿ ಅನೇಕ ಸತ್ಯಗಳನ್ನು ಶೋಧಿಸಿದರೂ ಮೇಲುನೋಟಕ್ಕೆ ಕೆಲವೊಂದು ಪದಗಳಿಗೆ ಭಿನ್ನ ಅರ್ಥವನ್ನು ನೀಡಬಹುದಿತ್ತು ಎನಿಸುತ್ತದೆ. ಇದರಿಂದ ಪದಕೋಶದ ಮಹತ್ತಿಗೆ ಊನಬಂದಿದೆ ಎಂದು ನಾನು ಭಾವಿಸುತ್ತಿಲ್ಲ.

| ಉದಾ: ಪದ | ಕೋಶದ ಅರ್ಥ | ನಿಜವಾದ ಅರ್ಥ |
|---|---|---|
| ೧. ಕೆಲೆ (೧೦೭೪) | ಅರಚು | ಸೊಕ್ಕಿನಿಂದ ಕೂಗು, ಸದ್ದುಮಾಡು |
| ೨. ಜೊಂಪ (೧೪೯೮) | ಮೆಳೆ | ಚಪ್ಪರ |
| ೩. ನೂಳದುದು (೨೦೯೪) | ನುಣುಚಿಕೊಳ್ಳಲಾರದ್ದು | ಆಧಿಕ್ಯ, ಅತಿಶಯ |
| ೪. ಪಚ್ಚೆಯಾಗು (೨೧೮೯) | ಹಣ್ಣಾಗದೆ ಹೋಗು | ಹಸುರಾಗು, ಸಾಯು |
| ೫. ಕೊಡನ ಮಜೆ (೧೧೪೧) | ಕೊಡನೊಳಗಿನ ಸರ್ಪದ ಮರಿ | ಘಟಸರ್ಪ |
| ೬. ಕಣ್ಮಲೆ (೭೧೦) | ಕೀಳಾಗಿ ಕಾಣು | ಸೊಕ್ಕಿನಿಂದ ನೋಡು |
| ೭. ಮುಡಿ (೩೩೬೦) | ಮೂಟೆ | ಹುಲ್ಲಿನಿಂದ ನಿರ್ಮಿಸಿದ ಅಕ್ಕಿಯ ಮೂಟೆ |

'ಮುದ್ದಣ ಪದಪ್ರಯೋಗಕೋಶ' ಬರಿಯ ಭಾಷಾಸಂಬಂಧಿ ನಿಘಂಟು ಆಗಿರದೆ ಮುದ್ದಣನ ಬಗೆಗಿನ ಸಮಗ್ರ ಅಧ್ಯಯನಕ್ಕೆ ಒಂದು ಆಕರಗ್ರಂಥವಾಗಿದೆ. ಮುದ್ದಣನ ಶಬ್ದಭಂಡಾರದೊಳಗೆ ಒಡೆಯಲಾಗದ ಅನೇಕ ಗ್ರಂಥಿಗಳನ್ನು ಬಿಡಿಸುವಲ್ಲಿ ಸಫಲರಾಗಿದ್ದಾರೆ.* ಕನ್ನಡದಲ್ಲಿ ಒಬ್ಬ ಕವಿಯನ್ನು ಕುರಿತ ಸರ್ವಪದಪ್ರಯೋಗಕೋಶ ಹೆಚ್ಚು ಹೆಚ್ಚು ನಿರ್ಮಾಣಗೊಳ್ಳಬೇಕು. ಅರ್ಥನಿರ್ಣಯವಷ್ಟೇ ಇಂತಹ ಕೋಶಗಳ ಉಪಯುಕ್ತತೆ ಅಲ್ಲ. ಆಧುನಿಕಸಂದರ್ಭಕ್ಕೆ ತಕ್ಕಂತೆ ಭಾಷೆಯ ಸಾಧ್ಯತೆಯನ್ನು ವಿಸ್ತರಿಸಲು ಇದರಿಂದ ಅನುಕೂಲವಾಗುತ್ತದೆ. ಆ ದೃಷ್ಟಿಯಿಂದ ಜಿ. ವೆಂ. ಅವರ 'ಮುದ್ದಣ ಪದಪ್ರಯೋಗಕೋಶ' ಒಂದು ಉಪಯುಕ್ತ ಆಕರ ಗ್ರಂಥ.



---

* 'ಮುದ್ದಣ ಪದಪ್ರಯೋಗ ಕೋಶ' ಪ್ರಕಟವಾದುದು 1996ರಲ್ಲಿ. ಆ ಬಳಿಕ 2004ರಲ್ಲಿ ಡಾ. ನಾ. ದಾಮೋದರ ಶೆಟ್ಟಿಯವರ 'ಮುದ್ದಣನ ಶಬ್ದಪ್ರತಿಭೆ' ಎಂಬ ಪಿಎಚ್.ಡಿ. ಮಹಾಪ್ರಬಂಧ (ಪ್ರ. ಕನ್ನಡ ಸಾಹಿತ್ಯ ಪರಿಷತ್ತು) ಅಚ್ಚಾಗಿದ್ದು ಕವಿಯೊಬ್ಬನ ಶಬ್ದಕೌಶಲ್ಯದ ಸಾಧ್ಯತೆಯ ತಾತ್ತ್ವಿಕತೆಯನ್ನು ಹೇಳುವ ಮಹತ್ತ್ವದ ಅಧ್ಯಯನ ಇಲ್ಲಿ ನಡೆದಿದೆ.

# ಸಂಕ್ಷಿಪ್ತ ಕನ್ನಡ ನಿಘಂಟು

■ಪ್ರೊ. ಎಸ್. ಜಿ. ಪಟವರ್ಧನ್

ಬೆಂಗಳೂರಿನಲ್ಲಿ ನಡೆಯಲಿರುವ ೭೭ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರನ್ನು ನಿಘಂಟುತಜ್ಞರೆಂದೇ ಕರೆಯಲಾಗಿದೆ. ಶ್ರೀಯುತರು ಹತ್ತಕ್ಕೂ ಹೆಚ್ಚು ಕನ್ನಡ ನಿಘಂಟುಗಳನ್ನು ಸಂಯೋಜಿಸಿದ್ದಾರೆ. ಅವುಗಳಲ್ಲಿ ಎಂಟು ಸಂಪುಟಗಳಲ್ಲಿ ರಚಿತವಾದ 'ಕನ್ನಡ ನಿಘಂಟು' ಬಹುಮುಖ್ಯವಾದುದು. ಇವರ 'ಕ್ಲಿಷ್ಟ ಪದಕೋಶ' ಕನ್ನಡದಲ್ಲೇ ಪ್ರಥಮ. 'ಎರವಲು ಪದಕೋಶ' ಅಮೂಲ್ಯಗ್ರಂಥ.

1975ರಲ್ಲಿ ಪ್ರಥಮ ಆವೃತ್ತಿಯಲ್ಲಿ ಅಚ್ಚಾದ ಕನ್ನಡ ಸಾಹಿತ್ಯ ಪರಿಷತ್ತಿನವರು ಹೊರತಂದ 'ಸಂಕ್ಷಿಪ್ತ ಕನ್ನಡ ನಿಘಂಟು' ಆಗಿನ ಕಾಲಕ್ಕೆ ಶ್ರೀ ವೆಂಕಟಸುಬ್ಬಯ್ಯನವರು ರಚಿಸಿದ ಬಹೂಪಯೋಗೀ ಗ್ರಂಥ. ಆ ಕಾಲದಲ್ಲಿ ಕಿಟ್ಟೆಲ್ ಅವರ ಕನ್ನಡ-ಇಂಗ್ಲಿಷ್ ನಿಘಂಟು (1894) ಮಚ್ಚಿಮಲೆ ಶಂಕರನಾರಾಯಣ ರಾವ್, ಆರ್. ಎಸ್. ನಾಪೂರುಕಾರ್ ಮತ್ತು ಸೇಡಿಯಾಪು ಕೃಷ್ಣ ಭಟ್ಟರು ರಚಿಸಿದ (1951) 'ಕನ್ನಡ ನಿಘಂಟು', ಪಂಡಿತ ಚೆ. ಎ. ಕವಲಿ ಅವರ 'ಕನ್ನಡ ಕಸ್ತೂರಿ ಕೋಶ' (1957) ಶಿವರಾಮ ಕಾರಂತರ 'ಸಿರಿಗನ್ನಡ ಅರ್ಥಕೋಶ' (1967) ಮೊದಲಾದ ಕನ್ನಡ ನಿಘಂಟುಗಳು ಇದ್ದರೂ ಕನ್ನಡ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ನಿತ್ಯೋಪಯೋಗಕ್ಕಾಗಿ ಒಂದು ಅಡಕವಾದ ಕನ್ನಡ ನಿಘಂಟಿನ ಆವಶ್ಯಕತೆ ಇತ್ತು. 'ಸಂಕ್ಷಿಪ್ತ ಕನ್ನಡ ನಿಘಂಟು' ಇಂತಹ ಅಗತ್ಯವನ್ನು ಪೂರೈಸಿತು. ಈ ನಿಟ್ಟಿನಲ್ಲಿ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಭಿನಂದನಾರ್ಹರೇ ಆಗಿದ್ದಾರೆ. ಆಗ ಈ ನಿಘಂಟಿನ ಬೆಲೆ ೫ ರೂ ಪುಟಗಳು ೧೦೦೦.

ಕನ್ನಡ ಸಾಹಿತ್ಯ ಪರಿಷತ್ತಿನ ಆಗಿನ ಅಧ್ಯಕ್ಷರಾಗಿದ್ದ ಶ್ರೀ. ಜಿ. ನಾರಾಯಣ ಅವರು. 'ಪ್ರೊ. ವೆಂಕಟಸುಬ್ಬಯ್ಯನವರು ಹಗಲಿರುಳೂ ವಿಶೇಷವಾಗಿ ಶ್ರಮವಹಿಸದಿದ್ದರೆ ಈ ನಿಘಂಟು ಇಷ್ಟು ಬೇಗ ಹೊರಬರುತ್ತಿರಲಿಲ್ಲವೆಂದು ನಿರ್ವಿವಾದ' ಎಂದು ಹೇಳಿದ ಮಾತು ಪ್ರೊ. ಜಿ. ವೆಂಕಟಸುಬ್ಬಯ್ಯನವರ ಕಾರ್ಯಕ್ಷಮತೆಯನ್ನು ಸೂಚಿಸುತ್ತದೆ. ಈ ನಿಘಂಟಿನ ಪ್ರಥಮ ಆವೃತ್ತಿ 2-10-1975ರ ಗಾಂಧಿ ಜಯಂತಿಯ ಪವಿತ್ರದಿನದಂದು ಬಿಡುಗಡೆಯಾಯಿತು. ಸುಮಾರು ೨೦ ರೂಗಳಿಗೂ

ಹೆಚ್ಚು ಬೆಲೆಬಾಳುವ ನಿಘಂಟನ್ನು ೫/- ರೂಗಳಿಗೆ ಕೊಡಲಾಯಿತು. ಇದಕ್ಕೆ ಆಗಿನ ಸರಕಾರದ ಧನಸಹಾಯವು ಕಾರಣವಾಯಿತು. ಪ್ರಥಮಮುದ್ರಣವಾಗಿ ಈ ನಿಘಂಟಿನ ೫೦,೦೦೦ ಪ್ರತಿಗಳನ್ನು ಹೊರತರಲಾಯಿತು. ಅದರ ಬೇಡಿಕೆಯ ಪ್ರಮಾಣವನ್ನು ಗಮನಿಸಿದರೆ ಆಶ್ಚರ್ಯವಾಗಬಹುದು: ಒಂದು ತಿಂಗಳೊಳಗಾಗಿ ಆ ಎಲ್ಲಾ ಪ್ರತಿಗಳು ಮಾರಾಟವಾಗಿ ಹೋದವು. 1977ರಲ್ಲಿ ಪುನರ್ಮುದ್ರಣ ಮಾಡಲಾಯಿತು. ಆಗ ಒಂದು ಲಕ್ಷ ಪ್ರತಿಗಳು ಸಿದ್ಧವಾದವು. ಅವುಗಳೂ ಬೇಗನೆ ಮುಗಿದು ಹೋದವು. ಈ ನಿಘಂಟು ಎಷ್ಟು ಬಳಕೆಯಾಯಿತೆಂದರೆ ಒಂದು ಪ್ರತಿ ಜೀರ್ಣವಾಗಿ ಎರಡನೆಯ ಪ್ರತಿಯನ್ನು ಬಳಸುವವರಿದ್ದಾರೆಂದರೆ ಆಶ್ಚರ್ಯವಾದೀತು.

ಪ್ರಧಾನಸಂಪಾದಕರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಇದಕ್ಕೆ ದೀರ್ಘವಾದ ಮುನ್ನುಡಿಯೊಂದನ್ನು ಬರೆದಿದ್ದಾರೆ. ಅಲ್ಲಿಯ ಕೆಲವು ಮಾತುಗಳು ಹೀಗಿವೆ: 'ಶಬ್ದಾರ್ಥನಿರ್ಧಾರದ ಕಾರ್ಯ ಒಂದು ಅಸಿಧಾರಾವ್ರತ; ಶಬ್ದಸಂಕಲನ, ಪ್ರಯೋಗಾಕಲನ, ಅರ್ಥವಿಶ್ಲೇಷಣ, ನಿಷ್ಪತ್ತಿನಿರ್ಧಾರಣ – ಇವಕ್ಕೆ ಕವಿಸೂಕ್ತಿಗಳೇ ಪ್ರಧಾನವಾದ ಪರಿಕರಗಳು, ಸಾಧನಗಳು. ಆದುದರಿಂದ ಈ ನಿಘಂಟುವನ್ನು ಸಿದ್ಧಪಡಿಸುವಾಗ ಬೃಹತ್ಕೋಶದ ನಿರ್ಮಾಣಕ್ಕೆಂದು ಕ್ರೋಡೀಕರಿಸಿರುವ ಪ್ರಯೋಗ-ಗಳನ್ನೇ ಮುಖ್ಯ ಆಧಾರವಾಗಿಟ್ಟುಕೊಳ್ಳಲಾಗಿದೆ. ಜೊತೆಗೆ ಕನ್ನಡದಲ್ಲಿರುವ ಇತರ ಎಲ್ಲ ನಿಘಂಟುಗಳನ್ನು ಪರಿಶೀಲಿಸಿ ಶಬ್ದಾರ್ಥಗಳನ್ನು ನಿರ್ಧಾರಮಾಡಲಾಗಿದೆ.'

'ಇದು ಕನ್ನಡ ನಿಘಂಟಾದಾರೂ ಇದರಲ್ಲಿ ಕನ್ನಡದಲ್ಲಿ ಬಳಕೆಯಾಗುವ ಅನ್ಯಭಾಷಾಶಬ್ದಗಳು; ಗಿಡ, ಮರ, ಮೂಲಿಕೆಗಳ ಹೆಸರುಗಳು; ದೇಶ್ಯ, ಅನ್ಯದೇಶ್ಯ, ಸಂಸ್ಕೃತ ಶಬ್ದಗಳು; ವ್ಯಾಕರಣ, ಅಲಂಕಾರ, ಸಂಗೀತ, ನಾಟ್ಯ, ಮುಂತಾದ ಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಗಳು; ಉಪಮೆ, ದೀಪಕ, ರೂಪಕ ಮುಂತಾದ ಶಬ್ದಗಳನ್ನು ಕೊಡಲಾಗಿದೆ. ಅಲ್ಲದೆ ಒಂದು ಶಬ್ದಕ್ಕೆ ಅರ್ಥಗಳನ್ನೂ ಸೂಚಿಸುವಾಗ ಕ್ರಿಯಾವಾಚಕ, ನಾಮವಾಚಕ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ ಎಂಬ ಅನುಕ್ರಮ-ವನ್ನು ಅನುಸರಿಸಲಾಗಿದೆ.' ಈ ಎಲ್ಲ ಅಂಶಗಳಿಂದ ಈ ನಿಘಂಟು ಮಹತ್ತ್ವವನ್ನು ಪಡೆದುಕೊಂಡಿದೆ. ೧೯ನೆಯ ಶತನಮಾನದ ತನಕ ಕನ್ನಡದಲ್ಲಿ ಹಲವಾರು ನಿಘಂಟುಗಳು ರಚಿತವಾಗಿವೆ ಹಾಗೂ ಉಪಯೋಗಕ್ಕೆ ದೊರಕಿವೆ. ಆದರೆ ಆ ವರೆಗಿನ ನಿಘಂಟುಗಳಲ್ಲಿ ಕಿಟ್ಟೆಲ್ ನಿಘಂಟು ಮಾತ್ರವೇ ಇಂದಿಗೂ ಹೆಚ್ಚಾಗಿ ಬಳಸಲ್ಪಡುತ್ತದೆ. ಹಳೆಯ ನಿಘಂಟುಗಳನ್ನು ಪರಾಮರ್ಶೆಗಾಗಿ ಬಳಸುತ್ತಾರೆಯೇ ಹೊರತು ಸತತವಾಗಿ ಉಪಯೋಗಿಸುತ್ತಿಲ್ಲ.

೨೦ನೆಯ ಶತಮಾನದ ಬಳಿಕ ಕನ್ನಡದಲ್ಲಿ ಹಲವು ನಿಘಂಟುಗಳು ಅಚ್ಚಾಗಿವೆ. ಅವುಗಳಿಗೆಲ್ಲ ಅವುಗಳದ್ದೇ ಆದ ವೈಶಿಷ್ಟ್ಯ, ಉಪಯುಕ್ತತೆಗಳಿವೆ. ಕಿಟ್ಟೆಲ್ ನಿಘಂಟುವನ್ನು ಇಪ್ಪತ್ತನೇ ಶತಮಾನದ ನಿಘಂಟುರಚನೆಗೆ ಮಾರ್ಗದರ್ಶನ ಮಾಡಿದ ಕೃತಿಯೆಂದು ಪರಿಗಣಿಸಬಹುದು. ೨೦ನೇ ಶತಮಾನದಲ್ಲಿ ಆಧುನಿಕ ವಿಧಾನದ ಅಕಾರಾದಿ ಕ್ರಮವುಳ್ಳ ಹಲವಾರು ನಿಘಂಟುಗಳು ಬಂದಿದ್ದರೂ ಸಾಹಿತ್ಯಪರಿಷತ್ತಿನ ಈ ಸಂಕ್ಷಿಪ್ತ ಕನ್ನಡ ನಿಘಂಟು ಹೆಚ್ಚು ಜನಪ್ರಿಯತೆಯನ್ನು ಪಡೆಯಿತು. ಇದಕ್ಕಿಂತಲೂ

ಕಿರಿದಾದ ಕನ್ನಡ ರತ್ನಕೋಶವು ಹಲವಾರು ಬಾರಿ ಮುದ್ರಿತವಾಗಿ ಜನಪ್ರಿಯತೆಯನ್ನು ಪಡೆದುಕೊಂಡ ವಿಚಾರವೂ ಗಮನಾರ್ಹವಾಗಿದೆ.

ಪ್ರೊ. ಜಿ. ವೆಂಕಟಸುಬ್ಬಯ್ಯನವರ ಸಂಕ್ಷಿಪ್ತ ಕನ್ನಡ ನಿಘಂಟು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯಲ್ಲಿಯೇ ಸಿದ್ಧಗೊಂಡುದಾಗಿದೆ. ಕನ್ನಡ ನಿಘಂಟು ಯೋಜನೆ ಒಂದು ಬಹುವಾರ್ಷಿಕ ಯೋಜನೆಯಾಗಿದ್ದು 1975ರ ಕಾಲಕ್ಕೆ ಅದರ ಮೊದಲನೆ ಸಂಪುಟ ಮಾತ್ರ ಪ್ರಕಟಗೊಂಡಿತ್ತು. (ಪ್ರಥಮಸಂಪುಟ : 1971; ದ್ವಿತೀಯಸಂಪುಟ : 1976) ಉಳಿದ ಸಂಪುಟಗಳ ಕೆಲಸ ಸಾಗಿದ್ದರೂ ಇಡಿಯ ನಿಘಂಟು ಸ್ವರೂಪ ತಿಳಿಯಲು ಬಹಳ ಸಮಯ ಬೇಕಾಗಬಹುದೆಂಬುದರಿಂದ ಈ ಸಂಕ್ಷಿಪ್ತ ನಿಘಂಟಿನ ಯೋಜನೆಯನ್ನು ಹಾಕಲಾಯಿತು. 1973ರಿಂದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ನಿಘಂಟು ಯೋಜನೆಯ ಪ್ರಧಾನ ಸಂಪಾದಕರಾದ ಮೇಲೆ ಪ್ರಕಟಗೊಂಡ ಮೊದಲ ನಿಘಂಟು ಇದಾಗಿದೆ. ಈ ನಿಘಂಟಿಗೆ ಕರ್ನಾಟಕದಾದ್ಯಂತ ವಿಶೇಷವಾದ ಬೇಡಿಕೆ ಇರಬಹುದೆಂಬ ನಿರೀಕ್ಷೆ ಸಾಹಿತ್ಯ ಪರಿಷತ್ತಿಗೆ ಇತ್ತು. ಆದುದರಿಂದಲೇ ಸರಕಾರದ ಸಹಾಯಧನಸಹಿತವಾಗಿ ಕೇವಲ ರೂ. ೫ಕ್ಕೆ ಕನ್ನಡಿಗರಿಗೆ ಇದನ್ನು ಒದಗಿಸುವ ಸಂಕಲ್ಪ ಮಾಡಲಾಯಿತು. ಈ ನಿಘಂಟುವಿನಲ್ಲಿ ಒಂದಿಷ್ಟು ಅರೆಕೊರೆಗಳು ಉಳಿದಿರಬಹುದಾದರೂ ಸಾಹಿತ್ಯ ಪರಿಷತ್ತು ಮಾಡುತ್ತಿದ್ದ ನಿಘಂಟು ಕಾರ್ಯದ ವ್ಯಾಪಕತೆ ಕರ್ನಾಟಕದ ಜನತೆಗೆ ತಿಳಿದುಬಂದುದು ಈ ನಿಘಂಟುವಿನಿಂದಾಗಿ ಎಂಬುದರಲ್ಲಿ ಸಂದೇಹವಿಲ್ಲ. ಹಲವು ವರ್ಷಗಳ ಕಾಲ ಸಂಕ್ಷಿಪ್ತ ನಿಘಂಟು ಮಾರುಕಟ್ಟೆಯಲ್ಲಿ ಇರಲಿಲ್ಲ. ಆದರೆ ಕನ್ನಡ ರತ್ನಕೋಶ ಪುನಃ ಪುನಃ ಮುದ್ರಿತವಾಗಿ ಆವಶ್ಯಕತೆಯನ್ನು ಪೂರೈಸುತ್ತಿತ್ತು. 2001ರಲ್ಲಿ ಸಂಕ್ಷಿಪ್ತ ನಿಘಂಟು ಪರಿಷ್ಕರಿಸಲ್ಪಟ್ಟು ಮತ್ತು ಪರಿವರ್ಧಿಸಲ್ಪಟ್ಟು ಪುನರ್ಮುದ್ರಣಗೊಂಡಿದೆ. ಈ ಪುನರ್ಮುದ್ರಣದಲ್ಲಿ ನಿಘಂಟುಸ್ವರೂಪವನ್ನು ವಿಶೇಷವಾಗಿ ಬದಲಾಯಿಸಲಾಗಿಲ್ಲ. ಸಾಮಾನ್ಯವಾಗಿ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಹಾಕಿಕೊಟ್ಟ ದಾರಿಯಲ್ಲಿಯೇ ಪರಿವರ್ಧಿಸಲಾಗಿದೆ. ಈ ಪರಿಷ್ಕರಣದಲ್ಲಿ ಪ್ರಧಾನಸಂಪಾದಕರಾಗಿ ಪ್ರೊ. ಎನ್. ಬಸವಾರಾಧ್ಯರು ಕಾರ್ಯ-ನಿರ್ವಹಿಸಿದ್ದಾರೆ. 2001ರಲ್ಲಿ ಪುನಃ ಒಂದು ಲಕ್ಷ ಪ್ರತಿಗಳನ್ನು ಮುದ್ರಿಸಲಾಗಿತ್ತು.

ಉಪಯುಕ್ತತೆಯ ದೃಷ್ಟಿಯಿಂದ ಈ ನಿಘಂಟನ್ನು ಎಂದೂ ಮರೆಯುವಂತಿಲ್ಲ. ಎಂಟು ಸಂಪುಟಗಳ ದೊಡ್ಡ ಗಾತ್ರದ ನಿಘಂಟನ್ನು ಎಲ್ಲರೂ ಉಪಯೋಗಿಸುವಂತಿಲ್ಲ. ಇಂದು ಬೇಕಾದಂತೆ ವಿದ್ಯುನ್ಮಾನ ಮಾಧ್ಯಮಗಳಲ್ಲಿ ನಿಘಂಟುಗಳು ಲಭ್ಯವಿದ್ದರೂ ಸಾಮಾನ್ಯಜನತೆಗೆ ಸದಾಕಾಲದ ಉಪಯೋಗಕ್ಕಾಗಿ ಮಧ್ಯಮಗಾತ್ರದ ನಿಘಂಟು ಬೇಕೇ ಬೇಕು. ಈ ಉದ್ದೇಶಕ್ಕೆ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟು ಹದವಾಗಿ ಹೊಂದಿಕೊಂಡಿರುವುದರಿಂದ ಇದರ ಪ್ರಯೋಜನ ಸಾರ್ವಕಾಲಿಕವಾದುದು ಮತ್ತು ಸಾರ್ವಜನೀನವಾದುದು.



# ಅನ್ಯದೇಶ್ಯಗಳ ಮೆರವಣಿಗೆ – ಎರವಲು ಪದಕೋಶ

ಡಾ. ಶ್ರೀಧರ ಹೆಚ್. ಜಿ.

ನಿರಂತರ ಕೊಡುಕೊಳ್ಳುವಿಕೆಯ ಮೂಲಕ ಭಾಷೆ ಕ್ರಿಯಾಶೀಲವಾಗಿರುತ್ತದೆ. ಒಂದು ಭಾಷೆಯಲ್ಲಿ ಬದಲಾವಣೆ, ಅರ್ಥಾಂತರ, ಬೆಳವಣಿಗೆ, ಹೊಸ ಶಬ್ದಗಳ ಸೇರುವಿಕೆಯು ಕಾಲಮಾನದ ಅಗತ್ಯಕ್ಕೆ ಅನುಗುಣವಾಗಿ ನಿರಂತರವಾಗಿ ನಡೆಯು-ತ್ತಿರುವ ಒಂದು ಸಹಜಪ್ರಕ್ರಿಯೆ. ಹೀಗಾಗಿ ಭಾಷೆಯ ಅಧ್ಯಯನ ಮತ್ತು ವಿವರಣೆಗೆ ನೆರವಾಗುವ ನಿಘಂಟುಗಳ ರಚನೆ ಮತ್ತು ಪರಿಷ್ಕಾರವೂ ಸದಾಕಾಲ ನಡೆಯುವ ಅಗತ್ಯವಿದೆ. ಆದ್ದರಿಂದ ಯಾವುದೇ ನಿಘಂಟು ಸಾರ್ವಕಾಲಿಕವಾಗಿ ಪರಿಪೂರ್ಣವಲ್ಲ; ಅಂತಿಮವೂ ಅಲ್ಲ.

ಶಬ್ದಗಳ ಸಂಗ್ರಹವಿರುವ ಕೃತಿಗೆ ನಿಘಂಟು ಅಥವಾ ಕೋಶವೆಂದು ಹೆಸರು. ಒಂದು ಶಬ್ದಕ್ಕಿರುವ ಅರ್ಥ, ಅನೇಕಾರ್ಥ, ಸಮಾನಾರ್ಥ ಮುಂತಾಗಿ ವಿವಿಧ ಅರ್ಥಸಾಧ್ಯತೆಗಳನ್ನು ನಿಘಂಟು ತಿಳಿಸುತ್ತದೆ. ಹೀಗಾಗಿ ನಿಘಂಟು ಶಬ್ದಕ್ಕೆ ಕೋಶ, ಶಬ್ದಕೋಶ, ಪದಕೋಶ ಎಂಬ ಅರ್ಥಗಳಿವೆ. "ಎಡೆಮಡಗದನೇಕಾರ್ಥ ವಸ್ತುಕಥನ ಕೋಶಂ" ಎಂದು ಕಾವ್ಯಾವಲೋಕದಲ್ಲಿದೆ. ಸಂಸ್ಕೃತದಲ್ಲಿ ಕೋಶ, ಕೋಷ ಶಬ್ದಗಳೆರಡೂ ಒಂದೇ ಅರ್ಥದಲ್ಲಿ ಬಳಕೆಯಲ್ಲಿವೆ. ಕನ್ನಡದಲ್ಲಿ ನಿಘಂಟು ಮತ್ತು ಕೋಶ ಇವೆರಡರ ನಡುವೆ ತುಸು ವ್ಯತ್ಯಾಸವಿರುವುದನ್ನು ಗುರುತಿಸಲು ಸಾಧ್ಯ. ಉದಾಹರಣೆಗೆ ಕಾಡುಕೋಳಿ ಪದವನ್ನು ಗಮನಿಸಬಹುದು:

**ಕಾಡುಕೋಳಿ**: (ನಾ) ಅಡವಿಯ ಕೋಳಿ, ಕಾಡಿನ ಕೋಳಿ. ಆಗಾಗ ಬರುವ ಕಾಡುಕೋಳಿಗಳು ಅಲ್ಲಿ ಕಾಣಿಸುತ್ತವೆ. (ಮಲೆನಾ.೨೦) ಕಾಡುಕೋಳಿಗೆ ಸಂಕ್ರಾಂತಿಯೆ (ಗಾದೆ ಕನ್ನಡ ನಿಘಂಟು ಸಂ.೨)

ಇಲ್ಲಿ ಶಬ್ದದ ರೂಪವನ್ನು ಗುರುತಿಸಿ ಅರ್ಥವನ್ನು ವಿವರಿಸಿದೆ. ಅನಂತರ ಅರ್ಥದ ಸ್ಪಷ್ಟತೆಗಾಗಿ ಕನ್ನಡ ಕೃತಿಗಳಿಂದ ಆಯ್ದ ಪ್ರಯೋಗವನ್ನು ನೀಡಿದೆ. ಇದೇ ಶಬ್ದಕ್ಕೆ ಪದಕೋಶ ನೀಡುವ ವಿವರಣೆ ತುಸು ಭಿನ್ನವಾಗಿದೆ.

**ಕಾಡುಕೋಳಿ:** ಕಾಡಿನಲ್ಲಿ ವಾಸಿಸುವ ಕೋಳಿ. ಊರು ಕೋಳಿಯನ್ನು ಹೋಲುತ್ತದೆ. ಆದರೆ ತುಂಬಾ ಚುರುಕು ಬುದ್ಧಿ. ಈ ಪಕ್ಷಿಯನ್ನು ಬೇಟೆಗಾರರು ಸೂರ್ಯೋದಯದ ಮುನ್ನ ಬೇಟೆಯಾಡುತ್ತಾರೆ. (ಬೇಟೆ ಸಾಂಸ್ಕೃತಿಕ ಪದಕೋಶ ಪು. ೩೭)

ಪದಕೋಶದಲ್ಲಿ ಶಬ್ದದ ಅರ್ಥವಿವರಣೆ ಮಾತ್ರವಲ್ಲ, ಊರು ಕೋಳಿಯ ಹೋಲಿಕೆ ನೀಡಿ ಗಾತ್ರವನ್ನು ಸೂಚಿಸಿ ಅದರ ಸ್ವಭಾವವನ್ನು ಗುರುತಿಸಿದೆ. ಸೂರ್ಯೋದಯಕ್ಕೆ ಮೊದಲು ಬೇಟೆಗಾರರು ಕಾಡುಕೋಳಿಯನ್ನು ಬೇಟೆಯಾಡುವ ಸಂಪ್ರದಾಯದ ಉಲ್ಲೇಖ ವಿಶೇಷವಾಗಿ ಇಲ್ಲಿ ದಾಖಲಾಗಿದೆ. ಸಾಮಾನ್ಯವಾಗಿ ಆಧುನಿಕ ನಿಘಂಟಿನಲ್ಲಿ ಎಲ್ಲಾ ವಿಷಯಕ್ಕೆ ಸಂಬಂಧಿಸಿದ ಪದಗಳಿಗೂ ಅರ್ಥವನ್ನು ಹೇಳಿದೆ. ಕೋಶದಲ್ಲಿ ನಿರ್ದಿಷ್ಟ ವಿಷಯ, ಕ್ಷೇತ್ರಕ್ಕೆ ಸಂಬಂಧಿಸಿದ ಪದಗಳಿಗೆ ಮಾತ್ರ ಮಾಹಿತಿ ದೊರೆಯಬಲ್ಲದು.

ಪ್ರಾಚೀನ ಕನ್ನಡ ನಿಘಂಟುಗಳನ್ನು ಕನ್ನಡ-ಕನ್ನಡ ನಿಘಂಟು ಮತ್ತು ಸಂಸ್ಕೃತ-ಕನ್ನಡ ನಿಘಂಟು ಎಂದು ಎರಡು ವಿಧವಾಗಿ ವರ್ಗೀಕರಿಸಲು ಸಾಧ್ಯ.

ಕನ್ನಡ-ಕನ್ನಡ ನಿಘಂಟಿಗೆ ಒಂದು ಸಾವಿರ ವರ್ಷದಷ್ಟು ಪ್ರಾಚೀನ ಇತಿಹಾಸವಿದೆ. ಸಾಮಾನ್ಯವಾಗಿ ಹಳಗನ್ನಡ, ನಡುಗನ್ನಡ ಕಾಲದ ನಿಘಂಟುಗಳಲ್ಲಿ ಒಂದೇ ಭಾಷೆಯನ್ನು ಬಳಸಿದೆ. ಆದ್ದರಿಂದ ಇವುಗಳನ್ನು ಏಕಭಾಷಾ ನಿಘಂಟು-ಗಳೆಂದು ಗುರುತಿಸಬಹುದು. ಕನ್ನಡದ ಪದಕ್ಕೆ ಕನ್ನಡದಲ್ಲಿಯೇ ಅರ್ಥವಿವರಣೆ ನೀಡುವುದು ಈ ನಿಘಂಟುಗಳ ಉದ್ದೇಶ. 'ರನ್ನಕಂದ' ವನ್ನು ಕನ್ನಡದ ಮೊದಲ ನಿಘಂಟು ಎಂದು ಗ್ರಹಿಸಲಾಗಿದೆ. ಇಲ್ಲಿಂದ ಮುಂದೆ ಕರ್ನಾಟಕ ಶಬ್ದಸಾರ, ಚತುರಾಸ್ಯ ನಿಘಂಟು, ಕರ್ಣಾಟ ಸಂಜೀವನಂ, ಕವಿಕಂಠಹಾರ ಮುಂತಾದ ಕೃತಿಗಳು ಪ್ರಾಚೀನ ಕನ್ನಡದ ಕಾಲಘಟ್ಟದಲ್ಲಿ ಬಂದಿವೆ.

ಪ್ರಾಚೀನ ಸಾಹಿತ್ಯದ ಮೇಲೆ ಸಂಸ್ಕೃತದ ಪ್ರಭಾವ ಧಾರಾಳವಾಗಿರುವುದರಿಂದ ಸಂಸ್ಕೃತ ಪದಗಳಿಗೆ ಕನ್ನಡದಲ್ಲಿ ಅರ್ಥಹೇಳುವ ಇನ್ನೊಂದು ನಿಘಂಟು ಪರಂಪರೆ ಇಲ್ಲಿ ಬಂದಿದೆ. ಅಭಿಧಾನವಸ್ತುಕೋಶ, ಅಭಿಧಾನರತ್ನಮಾಲಾ, ಅಭಿನವಾಭಿಧಾನಂ ಮುಂತಾದ ಕೃತಿಗಳು ಈ ವರ್ಗದಲ್ಲಿ ಬರುತ್ತವೆ. ಈ ನಿಘಂಟುಗಳೆಲ್ಲವೂ ಪದ್ಯಬಂಧದಲ್ಲಿದ್ದು ಅಕಾರಾದಿ ಪದಜೋಡಣೆಯ ಕ್ರಮವನ್ನು ಅನುಸರಿಸಿಲ್ಲದಿರು-ವುದು, ಉಲ್ಲೇಖಗೊಂಡ ಶಬ್ದಗಳ ವ್ಯಾಕರಣ ರೂಪ ಅಥವಾ ಇನ್ನಾವುದೇ ಹೆಚ್ಚಿನ ಮಾಹಿತಿ ದೊರೆಯದಿರುವುದು ಈ ನಿಘಂಟುಗಳ ಮಿತಿಗಳು.

ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡ ನಾಡಿಗೆ ಬಂದ ಕ್ರೈಸ್ತಮಿಶನರಿಗಳು ಪ್ರಾದೇಶಿಕ ಭಾಷೆಯಲ್ಲಿ ನಿಘಂಟುರಚನೆಯ ಕಡೆಗೂ ಗಮನ ಹರಿಸಿದರು. ವಿಲಿಯಂ ರೀವ್. ಎಫ್. ಜೆಗ್ಲರ್, ಜಾನ್‌ಗ್ಯಾರೆಟ್, ಫರ್ಡಿನಾಂಡ್ ಕಿಟ್ಟೆಲ್ ಮೊದಲಾದವರು ಈ ಕ್ಷೇತ್ರದಲ್ಲಿ ಕೆಲಸ ಮಾಡಿದರು. ವಿದೇಶಿವಿದ್ವಾಂಸರು ನಿಘಂಟುರಚನೆಯ ಕ್ಷೇತ್ರದಲ್ಲಿ ಹೊಸ ಹಾದಿಯನ್ನು ತೆರೆದರು. ಈ ಕಾಲಘಟ್ಟದಲ್ಲಿ ನಿಘಂಟಿನ ಸಾಂಪ್ರದಾಯಿಕ ರೂಪ ಬದಲಾಯಿತು. ಗದ್ಯದಲ್ಲಿ ರಚನೆಯಾದ ಈ ನಿಘಂಟುಗಳು, ಒಂದು

ಭಾಷೆಯ ಪದಕ್ಕೆ ಇನ್ನೊಂದು ಭಾಷೆ ಮತ್ತು ಲಿಪಿಯಲ್ಲಿ ಅರ್ಥವನ್ನು ನೀಡಿದವು. ಇಂತಹ ನಿಘಂಟುಗಳನ್ನು 'ದ್ವಿಭಾಷಾನಿಘಂಟು' ಎಂದು ಗುರುತಿಸಲಾಗುವುದು. ಕಿಟ್ಟೆಲ್ ರಚಿಸಿದ ಕನ್ನಡ ಇಂಗ್ಲಿಷ್ ನಿಘಂಟು ಈ ಸಂದರ್ಭದ ಮಹತ್ತ್ವದ ಕೃತಿ. ಅಕಾರಾದಿಕ್ರಮದಲ್ಲಿ ಪದಗಳ ಜೋಡಣೆ, ಪ್ರತಿಯೊಂದು ಪದಕ್ಕೆ ಇಂಗ್ಲಿಷ್‌ನಲ್ಲಿ ಲಿಪ್ಯಂತರ, ಅರ್ಥ, ಪ್ರಯೋಗ, ಮೊದಲ ಉಲ್ಲೇಖ, ವ್ಯುತ್ಪತ್ತಿ, ಇತರ ಭಾಷೆ-ಗಳಲ್ಲಿರುವ ಜ್ಞಾತಿಪದಗಳು, ಗಾದೆ-ನುಡಿಗಟ್ಟುಗಳ ಬಳಕೆ, ಕಾವ್ಯಪ್ರಯೋಗ, ತದ್ಭವಗಳ ಉಲ್ಲೇಖ, ಶಬ್ದಕ್ಕಿರುವ ನಾನಾರ್ಥಗಳು, ಅಗತ್ಯಬಿದ್ದಲ್ಲಿ ಶಬ್ದಗಳ ಪ್ರಾದೇಶಿಕ ವ್ಯತ್ಯಾಸ-ವನ್ನು ಗುರುತಿಸಿದೆ. ಹೀಗೆ ಕಿಟ್ಟೆಲ್ ನಿಘಂಟು ರಚನೆಗೆ ಒಂದು ಶಿಸ್ತನ್ನು ತಂದನು. ಮುಂದಿನ ದಿನಗಳಲ್ಲಿ ನಿಘಂಟುಗಳು ತೆರೆದುಕೊಳ್ಳಬಹುದಾದ ಬಹುಮುಖಿ ಸಾಧ್ಯತೆಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದು ಮಹತ್ತ್ವಪೂರ್ಣವಾಗಿದೆ. ಅನಂತರದ ಕಾಲದಲ್ಲಿ ದೇಶೀ ವಿದ್ವಾಂಸರು ಈ ಕ್ಷೇತ್ರದಲ್ಲಿ ಕೆಲಸ ಮಾಡಲು 'ಕಿಟ್ಟೆಲ್ ನಿಘಂಟು' ಪ್ರೇರಣೆ ನೀಡಿತು ಎಂಬಲ್ಲಿ ಸಂಶಯವಿಲ್ಲ.

ಹಳಗನ್ನಡ ನಿಘಂಟುಗಳು ಪದ್ಯದಲ್ಲಿ ಅರ್ಥವನ್ನು ನೀಡಿದರೆ ಹೊಸಗನ್ನಡ ಕಾಲದ ನಿಘಂಟು ಮತ್ತು ಕೋಶಗಳು ಗದ್ಯದಲ್ಲಿವೆ. ಇತ್ತೀಚಿನ ದಿನಗಳಲ್ಲಿ ನಿಘಂಟು ರಚನೆಯ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಏಕಭಾಷಾ, ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳು ಬಂದಿವೆ. ಹಾಗೆಯೇ ಜ್ಞಾನದ ವಿವಿಧ ಶಾಖೆಗಳಿಗೆ ಸಂಬಂಧಿಸಿ ವಿಶಿಷ್ಟ ಶಬ್ದಕೋಶಗಳು, ನಿಘಂಟುಗಳು ಪ್ರಕಟಗೊಳ್ಳುತ್ತಿವೆ. ಬ್ಯಾಂಕಿಂಗ್, ವೈದ್ಯ, ಆಡಳಿತ, ವಿಜ್ಞಾನ, ಸಂಗೀತ, ನಾಟ್ಯ, ಸಮಾನಾರ್ಥ, ವಿವಿಧ ವೃತ್ತಿಗಳಿಗೆ ಸಂಬಂಧಿಸಿ ಹಲವು ಬಗೆಯಲ್ಲಿ ನಿಘಂಟು ಅಥವಾ ಕೋಶಗಳು ಬಂದಿವೆ. ಈ ಕೃತಿಗಳಿಗಿಂತ ಭಿನ್ನವಾಗಿ ಸಾಮಾಜಿಕ ನಿಘಂಟು, ಎರವಲು ಪದಕೋಶ ಎಂಬ ಹೆಸರಿನಲ್ಲಿ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಎರಡು ಮಹತ್ತ್ವದ ಕೃತಿಗಳು ಬಂದಿವೆ. ಹೀಗಾಗಿ ನಿಘಂಟು ಮತ್ತು ಕೋಶದ ರಚನೆ ಕಾಲಮಾನದ ಅಗತ್ಯಕ್ಕನುಗುಣವಾಗಿ ವೈವಿಧ್ಯಮಯ ಮಗ್ಗುಲುಗಳನ್ನು ದಾಟಿ ಮುನ್ನಡೆಯುತ್ತಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟು ಮತ್ತು ಪ್ರೊ. ಜಿ. ವೆಂಕಟಸುಬ್ಬಯ್ಯನವರ ನಡುವೆ ಒಂದು ಅವಿನಾಭಾವ ಸಂಬಂಧವಿದೆ. ಇದರ ಮೊದಲ ಸಂಪುಟದ ಸಂಪಾದಕ ಮಂಡಳಿಯಲ್ಲಿ ಪ್ರೊ. ಜಿ.ವೆಂಕಟಸುಬ್ಬಯ್ಯನವರು ಸದಸ್ಯರಾಗಿದ್ದರು. ಅನಂತರ ಎರಡು, ಮೂರು ಮತ್ತು ನಾಲ್ಕನೆಯ ಸಂಪುಟದ ಸಂದರ್ಭದಲ್ಲಿ ಅವರು ಉಪಾಧ್ಯಕ್ಷರು ಮತ್ತು ಪ್ರಧಾನ ಸಂಪಾದಕರಾಗಿದ್ದರು. ಐದು, ಆರನೆಯ ಸಂಪುಟದ ವೇಳೆಗೆ ನಿಘಂಟು ಸಮಿತಿಯ ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರಾಗಿದ್ದರು. ಏಳು ಮತ್ತು ಎಂಟನೆಯ ಸಂಪುಟದಲ್ಲಿ ಪುನಃ ಸದಸ್ಯರಾಗಿ ಕೆಲಸಮಾಡಿದ ಅನುಭವ ಅವರದು. ಈ ರೀತಿ ಶಬ್ದಗಳ ಜೊತೆಗಿನ ನಿರಂತರ ಒಡನಾಟದ ಪರಿಣಾಮವಾಗಿ ಅವರೊಳಗಿನ ನಿಘಂಟುಕಾರ ಈ ಅವಧಿಯಲ್ಲಿ ಜಾಗೃತಗೊಂಡಂತೆ ಕಾಣುತ್ತದೆ. ಇದರ ಪರಿಣಾಮವಾಗಿ ಪ್ರತಿಯೊಂದು ಪದಗಳ ಹಿಂದಿನ ಕಥೆ-ವ್ಯಥೆ, ಅವುಗಳ ಪ್ರಾಚೀನತೆ, ಬಳಕೆಯ ಸ್ವರೂಪದ ಚಾರಿತ್ರಿಕ ದರ್ಶನ

ಅವರಿಗೆ ಆಗಿದೆ. ಇದು ಮುಂದಿನ ದಿನಗಳಲ್ಲಿ ಅವರು ಸಾಗಬೇಕಾದ ದಾರಿಯನ್ನು ಖಚಿತಗೊಳಿಸಿದೆ.

ಆಧುನಿಕ ಭಾಷಾಶಾಸ್ತ್ರದ ನಿಯಮಗಳಿಗೆ ಅನುಸಾರವಾಗಿ ಪ್ರಕಟವಾಗಿರುವ ಈ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಸಂಪುಟಗಳು, ಕನ್ನಡ ನಿಘಂಟುಚರಿತ್ರೆಯಲ್ಲಿ ನೂತನ ಮೈಲಿಗಲ್ಲನ್ನು ಸ್ಥಾಪಿಸಿತು. ಈ ಸಂದರ್ಭದಲ್ಲಿ ಕರ್ನಾಟಕದ ವಿವಿಧ ಕಡೆಗಳಿಂದ ಬಂದ ನೂರಾರು ಮಂದಿ ಹಿರಿಯ, ಕಿರಿಯ ವಿದ್ವಾಂಸರ ಸಾಹಚರ್ಯ ದೊರೆಯಿತು. ಮಾತ್ರವಲ್ಲ, ಈ ನಿಘಂಟುರಚನೆಯ ಸಂದರ್ಭದಲ್ಲಿ ಪ್ರತಿಯೊಂದು ಅಂಶವನ್ನೂ ಸೂಕ್ಷ್ಮವಾಗಿ ಗಮನಿಸಿ, ಪ್ರತಿ ಶಬ್ದಕ್ಕೂ ವ್ಯುತ್ಪತ್ತಿಯನ್ನು ಸೂಚಿಸಿ ಜ್ಞಾತಿ ಭಾಷೆಯಲ್ಲಿರುವ ಶಬ್ದಗಳನ್ನು ನೀಡಿದೆ. ವೈವಿಧ್ಯಮಯ ಪ್ರಯೋಗ, ಗಾದೆಮಾತು, ನುಡಿಗಟ್ಟುಗಳನ್ನು ನೀಡುವುದರ ಮೂಲಕ ಶಬ್ದದ ಅರ್ಥವನ್ನು ಸ್ಪಷ್ಟಪಡಿಸಿದೆ. ಶಾಸನ, ಕಾವ್ಯ, ಸಂಗೀತ, ನೃತ್ಯ, ಶಿಲ್ಪ, ಚಿತ್ರಕಲೆ, ವ್ಯಾಕರಣ, ಛಂದಸ್ಸು, ವೈದ್ಯ ಮೊದಲಾದವುಗಳಲ್ಲದೆ ಜೈನ, ವೀರಶೈವ, ವೈದಿಕ ಮತ್ತು ವೇದಾಂತವಿಷಯಕ್ಕೆ ಸಂಬಂಧಿಸಿದ ಶಬ್ದಗಳನ್ನು ಕಲೆಹಾಕಿ ಪ್ರಯೋಗಗಳನ್ನು ನೀಡಿ ಶಬ್ದಾರ್ಥಗಳ ನಿರೂಪಣೆ ಮಾಡಿರುವುದು ವೆಂಕಟಸುಬ್ಬಯ್ಯನವರಿಗೆ ನಿಘಂಟು ರಚನೆಯ ಬಗೆಗೆ ವಿಶೇಷ ಅನುಭವವನ್ನು ನೀಡಿದೆ. ಈ ಸಂದರ್ಭದಲ್ಲಿ ಅವರು ಈ ಹಿಂದೆ ಪ್ರಕಟವಾಗಿದ್ದ ಹಲವಾರು ನಿಘಂಟುಗಳನ್ನು ವೈಯಕ್ತಿಕವಾಗಿ ನೋಡಲು ಸಾಧ್ಯವಾದುದು ಅನುಕೂಲವೇ ಆಯಿತು. ಒಂದು ಸಂದರ್ಭದಲ್ಲಿ ಅವರೇ ಹೇಳಿದಂತೆ ಪ್ರೊ. ವೆಂಕಟಸುಬ್ಬಯ್ಯನವರದು ವಿದ್ವಾಂಸರ ಮನೆತನ. 'ಸಿ. ಆರ್. ನರಸಿಂಹ ಶಾಸ್ತ್ರಿಯವರಿಂದ ಸಂಸ್ಕೃತವನ್ನು ಕಲಿತರು. ಡಿ. ಎಲ್. ನರಸಿಂಹಾಚಾರ್ಯರು ಜಗದೀಶನ ಶಬ್ದಶಕ್ತಿ ಪ್ರಕಾಶಿಕೆಯನ್ನು ಪಾಠಮಾಡಿದರು. ಸಾಹಿತ್ಯ ಪರಿಷತ್ತಿನ ನಿಘಂಟು ರಚನೆಯ ಸಂದರ್ಭದಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳಿಂದ ಯಾಸ್ಕನ ನಿರುಕ್ತ, ಅಮರಕೋಶ, ವೈದಿಕ ನಿಘಂಟಿನ ಸೂಕ್ಷ್ಮಗಳನ್ನು ಕಲಿತರು'. ಇದರ ಪರಿಣಾಮವಾಗಿ ಅವರಿಂದ ಮುಂದಿನ ದಿನಗಳಲ್ಲಿ ಮುದ್ರಣ ಪದಪ್ರಯೋಗ ಕೋಶ, ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು, ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು, ಪತ್ರಿಕಾ ಪದಕೋಶ, ಇಂಗ್ಲಿಷ್ - ಕನ್ನಡ ನಿಘಂಟು, ಇಗೋ ಕನ್ನಡ ಅಂಕಣದ ಸಾಮಾಜಿಕ ನಿಘಂಟು, ಎರವಲು ಪದಕೋಶ ಹೀಗೆ ಒಂದರ ಮೇಲೊಂದರಂತೆ ನಿಘಂಟುಗಳು ಹೊರಬಂದಿವೆ. ನಿಘಂಟು ಶಾಸ್ತ್ರದ ಬಗೆಗೆ ಅವರಿಂದಲೇ 'ಕನ್ನಡ ನಿಘಂಟುಶಾಸ್ತ್ರ ಪರಿಚಯ' ಕೃತಿ ಪ್ರಕಟವಾಗಿದೆ. ನಿಘಂಟುರಚನೆಯ ಸಂದರ್ಭದಲ್ಲಿ ಪದಗಳ ಮೂಲ ಬೇರುಗಳನ್ನು ಶೋಧಿಸಿ ಅದು ಬದಲಾವಣೆಗೆ ಒಳಗಾದ ಪರಿಯನ್ನು ದಾಖಲಿಸಿದ್ದಾರೆ. ಈ ಸಂದರ್ಭದಲ್ಲಿ ಪದಗಳ ರೂಢಿಯ ಅರ್ಥ, ಅನ್ವಯ, ಸ್ವಾರಸ್ಯ, ಸಮಾನಾರ್ಥ ಮತ್ತು ಜ್ಞಾತಿಪದಗಳ ಸೂಕ್ಷ್ಮ, ಔಚಿತ್ಯಗಳನ್ನೆಲ್ಲ ವಿವರಿಸಿದ್ದಾರೆ. ನಿಘಂಟುಕ್ಷೇತ್ರದಲ್ಲಿ ಅವರದು ಮುಗಿಯದ ಅಧ್ಯಯನ; ತೀರದ ಜ್ಞಾನದಾಹ.

ತಮ್ಮ ಬದುಕಿನ ಬಹುಭಾಗವನ್ನು ಶಬ್ದಗಳ ಒಡನಾಟದಲ್ಲಿ ಕಳೆದಿರುವ ವೆಂಕಟಸುಬ್ಬಯ್ಯನವರು ಪದಗಳ ಅರ್ಥವನ್ನು ಹುಡುಕುತ್ತಾ ಸಾಗುವ ಜ್ಞಾನಯಾತ್ರಿಕ.



ಹೀಗಾಗಿ ನಿಘಂಟುನಿರ್ಮಾಣದಲ್ಲಿ ಅವರು ತೋರಿಸುವ ಶ್ರದ್ಧೆ ಮತ್ತು ಶಾಸ್ತ್ರೀಯತೆ ಇತರರಿಗೆ ಒಂದು ಮಾದರಿ. ಅವರು ನಿರ್ಮಿಸಿದ 'ಇಗೋ ಕನ್ನಡ' ಸಾಮಾಜಿಕ ನಿಘಂಟುಗಳು, 'ಎರವಲು ಪದಕೋಶ' ಭಿನ್ನ ರೀತಿಯವು. ಪ್ರಸ್ತುತ ಎರವಲು ಪದಕೋಶದ ಸ್ವರೂಪವನ್ನು ಗಮನಿಸುವುದು ಈ ಲೇಖನದ ಉದ್ದೇಶ.

ಕನ್ನಡದಲ್ಲಿ ವಿವಿಧ ಬಗೆಯ ನಿಘಂಟುಗಳಿದ್ದರೂ ಸುಲಭವಾಗಿ ಅನ್ಯದೇಶೀಯ ಪದಗಳ ಮೂಲವನ್ನು ಗುರುತಿಸಲು ಅನುಕೂಲವಾಗುವ ನಿಘಂಟು ಬಂದಿರಲಿಲ್ಲ. ಕನ್ನಡದಲ್ಲಿ ಬಳಕೆಯಲ್ಲಿರುವ ಸಾವಿರಾರು ಅನ್ಯದೇಶೀಯ ಪದಗಳು ಕನ್ನಡದ್ದಲ್ಲ ಎಂದು ಅನಿಸುವುದೇ ಇಲ್ಲ. ಈ ಬಗೆಯ ಪದಗಳು ಸಹಜವಾಗಿ ಕನ್ನಡ ಭಾಷೆಯ ಸ್ವಭಾವದೊಂದಿಗೆ ಹೊಂದಿಕೊಂಡುಬಿಟ್ಟಿವೆ. ಇಂತಹ ಶಬ್ದಗಳ ಮೂಲವನ್ನು ಗುರುತಿಸುವ ಪ್ರಯತ್ನ ಎರವಲು ಪದಕೋಶದಲ್ಲಿದೆ. ಈ ದೃಷ್ಟಿಯಿಂದ ಎರವಲು ಪದಕೋಶವು ಕನ್ನಡದಲ್ಲಿ ಬಳಕೆಯಲ್ಲಿರುವ ಅನ್ಯದೇಶ್ಯಗಳಿಗೆ, ಕನ್ನಡದಲ್ಲಿ ಅರ್ಥ ಹೇಳುವ ವಿಶಿಷ್ಟ ರೀತಿಯ ದ್ವಿಭಾಷಾ ನಿಘಂಟು ಎನ್ನಬಹುದು.

ಸಾಮಾನ್ಯವಾಗಿ ಬೇರೆ ಭಾಷೆಯಿಂದ ಬಂದು ಸೇರಿದ ಪದವನ್ನು ಎರವಲು ಪದ, ಅನ್ಯದೇಶೀ ಪದ, ಅನ್ಯದೇಶ್ಯ ಎಂದು ಕರೆಯುತ್ತೇವೆ. ಇಂತಹ ಪದಗಳು ಬೇರೆ ಭಾಷೆಯಿಂದ ನೇರವಾಗಿ ಇಲ್ಲವೇ ಅನುವಾದದ ಮೂಲಕ ಬರುತ್ತವೆ. ಕೃತಿಯ ಆರಂಭದಲ್ಲಿ ಲೇಖಕರು ಬರೆದ ವಿಸ್ತಾರವಾದ ಪ್ರಸ್ತಾವನೆಯಲ್ಲಿ ಈ ಬಗೆಗೆ ಮಾಹಿತಿಯಿದೆ. ಅವರೇ ಹೇಳುವಂತೆ ಇಂಗ್ಲಿಷಿನ ಲೋನ್‌ವರ್ಡ್ (Loanword) ಎಂಬುದಕ್ಕೆ ಪರ್ಯಾಯವಾಗಿ 'ಎರವಲು ಪದ' ಎಂಬುದನ್ನು ಬಳಸಿದ್ದಾರೆ. ಆದರೆ ಸಂಸ್ಕೃತ ಮತ್ತು ಪ್ರಾಕೃತಗಳಿಂದ ಬಂದ ಶಬ್ದಗಳಿಗೆ, ದ್ರಾವಿಡ ಮೂಲದಿಂದ ಬಂದ ಜ್ಞಾತಿಗಳಿಗೆ ಇದು ಅನ್ವಯಿಸುವುದಿಲ್ಲ.

ಕನ್ನಡದಲ್ಲಿ ನಿಘಂಟುಸಾಹಿತ್ಯ, ವಿವಿಧ ನಿಘಂಟುಗಳ ಸ್ವರೂಪ, ಲಕ್ಷಣ, ಅವುಗಳ ವಿಶೇಷತೆ ಮುಂತಾದ ವಿಷಯಕ್ಕೆ ಸಂಬಂಧಿಸಿ ತಕ್ಕಮಟ್ಟಿಗೆ ಕೃತಿಗಳು ಬಂದಿವೆ. ಆದರೆ ಎರವಲು ಪದಗಳ ಬಗೆಗೆ ಅಧ್ಯಯನ ನಡೆದಿರುವುದು ಕಡಿಮೆ. ಈ ದೃಷ್ಟಿಯಿಂದ ಡಾ. ಎ. ಶಂಕರ ಕೆದಿಲಾಯರು ಬರೆದ 'ಫಾರಿನ್ ಲೋನ್ ವರ್ಡ್ಸ್ ಇನ್ ಕನ್ನಡ' (Foreign Loanwords in Kannada, Madras University) ಒಂದು ಮಹತ್ತ್ವದ ಕೃತಿ. ಪರ್ಶಿಯನ್ ಮತ್ತು ಅರೆಬಿಕ್ ಭಾಷೆಯಿಂದ ಬಂದ ಶಬ್ದಗಳನ್ನು ಕೇಂದ್ರೀಕರಿಸಿ ನಡೆಸಲಾದ ಅಧ್ಯಯನವಿದು. ಇದಲ್ಲದೆ ಕೆಲವು ಬಿಡಿ ಲೇಖನಗಳು ಬಂದಿವೆ. ಇವುಗಳನ್ನು ಹೊರತುಪಡಿಸಿದರೆ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಎರವಲು ಪದಕೋಶ ಈ ಕ್ಷೇತ್ರದಲ್ಲಿ ಬಂದ ಒಂದು ಮಹತ್ತ್ವದ ಕೃತಿ.

1998ರಲ್ಲಿ ಪ್ರಕಟವಾದ ಎರವಲು ಪದಕೋಶದಲ್ಲಿ ಸಂಸ್ಕೃತ ಮತ್ತು ಪ್ರಾಕೃತವನ್ನು ಹೊರತುಪಡಿಸಿ ಇಂಗ್ಲಿಷ್, ಅರಬ್ಬಿ, ಪಾರಸಿ, ಹಿಂದಿ, ಉರ್ದು, ಮರಾಠಿ, ಒರಿಯಾ, ಗುಜರಾತಿ, ಪಂಜಾಬಿ, ಸಿಂಧಿ, ಹಿಂದಿ ಮುಂತಾದ ಭಾಷೆ-ಗಳಿಂದ ಬಂದ ಶಬ್ದಗಳನ್ನು ವಿಶೇಷವಾಗಿ ಗಮನಿಸಿದೆ. ಇನ್ನೊಂದು ಭಾಷೆಯ ಸಂಪರ್ಕದಿಂದ ಒಂದು ಭಾಷೆ ಅನೇಕ ಪದಗಳನ್ನು ಕಾಲಾನುಕ್ರಮದಲ್ಲಿ ಎರವಲಾಗಿ

ಪಡೆಯಬಹುದು. ಇಂತಹ ಪದಗಳನ್ನು ಅಧ್ಯಯನ ಮಾಡುವುದರಿಂದ ಒಂದು ಭಾಷೆಯ ಚಾರಿತ್ರಿಕ, ಭಾಷಿಕ ಮತ್ತು ಸಾಂಸ್ಕೃತಿಕ ಆಯಾಮಗಳ ಮೇಲೆ ಹೊಸ ಬೆಳಕು ಬೀರಲು ಸಾಧ್ಯ. ಆದ್ದರಿಂದ ಇಲ್ಲಿ ಬರುವ ಅನೇಕ ಶಬ್ದಗಳು ಕನ್ನಡ ಭಾಷೆಯ ಚರಿತ್ರೆಯನ್ನು ಮರುನಿರೂಪಿಸಲು ನೆರವಾಗುತ್ತವೆ; ಅನೇಕ ಪದಗಳ ನಿಜರೂಪ ಈ ಕೃತಿಯಿಂದ ಅನಾವರಣಗೊಂಡಿದೆ. ಸುಮಾರು ನಾಲ್ಕು ಸಾವಿರಕ್ಕಿಂತ ಹೆಚ್ಚಿನ ಎರವಲು ಪದಗಳ ಮೂಲವನ್ನು ಇಲ್ಲಿ ಗುರುತಿಸಿರುವುದು ಒಂದು ಸಾಹಸದ ಕೆಲಸ ಎಂಬಲ್ಲಿ ಎರಡು ಮಾತಿಲ್ಲ.

ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಹಲವು ಕಾರಣಗಳಿಗಾಗಿ ಪದಗಳು ಎರವಲಾಗಿ ಬರುತ್ತವೆ. ವಿವಿಧ ಮತಗಳವರು ಒಂದೆಡೆ ವಾಸಮಾಡು-ವುದು, ಬಹಳ ದೀರ್ಘಕಾಲ ಒಂದು ಭಾಷೆಯವರು ಆಡಳಿತ ಮಾಡುವುದು, ವಿವಿಧ ಕುಶಲಕಲೆ ಮತ್ತು ವೃತ್ತಿಯವರ ನಡುವೆ ವ್ಯಾವಹಾರಿಕ ಸಂಬಂಧಗಳು ಏರ್ಪಡುವುದು – ಇಂತಹ ಸಂದರ್ಭಗಳಲ್ಲಿ ಪದಗಳು ಎರವಲಾಗಿ ಬರುವ ಸಾಧ್ಯತೆ ಹೆಚ್ಚು. ಈ ಎರವಲಾಗಿ ಬಂದ ಅನೇಕ ಶಬ್ದಗಳು ಮೂಲ ಅರ್ಥವನ್ನು ಕಳೆದುಕೊಂಡು ಅರ್ಥವ್ಯತ್ಯಾಸದೊಂದಿಗೆ ಬಳಕೆಯಾಗುವುದೂ ಇದೆ. ಈ ಕೋಶದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕನ್ನಡ–ಕನ್ನಡ ನಿಘಂಟಿನಲ್ಲಿ ಒಳಗೊಂಡ ಶಬ್ದಗಳಿವೆ; ಹಾಗೆಯೇ ಹೊಸದಾಗಿ ನಮೂದಾಗಿರುವ ಪದಗಳೂ ಇವೆ. ಪರಿಷತ್ತಿನ ನಿಘಂಟಿನಲ್ಲಿ ಪ್ರತಿಯೊಂದು ಪದಗಳಿಗೂ ಅರ್ಥ ವಿವರಣೆ, ಕಾಲಾನುಕ್ರಮದಲ್ಲಿ ಪದವು ಬಳಕೆಯಾದ ಪ್ರಯೋಗವನ್ನು ನೀಡಿದೆ. ಇದರೊಂದಿಗೆ ಪದಗಳ ಸ್ವರೂಪ ಮತ್ತು ಅದರ ಮೂಲವನ್ನು ಗುರುತಿಸಿದೆ. ಆದರೆ ಎರವಲು ಪದಕೋಶದಲ್ಲಿ ಪದಗಳಿಗೆ ಅರ್ಥ ಮತ್ತು ಭಾಷಾಮೂಲವನ್ನು ಹೇಳಿ ಅದರ ಅರ್ಥದ ವಿವಿಧ ಮಗ್ಗಲುಗಳನ್ನು ಗುರುತಿಸಿದೆ. ಕಾವ್ಯ ಅಥವಾ ಆಡುಮಾತಿನಲ್ಲಿ ಬಳಕೆಯಾಗುವ ವಿಧಾನವವನ್ನು ಸೂಚಿಸಲು ಯಾವುದೇ ಪ್ರಯೋಗವನ್ನು ನೀಡಿಲ್ಲ. ಅಗತ್ಯವಿರುವಲ್ಲಿ ಪದಗಳಿಗೆ ಹೆಚ್ಚಿನ ವಿವರಣೆಯನ್ನು ನೀಡಿದೆ.

ಎರವಲು ಪದಕೋಶದಲ್ಲಿ ಬರುವ ಮೊದಲ ಪದ ಅಂಕಲ್. ಈ ಪದ ಪರಿಷತ್ತಿನ ನಿಘಂಟಿನಲ್ಲಿಲ್ಲ. ಇದನ್ನು ಲೇಖಕರು ನಿರೂಪಿಸುವ ವಿಧಾನವನ್ನು ಉದಾಹರಣೆಗೆ ಗಮನಿಸಬಹುದು.

**ಅಂಕಲ್** ನಾ. 1. ಚಿಕ್ಕಪ್ಪ 2. ದೊಡ್ಡಪ್ಪ 3. ಚಿಕ್ಕಮ್ಮನ ಗಂಡ 4. ದೊಡ್ಡಮ್ಮನ ಗಂಡ 5. ಸೋದರಮಾವ 6. ಸೋದರತ್ತೆಯ ಗಂಡ 7. ಯಾರಾದರೂ ಹಿರಿಯ-ರಾದ ಗಂಡಸರನ್ನು ಕುರಿತು ಮಾತನಾಡುವಾಗ ಪ್ರಯೋಗಿಸುವ ಗೌರವಯುತವಾದ ಮಾತು. [ಇಂ. Uncle]

ಇಲ್ಲಿ ಅಂಕಲ್ ಎಂಬ ಇಂಗ್ಲಿಷ್ ಮೂಲದ ಪದವು ಬಳಕೆಯಾಗುವ ವಿವಿಧ ಸಂದರ್ಭಮತ್ತು ಸಾಧ್ಯತೆಗಳನ್ನು ಗುರುತಿಸಿದ್ದಾರೆ.

ಅಂದೇಶ ಎಂಬ ಇನ್ನೊಂದು ಪದವನ್ನು ಗಮನಿಸಬಹುದು.

**ಅಂದೇಶ** ನಾ. ಕೇಡಾಗುವುದೆಂಬ ಭಯ-ಸಂದೇಹ-ಶಂಕೆ [ಪಾರ.ಅನ್ದೇಶ್, ಅಂದೇಶಾ; ಹಿಂ.ಅಂದೇಶಾ; ಮರಾ.ಅಂದೇಶ್, ಅಂದೇಶಾ]

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಈ ಪದಕ್ಕೆ ಅರ್ಥವಿವರಣೆಯನ್ನು ನೀಡಿ ಕಾವ್ಯ ಪ್ರಯೋಗವನ್ನು ನೀಡಿದೆ. ಇಲ್ಲಿ ಅರ್ಥ ಮತ್ತು ಪದದ ಮೂಲವನ್ನು ಮಾತ್ರ ನೀಡಿದೆ.

ಕನ್ನಡದಲ್ಲಿ ಬಳಕೆಯಲ್ಲಿರುವ **ಅಕಡಾ** ಶಬ್ದಕ್ಕೆ ತಲೆಯ ಕೂದಲನ್ನು ಬಿಗಿ ಹಿಡಿಯುವಂತೆ ಸಿಕ್ಕಿಸಿಕೊಳ್ಳುವ ಒಂದು ಬಗೆಯ ಅಲಂಕಾರ ಸಾಧನ ಎಂಬ ಅರ್ಥವನ್ನು ಹೇಳಿ ಇದನ್ನು ಇನ್ನಷ್ಟು ಸ್ಪಷ್ಟಪಡಿಸುವುದಕ್ಕೆ ಇಂಗ್ಲಿಷ್‌ನ (Hair pin) ಶಬ್ದವನ್ನು ನೀಡಿದ್ದಾರೆ. ಹಾಗೆಯೇ ಹಿಂದಿ ಮತ್ತು ಮರಾಠಿಯಲ್ಲಿ ಅಂಕಡಾ, ಆಕಡಾ ಪದಗಳು ಬಳಕೆಯಲ್ಲಿರುವುದನ್ನು ಸೂಚಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನಲ್ಲಿ ಇದೇ ಶಬ್ದಕ್ಕೆ ಬರೆದ ಅರ್ಥ ಹೀಗಿದೆ: 'ತಲೆಯ ಕೂದಲನ್ನು ಬಿಗಿ ಹಿಡಿಯುವಂತೆ ಸಿಕ್ಕಿಸಿಕೊಳ್ಳುವ ಒಂದು ಬಗೆಯ ಸೂಜಿ; ಕೂದಲ ಸೂಜಿ.' ಹೀಗಾಗಿ ಪರಿಷತ್ತಿನ ನಿಘಂಟಿನಲ್ಲಿರುವುದಕ್ಕಿಂತ ಹೆಚ್ಚಿನ ಸ್ಪಷ್ಟತೆ ಎರವಲು ಪದಕೋಶದಲ್ಲಿದೆ.

ಅನ್ಯದೇಶ್ಯದ ಮೂಲವನ್ನು ಗುರುತಿಸುವುದರೊಂದಿಗೆ ಜ್ಞಾತಿಭಾಷೆಯಲ್ಲಿ ಬಳಕೆಯಲ್ಲಿರುವ ಪದಗಳನ್ನು ಗುರುತಿಸಿದ್ದಾರೆ. ಉದಾಹರಣೆಗೆ ಅಕ್ಕಲು ಪದವನ್ನು ಗಮನಿಸಬಹುದು.

**ಅಕ್ಕಲು** ನಾ. ಬುದ್ಧಿ, ವಿವೇಕ [ಅರ.ಪಾರ.ಹಿಂ.ಅಕ್ಲ್; ಮರಾ. ಅಕ್ಕಲ್/ತುಳು. ಅಕಲು, ಅಕ್ಕಲು] ಇಲ್ಲಿ ತುಳುವಿನಲ್ಲಿ ಬಳಕೆಯಲ್ಲಿರುವ ಶಬ್ದವನ್ನು ಗಮನಿಸುವುದು ಅವರ ಭಾಷಾ ಆಸಕ್ತಿಗೆ ಸಾಕ್ಷಿ. ಇಂತಹ ಹಲವು ಸಂದರ್ಭಗಳಲ್ಲಿ ಕನ್ನಡ ಮಾತ್ರವಲ್ಲ, ತಮಿಳು, ತೆಲುಗು, ಮಲಯಾಳದಲ್ಲಿ ಬಳಕೆಯಲ್ಲಿರುವ ಶಬ್ದಗಳನ್ನು ಗುರುತಿಸುವುದು ವಿಶೇಷ ಸಂಗತಿ.

ಎರವಲು ಪದಕೋಶದಲ್ಲಿ ಪ್ರಾದೇಶಿಕವಾಗಿ ಕೆಲವು ಶಬ್ದಗಳು ವಿಶೇಷವಾಗಿ ಬಳಕೆಯಲ್ಲಿರುವುದನ್ನು ಗಮನಿಸಿದ್ದಾರೆ. ಅದರಲ್ಲಿಯೂ ಉತ್ತರ ಕನ್ನಡದಲ್ಲಿ ಪ್ರಚಲಿತದಲ್ಲಿರುವ ಪದಗಳ ಕಡೆಗೆ ಓದುಗರ ಗಮನವನ್ನು ಸೆಳೆಯುತ್ತಾರೆ. ಅಗದೀ, ಅಗಾವು, ಅಗ್ಗಾಡಿ, ಅಟೋಕಾಟ, ಅಡಮುಟ್ಟ, ಮನಸೋಕ್ತ ಮುಂತಾದ ಪದಗಳನ್ನು ಈ ವರ್ಗದಲ್ಲಿ ಗಮನಿಸಬಹುದು.

ಕನ್ನಡದಲ್ಲಿ ಬಳಕೆಯಲ್ಲಿರುವ ಕೆಲವು ಶಬ್ದಗಳಿಗೆ ಸಂಸ್ಕೃತ ಮತ್ತು ಪ್ರಾಕೃತದ ರೂಪವನ್ನು ನೀಡಿದ್ದಾರೆ. ಉದಾಹರಣೆಗೆ ಶ್ರೀಖಂಡ ಪದವನ್ನು ನೋಡಬಹುದು.

**ಶ್ರೀಖಂಡ** ನಾ. ಗಟ್ಟಿಯಾದ ಕೆನೆಮೊಸರಿಗೆ ಸಕ್ಕರೆ ಏಲಕ್ಕಿಪುಡಿ, ಕೇಸರಿ ಮುಂತಾದುವನ್ನು ಹಾಕಿ ತಯಾರಿಸಿದ ಒಂದು ಬಗೆಯ ಸಿಹಿ ಖಾದ್ಯ. ಇದಕ್ಕೆ ಮರಾಠಿ ಮತ್ತು ಸಂಸ್ಕೃತದಲ್ಲಿ ಶ್ರೀಖಂಡ ಎಂಬ ಪದವೇ ಬಳಕೆಯಲ್ಲಿರುವುದನ್ನು ಗುರುತಿಸಿದ್ದಾರೆ. ಇದೇ ರೀತಿ ಸಂಕ ಶಬ್ದದ ಬಗೆಗಿನ ವಿವರಣೆಯನ್ನು ಗಮನಿಸ ಬಹುದು. ಹಳ್ಳಿಪ್ರದೇಶದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಶಬ್ದವಿದು.

ಸಂಕ ನಾ. ಸಣ್ಣತೊರೆ, ಹೊಳೆ, ಹಳ್ಳ ಮುಂತಾದುವುಗಳನ್ನು ದಾಟಲು ಅಡ್ಡಮರವನ್ನಿಟ್ಟು ಮಾಡಿಕೊಳ್ಳುವ ಸೇತುವೆ, ಪೂಲು. [ಮರಾ. ಸಾಂಕು/ಪ್ರಾ. ಸಂಕಮ; ಪಾಲಿ. ಸಂಕಮೋ ಸಂ. ಸಂಕ್ರಮ]

ಕೆಲವು ಶಬ್ದಗಳಿಗೆ ವಿವರಣಾತ್ಮಕ ಅರ್ಥವನ್ನು ಹೇಳಿದೆ. ಉದಾಹರಣೆಗೆ ಸ್ವಿಚ್ಚು ಪದವನ್ನು ಗಮನಿಸಬಹುದು.

ಸ್ವಿಚ್ಚು ನಾ. ದೀಪ, ಯಂತ್ರ ಮೊದಲಾದವುಗಳಿಗೆ ವಿದ್ಯುತ್ ಪ್ರವಾಹವನ್ನು ಆರಂಭಿಸುವ ಅಥವಾ ನಿಲ್ಲಿಸುವ ಸಂದರ್ಭಗಳಲ್ಲಿ ಆಯಾ ಭಾಗಗಳಿಗೆ ಸಂಬಂಧ ಕಲ್ಪಿಸಲು ಅಥವಾ ತಪ್ಪಿಸಲು ಉಪಯೋಗಿಸುವ ಸಲಕರಣೆ, ಕೀಲುಗುಂಡಿ [ಇಂ. switch] ಇಲ್ಲಿ ಕೀಲುಗುಂಡಿ ಗಮನಿಸಬೇಕಾದ ಪದ. ಸ್ವಿಚ್ಚು ಹೇಳುವುದಕ್ಕೆ ಪರ್ಯಾಯವಾಗಿ ಈ ಪದವನ್ನು ಚಲಾವಣೆಗೆ ತಂದಂತಿದೆ. ಹಾಗೆಯೇ ಇಂಗ್ಲಿಷ್-ನಿಂದ ಬಂದ ಪದಗಳಿಗೆ ಹೆಚ್ಚು ವಿವರಣೆಯಿದೆ ಎಂಬುದನ್ನು ಗಮನಿಸಬಹುದು.

ಒಂದು ಪದಕ್ಕಿರುವ ವಿವಿಧ ಅರ್ಥಗಳನ್ನು ಸಾಕಷ್ಟು ವಿವರವಾಗಿ ಲೇಖಕರು ಗುರುತಿಸಿದ್ದಾರೆ. ಉದಾಹರಣೆಗೆ ಸವಾರಿ, ಜಮಾದಾರ, ದಿವಾಣ ಪದಗಳಿಗೆ ಅರ್ಥವಿವರಣೆಯನ್ನು ನೀಡುವಾಗ ಲೇಖಕರು ಬಳಸುವ ವಿಧಾನ ಬೇರೆಯಾಗಿದೆ.

**ಸವಾರಿ** ನಾ. ೧. ಪ್ರಾಣಿ, ವಾಹನ ಇತ್ಯಾದಿಗಳ ಮೇಲೆ ಕುಳಿತು ಹೋಗುವುದು. – ತೆರಳುವುದು. ೨. ಸಂಚಾರ, ತಿರುಗಾಟ. ೩. ಮೆರವಣಿಗೆ ೪. ರಾಜರು ಮುಂತಾದ ಹಿರಿಯ ವ್ಯಕ್ತಿಗಳನ್ನು ಉದ್ದೇಶಿಸುವಾಗ ಬಳಸುವ ಮಾತು, ಗಣ್ಯಪುರುಷರನ್ನು ಸಂಬೋಧಿಸುವಾಗ ಬಳಸುವ ನುಡಿ. ೫. ಗಾಡಿಗೆ ಕಟ್ಟುವ ಬಿದಿರಿನ ರಚನೆ, ಬಂಡಿಯಲ್ಲಿರುವ ಬಿದಿರಿನ ರಚನೆ ೬. ಮಲ್ಲಯುದ್ಧದ ಒಂದು ಪಟ್ಟು, – ವರಸೆ. [ಪಾರ. ಸುವಾರೀ, ಸವಾರೀ; ಹಿಂ. ಸವಾರೀ, ಸ್ವಾರೀ; ಮರಾ. ಸವಾರೀ, ಸವಾರೀ, ಸುವಾರೀ.] ಇಲ್ಲಿ ಸವಾರಿ ಪದಕ್ಕೆ ಬರುವ ಅರ್ಥ ಏಕರೂಪಿಯಲ್ಲ. ಹೀಗಾಗಿ ವಿವಿಧ ಸಂದರ್ಭದಲ್ಲಿ ಈ ಪದಕ್ಕೆ ಬರುವ ಅರ್ಥದ ಸಾಧ್ಯತೆಯನ್ನೂ ಗಮನಿಸಿದ್ದಾರೆ.

ದೈನಂದಿನ ಬದುಕಿನಲ್ಲಿ ತೀರಾ ಅಪರೂಪವಾಗಿ ಬಳಸುವ ಅಥವಾ ಬಳಕೆಯಿಂದ ತಪ್ಪಿಹೋಗುತ್ತಿರುವ ಶಬ್ದಗಳನ್ನು ಲೇಖಕರು ಅತ್ಯಂತ ಆಸ್ಥೆಯಿಂದ ಗಮನಿಸಿದ್ದಾರೆ. ಉದಾಹರಣೆಗೆ ಕೆಳಗಿನ ಪದಗಳನ್ನು ನೋಡಬಹುದು.

**ಮಾಂಜರಪಾಟು** ನಾ. ಒಂದು ಬಗೆಯ ದಪ್ಪಬಿಳಿ ಬಟ್ಟೆ.

**ದಿಲಾಸು** ನಾ. ಬಹಳ ವೆಚ್ಚಮಾಡುವವನು, ಖರ್ಚುದಾರ

ಕನ್ನಡದಲ್ಲಿ ಬಳಕೆಯಲ್ಲಿರುವ ಒಂದು ಶಬ್ದದ ಅರ್ಥದಲ್ಲಿ ಸಾಕಷ್ಟು ವ್ಯತ್ಯಾಸವಿರುವುದನ್ನು ಹುಡುಕಿದ್ದಾರೆ.

**ಕಪ್ಪ, ಕಪ್ಪೆ** ನಾ. ೧. (ಉಕ) ಸಣ್ಣ ಚೀಲ ೨. ಅಲಮಾರು ಮೊದಲಾದವುಗಳ ಗೂಡು. [ಮರಾ. ಕಪ್ಪಾ, ಕಪಾತ; ಅರ.ಕಫಾತ್] ವರ್ತಮಾನದಲ್ಲಿ ಕಪ್ಪ ಮತ್ತು ಕಪ್ಪೆ ಎಂಬುವಕ್ಕೆ ಬೇರೆಯದೇ ಅರ್ಥವಿರುವುದು ಗಮನಾರ್ಹ ಅಂಶ.

ಬೇರೆ ಭಾಷೆಯಿಂದ ಬಂದ ಶಬ್ದಗಳು ಉಚ್ಚಾರಣೆ ಮತ್ತು ಬರವಣಿಗೆಯಲ್ಲಿ ಒಂದೇ ರೂಪವನ್ನು ಪಡೆಯುವ, ಆದರೆ ಅರ್ಥ ಮಾತ್ರ ಬೇರೆಯಾಗಿ ನಿಲ್ಲುವ ಸಾಧ್ಯತೆಯನ್ನು ಎರವಲು ಪದಕೋಶ ಸೂಕ್ಷ್ಮವಾಗಿ ಗಮನಿಸಿದೆ.

**ಘೂಟು$_1$** ನಾ. ಪ್ರತ್ಯೇಕವಾದುದು. ಪೃಥಕ್ಕಾದುದು ಗು. ೨. ಚಿಕ್ಕ ಸಣ್ಣ ವಿಭಾಗಕ್ಕೆ ಸೇರಿದ [ಮರಾ. ಘೂಟ್]

**ಘೂಟು$_2$** ನಾ. ಒಂದು ಅಡಿ. ೨. ಕಾಲು [ಇಂ.Foot]

ಕನ್ನಡಕ್ಕೆ ಎರವಲಾಗಿ ಬಂದ ಮೂರು ವಿಭಿನ್ನ ಪದಗಳ ಬರವಣಿಗೆಯ ರೂಪ ಕನ್ನಡದಲ್ಲಿ ಒಂದೇ ಆಗಿದೆ. ಆದರೆ ಅರ್ಥ ಮಾತ್ರ ಬೇರೆಯಾಗಿಯೇ ಇದೆ.

**ಧಕ್ಕೆ$_1$** ನಾ. ೧. ಏಟು, ಪೆಟ್ಟು, ಹೊಡೆತ. ೨. ಹಾನಿ, ನಷ್ಟ [ಹಿಂ.ಮರಾ. ಧಕ್ಕಾ]

**ಧಕ್ಕೆ$_2$** ನಾ. ಸಮುದ್ರದಲ್ಲಿ ಹಡಗುಗಳು ನಿಲ್ಲುವುದಕ್ಕಾಗಿ ಏರ್ಪಡಿಸಿದ ಸ್ಥಳ, ಹಡಗು ಕಟ್ಟೆ.[ಮರಾ.ಧಕ್ಕಾ/ಇಂ. Dock]

**ಧಕ್ಕೆ$_3$** ನಾ. ಹಡಗಿನ ಅಟ್ಟ – ಮೇಲುಭಾಗ [ಇಂ. Deck]

ಹೀಗೆ ಎರವಲು ಪದಕೋಶ ಬಹುಮುಖಿಯಾಗಿ ಶಬ್ದಗಳ ಮೂಲವನ್ನು ಹುಡುಕುತ್ತದೆ. ವಿಭಿನ್ನ ನೆಲೆಗಳಲ್ಲಿ ಶಬ್ದಗಳ ಅರ್ಥಸಾಧ್ಯತೆಯನ್ನು ಶೋಧಿಸುತ್ತದೆ. ಅರ್ಥ ಸ್ಪಷ್ಟತೆಯ ಕಡೆಗೆ ಚಲಿಸುತ್ತದೆ. ಈ ದೃಷ್ಟಿಯಿಂದ ಪ್ರೊ. ಜಿ. ವೆಂಕಟಸುಬ್ಬಯ್ಯ-ನವರ ಎರವಲು ಪದಕೋಶ ಭಾಷೆ ಮತ್ತು ಸಾಹಿತ್ಯದ ಅಭ್ಯಾಸಿಗಳಿಗೆ ಬಹೂಪಯೋಗಿಯಾದ ಕೃತಿ. ಎಲ್ಲರಿಗೂ ಆಪ್ತವಾಗುವ ಪದಕೋಶ.



# ಇಷ್ಟವಾಗುವ 'ಕ್ಲಿಷ್ಟಪದ ಕೋಶ'

**ಡಾ. ಅಜಕ್ಕಳ ಗಿರೀಶ ಭಟ್**

ಮಾನವರ ಅರಿವಿನ ವ್ಯಾಪ್ತಿ ನಿರಂತರವಾಗಿ ಹಿಗ್ಗುತ್ತಲೇ ಹೋಗುತ್ತದೆ ಎನ್ನುವುದನ್ನು ನಾವು ಬಲ್ಲೆವು. ಹೀಗೆ ವಿವಿಧ ಜ್ಞಾನಕ್ಷೇತ್ರಗಳು ವಿಸ್ತಾರವಾಗುವುದಕ್ಕೂ ನಮ್ಮೆಲ್ಲಾ ಭಾಷೆಗಳ ಪದಕೋಶಗಳು ಬೆಳೆಯುವುದಕ್ಕೂ ನೇರ ಸಂಬಂಧವಿದೆ. ಜ್ಞಾನಕ್ಷೇತ್ರಗಳು ವಿಸ್ತಾರವಾಗಬೇಕಾದರೆ ಭಾಷೆಯು ತನ್ನೊಳಗೆ ಹೊಸ ಹೊಸ ಪದಗಳನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಭಾಷೆಯ ಶಬ್ದಸಂಪತ್ತು ಹೆಚ್ಚಾದಷ್ಟೂ ಆ ಭಾಷೆ ಉತ್ಪಾದಕಭಾಷೆಯಾಗುವ ಸಾಧ್ಯತೆ ಹೆಚ್ಚುತ್ತದೆ. ಅದರಲ್ಲೂ ಬರಹದ ಭಾಷೆಗಂತೂ ಪದಕೋಶದ ಬೆಳವಣಿಗೆ ಎಂಬುದು ಅನಿವಾರ್ಯವಾದ ಒಂದು ಪ್ರತಿಕ್ರಿಯೆಯಾಗಿದೆ. ಒಂದು ಭಾಷೆಯ ಪದರಚನೆ, ವಾಕ್ಯರಚನೆಗಳಿಗೆ ಸಂಬಂಧಿಸಿದ ನಿಯಮಗಳನ್ನು ತಿಳಿದ ತಜ್ಞರು ಸಾಮಾನ್ಯವಾಗಿ ಬರಹದಲ್ಲಿ ಹೊಸ ಹೊಸ ಪದಗಳ ಸೃಷ್ಟಿಗೆ ಕಾರಣರಾಗುತ್ತಾರೆ. ಇಂತ ಹೊಸ ಹೊಸ ಪದಗಳು ದಾಖಲಾಗಿ ಜನ-ಸಾಮಾನ್ಯರಿಗೂ ತಲುಪುವಂತೆ ಮಾಡುವಲ್ಲಿ ಮತ್ತು ಇಂಥ ಪದಗಳ ಅರ್ಥಗಳನ್ನು ನಿರ್ದಿಷ್ಟಗೊಳಿಸುವಲ್ಲಿ ನಿಘಂಟುಗಳು ಮಹತ್ತ್ವದ ಪಾತ್ರವನ್ನು ನಿರ್ವಹಿಸುತ್ತವೆ.

ಸೃಜನಶೀಲಸಾಹಿತ್ಯಕ್ಕೆ, ಎಂದರೆ ಕಥೆ, ಕಾದಂಬರಿ, ನಾಟಕ, ಕಾವ್ಯಗಳಿಗೆ ಇರುವಷ್ಟು ಆಕರ್ಷಣೆ, ಅಥವಾ ಗ್ಲಾಮರ್ ವಿಮರ್ಶೆಯ ಕ್ಷೇತ್ರಕ್ಕಿಲ್ಲ. ಸಂಶೋಧನ ಕ್ಷೇತ್ರದ ಕಡೆಗೆ ಆಕರ್ಷಿತರಾಗುವವರು ಇನ್ನಷ್ಟು ಕಡಮೆ. 'ವ್ಯಾಕರಣ, ನಿಘಂಟುಶಾಸ್ತ್ರ-ಗಳಂತೂ ಒಣವಿಷಯಗಳು; ಅದರಲ್ಲೇನೂ ರಸವಿಲ್ಲ' ಎಂಬುದೇ ಹಲವರ ಭಾವನೆ. ಆದರೆ ಶಬ್ದಗಳ ಬೆನ್ನಟ್ಟಿ ಹೋಗುವುದರಲ್ಲಿ ಇರುವ ಸ್ವಾರಸ್ಯ ಅದನ್ನು ಸವಿದವರಿಗೇ ಗೊತ್ತು. ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಂತಹ ಸ್ವಾರಸ್ಯವನ್ನು ಸವಿದಂತಹ ವಿರಳರಲ್ಲಿ ಒಬ್ಬರು. ಹಾಗೆ ನೋಡಿದರೆ, ನಿಘಂಟುರಚನಾಕಾರನಿಗೆ ಶಾಸ್ತ್ರಗಳ ಪರಿಚಯ ಇರುವಂತೆಯೇ ಕಾವ್ಯನಾಟಕಾದಿ ಕೃತಿಗಳ ಪರಿಚಯವೂ ಇರಬೇಕು; ಜನಪದ ಸಾಹಿತ್ಯದ ಅರಿವಿರಬೇಕು; ಜನಬಳಕೆಯ ಪದಪುಂಜಗಳು ತಿಳಿದಿರಬೇಕು. ಪ್ರೊ. ಜಿ. ವಿ.ಯವರು ಸಿದ್ಧಪಡಿಸಿದ ವಿವಿಧ ಬಗೆಯ ನಿಘಂಟುಗಳನ್ನು ನೋಡಿದರೆ ಅವರ ಭಾಷಾಜ್ಞಾನದ ಆಳ ವಿಸ್ತಾರಗಳು ನಮಗೆ ಮನದಟ್ಟಾಗದೆ ಇರದು.

ಪ್ರೊ. ಜಿ. ವಿ. ಯವರು ಸಂಪಾದಿಸಿದ ಒಂದು ವಿಶಿಷ್ಟ ನಿಘಂಟು 'ಕನ್ನಡ ಕ್ಲಿಷ್ಟಪದಕೋಶ', ರಾಜ್ಯಶ್ರೀ ಸತೀಶ್ ಇವರ ಸಹಾಯಕ ಸಂಪಾದಕರು. ಕನ್ನಡದ ಮಟ್ಟಿಗೆ ಇದು ಹೊಸಬಗೆಯ ನಿಘಂಟು. ಇಂಗ್ಲಿಷಿನಲ್ಲಿ ಕ್ಲಿಷ್ಟಪದಗಳ ನಿಘಂಟುಗಳಿವೆ. ಕನ್ನಡದಲ್ಲಿ ಈ ರೀತಿಯ ನಿಘಂಟಿನ ಕೊರತೆಯಿದ್ದುದರಿಂದ ಇದನ್ನು ರಚಿಸಲಾಗಿದೆ-ಯೆಂದು ಜಿ.ವಿ.ಯವರೇ ಹೇಳಿದ್ದಾರೆ. ಭಾಷಾಬೋಧನೆಯಲ್ಲಿ ಶ್ರದ್ಧೆಯಿರುವ ಅಧ್ಯಾಪಕರನ್ನು ಮತ್ತು ಭಾಷಾಧ್ಯಯನದಲ್ಲಿ ಆಸಕ್ತಿಯಿರುವ ವಿದ್ಯಾರ್ಥಿಗಳನ್ನು ಈ ನಿಘಂಟು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡಿದೆ. ಹೀಗಾಗಿ ಈ ನಿಘಂಟಿನಲ್ಲಿ ಕೇವಲ ಪದ ಮತ್ತು ಅರ್ಥಗಳ ಬಗ್ಗೆ ಮಾತ್ರ ಗಮನ ನೀಡಿದುದಲ್ಲ. ಸಾಮಾನ್ಯವಾದ ಎಲ್ಲ ನಿಘಂಟುಗಳಂತೆಯೇ ಮುಖ್ಯ ಉಲ್ಲೇಖ (Headword) ಅಥವಾ ನಮೂದಿನ ವ್ಯಾಕರಣವಿವರ (ನಾಮಪದ, ಕ್ರಿಯಾಪದ ಇತ್ಯಾದಿ ವಿವರ), ಆ ಶಬ್ದಕ್ಕೆ ಇರುವ ಹಲವು ಅರ್ಥಗಳು ಇಲ್ಲೂ ಇವೆ. ಹೆಚ್ಚಿನ ಪದಗಳ ವ್ಯುತ್ಪತ್ತಿ ನೀಡಿದುದು ಈ ನಿಘಂಟಿನ ವಿಶೇಷತೆ. ಹಾಗೆಯೇ ಕನ್ನಡಭಾಷೆಯ ಬಳಕೆದಾರರಿಗೆ ಅನುಕೂಲವಾಗು-ವಂತಹ ಕೆಲವು ವಿಚಾರಗಳನ್ನು ಈ ನಿಘಂಟಿನ ಆರಂಭದಲ್ಲಿ ಸಂಪಾದಕರು ನೀಡಿದ್ದಾರೆ. ಬರೆಯುವಾಗ ವಿರಾಮಚಿಹ್ನೆಗಳನ್ನು ಹೇಗೆ ಮತ್ತು ಎಲ್ಲಿ ಬಳಸಬೇಕು ಎಂದು ವಿವರಿಸಲಾಗಿದೆ. ಧ್ವನ್ಯಂಗಗಳ ಬಗ್ಗೆ ಹಾಗೂ ಉಚ್ಚಾರಣವಿಧಾನದ ಬಗ್ಗೆ ಸಂಕ್ಷಿಪ್ತವಾಗಿಯಾದರೂ ಸ್ಪಷ್ಟವಾದ ವಿವರಗಳನ್ನು ನೀಡಲಾಗಿದೆ. ಕನ್ನಡ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಬೇಕು ಮತ್ತು ಬರೆಯುವಾಗ ಕಾಗುಣಿತ ದೋಷಗಳಿಲ್ಲದೆ ಬರೆಯಬೇಕು ಎಂದು ಹೇಳುವ ಪ್ರೊ. ಜಿ. ವಿ.ಯವರು ಅದಕ್ಕೆ ಪೂರಕವಾಗುವಂತೆ ಮೇಲಿನ ವಿವರಗಳನ್ನು ನೀಡಿದ್ದಾರೆ. ಹಾಗೆಂದು ಕಾಗುಣಿತದ ಬಗ್ಗೆ ಅವರದು ತೀರಾ ಮಡಿವಂತಿಕೆಯ ಧೋರಣೆಯಲ್ಲ. ಬಳಕೆಗೆ ಬಂದುಬಿಟ್ಟಿರುವ ಪಿತ್ತ, ಪಿತ್ಥದಂತಹ ಪದಗಳ ವಿಷಯಕ್ಕೆ ಬಂದಾಗ, ನಾವು ಎರಡನ್ನೂ ಒಪ್ಪಬೇಕಾಗಿದೆ ಎಂದೇ ಜಿ.ವಿ. ಹೇಳುತ್ತಾರೆ.

ಈಗಾಗಲೇ ಹೇಳಿದಂತೆ ಈ ನಿಘಂಟಿನ ವೈಶಿಷ್ಟ್ಯಗಳಲ್ಲಿ ಮುಖ್ಯವಾದು-ದೆಂದರೆ 'ವ್ಯುತ್ಪತ್ತಿ'ಯನ್ನು ನೀಡಿರುವುದು. ಕೆಲವು ಪದಗಳನ್ನು ಗಮನಿಸಿದಾಗ, ನಮಗೆ ಜಗತ್ತಿನ ಬಹಳಷ್ಟು ಭಾಷೆಗಳ ನಡುವೆ ಏನೋ ಸಂಬಂಧವಿದ್ದುದು ಸ್ಪಷ್ಟವಾಗುತ್ತದೆ. ಈ ರೀತಿಯ ಸಂಬಂಧದ ಎಳೆಗಳನ್ನು ಪದಗಳ ವ್ಯುತ್ಪತ್ತಿಯ ವಿವರಗಳು ನಮಗೆ ಸ್ಪಷ್ಟವಾಗಿ ತೋರಿಸುತ್ತವೆ. ವ್ಯುತ್ಪತ್ತಿಯನ್ನು ತಿಳಿಯುವ ಮೂಲಕ ಪದಕೋಶದ ಬೆಳವಣಿಗೆಯ ಚಾರಿತ್ರಿಕತೆಯೂ ತಿಳಿಯುತ್ತದೆ. ಶಬ್ದಗಳ ವ್ಯುತ್ಪತ್ತಿ-ಯೆಂದರೆ ಅದು ಸಾಂಸ್ಕೃತಿಕ ಚರಿತ್ರೆಯ ದಾಖಲೆಯೂ ಹೌದು. ಶಬ್ದಗಳ ವ್ಯುತ್ಪತ್ತಿಯ ಚರಿತ್ರೆ ತಿಳಿದವರಿಗೆ ಹೊಸ ಶಬ್ದಗಳ ಸೃಷ್ಟಿ ಕೂಡ ಸುಲಭವೇ ಆಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಭಾಷೆಯ ಬಗ್ಗೆ ಕುತೂಹಲ ಉಳ್ಳವರಿಗೆ ಶಬ್ದಗಳ ವ್ಯುತ್ಪತ್ತಿಯನ್ನು ತಿಳಿದುಕೊಳ್ಳುವುದು ಒಂದು ಆನಂದದಾಯಕವಾದ ಶ್ರಮ. ಉದಾಹರಣೆಗೆ ನಾವು ದಿನನಿತ್ಯವೂ ಉಪಯೋಗಿಸುವ 'ಬೈರಾಸು', ಎನ್ನುವ ಶಬ್ದ ಸಂಸ್ಕೃತ 'ಬಹಿರ್ವಾ-ಸಸ್' ಎನ್ನುವ ಪದದಿಂದ ಬಂತು ಎಂದು ಈ ನಿಘಂಟು ತಿಳಿಸುತ್ತದೆ. ಶಬ್ದಗಳು ಸಾಮಾನ್ಯವಾಗಿ

ತಮ್ಮ ಜೊತೆ ಅರ್ಥ ಪರಂಪರೆಯನ್ನೇ ಹೊತ್ತು ತರುತ್ತವೆ ಹೊರತು ಧುತ್ತನೆ ಆಕಾಶದಿಂದ ಉದುರುವುದಿಲ್ಲ. ಇಂಗ್ಲಿಷಿನ 'ಸಾಫ್ಟ್‌ವೇರ್' ಮತ್ತು 'ಹಾರ್ಡ್-ವೇರ್' ಎಂಬ ಪದಗಳು ಯಾವ ಅರ್ಥಗಳನ್ನು ಸೂಚಿಸುತ್ತವೆ ಎನ್ನುವುದನ್ನು ಗಮನ-ದಲ್ಲಿಟ್ಟುಕೊಂಡಾಗ ಅವುಗಳಿಗೆ ಸಂವಾದಿ ಪದಗಳಾಗಿ ನಾವು ಸ್ವೀಕರಿಸಿದ 'ತಂತ್ರಾಂಶ' ಮತ್ತು 'ಯಂತ್ರಾಂಶ' ಎಂಬ ಪದಗಳು ಎಷ್ಟು ಚೆನ್ನಾಗಿ ಹೊಂದಿಕೊಳ್ಳುತ್ತವೆ ಎಂದು ಗೊತ್ತಾಗುತ್ತದೆ.

ಶಬ್ದಗಳ ವ್ಯುತ್ಪತ್ತಿಯ ಮಾಹಿತಿ ನೀಡಿರುವುದರಿಂದ, ಕನ್ನಡ ಭಾಷೆ ಯಾವೆಲ್ಲ ಭಾಷೆಗಳಿಂದ, ಯಾವ ಮಡಿವಂತಿಕೆಯೂ ಇಲ್ಲದೆ – ಶಬ್ದಸ್ವೀಕರಣ ಮಾಡಿದೆ ಎಂಬುದು ತಿಳಿಯುತ್ತದೆ. ಇಂಗ್ಲಿಷ್, ಸಂಸ್ಕೃತಭಾಷೆಗಳಲ್ಲದೆ ಗ್ರೀಕ್, ತಮಿಳು, ತೆಲುಗು, ಪಾರಸಿ, ಪ್ರಾಕೃತ, ಪೋರ್ಚುಗೀಸ್, ಫ್ರೆಂಚ್, ಅರಬಿಕ್, ಮರಾಠಿ, ಮಲಯಾಳ, ಹಿಂದಿ, ಬಂಗಾಲಿ, ಕೊಡವ, ತುಳು ಹೀಗೆ ವಿವಿಧ ಭಾಷೆಗಳಿಂದ ಕನ್ನಡಕ್ಕೆ ಬಂದ ಪದಗಳ ಪರಿಚಯ ಈ ನಿಘಂಟಿನ ಮೂಲಕ ನಮಗಾಗುತ್ತದೆ.

ಗ, ಇಗ, ಕೆ, ಇಕೆ, ವಳಿ, ವಳ ಗುಳಿ, ವಂತ ಮುಂತಾದ ಪ್ರತ್ಯಯಗಳು ಸೇರಿ ಹೊಸ ಪದಗಳು ಹೇಗೆ ಸೃಷ್ಟಿಯಾಗುತ್ತವೆ ಎಂಬ ಮಾಹಿತಿಯೂ ಈ ನಿಘಂಟಿನಿಂದ ಸಿಗುತ್ತದೆ. ಉದಾಹರಣೆಗೆ 'ನಡೆ' ಎಂಬ ಮುಖ್ಯ ಉಲ್ಲೇಖದ ನಂತರ ಬರುವ ವಿವರಗಳನ್ನು ಗಮನಿಸಿದಾಗ, ನಡಗೆ, ನಡೆಯುವಿಕೆ, ನಡವಳಿಕೆ, ನಡೆವಳಿ ಮುಂತಾದ ಪದರಚನೆಗಳ ಹಿಂದಿನ ತರ್ಕ ಮನದಟ್ಟಾಗುತ್ತದೆ.

ಪದಗಳ ಕ್ಲಿಷ್ಟತೆ ಎನ್ನುವುದು ಸಾಪೇಕ್ಷವೇ ಹೌದು. ಕೆಲವು ಕ್ಲಿಷ್ಟವಲ್ಲದ ಸಮೂದುಗಳು ಎನ್ನಬಹುದಾದವು ಇಲ್ಲಿವೆ. ಆದರೆ ಅಂಥ ಪದಗಳಿಂದ ರೂಪು-ಗೊಂಡ ಪದಪುಂಜಗಳು ನಮಗೆ ಅಪರಿಚಿತವಾಗಿರಬಹುದು. ಅಂಥ ಪದಪುಂಜ-ಗಳಿಗಾಗಿ ಬಹುಶಃ ಇಲ್ಲಿ ಕೆಲವು ಸಾಮಾನ್ಯ ಅಥವಾ ಸರಳ ಪದಗಳನ್ನು ಕೂಡ ಆ ಮುಖ್ಯ ಉಲ್ಲೇಖಗಳಾಗಿ ನೀಡಲಾಗಿದೆ. ಉದಾಹರಣೆಗೆ 'ಅಕ್ಕಿ', ಎನ್ನು ಶಬ್ದದಿಂದ ಬಂದ ಅಕ್ಕಿಗರ್ಚು, ಅಕ್ಕಿಪಡಿ, ಅಕ್ಕಿಬೋಜ ಮುಂತಾದ ಪದಗಳಿವೆ. ಹಾಗೆಯೇ 'ಅಗ್ನಿ'ಯ ಜೊತೆ ಬರುವ ಅಗ್ನಿಕಾರ್ಯ, ಅಗ್ನಿತಾರೆ, ಅಗ್ನಿದಿವ್ಯ, ಅಗ್ನಿಫಲ, ಅಗ್ನಿಮಾಂದ್ಯ ಮೊದಲಾದ 'ಕ್ಲಿಷ್ಟ' ಪದಗಳ ಅರ್ಥ ಗೊತ್ತಾಗುತ್ತದೆ. ಹೀಗೆಯೇ 'ಕಡೆ', 'ಕಾಲ' ಮುಂತಾದ ಶಬ್ದಗಳು ಹಲವು 'ಕ್ಲಿಷ್ಟ' ಪದಗಳಿಗೆ ಮೂಲವಾಗಿರುವುದು ತಿಳಿಯುತ್ತದೆ.

ಕ್ಲಿಷ್ಟಪದಕೋಶ ರಚಿಸಲು ಕ್ಷೇತ್ರಕಾರ್ಯಕ್ಕಿಂತಲೂ ಗ್ರಂಥಗಳೇ ಸಾಮಾನ್ಯವಾಗಿ ಆಧಾರಗಳಾಗುತ್ತವೆ. ಈ ನಿಘಂಟು ಕೂಡಾ ಮುಖ್ಯವಾಗಿ ಗ್ರಂಥಗಳಲ್ಲಿ ಬರುವ ಪದಗಳನ್ನೇ ಹೊಂದಿದೆ. ಆದರೂ ಬೊಂಡ (ತುಳುಮೂಲ – ಸೀಯಾಳ), ತೊಳಸಂಬಟ್ಟೆ (ಅವ್ಯವಸ್ಥೆ, ಗೊಂದಲ) ಮುಂತಾದ, ಆಡುಮಾತಿನಲ್ಲೇ ಬರುವ ಪದಗಳೂ ಈ ನಿಘಂಟಿನಲ್ಲಿವೆ.

ಪದಕೋಶವಿಸ್ತರಣೆಯಲ್ಲಿ ಪತ್ರಿಕೆಗಳ ಕೊಡುಗೆ ಬಹಳ ಮುಖ್ಯವಾದುದು. ಪತ್ರಿಕೆಗಳ ಮೂಲಕ ಬಳಕೆಗೆ ಬಂದ ಅಲಿಪ್ತ, ಗೃಹಬಂಧನ, ನಿಶ್ಶಸ್ತ್ರೀಕರಣ,

ಮೊದಲಾದ ಕೆಲವು ಪದಗಳು ಈ ನಿಘಂಟಿನಲ್ಲಿ ಸ್ಥಾನ ಪಡೆದಿವೆ. ಪತ್ರಿಕೆಗಳು ಟಂಕಿಸಿದ ಪದಗಳನ್ನೇ ಹೊಂದಿದ ನಿಘಂಟು 'ದಿನದಿನ'ವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯದವರು ಪ್ರಕಟಿಸಿದುದನ್ನು ನಾವಿಲ್ಲಿ ನೆನಪು ಮಾಡಿಕೊಳ್ಳಬಹುದು.

ಜಿ.ವಿ.ಯವರು ಕ್ಲಿಷ್ಟಪದ ಕೋಶದ ಬಗ್ಗೆ ಹೇಳಬೇಕಾದ ಇನ್ನೊಂದು ವಿಶೇಷವೆಂದರೆ ಇಲ್ಲಿ ಈಳಿಗೆಮಣೆ, ಕರ್ಫ್ಯೂ, ಕರಿಷ್ಮ, ಕ್ವಿಜ್, ಸೋಡಚೀಟಿ, ಮುಂತಾದ ಕೆಲವು ಪದಗಳಿಗೆ ಹಿನ್ನೆಲೆಯಾದ ಸ್ವಾರಸ್ಯಕರ ವಿವರಗಳನ್ನು ನಿಡಿರುವುದು. ಈ ವಿವರಗಳು ಕಸ್ತೂರಿಮಾಸಪತ್ರಿಕೆಯಲ್ಲಿ ಜನಪ್ರಿಯವಾಗಿದ್ದ ಪಾವೆಂ. ಆಚಾರ್ಯರ 'ಪದಾರ್ಥಚಿಂತಾಮಣಿ' ಅಂಕಣವನ್ನು ನೆನಪಿಸುತ್ತವೆ. 'ಪದಾರ್ಥಚಿಂತಾಮಣಿ' ಅನಂತರ ಪುಸ್ತಕರೂಪದಲ್ಲಿ ಬಂದು ಪ್ರಸಿದ್ಧವಾಯಿತು. ಜಿ.ವಿ.ಯವರು ಇಂಥ ಪದಗಳ ಬಗ್ಗೆ ನೀಡುವ ವಿವರಗಳು 'ಶಬ್ದಕುತೂಹಲ'ವನ್ನು ಹೆಚ್ಚಿಸುತ್ತವೆ. ಭಾಷೇತರ ಪ್ರಭಾವಗಳೂ ಶಬ್ದಗಳ ಬಳಕೆಯನ್ನು ಹೇಗೆ ಪ್ರಭಾವಿಸುತ್ತವೆ ಎಂಬ ಸೂಚನೆಯನ್ನು ನೀಡುತ್ತವೆ. ಉದಾಹರಣೆಗೆ 'ಅಂಗನವಾಡಿ'ಯ ಪರಿಕಲ್ಪನೆಯು ಜರ್ಮನಿಯಿಂದ ಹೇಗೆ ಬಂತು ಎಂಬುದನ್ನು ವಿವರಿಸಿದ ಬಳಿಕ 'ಅಂಗನವಾಡಿ' ಶಬ್ದದ ವ್ಯುತ್ಪತ್ತಿಯನ್ನು ವಿವರಿಸುತ್ತಾರೆ. ಹಿಂದಿ ಮತ್ತು ಮರಾಠಿ ಪ್ರದೇಶಗಳಲ್ಲಿ ಉಪಯೋಗಿಸಲಾಗುತ್ತಿದ್ದ 'ಅಂಗನವಾಡಿ' ಎಂಬ ಶಬ್ದ ಕನ್ನಡಕ್ಕೆ ಬಂದ ಬಗ್ಗೆ ಜಿ.ವಿ. ಹೀಗೆ ಹೇಳುತ್ತಾರೆ. – '1974–75ರ ವೇಳೆಗೆ ಕೇಂದ್ರ ಸರಕಾರವು ಅಂಗನವಾಡಿಗಳಿಗೆ ಅನುದಾನ ಕೊಡಲು ಮೊದಲು ಮಾಡಿದಾಗ ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಈ ಹೆಸರು ಪ್ರಸಿದ್ಧವಾಯಿತು. ಈಗ ಅದೇ ಪ್ರಮುಖವಾಗಿ ಬಿಟ್ಟಿದೆ. ಹಣದ ಪ್ರಭಾವ ಹೀಗೆ ಭಾಷೆಗಳಲ್ಲಿಯೂ ಕೆಲಸಮಾಡುತ್ತದೆ' 'ಆವಾಸ್ ಯೋಜನೆ' ಮುಂತಾದ ಹೆಸರುಗಳು 'ಅನುದಾನಾಧಾರಿತ'ವಾಗಿ ಕನ್ನಡಕ್ಕೆ ಬರುತ್ತಿರುವುದನ್ನು ನಾವಿಂದು ಕಾಣಬಹುದು.

ಕ್ಲಿಷ್ಟಪದಕೋಶದ ಕೊನೆಗೆ ೨೧ ಅನುಬಂಧಗಳನ್ನು ನೀಡಲಾಗಿದೆ. ಇವುಗಳಲ್ಲಿ ಮುಖ್ಯವಾದುದು ನಮ್ಮ ನಡುವೆ ಬಳಕೆಯಲ್ಲಿರುವ ಕೆಲವು ಪರಭಾಷೆಗಳ ಪದಪುಂಜಗಳು. ಇದರಲ್ಲಿ ಫ್ರೆಂಚ್, ಜರ್ಮನ್, ಇಟಾಲಿಯನ್, ಲ್ಯಾಟಿನ್, ಮತ್ತು ರೋಮನ್ ಮೂಲದ ಪದಪುಂಜಗಳ ಅರ್ಥಗಳನ್ನು ಇಂಗ್ಲಿಷ್ ಹಾಗೂ ಕನ್ನಡದಲ್ಲಿ ನೀಡಲಾಗಿದೆ. ಈ ಮಾಹಿತಿ ಉಪಯುಕ್ತವೇ ಹೌದು. ಆದರೆ ಈ ಪರಭಾಷಾಪದ–ಪುಂಜಗಳ ಉಚ್ಚಾರಣೆಯನ್ನು ಕನ್ನಡ ಅಥವಾ ಅಂತಾರಾಷ್ಟ್ರೀಯ ಧ್ವನಿಲಿಪಿಯಲ್ಲಿ ನೀಡುತ್ತಿದ್ದರೆ ಇನ್ನಷ್ಟು ಪ್ರಯೋಜನವಾಗುತ್ತಿತ್ತು. ಉಚ್ಚಾರಣೆ ಗೊತ್ತಿಲ್ಲದೆ ಫ್ರೆಂಚ್‌ನಂಥ ಭಾಷೆಯ ಪದಗಳನ್ನು ಮಾತಿನಲ್ಲಿ ಬಳಸುವುದು ತುಂಬಾ ಕಷ್ಟ. ಓದಿ ಅರ್ಥ ಮಾಡಿಕೊಳ್ಳುವುದಕ್ಕೆ ಇಂಥ ಪದಪುಂಜಗಳ ಬಗ್ಗೆ ಇಲ್ಲಿರುವ ಮಾಹಿತಿ ಸಾಕಾಗುತ್ತದೆ. ಇಂಥ ಇನ್ನೂರೈವತ್ತಕ್ಕೂ ಹೆಚ್ಚು ಪರಭಾಷಾಪದಪುಂಜಗಳನ್ನು ಇಲ್ಲಿ ನೀಡಲಾಗಿದೆ. ಹಾಗೆಯೇ ಸುಮಾರು ಐನೂರರಷ್ಟು ಸಂಕ್ಷಿಪ್ತಗಳನ್ನು (ಇಂಗ್ಲಿಷ್ ಶಾರ್ಟ್‌ಫಾರ್ಮ್–ಗಳು) ವಿಸ್ತರಿಸಿ ಎರಡನೇ ಅನುಬಂಧದಲ್ಲಿ ಕೊಟ್ಟಿದ್ದಾರೆ.

ಮಾಹಿತಿಯ ದೃಷ್ಟಿಯಿಂದ ಅಧ್ಯಾಪಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ವಿವರಗಳನ್ನು ಮುಂದಿನ ಅನುಬಂಧಗಳಲ್ಲಿ ನೀಡಿದ್ದಾರೆ. ವಿಶ್ವದ

ಮತಗಳು, ಪ್ರಮುಖ ಭಾಷೆಗಳು, ಪ್ರಮುಖ ದಿನಾಚರಣೆಗಳು, ಖಂಡಗಳು, ಸಾಗರಗಳು, ಸರೋವರಗಳು, ನದಿಗಳು, ವಿಶ್ವಸಂಸ್ಥೆಯ ಸದಸ್ಯರಾಷ್ಟ್ರಗಳು, ಭಾರತದ ರಾಜ್ಯಗಳು, ರಾಷ್ಟ್ರಭಾಷೆಗಳು, ಜನಸಂಖ್ಯೆಯ ವಿವರ, ಕರ್ನಾಟಕದ ಜಿಲ್ಲೆಗಳು, ಇತಿಹಾಸದ ಪ್ರಮುಖಘಟನೆಗಳು, ಸಂವತ್ಸರಗಳು, ತಿಥಿಗಳು, ಮಾಸಗಳು, ಋತುಗಳು, ನಕ್ಷತ್ರಗಳು, ರೋಮನ್ ಸಂಖ್ಯೆಗಳು, ಕರಡಚ್ಚು ತಿದ್ದುವ ಚಿಹ್ನೆಗಳು – ಹೀಗೆ ಈ ಗ್ರಂಥವನ್ನು ಒಂದು ಮಾಹಿತಿ ಕೋಶವಾಗಿಯೂ ಉಪಯೋಗಿಸಲು ಅನುಕೂಲವಾಗುವಂತೆ ವಿವರಗಳನ್ನು ನೀಡಲಾಗಿದೆ.

ಪದಗಳ ಬಗ್ಗೆ ಆಸಕ್ತಿಯಿರುವ ವ್ಯಕ್ತಿ ಎಂತಹ ನೀರಸ ಭಾಷಣವನ್ನೂ ಸವಿಯಬಲ್ಲ. ಎಂತಹ ನೀರಸ ಕೃತಿಯನ್ನು ಓದುವಾಗಲೂ ಆನಂದವನ್ನು ಅನುಭವಿಸಬಲ್ಲ. ಯಾಕೆಂದರೆ ಅಲ್ಲಿ ಹೇಳಲಾದ ವಸ್ತುವಿಷಯಗಳ ಬಗ್ಗೆ ಆಸಕ್ತಿಯಿಲ್ಲದಿದ್ದರೂ ಅಲ್ಲಿ ಬಳಕೆಯಾದ ಪದಗಳ ಹಿಂದೆ ಆತ ಹೋಗಬಲ್ಲ. ಹೀಗೆ ಪದಮೋಹಿಯಾದವನು (ಪ್ರಸಿದ್ಧ ಲೇಖಕರಾದ ಕೆ.ವಿ.ತಿರುಮಲೇಶ್ ತಮ್ಮನ್ನು ತಾವು ಪದಮೋಹಿ ಎಂದು ಕರೆದುಕೊಳ್ಳುತ್ತಾರೆ) ಪದಗಳ ಹಿಂದೆ ಹೋಗುತ್ತಲೇ ವಿಭಿನ್ನ ಪರಂಪರೆಗಳ,ಸಂಸ್ಕೃತಿಗಳ ಅರಿವನ್ನು ಬೆಳೆಸಿಕೊಳ್ಳುತ್ತಾ ಹೋಗುತ್ತಾನೆ. ಪದಮೋಹಿಯಾದವನು ಸ್ವಭಾಷೆಯ ಮೇಲೆ ಎಷ್ಟೇ ಪ್ರೀತಿ ಅಭಿಮಾನಗಳನ್ನು ಬೆಳೆಸಿಕೊಂಡರೂ ಪರಭಾಷೆಯನ್ನೆಂದೂ ದ್ವೇಷಿಸಲಾರ. ಅದೊಂದು ಆದರ್ಶಸ್ಥಿತಿ. ಜಿ. ವೆಂಕಟಸುಬ್ಬಯ್ಯನವರ 'ಕ್ಲಿಷ್ಟಪದ ಕೋಶ', 'ಇಗೋ ಕನ್ನಡ'ದಂಥ ಕೋಶಗಳು ನಮ್ಮನ್ನು ಪದಮೋಹಿಗಳನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ.



# ಕನ್ನಡ ಕೋಶವಿಸ್ತಾರ

ಡಾ. ಪಾದೇಕಲ್ಲು ವಿಷ್ಣು ಭಟ್ಟ

ಕನ್ನಡದಲ್ಲಿ ನಿಘಂಟುರಚನೆ ಹಳಗನ್ನಡದ ಕಾಲದಿಂದಲೇ ತೊಡಗಿದ್ದು ಪಾಶ್ಚಾತ್ಯವಿದ್ವಾಂಸರ ಸಂಪರ್ಕವಾದ ಮೇಲೆ ಆಧುನಿಕರೀತಿಯ ಅಕಾರಾದಿ ಕ್ರಮವುಳ್ಳ ನಿಘಂಟುಗಳು ರಚಿತವಾಗತೊಡಗಿದುವು. ಹಳಗನ್ನಡದ ನಿಘಂಟುಗಳು ಗಾತ್ರದಲ್ಲಿ ಬಹಳ ದೊಡ್ಡವುಗಳೇನೂ ಅಲ್ಲ. ಅವುಗಳಲ್ಲಿ ಕೆಲವು ಸಂಸ್ಕೃತ ನಿಘಂಟುಗಳ ವ್ಯಾಖ್ಯಾನರೂಪದವು. (ಅವುಗಳಲ್ಲಿ ಹಲವನ್ನು ಒಟ್ಟುಸೇರಿಸಿ ಹಳಗನ್ನಡ ನಿಘಂಟು ಎಂಬ ಹೆಸರಿನಲ್ಲಿ ಪ್ರೊ. ಎನ್. ಬಸವಾರಾಧ್ಯರು ಸಂಪಾದಿಸಿ ಪ್ರಕಟಿಸಿದ್ದಾರೆ.)

ಪಾಶ್ಚಾತ್ಯ ವಿದ್ವಾಂಸರ ಸಂಪರ್ಕ ನಮ್ಮ ಭಾಷಾವಲಯಕ್ಕೆ ಆದುದು ಕ್ರಿ.ಶ. ೧೯ನೇ ಶತಮಾನದ ಪೂರ್ವಭಾಗದಲ್ಲಿ. ಅವರು ಶಾಸ್ತ್ರಸಾಹಿತ್ಯಕ್ಷೇತ್ರದಲ್ಲಿ (ಮುಖ್ಯ-ವಾಗಿ ನಿಘಂಟು ಮತ್ತು ವ್ಯಾಕರಣ) ಕೆಲಸ ಮಾಡಿದುದು ೧೯ನೇ ಶತಮಾನದ ಉತ್ತರಭಾಗದಲ್ಲಿ. ಅವರು ಮಾಡಿದ ಭಾಷಾಕಾರ್ಯಗಳ ವಿಶೇಷ ಪರಿಣಾಮಗಳು ತಿಳಿದುಬಂದುದು ಮತ್ತು ಕನ್ನಡದ ದೇಶೀಯ ವಿದ್ವಾಂಸರು ಅವುಗಳನ್ನು ಸ್ವತಂತ್ರವಾಗಿ ಬೆಳೆಸಿಕೊಂಡು ಹೋದುದು ೨೦ನೇ ಶತಮಾನದ ಆದಿಭಾಗದಲ್ಲಿ. ಪಾಶ್ಚಾತ್ಯ ವಿದ್ವಾಂಸರು ಮುಖ್ಯವಾಗಿ ರಚಿಸಿದುದು ದ್ವಿಭಾಷಾನಿಘಂಟುಗಳನ್ನು. ಏಕಭಾಷಾನಿಘಂಟುಗಳಲ್ಲಿ ಅವರಿಗೆ ಪ್ರಾಯಶಃ ಹೆಚ್ಚಿನ ಆಸಕ್ತಿ ಇರಲಿಲ್ಲ. ಮಿಶನರಿಗಳಾದ ಅವರಿಗೆ ಸ್ಥಳೀಯಭಾಷೆಯನ್ನು ಧರ್ಮಪ್ರಸಾರ ಮತ್ತು ಸಂವಹನದ ದೃಷ್ಟಿಯಿಂದ ತಿಳಿದುಕೊಳ್ಳುವುದು ಮತ್ತು ಬೈಬಲ್ ಹಾಗೂ ಧಾರ್ಮಿಕ ಸಾಹಿತ್ಯವನ್ನು ಸ್ಥಳೀಯ ಭಾಷೆಗಳಿಗೆ ಅನುವಾದ ಮಾಡಿ ಪ್ರಚಾರ ಮಾಡುವುದು ಮುಖ್ಯವಾಗಿತ್ತು. ಮುಖ್ಯವಾಗಿ ಈ ಹಿನ್ನೆಲೆಯಿಂದಲೇ ಅವರು ಸ್ಥಳೀಯಭಾಷೆಗಳನ್ನು ಅಧ್ಯಯನ ಮಾಡಿದ್ದರು. ಆದರೂ ನಿಘಂಟು ವ್ಯಾಕರಣವಂತಹ ಶಾಸ್ತ್ರಕೃತಿಗಳನ್ನು ರಚಿಸುವಾಗ ಶುದ್ಧವಾದ ಭಾಷಾಧ್ಯಯನದ ದೃಷ್ಟಿಯನ್ನು ಅವರು ಇರಿಸಿಕೊಂಡಿರುವುದು ಗಮನಾರ್ಹ ವಿಷಯವಾಗಿದೆ. ಈ ಕಾರಣದಿಂದಲೇ ಕಿಟ್ಟೆಲ್ ನಿಘಂಟು ಇಂದಿಗೂ ಒಂದು ಪ್ರಮಾಣಭೂತಕೃತಿಯಾಗಿ ನಮ್ಮೆದುರಿಗಿದೆ.

ಹೊಸಗನ್ನಡದಲ್ಲಿ ಹೊಸರೀತಿಯ ಸಾಹಿತ್ಯರಚನೆ ಮತ್ತು ಭಾಷಾಧ್ಯಯನ ಮುಂದುವರಿದಂತೆ ಹಾಗೂ ವಿದ್ಯಾಭ್ಯಾಸ ಮತ್ತು ಪತ್ರಿಕಾಪ್ರಸಾರ ಹೆಚ್ಚಿದಂತೆ ವಿವಿಧ

ರೀತಿಯ ನಿಘಂಟುಗಳು ಆವಶ್ಯಕವಾದುವು. ಕಿಟ್ಟೆಲ್ ರಚಿಸಿದ ನಿಘಂಟು ಎಷ್ಟೇ ಮಹತ್ತ್ವವನ್ನು ಹೊಂದಿದ್ದರೂ ಎಲ್ಲ ಉದ್ದೇಶಗಳಿಗೆ ಅದು ಪರ್ಯಾಪ್ತವಾಗಿರಲಿಲ್ಲ. ಅಲ್ಲದೆ ಅದು ಇಂಗ್ಲಿಷ್ ಬಲ್ಲವರಿಂದ ಮಾತ್ರ ಉಪಯೋಗಿಸಲ್ಪಡುತ್ತಿತ್ತು. ಆದುದರಿಂದ ಹೊಸ ಅವಶ್ಯಕತೆಗಳಿಗೆ ತಕ್ಕಂತೆ ಹೊಸ ನಿಘಂಟುಗಳು ರಚಿತವಾಗ-ತೊಡಗಿದವು. ಕನ್ನಡಭಾಷೆಗೆ ಸರ್ವಗ್ರಾಹಿಯಾದ ಕೋಶವೊಂದನ್ನು ರಚಿಸುವ ದೊಡ್ಡ ಯೋಜನೆ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ತೊಡಗಿತು. ಪ್ರಾದೇಶಿಕ ಭಾಷೆಗಳಿಗೂ ನಿಘಂಟುಗಳು ರಚಿತವಾಗತೊಡಗಿದವು. ನೇರವಾಗಿ ಭಾಷಾ-ಸಾಹಿತ್ಯ ಕ್ಷೇತ್ರಕ್ಕೆ ಒಳಪಡದ ವಿವಿಧ ವಿಜ್ಞಾನವಿಷಯಗಳು, ತಾಂತ್ರಿಕ ವಿಷಯಗಳು, ಕಲೆಗಳು, ಪರಿಭಾಷೆಗಳು – ಇತ್ಯಾದಿಗಳಿಗೆ ಸಂಬಂಧಿಸಿದ ನಿಘಂಟುಗಳೂ ರಚಿತವಾದುವು. ೨೦ನೇ ಶತಮಾನದ ಕೊನೆಯಲ್ಲಿ ನಿಂತು ನೋಡಿದಾಗ ಕನ್ನಡದ ನಿಘಂಟುಕ್ಷೇತ್ರದ ಬೆಳೆ ಸಾಕಷ್ಟು ಹುಲುಸಾಗಿರುವುದು ಕಂಡುಬರುತ್ತದೆ. ರಚಿತವಾದ ಎಲ್ಲ ನಿಘಂಟುಗಳೂ ಶ್ರೇಷ್ಠವಾದವುಗಳೆಂದು ಹೇಳುವಂತಿಲ್ಲ. ಬೆಳೆಯಲ್ಲಿ ಕಾಳುಗಳೊಂದಿಗೆ ಕೆಲವು ಜೊಳ್ಳುಗಳೂ ಇರುವುದು ಸಹಜವಷ್ಟೇ. ಮಾತ್ರವಲ್ಲ, ವಿದ್ಯಾರ್ಥಿಗಳಿಗೆ ಉಪಯೋಗವಾಗುವುದೆಂಬ ಉದ್ದೇಶದಿಂದ ಸಣ್ಣಗಾತ್ರದ, ಕೇವಲ ಹತ್ತಾರು ಪುಟಗಳ ಕೋಶಗಳೂ ಬಂದುದುಂಟು. ಇವು ಮೌಲಿಕ ಕೃತಿಗಳಲ್ಲದಿದ್ದರೂ ಸೂಚಿಯ ದೃಷ್ಟಿಯಿಂದ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದಂತಹವೇ ಆಗಿವೆ. ಅಂತಹವು ಎಷ್ಟೋ ಬಾರಿ ಪುನರ್ಮುದ್ರಣಗಳನ್ನೂ ಕಾಣುವಂತಹವಲ್ಲ. ಆದರೂ ಐತಿಹಾಸಿಕ ದೃಷ್ಟಿಯಿಂದ ಇವುಗಳನ್ನು ಒಂದೆಡೆಯಲ್ಲಿ ದಾಖಲಿಸುವ ಆವಶ್ಯಕತೆಯಿದೆಯೆಂಬು-ದನ್ನು ತಿಳಿದುಕೊಂಡು 'ಕನ್ನಡಕೋಶವಿಸ್ತಾರ' ಎಂಬ ಈ ಕೋಶಸೂಚಿಯನ್ನು ಸಿದ್ಧಪಡಿಸಲಾಗಿದೆ.

ನಿಘಂಟು ಮತ್ತು ಕೋಶ ಎಂಬ ಹೆಸರಿನಿಂದ ಬಹಳಷ್ಟು ಕೃತಿಗಳು ಬಂದಿದ್ದರೂ ಈ ಸೂಚಿಯಲ್ಲಿ ಗ್ರಂಥಸೂಚಿ, ಸೂಕ್ತಿಕೋಶ, ಬಹುಭಾಷಾ ಸೂಕ್ತಿಕೋಶ, ನಾಣ್ಣುಡಿಗಳ ಸಂಗ್ರಹ, ಚೆನ್ನುಡಿಗಳ ಕೋಶ, ಒಗಟುಗಳ ಕೋಶ, ಗಾದೆಗಳ ಕೋಶ, ಗ್ರಾಮನಾಮಸೂಚಿ, ಸ್ಥಳನಾಮಸೂಚಿ, ಸಾಹಿತಿಗಳ ಸೂಚಿ, ಹಸ್ತಪ್ರತಿಗಳ ಕೋಶ ಹಾಗೂ ಸೂಚಿಗಳು, ಪ್ರಶಸ್ತಿಪುರಸ್ಕೃತ ಮಹನೀಯರ ಸೂಚಿಗಳು, ಕಲಾವಿದರ ಪರಿಚಯಗ್ರಂಥ, ವಿದ್ವಾಂಸರ ಪರಿಚಯಗ್ರಂಥ – ಇಂತಹವುಗಳನ್ನು ಸೇರಿಸಿಕೊಳ್ಳ-ಲಾಗಿಲ್ಲ. ಒಂದು ದೃಷ್ಟಿಯಿಂದ, ಧಾರ್ಮಿಕಸಾಹಿತ್ಯದೊಳಗೆ ಸೇರುವ ವಿವಿಧ ದೇವತಾ ಸಹಸ್ರನಾಮಗಳು, ಅಷ್ಟೋತ್ತರ ಶತನಾಮಗಳು, ಶ್ರೀರುದ್ರಾದಿಗಳ ವ್ಯಾಖ್ಯಾನಗಳು ಕನ್ನಡದಲ್ಲಿ ಪುಸ್ತಕರೂಪದಲ್ಲಿ ಬಂದಿದ್ದು ಇವು ನಾಮಸೂಚಿಗಳೇ ಆಗಿವೆ. ಇಂತಹ-ವನ್ನೂ ಪ್ರಸ್ತುತ ಸೂಚಿಯಲ್ಲಿ ಸೇರಿಸಿಕೊಳ್ಳಲಾಗಿಲ್ಲ. ಇಂತಹವನ್ನು ಪ್ರತ್ಯೇಕವಾಗಿ ಒಟ್ಟುಸೇರಿಸಿ ನಾಮಸೂಚಿಗಳ ರೂಪದಲ್ಲಿ ಹೊರತರಲು ಅವಕಾಶಗಳಿವೆ-ಯೆಂಬುದನ್ನು ಇಲ್ಲಿ ಸೂಚಿಸಲಾಗಿದೆ. ಮುಖ್ಯವಾಗಿ ಏಕಭಾಷಾ, ದ್ವಿಭಾಷಾ ಮತ್ತು ಬಹುಭಾಷಾಕೋಶಗಳು, ವಿವಿಧ ರೀತಿಯ ವಿಶ್ವಕೋಶಗಳು, ಮಾಹಿತಿಕೋಶಗಳು, ವಿಶಿಷ್ಟಶಬ್ದಕೋಶಗಳು, ಪಾರಿಭಾಷಿಕಕೋಶಗಳು, ವಿವರಣಕೋಶಗಳು, ವಿಜ್ಞಾನ

ಹಳಗನ್ನಡ ನಿಘಂಟು ಪ್ರ. 1976/ದ್ವಿ.
ರನ್ನಕಂದ
ಶಬ್ದಮಣಿದರ್ಪಣಂ (ಧಾತುಪ್ರಕರಣಂ)
ಶಬ್ದಮಣಿದರ್ಪಣಂ (ಸಹಜಲಿಂಗಗಳ್)
ಶಬ್ದಮಣಿದರ್ಪಣಂ (ಪ್ರಯೋಗಸಾರಮೆಂಬ ಶಬ್ದಾರ್ಥನಿರ್ಣಯಂ)
ಕರ್ಣಾಟಕ ಶಬ್ದಸಾರಂ
ಕರ್ಣಾಟಕ ನಿಘಂಟು
ಚತುರಾಸ್ಯ ನಿಘಂಟು
ಕಬ್ಬಿಗರ ಕೈಪಿಡಿ
ಚಕೋರಚಂದ್ರಿಕೆ (ಕಬ್ಬಿಗರ ಕೈಪಿಡಿ ಟೀಕು)
ಕರ್ಣಾಟಕ ಶಬ್ದಮಂಜರಿ
ಕರ್ಣಾಟಕ ಶಬ್ದಮಂಜರಿ ಟೀಕು (ಮುನೇಗೌಡ)
ವಿಬುಧಾನಂದಿನೀ ಕರ್ಣಾಟಕಶಬ್ದಮಂಜರಿ ಟೀಕು (ಹೆಸರುಘಟ್ಟದ ಹೊನ್ನಪ್ಪ)
ಸುಜನೋಲ್ಲಾಸಿನೀ ಕರ್ಣಾಟಕಶಬ್ದಮಂಜರಿ ಟೀಕು (ಎಸ್. ಆರ್. ಕರಿಬಸವ ಶಾಸ್ತ್ರಿ)
ಕರ್ಣಾಟಕ ಶಬ್ದಮಂಜರಿ ಟೀಕು (ಶ್ರೀನಿವಾಸ)
ಕರ್ಣಾಟಕ ಸಂಜೀವನಂ
ಕರ್ಣಾಟಕ ಭಾರತ ನಿಘಂಟು
ಕವಿಕಂಠಹಾರಂ
ಸಂ.: ಪ್ರೊ. ಎನ್. ಬಸವಾರಾಧ್ಯ ಪು. 634
[ಡಿ. ವಿ. ಕೆ. ಮೂರ್ತಿ, ಮೈಸೂರು]

ಹಳಗನ್ನಡ ಪದಸಂಪದ ಪ್ರ. 2007/ದ್ವಿ. 2010
ಡಾ. ಪಿ. ವಿ. ನಾರಾಯಣ ಪು. 554
[ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು]

ಹಳಗನ್ನಡ ವಿಶೇಷ ಶಬ್ದಕೋಶ ಪ್ರ. 2008
(A Special Dictionary for Old Kannada)
ಡಾ. ಎಲ್. ಬಸವರಾಜು ಪು. 398
[ಅಭಿರುಚಿ ಪ್ರಕಾಶನ, ಮೈಸೂರು]

ಹಳಗನ್ನಡ ಶಬ್ದಾರ್ಥಕೋಶ ಪ್ರ. 2005
ಪ್ರೊ. ಎನ್. ಬಸವಾರಾಧ್ಯ ಪು. 172
[ಡಿ. ವಿ. ಕೆ. ಮೂರ್ತಿ, ಮೈಸೂರು]

❖ ಹಿಂದಿ-ಕನ್ನಡ ಕೋಶ ಪ್ರ. ?
ಶ್ರೀ ಮನ್ನೂರ ಪು. ?

❖ ಹಿಂದಿ–ಕನ್ನಡ ಕೋಶ ಪ್ರ. 1948
ಪಂಡಿತ ಸಿದ್ಧನಾಥ ಪಂತ ಪು.

❖ ಹಿಂದಿ–ಕನ್ನಡ ಪಾಕೇಟ ಶಬ್ದಕೋಶ ಪ್ರ. ?
ಪಂಡಿತ ಜೆ. ಡಿ. ಮೈಸಾಳೆ ಪು.
[ರಾಮಾಶ್ರಯ ಬುಕ್ ಡಿಪೋ, ಧಾರವಾಡ]

❖ ಹಿಂದಿ–ಕನ್ನಡ ವಾಗ್ವೈಲಾಸ್ಯ ನಿಘಂಟು
ಡಾ. ಕೆ. ಗಣಪತಿ ಭಟ್ಟ
[ಚೇತನ ಬುಕ್ ಹೌಸ್, ಮೈಸೂರು]

❖ ಹಿಂದಿ–ಕನ್ನಡ ಶಬ್ದಕೋಶ ಪ್ರ. 1945
ಪ್ರೊ. ಜಂಬುನಾಥನ್ ಪು.

ಹಿಂದೀ–ಕನ್ನಡ ಶಬ್ದಕೋಶ ಪ್ರ. 1950/ದ್ವಿ. 1985/ತೃ. 1989/ಪರಿಷ್ಕೃತ 1991/ಪುನ. 2009
ಗುರುನಾಥ ಜೋಶಿ ಪು. 554
[ಸಂಕೇಶ್ವರ ಪ್ರಿಂಟರ್ಸ್ ಪ್ರೈ. ಲಿ. ಗದಗ]

ಹಿಂದೀ ಶಬ್ದರತ್ನಾಕರ ಪ್ರ. 1994
(ಹಿಂದೀ–ಹಿಂದೀ–ಕನ್ನಡ ಶಬ್ದಕೋಶ)
ಕಟೀಲ್ ಗಣಪತಿ ಶರ್ಮ ಪು. 1366
[ವಿಶ್ವವಿದ್ಯಾಸದನ ಟ್ರಸ್ಟ್, ಬೆಂಗಳೂರು]

ಹೊಸ ಬ್ಯಾಂಕಿಂಗ್ ನಿಘಂಟು ಪ್ರ. 2009
(ಇಂಗ್ಲಿಷ್–ಕನ್ನಡ)
ಡಾ. ಕಬ್ಬಿನಾಲೆ ವಸಂತ ಭಾರದ್ವಾಜ ಪು. 220
[ಕನ್ನಡ ಬಳಗ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು]

ಜಿಟಿಕುಳ ನಿಘಂಟು
(ರಚನೆ : ಕನ್ನಡ ಸಾಹಿತ್ಯ ಪರಿಷತ್ತು)
(ಅಮುದ್ರಿತ 1930)

❖ A Dictionary of Carnataka and English ಪ್ರ. 1832
William Reeve

❖ A Dictionary of English and Carnataka ಪ್ರ. 1824
William Reeve ಪು. 1858

A Kannada English Dictionary — ಪ್ರ. 1894/AES Reprint 1982/1984/1988/1990/1991/1993/1994/1996
Rev. Fr. F. Kittel — ಪು. 1802
[Asian Education Services, New Delhi]

❖ **A Kissamwar glossary of Kannada words** — ಪ್ರ. 1891
ಉಳ್ಳಾಲ ನರಸಿಂಗ ರಾವ್
[AES Reprints, New Delhi]

❖ **A Mannual : Canarese and English Dictionary** — ಪ್ರ. /ದ್ವಿ / ತೃ.
John Garatt

**A Mannual : English and Canarese Dictionary** — ಪ್ರ. 1842
John Garatt

❖ **A Multi Lingual Dictionary of Kannada-Kannada-English-Tamil-Japanese Vol-1**
ಪ್ರಸಂ. ಡಾ. ವಿ. ಗೋಪಾಲಕೃಷ್ಣ
[Institue of Asian Studies, Chennai]

❖ **A Multi Lingual Dictionary of Kannada-Kannada-English-Tamil-Japanese Vol-2**
ಪ್ರಸಂ. ಡಾ. ವಿ. ಗೋಪಾಲಕೃಷ್ಣ
[Institute of Asian Studies, Chennai]

**Concise English – Kannada Dictionary**
**ಇಂಗ್ಲಿಷ್–ಕನ್ನಡ ನಿಘಂಟು**
ಎಸ್. ಎಸ್. ಶಿವಂ
ಎಸ್. ಆನಂದ್
[ಶ್ರೀ ಸರಸ್ವತೀ ಬುಕ್ಸ್, ಜಯನಗರ, ಬೆಂಗಳೂರು]

❖ **Dictionarium – Canarese - Latinum** — ಪ್ರ. 1861
**ಲತೀನು ಕಂನಡ ಅಕಾರಾದಿ**
ಶಾರ್ಬೋರ್ನೋ — ಪು. 1008

❖ **Dictionarium – Latino - Canarese** — ಪ್ರ. 1855
ಶಾರ್ಬೋರ್ನೋ — ಪು. 1179

| | |
|---|---|
| **Dictionary Canarese and English** | ಪ್ರ. 1832 |
| **(Kannada and English)** | |
| Rev. W. Reeve | |
| Revised & enlarged by | 1858(ಪರಿಷ್ಕೃತ) |
| Daniel Sanderson | ಪು. 1040 |
| ❖ **ZEGLERS English Kannada Dictionary** | ಪ್ರ.1876/ದ್ವಿ.1888/ತೃ ಪರಿಷ್ಕೃತ |
| (English Canarese School Dictionary) | ಕ್ರಿಸ್ತಾನುಜವತ್ಸ 1919/ ಚ./ಪಂ. |
| ಇಂಗ್ಲಿಷ್ – ಕನ್ನಡ ಡಿಕ್ಷನರಿ | ಷಷ್ಠ 1929 |
| F Zegler | ಪು. 1919 |
| **English English Kannada Dictionary** | ಪ್ರ. 1962/ದಿ. 1973/ತೃ.1982 |
| ಇಂಗ್ಲಿಷ್ ಇಂಗ್ಲಿಷ್ ಕನ್ನಡ ಅರ್ಥಕೋಶ | |
| ಕೆ. ವಿಠಲ ಶೆಣ್ಯೆ | ಪು. 503 |
| **English Learners Dictionary** | |
| **(English English Kannada)** | ಪ್ರ. 1997 |
| ಇಂಗ್ಲಿಷ್ ಇಂಗ್ಲಿಷ್ ಕನ್ನಡ ಅರ್ಥಕೋಶ | ಪು. 292 |
| **Five Hundred Indian Plants** | ಪ್ರ. 1881 |
| **(their use in medicine and the arts)** | |
| ಸಹಸ್ರಾರ್ಧ ವೃಕ್ಷಾದಿಗಳ ವರ್ಣನೆ | ಪು. 286 |
| [ಬಾಸೆಲ್ ಮಿಶನ್, ಮಂಗಳೂರು] | |
| **Gem Dictionary** | ಪ್ರ.1942/ದ್ವಿ.1944/ತೃ.1952 |
| **(English English Kannada)** | ಪರಿಷ್ಕೃತ 1962 ಪು.ಮು1963 |
| ಸಂ. ಡಿ. ಕೆ. ಭಾರದ್ವಾಜ | ಪು. 974 |
| [ರಾಮಾಶ್ರಯ ಬುಕ್ ಡಿಪೋ, ಧಾರವಾಡ] | |
| **Kannada English Dictionary** | ಪ್ರ.1899/ಪರಿಷ್ಕೃತ 1923/ ಪು. ಮು 1983/1987/1989/ 1990/ 1991/1992/1993/1994/1996 |
| Rev. J. Bucher | ಪು.539 |
| [Asian Education Services, New Delhi.] | |
| **Kittels Kannada - English** | ಪ್ರ. 1971 |

**Dictionary Vol. IV**
Ed. Prof. M Mariappa Bhat ಪು 391

**Kittels Kannada - English** ಪ್ರ. 1968
Dictionary – Vol I (Revisional and Enlarged)
Ed. Prof. M. Mariappa Bhat ಪು 414
[University of Madras]

**Kittels Kannada - English** ಪ್ರ. 1977
Dictionary – Vol II (Revisional and Enlarged)
Ed. Prof. M Mariappa Bhat ಪು 531
[University of Madras]

**Kittels Kannada – English** ಪ್ರ. 1970
Dictionary – Vol I (Revisioned and Enlarged)
Ed. Prof. M Mariappa Bhat ಪು 504
[University of Madras]

**New Modern Dictionary** ಪ್ರ. 1981/ಪರಿಷ್ಕೃತ 1997/ 1998/
**(English-English-Kannada)** 1999/1999/2000/2001/2002/
ಅರವಿಂದ ಕೆ. ಸುಗೂರ್ 2004/2005/2005/2006/2007
ವಿ. ವಿ. ಆಳವಂಡಿ ಪು. 1082
[ಪಿ.ಸಿ. ಶಾಬಾದಿಮಠ ಬುಕ್ ಡಿಪೋ, ಗದಗ]

**Oxford English – English** ಪ್ರ. 1985/ದ್ವಿ.?/ತೃ. 1986--/
**Kannada Dictionary** 9ನೇ 2001
**ಇಂಗ್ಲಿಷ್ ಇಂಗ್ಲಿಷ್ ಕನ್ನಡ ನಿಘಂಟು**
A. J. Augarde ಪು 612
N Balasubrahmanya
Prabhu Shankara
[Oxford University Press]

**Pictorial English-English**
**Kannada Science Dictionary** ಪ್ರ. 2009/ದ್ವಿ. /ತೃ.1986
(ಸಚಿತ್ರ ಇಂಗ್ಲಿಷ್ ಇಂಗ್ಲಿಷ್ ಕನ್ನಡ ವಿಜ್ಞಾನ ಪದಕೋಶ)
ಅರವಿಂದ ಸುಗೂರ್ ಪು 316
[ಚೈತನ್ಯ ಪಬ್ಲಿಕೇಶನ್ ಧಾರವಾಡ]

**Ramashraya's English-English-** ಪ್ರ.?/ದ್ವಿ.2002/ತೃ.2008
**Kannada Dictionary of Science**

ಇಂಗ್ಲಿಷ್–ಇಂಗ್ಲಿಷ್–ಕನ್ನಡ ವಿಜ್ಞಾನ ಪದಕೋಶ
ಅರವಿಂದ ಸುಗೂರ್ ಪು. 282
[ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ]

❖ **Ramashraya's English-Hindi-** ಪ್ರ.?
**Kannada Dictionary**
? ಪು. ?
[ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ]

❖ **Ramashraya's English-English-** ಪ್ರ.?
**Kannada Legal Dictionary**
ಇಂಗ್ಲಿಷ್–ಇಂಗ್ಲಿಷ್–ಕನ್ನಡ ಕಾನೂನು ಪದಕೋಶ
? ಪು. ?
[ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ]

**Saraswathi Standard**
**English Kannada Dictionary** ಪ್ರ. 2009/ದ್ವಿ. /ತೃ.1986
(ಕಿರುಕೋಶ ಪಾಕೆಟ್ ಕೋಶ)
ಸುಗುರ್ ಮತ್ತು ಇಂದ್ರಜಿತ್ ಪು 413
[ಪಾರು ಪ್ರಕಾಶನ, ಗದಗ]

**Some ಪದ** ಪ್ರ. 2009
ಪಾರ್ವತೀಶ ಪು. 142
[ಚಾರುಪ್ರಕಾಶನ, ಬೆಂಗಳೂರು–4]

**Standard Pocket Dictionary**
**English-Kannada** ಪ್ರ. 2003/ದ್ವಿ.2010
ಸ್ಟಾಂಡರ್ಡ್ ಪಾಕೆಟ್ ಡಿಕ್ಷನರಿ ಇಂಗ್ಲಿಷ್–ಕನ್ನಡ
ಡಿ. ಕೆ. ಭಾರದ್ವಾಜ ಪು. 486
[ಸಂಕೇಶ್ವರ ಪ್ರಿಂಟರ್ಸ್ ಪ್ರೈ. ಲಿ. ಗದಗ]

**Subhas English English Kannada** ಪ್ರ. 2008/ದ್ವಿ. 2008/ ತೃ. 2010
**Dictionary**
(ಇಂಗ್ಲಿಷ್–ಇಂಗ್ಲಿಷ್ ಕನ್ನಡ ನಿಘಂಟು)
ಎಲ್. ಎಸ್. ಶೇಷಗಿರಿ ರಾವ್ ಪು. 1546
[ಸುಭಾಷ್ ಸ್ಟೋರ್ಸ್, ಬೆಂಗಳೂರು]

**Subhas Dictionary** ಪ್ರ. 1944
(English English Kannada)
D. K. Bharadvaj ಪು. 1037

Revised by Sachidanandan | ೯ನೇ ಮು ಪರಿಷ್ಕೃತ ಮುದ್ರಣ 2002/ ಪರಿಷ್ಕೃತ ಪು. 2005/ 2008 ಪು.ನ 1980/ ಪು.ನ 1980/

[ಸಂಕೇಶ್ವರ ಪ್ರಿಂಟರ್ಸ್, ಪ್ರೈ. ಲಿ. ಗದಗ] ಪರಿಷ್ಕೃತ 1981/82

**Sura's Pocket English-Kannada Dictionary** — ಪ್ರ? 2009
ಆರ್. ಎಲ್. ಅನಂತರಾಮಯ್ಯ — ಪು. 596
[ಸುರಾ, ಚೆನ್ನೈ]

**The English Kannada Pocket Dictionary** — ಪ್ರ 1998
ಪಿ. ಮಂಗೇಶ್ ರಾವ್ — ಪು. 154

❖ **Verbal Bases of Kumaravyasa** — ಪ್ರ 1983
ಸಿ. ಓಂಕಾರಪ್ಪ — ಪು.



ಕನ್ನಡಕ್ಕೆ ಹೊಸದೊಂದು ಆಧುನಿಕ ಕನ್ನಡದ ವ್ಯಾಕರಣವನ್ನು ನಿರ್ಮಾಣ ಮಾಡಬೇಕಾದ ಅಗತ್ಯವಿದೆ. ಹಳೆಯ ಕನ್ನಡದ, ನಡುಗನ್ನಡದ, ಹೊಸಗನ್ನಡದ ವ್ಯಾಕರಣಗಳ ನಿಯಮಗಳನ್ನೂ ಮುರಿದು ಭಾಷೆಬೆಳೆಯುತ್ತಿದೆ. ಈ ಒಂದೊಂದು ಭಾಗಕ್ಕೂ ಬೇಕಾದ ಸೂತ್ರಗಳನ್ನು ಆಧುನಿಕಗೊಳಿಸಬೇಕು. ರಾಜ್ಯದ ರಾಜ್ಯಾಂಗ ಸಂವಿಧಾನವನ್ನೇ ತಿದ್ದುಪಡಿ ಮಾಡುತ್ತಿರುವ ಈ ಸಮಯದಲ್ಲಿ ಎಲ್ಲ ವಿಶ್ವವಿದ್ಯಾನಿಲಯಗಳು ಹೊಸ ವ್ಯಾಕರಣದ ಬಗ್ಗೆ ವಿಚಾರಸಂಕಿರಣಗಳನ್ನು ಏರ್ಪಡಿಸಿ ಬಹಿರಂಗಚರ್ಚೆಗೆ ಅವಕಾಶ ಮಾಡಿಕೊಡಬೇಕು.

– **ಪ್ರೊ. ಜಿ. ವೆಂಕಟಸುಬ್ಬಯ್ಯ**



# ವಿದ್ವಜ್ಜೀವಿತ



## ಭಾಗ – ಮೂರು



## ಸಾಹಿತ್ಯಸಂಪಾದನ

ಪ್ರೊ. ಜಿ. ವೆಂಕಟಸುಬ್ಬಯ್ಯನವರು ಸಂಪಾದಿಸಿದ ಗ್ರಂಥಗಳ ಅವಲೋಕನ



ವ್ಯಾಕರಣದ ದೃಷ್ಟಿಯಿಂದ ಶಬ್ದಗಳು ಯಾವ ಯಾವ ರೂಪಗಳನ್ನು ಪಡೆಯುತ್ತವೆ ಎಂಬ ಅಭ್ಯಾಸ ತುಂಬ ಪ್ರಯೋಜನಕಾರಿ. ಕೆಲವು ಶಬ್ದಗಳು ವ್ಯಾಕರಣಸೂತ್ರಗಳಿಗೆ ಅನುಸಾರವಾಗಿ ಹೊಸ ರೂಪಗಳನ್ನು ಪಡೆಯುತ್ತವೆ. ಮತ್ತೆ ಕೆಲವು ಸೂತ್ರಗಳ ಅಧಿಕಾರವನ್ನು ಲಕ್ಷಿಸುವುದಿಲ್ಲ. ಈ ಅವಿಧೇಯಶಬ್ದಗಳ ಸ್ವಭಾವವೆಂಥದು, ಅವುಗಳ ಅವಿಧೇಯತೆಗೆ ಕಾರಣವೇನು ಎಂಬುದನ್ನು ಅನ್ವೇಷಿಸುವ ಅಗತ್ಯವಿದೆ. ಒಂದು ಭಾಷೆಯನ್ನು ಆಡುವ ಜನರು ವಾಸಿಸುವ ಪ್ರದೇಶದಲ್ಲಿ ಮೆಯ್ದುಳೆಯುವ ಸಾಮಾಜಿಕ, ರಾಜಕೀಯ ಮತ್ತು ಮತೀಯ ಬೆಳವಣಿಗೆಗಳಿಂದ ಅನೇಕ ಹೊಸ ಶಬ್ದಗಳು ಉತ್ಪತ್ತಿಯಾಗುತ್ತವೆ. ವಿಜ್ಞಾನದ ಪ್ರಗತಿ, ಕೈಗಾರಿಕೆಗಳ ಪ್ರಭಾವ, ಯಂತ್ರಕೌಶಲ, ತಂತ್ರ-ಕೌಶಲಗಳ ವ್ಯಾಪಕವಾದ ಉಪಯೋಗ ಇವುಗಳಿಂದಲೂ ಈ ಶಬ್ದಜಾಲ ಬೆಳೆಯುತ್ತದೆ. ನಿಘಂಟುಶಾಸ್ತ್ರವು ಇವುಗಳನ್ನೆಲ್ಲ ಅಳವಡಿಸಿಕೊಂಡು ತನ್ನ ಭಾಷೆಯೊಳಗೆ ಅಭ್ಯಾಸವನ್ನು ಮುಂದುವರಿಸಬೇಕಾಗುತ್ತದೆ.

— **ಪ್ರೊ. ಜಿ. ವೆಂಕಟಸುಬ್ಬಯ್ಯ**

# ಕನ್ನಡ ಕತ್ತುರಿಯ 'ಮುದ್ದಣಭಂಡಾರ'

■ ಡಾ. ಕಬ್ಬಿನಾಲೆ ವಸಂತ ಭಾರದ್ವಾಜ

ಎರಡು ಸಂಪುಟಗಳಲ್ಲಿ ಮುದ್ದಣಕವಿಯ ಸಮಗ್ರಸಾಹಿತ್ಯವನ್ನು 'ಮುದ್ದಣ ಭಂಡಾರ' ಎಂಬ ಹೆಸರಿನಲ್ಲಿ ಪ್ರೊ. ಜಿ. ವಿ. ವೆಂಕಟಸುಬ್ಬಯ್ಯನವರು ಸಂಪಾದಿಸಿ-ಕೊಟ್ಟಿದ್ದಾರೆ. 1987ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ ಇದು ಪ್ರಕಟಗೊಂಡಿದೆ. ಮುದ್ದಣನ ಕೃತಿಗಳು ಓದುಗರಿಗೆ ದೊರಕದೆ ಇದ್ದ ಕಾಲಘಟ್ಟದಲ್ಲಿ ಇದೊಂದು ಸ್ತುತ್ಯರ್ಹವಾದ ಪ್ರಯತ್ನ. ಇದರಲ್ಲೂ ಕೃತಿಗಳಿಗೆ ಸೂಕ್ತವಾದ ಅಧ್ಯಯನ-ಪೂರ್ಣ ಪ್ರಸ್ತಾವನೆಯೊಂದಿಗೆ ಹೊಸಗನ್ನಡದಲ್ಲಿ ಅನುವಾದ ಹಾಗೂ ಶಬ್ದಕೋಶವನ್ನು ನೀಡಿರುವುದು ತುಂಬಾ ಪ್ರಯೋಜನಕಾರಿಯಾಗಿದೆ. ಮೊದಲನೆಯ ಸಂಪುಟದಲ್ಲಿ ಮುದ್ದಣನ ಯಕ್ಷಗಾನ ಕೃತಿಗಳನ್ನು ಮತ್ತು 'ಶ್ರೀರಾಮಪಟ್ಟಾಭಿಷೇಕಂ' ಎಂಬ ಪದ್ಯ-ಕಾವ್ಯವನ್ನು ಎರಡನೆಯ ಸಂಪುಟದಲ್ಲಿ 'ಅದ್ಭುತ ರಾಮಾಯಣ' ಮತ್ತು 'ರಾಮಾಶ್ವ-ಮೇಧಂ' ಎಂಬೆರಡು ಗದ್ಯಕಾವ್ಯಗಳನ್ನು ಮತ್ತು 'ಜೋಜೋ' ಎಂಬ ಲೇಖನ-ವೊಂದನ್ನು ಸಂಕಲಿಸಲಾಗಿದೆ.

**ಯಕ್ಷಗಾನಕೃತಿಗಳು:**

ಮುದ್ದಣ ವಿರಚಿತ 'ರತ್ನಾವತಿ ಕಲ್ಯಾಣ' ಮತ್ತು 'ಕುಮಾರ ವಿಜಯ'ಗಳೆಂಬ ಯಕ್ಷಗಾನಕೃತಿಗಳನ್ನು ಸಂಪಾದಿಸುವುದಕ್ಕಾಗಿ ಪ್ರೊ. ಜಿ. ವೆಂ. ಅವರು ಉಡುಪಿಯ ಕು. ಶಿ. ಹರಿದಾಸ ಭಟ್ಟ ಮತ್ತು ಹೊನ್ನಾವರದ ವಿ. ಪಿ. ಹಾಸ್ಯಗಾರರನ್ನು ಸಂಪರ್ಕಿಸಿದ್ದಾರೆಂದು ಸಂಪಾದಕರ ಅರಿಕೆಯಿಂದ ತಿಳಿದುಬರುತ್ತದೆ. ಜೊತೆಗೆ ಅವುಗಳನ್ನು ಅಭ್ಯಾಸಮಾಡುತ್ತಿದ್ದಾಗ ಟಿ. ಕೇಶವ ಭಟ್ಟ, ಅಮೃತ ಸೋಮೇಶ್ವರ ಮತ್ತು ಸೀತಾರಾಮ ಕೆದಿಲಾಯರೊಂದಿಗೆ ಚರ್ಚೆನಡೆಸಿದ್ದಾರೆಂದೂ ಹೇಳಿಕೊಂಡಿ-ದ್ದಾರೆ. ಆದರೆ ಯಕ್ಷಗಾನ ಮಂಡಳಿಗಳು ಪ್ರದರ್ಶನಕ್ಕೆ ಬೇಕಾದಷ್ಟೇ ಪದ್ಯಗಳನ್ನು ಬರೆದಿಟ್ಟುಕೊಳ್ಳುವ ಕ್ರಮವಿರುವುದರಿಂದ ಶ್ರೀ ಹಾಸ್ಯಗಾರರ ಪ್ರತಿಯು ಮುದ್ದಣನ ಪ್ರಸಂಗದ ಸಂಕ್ಷಿಪ್ತ ಪ್ರತಿಯೆಂದು ತಿಳಿಯಿತು. ಸಂಪೂರ್ಣ ಕೃತಿಗೂ ಸಂಕ್ಷಿಪ್ತ ಪ್ರತಿಗೂ ಮೂವತ್ತು ನಲುವತ್ತು ಹಾಡುಗಳಷ್ಟು ವ್ಯತ್ಯಾಸವಿರುವುದು ಕಂಡುಬಂದಿತು. ಹೀಗೆ ಅನೇಕ ಪ್ರತಿಗಳ ತುಲನೆಯಿರುವ ಕವಿಯ ಮೂಲಪಾಠವನ್ನು ನಿಶ್ಚಯಿಸಿ ಅಂತಹ ಪೂರ್ಣಪಾಠವನ್ನು ಸಂಗ್ರಹಿಸಿ ಮುದ್ರಿಸಿರುವುದು ಸಂಪಾದಕರ ಸಂಶೋಧನಶ್ರಮ-ವನ್ನೂ ಸಾಂಸ್ಕೃತಿಕ ಕಳಕಳಿಯನ್ನೂ ಎತ್ತಿ ಹೇಳುತ್ತದೆ.

ಮುದ್ದಣನ ಜೀವನದ ಬಗೆಗಿನ ಮಾಹಿತಿ, ವಿವಿಧ ಕೃತಿಗಳ ರಚನಾವರ್ಷ ಮತ್ತು ಎರಡೂ ಪ್ರಸಂಗಗಳ ಕಥಾಸಾರವನ್ನು ಪ್ರಸ್ತಾವನೆಯಲ್ಲಿ ತಿಳಿಸಲಾಗಿದೆ. 'ರತ್ನಾವತಿ ಕಲ್ಯಾಣ' ಪ್ರಸಂಗ ರಚನೆಗೆ ಕವಿಯು ಸಂಸ್ಕೃತದ ಪ್ರಿಯದರ್ಶಿಕಾ ಮತ್ತು ರತ್ನಾವಳಿ ನಾಟಕಗಳಿಂದ ಪ್ರೇರಣೆ ಹೊಂದಿರುವುದು, ಹಾಡುಗಳ ವಿವಿಧ ಛಂದೋಬಂಧಗಳಿಗೆ ಹಿಂದಿನ ಯಕ್ಷಗಾನಕೃತಿಗಳ ನೆರವನ್ನು ಪಡೆದಿರುವುದು, 1930 ರಲ್ಲಿ ಬೆಳ್ಳಾರೆಯಲ್ಲಿ ಪ್ರದರ್ಶನಗೊಂಡ ಕುಮಾರವಿಜಯವನ್ನು ದಿ। ಆರ್. ತಾತಾ-ಚಾರ್ಯರು ನೋಡಿ ಪ್ರಶಂಸೆಯ ಪದ್ಯವನ್ನು ರಚಿಸಿರುವುದು, ಕಳೆದ ಶತಮಾನದ ಆದಿಯಲ್ಲಿದ್ದ ಯಕ್ಷಗಾನಸ್ಥಿತಿಯ ಕುರಿತಾಗಿ ದಿ. ಕೆ. ಪಿ. ವೆಂಕಪ್ಪ ಶೆಟ್ಟರ ಮಾತುಗಳನ್ನು ಉಲ್ಲೇಖಿಸಿದ್ದು ಮುಂತಾದ ಅಂಶಗಳಿಂದ ಸಂಪಾದಕರ ಪ್ರಸ್ತಾವನೆ ಅತ್ಯಂತ ಮೌಲಿಕವಾಗಿದೆ.

ಪ್ರಸಂಗದ ಪದ್ಯಗಳಿಗೆ ತಾತ್ಪರ್ಯವನ್ನು ನೀಡಿದ್ದು, ಕ್ಷಿಷ್ಟಪದ್ಯಗಳನ್ನು ಅರ್ಥೈಸಿಕೊಳ್ಳುವಲ್ಲಿ ನೆರವಾಗಿದೆ. 'ಧರಣಿಪತಿ ಲಾಲಿಪುದು ವನಿತೆಯು ಸಿರಿಯ ಕರುಮಾಡವನು ಸರದಿಂ ಹರಿದರೆಯ ಮೇಲ್ ಬಿಸುಡೆ' (ರತ್ನಾವತಿ ಕಲ್ಯಾಣ) 'ಕಾದಂಬನಿಕರ ಪಾರುತ್ತಯ್ದಿ'. 'ಅತಿಥಿಯನು ಪೆತ್ತವನ ತಾತನ (ಕುಮಾರವಿಜಯ) ಮುಂತಾದ ಪದ್ಯಗಳನ್ನು ಸರಿಯಾಗಿ ಅರ್ಥೈಸುವಲ್ಲಿ ಇಲ್ಲಿ ನೀಡಲಾದ ತಾತ್ಪರ್ಯವು ವಿದ್ಯಾರ್ಥಿಗಳಿಗೆ ಹಾಗೂ ಕಲಾಭ್ಯಾಸಿಗಳಿಗೆ ಮಾರ್ಗದರ್ಶಕವಾಗಿದೆ. ರತ್ನಾವತಿ ಕಲ್ಯಾಣದ ಮೊದಲ ಶಾರ್ದೂಲವಿಕ್ರೀಡಿತ ವೃತ್ತದ ಛಂದೋದೋಷವನ್ನು ಸಂಪಾದಕರು ಅಡಿಟಿಪ್ಪಣಿಯಲ್ಲಿ ಹೇಳಿದ್ದರೂ, ಕಂದಪದ್ಯಗಳಲ್ಲಿರುವ ನಿಯಮಭಂಗ-ಗಳನ್ನು (ಉದಾ: ರತ್ನಾವತಿ ಕಲ್ಯಾಣದ ಪದ್ಯ ೯೮, ೧೧೦, ೧೨೫ ಹಾಗೂ ಕುಮಾರವಿಜಯದ ಪದ್ಯ ೭೪, ೯೨, ೧೪೩. ಇತ್ಯಾದಿ) ಸೂಚಿಸಿಲ್ಲ. ಪದ್ಯಗಳಿಗೆ ರಾಗತಾಳಗಳ ಶೀರ್ಷಿಕೆಯನ್ನು ತೋರಿಸಿದ್ದರೂ, ಭಾಮಿನಿ, ವಾರ್ಧಕ, ಕಂದ-ಪದ್ಯಗಳಿಗೆ ಶೀರ್ಷಿಕೆಯನ್ನು ಯಾಕೋ ಕೈಬಿಡಲಾಗಿದೆ. ಇನ್ನು ಕೆಲವು ಪದ್ಯಗಳ ಪಾದವಿನ್ಯಾಸವನ್ನು ಗ್ರಹಿಸುವಲ್ಲಿ ಗೊಂದಲವುಂಟಾಗಿದೆ. (ಉದಾ: ಕುಮಾರವಿಜಯದ ಪದ್ಯ ಸಂಖ್ಯೆ ೪೬, ೧೩೪, ೨೦೦, ೨೩೦ ಇತ್ಯಾದಿ) ಆದರೆ ಹೊಸತಲೆಮಾರಿನ ಸಂಶೋಧಕರು ಈ ಬಗ್ಗೆ ಗಮನಹರಿಸಲು ಸಾಧ್ಯವಾಗಿರುವುದು ಈ ಮುದ್ದಣ ಭಂಡಾರದ ಪ್ರಕಟಣೆಯಿಂದ ಎನ್ನುವುದರಲ್ಲಿ ಸಂದೇಹವಿಲ್ಲ.

**ಶ್ರೀರಾಮಪಟ್ಟಾಭಿಷೇಕಂ:**

ಈ ಕಾವ್ಯದ ನಾಂದೀಸಂಧಿಯ ಎಲ್ಲ ಒಂಬತ್ತು ವಾರ್ಧಕ ಷಟ್ಪದಿಗಳೂ ಶ್ಲೇಷಾಲಂಕಾರದ ಉತ್ತಮ ಉದಾಹರಣೆಗಳು. ಅವುಗಳ ಅನ್ವಯವನ್ನು ಬಹಳ ಸೊಗಸಾಗಿ ಹೇಳಿರುವುದು ಗಮನಾರ್ಹ. ರಾಮ ಮತ್ತು ಶಿವ, ಶೇಷ ಮತ್ತು ಕೈಲಾಸಪರ್ವತ, ವಿಷ್ಣು ಮತ್ತು ಶಿವ, ಸೀತೆ ಮತ್ತು ಪಾರ್ವತಿ, ಗಣಪತಿ ಮತ್ತು ಗರುಡ, ಕಾವ್ಯ ಮತ್ತು ಸರಸ್ವತಿ, ರಾಮ ಮತ್ತು ಬ್ರಹ್ಮ, ಹನುಮಂತ ಮತ್ತು ಷಣ್ಮುಖ ಹಾಗೂ ವಾಯು ಮತ್ತು ಮನ್ಮಥರನ್ನು ಶ್ಲೇಷೆಯಿಂದ ಸ್ತುತಿಸುವ ಈ ಪದ್ಯಗಳು

ಕ್ಲಿಷ್ಟವಾಗಿಯೂ ಕವಿಯ ಪಾಂಡಿತ್ಯಪ್ರೀತಿಗೆ ನಿದರ್ಶನಗಳು. ಅವುಗಳ ಅರ್ಥಾನುಸಂಧಾನಕ್ಕೆ ಇಲ್ಲಿ ನೀಡಿದ ಹೊಸಗನ್ನಡದ ತಾತ್ಪರ್ಯ ಸಹಕಾರಿಯಾಗಿದೆ. ಹಾಗೆಯೇ ಅರ್ಥಸಮ ಯಮಕಾಲಂಕಾರದ ಪದ್ಯದ ಅರ್ಥ, ವ್ಯಾಜಸ್ತುತಿಯ ವಿಶೇಷತೆ, ಕವಿಗಿರಬೇಕಾದ ವಿಶೇಷಲಕ್ಷಣಗಳು ಮುಂತಾದ ವಿವರಗಳು ಸರಳವಾಗಿ ಮೂಡಿಬಂದಿವೆ.

'ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಂ' ಎಂಬಂತೆ ಮುದ್ದಣನ ಬಹುಶ್ರುತತೆಯನ್ನು ತಿಳಿಯಲು ಬಹುಶ್ರುತವಿದ್ವಾಂಸರಿಗೆ ಮಾತ್ರ ಸಾಧ್ಯ. ಕವಿಯು ಬಳಸಿದ ಕಾಳಿದಾಸನ 'ಉದ್ಬಾಹುರಿವ ವಾಮನಃ' ಎಂಬ ರಘುವಂಶದ ಪ್ರಸಿದ್ಧ ಶ್ಲೋಕದ ಅನುವಾದ ಪದ್ಯ, ಶಬ್ದಮಣಿ ದರ್ಪಣದ ೩೪೩ನೆಯ ಸೂತ್ರಕ್ಕೊಪ್ಪುವ 'ಇಂತೆನಲ್ಕೆನ್ನ ಕಾವ್ಯಂ' ಎಂಬಲ್ಲಿರುವ ನಿಷೇಧಾರ್ಥಕ ಪ್ರಯೋಗ, ರತ್ನಾವಳಿ, ವಿರೋಧಾಭಾಸ ಮುಂತಾದ ಅಲಂಕಾರಗಳ ವಿವರಣೆ ಸಂಪಾದಕರ ಪಾಂಡಿತ್ಯವನ್ನು ಸೂಚಿಸುತ್ತದೆ. ಸಂಪಾದಕರು ತುಂಬಾ ಶ್ರಮವಹಿಸಿ ಇದಕ್ಕೆ ತಾತ್ಪರ್ಯವನ್ನು ನೀಡುವುದರ ಜೊತೆಗೆ ಅಲ್ಲಲ್ಲಿ ಕೆಲವು ಸಂದೇಹಗಳು ಬಂದಾಗ ಪ್ರಾಂಜಲ ಮನಸ್ಸಿನಿಂದ ಅವುಗಳನ್ನು ಹೇಳಿಕೊಂಡಿರುವುದು ಹಿರಿಯ ಸಂಶೋಧಕರ ವಿನಯವೆಂಬುದನ್ನು ಗಮನಿಸಬೇಕು. ಉದಾಹರಣೆಗೆ – ಸಮುದ್ರವರ್ಣನೆಯ ಸಂದರ್ಭದಲ್ಲಿ 'ಭಂಗಸಂಗ' ಎಂಬ ಪದಪ್ರಯೋಗದಲ್ಲಿ ವಿಶೇಷಚಮತ್ಕಾರವಿದೆಯೇ ಪರಿಶೀಲಿಸಬಹುದು.

(ಪದ್ಯ ೩– ೩೦), ಮಹಿರಾವಣ – ಐರಾವಣ ಎಂಬ ಎರಡು ಶಬ್ದಗಳ ಬಗ್ಗೆ ತೀವ್ರವಾದ ಶೋಧನೆ ನಡೆಯಬೇಕು (ಪದ್ಯ ೩–೩೩) ಬಾಯ್ಗೂಡು ಎಂಬ ಕ್ರಿಯಾಪದವಿದೆ, ಬಾಯ್ಗೊಡು ಎಂಬುದಕ್ಕೂ ಅದೇ ಅರ್ಥವಿರಬೇಕೆಂದು ಊಹಿಸಿ ಬರೆದಿದೆ, ಬೇರೆ ಅರ್ಥವಿದೆಯೇ ಪರಿಶೀಲಿಸಬೇಕು (ಪದ್ಯ ೩–೪೬) ಇತ್ಯಾದಿ.

ಶ್ರೀರಾಮನಿಗೆ ಪಟ್ಟಾಭಿಷೇಕವಾದಾಗ ದೇವೇಂದ್ರ, ಬ್ರಹ್ಮ, ಶಿವನೇ ಮೊದಲಾದವರು ಸಂತೋಷತುಂದಿಲರಾಗುತ್ತಾರೆ. ಬ್ರಹ್ಮನಂತೂ ರಾವಣನ ಆಸ್ಥಾನದಲ್ಲಿ ಜೋಯಿಸಿಗವೃತ್ತಿಯಿಂದ ತನಗೆ ವಿಮುಕ್ತಿಯಾಯಿತೆಂದು ನೆಮ್ಮದಿಯ ನಿಟ್ಟುಸಿರು ಬಿಡುತ್ತಾನೆ. ಏನಾದರೂ ಅನಿಷ್ಟಪ್ರಾಪ್ತಿಯಾದರೆ ಮುತ್ತಜ್ಜನು ಕೆಟ್ಟ ಮುಹೂರ್ತವನ್ನು ಸೂಚಿಸಿದನೆಂದು ರಾವಣನು ಹತ್ತುಬಾಯಿತೆರೆದು ಹಲ್ಲುಕಡಿದು ಘರ್ಜಿಸುತ್ತಿದ್ದನಂತೆ ! (ಪದ್ಯ ೫–೮೪) ಆ ಸಂದರ್ಭದ ತಾತ್ಪರ್ಯದಲ್ಲಿ 'ಸತ್ತಳಿದು ಮಣ್ಗೆ ಕೂಡಿದನಕಟ' ಎಂಬುದಕ್ಕೆ 'ಧೂಳಿನಲ್ಲಿ ಹೊರಳಾಡಿಸುತ್ತಿದ್ದನು' ಎಂದು ಅರ್ಥೈಸಲಾಗಿದೆ. ಇದರ ಬದಲು ಅಂತಹ ರಾವಣನು 'ಸತ್ತು ಮಣ್ಣುಸೇರಿದನು' ಎಂದು ಹೇಳಿದ್ದರೆ ಅರ್ಥಪೂರ್ಣವಾಗುತ್ತಿತ್ತು ಎಂದು ಕಾಣುತ್ತದೆ.

### ಅದ್ಭುತರಾಮಾಯಣಂ ಮತ್ತು ಶ್ರೀ ರಾಮಾಶ್ವಮೇಧಂ

ಮುದ್ದಣನ 'ಅದ್ಭುತರಾಮಾಯಣಂ' ಕಾವ್ಯವನ್ನು ಹಳಗನ್ನಡಕ್ಕೆ ಬಾಲಬೋಧೆ ಎಂದು ಪರಿಗಣಿಸಲಾಗಿದೆ. ಸಂಸ್ಕೃತದಲ್ಲಿರುವ ಕಥೆಯನ್ನು ಕನ್ನಡಕ್ಕೆ ಅನುವಾದಿಸದೆ, ಸ್ವಂತಿಕೆಯಿಂದ ರಚಿಸಿದುದು ಇದರ ಹಿರಿಮೆ. ಇಪ್ಪತ್ತೇಳು ಸರ್ಗಗಳಲ್ಲಿರುವ ಅದ್ಭುತವೆನಿಸುವ ಕಥಾಹಂದರವನ್ನು ಸಂಗ್ರಹವಾಗಿ ಹೇಳಿದುದರಲ್ಲಿಯೇ ಮುದ್ದಣನ

ವಿಶೇಷ ಪ್ರತಿಭೆ ಇದೆ. ಸಂಭಾಷಣಕೌಶಲದಿಂದ, ಸ್ವೋಪಜ್ಞವರ್ಣನೆಗಳಿಂದ ಅದ್ಭುತ ರಾಮಾಯಣಕ್ಕೆ ಕನ್ನಡಕಾವ್ಯಪಂಕ್ತಿಯಲ್ಲಿ ವಿಶಿಷ್ಟಸ್ಥಾನವು ಪ್ರಾಪ್ತಿಯಾಗಿದೆ.

ಇನ್ನು ರಾಮಾಶ್ವಮೇಧಂ ಕೂಡಾ ಪದ್ಮಪುರಾಣದ ಪಾತಾಳಖಂಡದ ಸುದೀರ್ಘಕಥೆ. ಇದನ್ನೂ ಮುದ್ದಣ ಸಂಗ್ರಹವಾಗಿ ಹೇಳುವ ಜಾಣ್ಮೆ ತೋರಿದ್ದಾನೆ. ಲಕ್ಷ್ಮೀಶನ ಜೈಮಿನಿಭಾರತವನ್ನೂ ಅಭ್ಯಾಸಮಾಡಿದ ಕವಿ ಅಲ್ಲಿರುವ ದೋಷಗಳನ್ನು ಕೈಬಿಟ್ಟು ಸೃಜನಶೀಲತೆಯನ್ನು ಮೆರೆದಿದ್ದಾನೆ. ಮುದ್ದಣಭಂಡಾರದ ಎರಡನೇ ಸಂಪುಟದಲ್ಲಿರುವ ಈ ಎರಡುಕಾವ್ಯಗಳ ಇಂತಹ ಅನೇಕ ವೈಶಿಷ್ಟ್ಯಗಳ ಬಗ್ಗೆ ಸಂಪಾದಕರು ಪ್ರಸ್ತಾವನೆಯಲ್ಲಿ ಓದುಗರ ಗಮನಸೆಳೆದಿರುವುದು ವಿಶೇಷವಾಗಿದೆ. ಮುದ್ದಣ ಮನೋರಮೆಯರ ಸಂವಾದದ ಸ್ವಾರಸ್ಯವನ್ನು ಹೇಳುವುದರೊಂದಿಗೆ ಒಂದೆರಡು ಅನೌಚಿತ್ಯಗಳನ್ನೂ ಬೆಟ್ಟುಮಾಡಿ ತೋರಿಸಿದ್ದಾರೆ. ಇದು ನಿಜವಾಗಿಯೂ ಸಂಪಾದಕರ ವಿಮರ್ಶನಪ್ರಜ್ಞೆಗೆ ಸಾಕ್ಷಿ.

ಕನ್ನಡಗ್ರಂಥಸಂಪಾದನೆಯ ಇತಿಹಾಸದಲ್ಲಿ ಮುದ್ದಣಭಂಡಾರದ ಈ ಎರಡನೆಯ ಸಂಪುಟಕ್ಕೆ ವಿಶೇಷವಾದ ಮನ್ನಣೆಯಿದೆ. ಅದೇನೆಂದರೆ ಇಲ್ಲಿರುವ ಪಾಠವು ಮುದ್ದಣಕವಿಯ ಸ್ವಹಸ್ತಪ್ರತಿಯನ್ನೇ ಯಥಾವತ್ತಾಗಿ ಆಧರಿಸಿರುವಂತಹುದು. ಕರ್ಣಾಟಕ ಕಾವ್ಯಕಲಾನಿಧಿಯ ಮಾಲೆಯಲ್ಲಿ ಮುದ್ದಣನ ರಾಮಾಶ್ವಮೇಧ ಕಾವ್ಯವನ್ನು ಪ್ರಕಟಿಸುವಾಗ ಅದರ ಸಂಪಾದಕರಾಗಿದ್ದ ದಿ. ಎಸ್. ಜಿ. ನರಸಿಂಹಾಚಾರ್ಯರೂ, ದಿ. ಎಂ. ಎ. ರಾಮಾನುಜೈಯಂಗಾರ್ಯರೂ ಅನೇಕ ತಿದ್ದುಪಡಿಗಳನ್ನು ಮಾಡಿದ್ದರು. ಇನ್ನು ಕೆಲವೆಡೆ ಗ್ರಂಥಭಾಗಗಳನ್ನೇ ಅಶ್ಲೀಲವೆಂದೂ, ಅನಗತ್ಯವೆಂದೂ ಕೈಬಿಟ್ಟಿದ್ದರು. ಆದರೆ ಅದೃಷ್ಟವಶಾತ್ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕವಿಯ ಸ್ವಹಸ್ತಪ್ರತಿಯಲ್ಲಿರುವ 'ರಾಮಾಶ್ವಮೇಧಂ' ಕಾವ್ಯ ಸಂಪಾದಕರಿಗೆ ದೊರೆ-ಯಿತು. ಅದನ್ನು ಆಧಾರವಾಗಿಟ್ಟುಕೊಂಡೇ ಇಲ್ಲಿ ಮೂಲಪಾಠವನ್ನು ನೀಡಿರುವುದು ಪ್ರಶಂಸನೀಯವಾಗಿದೆ. ಕಾವ್ಯ ಕಲಾನಿಧಿ ಪ್ರಕಟಣೆಯಲ್ಲಿ ಬಿಟ್ಟ ಭಾಗವನ್ನೂ ಇಲ್ಲಿ ಸೇರಿಸಲಾಗಿದೆ. ಕವಿಯು ಅಶುದ್ಧರೂಪಗಳನ್ನು ಬಳಸಿದ ಕಡೆ ಕಂಸಗಳಲ್ಲಿ ಸರಿಯಾದ ಶಬ್ದಸ್ವರೂಪವನ್ನು ನೀಡಲಾಗಿದೆ. ಹೀಗೆ ಇದೊಂದು ನಿಜವಾದ ಅರ್ಥದಲ್ಲಿ ಕಾವ್ಯಶಾಸ್ತ್ರಗಳೆರಡೂ ಸಂಲಗ್ನಗೊಂಡ ಕನ್ನಡದ ಅನರ್ಘ್ಯನುಡಿಭಂಡಾರ ಎನಿಸಿದೆ.

ಎರಡೂ ಕಾವ್ಯಗಳ ಹೊಸಗನ್ನಡ ಅನುವಾದದಿಂದಾಗಿ ಸಾಮಾನ್ಯ ಓದುಗರೂ ಮುದ್ದಣನ ಕಾವ್ಯಸೌಂದರ್ಯವನ್ನು ಆಸ್ವಾದಿಸಲು ಸಾಧ್ಯವಾಗಿದೆ. ಮುದ್ದಣನು ಬಳಸಿದ ಕೆಲವು ಶಬ್ದಗಳ ಬಗೆಗಿನ ಜಿಜ್ಞಾಸೆ, ಕವಿಯ ವಾಕ್ಯಪ್ರಯೋಗಗಳ ಮೇಲಿನ ಪ್ರಭಾವಪರಿಶೀಲನೆ, 'ಕನ್ನಡಂ ಕತ್ತುರಿಯಲ್ತೆ' ಎಂಬ ಪದಸಮುಚ್ಚಯಕ್ಕೆ ನೀಡಲಾದ ಆವರಣ ಚಿಹ್ನೆಯಿಂದಾಗಿ ಅದರ ಕರ್ತೃತ್ವದ ಸಂದೇಹ, ಸಂಪ್ರದಾಯದ ಹಾಡುಗಳಲ್ಲಿ ಕಾಣದಾದ ಮುದ್ದಣತನ – ಹೀಗೆ ಮುದ್ದಣನ ಕಾವ್ಯಪ್ರವೇಶಕ್ಕೆ ಬೇಕಾದ ಎಲ್ಲ ಪೂರ್ವಸಿದ್ಧತೆಗಳು ಈ ಸಂಪುಟದಲ್ಲಿ ಕಂಡುಬರುತ್ತದೆ. ಜೋಗುಳ ಕುರಿತಾದ ಮುದ್ದಣನ ಲೇಖನವೊಂದನ್ನು ಇಲ್ಲಿ ಸೇರ್ಪಡೆಗೊಳಿಸಿರುವುದರಿಂದ ಅವನು ಶಬ್ದಾರ್ಥಜಿಜ್ಞಾಸೆಯ ಕಡೆಗೆ ಒಲವನ್ನು ಹೊಂದಿದ್ದನೆಂಬುದೂ ಸ್ಪಷ್ಟವಾಗುತ್ತದೆ.

ಕನ್ನಡಸಾಹಿತ್ಯದಲ್ಲಿ ಮುದ್ದಣಕವಿ ಹಳತು ಮತ್ತು ಹೊಸತುಗಳ ಮಧ್ಯಮಣಿ. ಅವನ ಭಾಷಾಪ್ರಯೋಗ, ಕಾವ್ಯತಂತ್ರ, ಜೀವನದ ವಿವರ ಪ್ರತಿಯೊಂದು ಕುತೂಹಲದ ಗಂಡಾಂತರ ಪಯಣ. ಆ ಕುರಿತ ಇನ್ನಷ್ಟು ವಿಶ್ಲೇಷಣೆಗೆ ಇಂಬು ನೀಡುವಂತೆ ಮುದ್ದಣಭಂಡಾರದ ಎರಡು ಸಂಪುಟಗಳನ್ನು ಪ್ರೊ. ಜಿ. ವೆಂಕಟ-ಸುಬ್ಬಯ್ಯನವರು ಸಂಪಾದಿಸಿಕೊಟ್ಟಿದ್ದಾರೆ. ಕವಿಯ ಮೇಲಿನ ಪ್ರೀತಿಯಿಂದ ಅದಕ್ಕೂ ಮಿಗಿಲಾಗಿ ಕನ್ನಡದ ಮೇಲಿನ ಅಭಿಮಾನದಿಂದ ಇಷ್ಟು ದೊಡ್ಡ ಸಾಹಸವನ್ನು ಮೆರೆದ ಪ್ರೊ. ಜಿ. ವೆಂ. ಅವರಿಗೆ ಕನ್ನಡ ಸಾರಸ್ವತ ಲೋಕ ಸದಾ ಕೃತಜ್ಞವಾಗಿರುತ್ತದೆ.



---

ಭಾರತದಲ್ಲಿ ಭಾಷೆಯನ್ನು ಕುರಿತ ವ್ಯಾಸಂಗವು ಬಹು ಪ್ರಾಚೀನಕಾಲದಿಂದಲೂ ನಡೆದುಬಂದಿದೆ. ವೇದಗಳ ಕಾಲದಿಂದಲೇ ಭಾಷೆಯ ಅಧ್ಯಯನ ಮೊದಲಾಯಿತೆನ್ನಬೇಕು. ವೈದಿಕನಿಘಂಟು ವೇದಗಳಲ್ಲಿ ಬರುವ ಕ್ಲಿಷ್ಟಶಬ್ದಗಳ ಅರ್ಥವನ್ನು ವಿವರಿಸುತ್ತದೆ. ಯಾಸ್ಕನು ತನ್ನ ನಿರುಕ್ತದಲ್ಲಿ ಶಬ್ದಗಳ ವ್ಯುತ್ಪತ್ತಿಯನ್ನು ನಿರ್ಧರಿಸಲು ಪ್ರಯತ್ನಪಟ್ಟಿದ್ದಾನೆ. ಸಂಸ್ಕೃತವೇ ನಮ್ಮ ದೇಶದ ಅತಿಪ್ರಾಚೀನವಾದ ಭಾಷೆಯಾದುದರಿಂದ ಅದರ ಪ್ರಭಾವವು ಇತರ ಎಲ್ಲ ಭಾಷೆಗಳ ಮೇಲೆ ಅಗಾಧವಾಗಿ ಆಗಿದೆ. ಆದುದರಿಂದ ಕನ್ನಡ ಮುಂತಾದ ದೇಶಭಾಷೆಗಳ ವಿದ್ವಾಂಸರು ಆಯಾ ಭಾಷೆಗಳ ವ್ಯಾಕರಣವನ್ನು ರಚಿಸುವಾಗ ಸಂಸ್ಕೃತದ ವ್ಯಾಕರಣದ ವಿಧಾನವನ್ನೇ ಅನುಸರಿಸಿದರು. ಅಷ್ಟೇ ಅಲ್ಲ, ಎಲ್ಲ ಭಾಷೆಗಳೂ ಸಂಸ್ಕೃತಜನ್ಯವಾದ ಭಾಷೆಗಳು ಎಂದು ತೀರ್ಮಾನಿಸಿಬಿಟ್ಟರು. ಕೆಲವರು ಕನ್ನಡದ ವ್ಯಾಕರಣಕಾರರು ಕನ್ನಡ ವ್ಯಾಕರಣವನ್ನು ಸಂಸ್ಕೃತಭಾಷೆಯಲ್ಲಿಯೇ ರಚಿಸಿದರು.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

# ಹೊಯ್ಸಳ ಕರ್ನಾಟಕ ಸಂಘದ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ; ಹೊಯ್ಸಳ ಮಾಲೆಯ ಕೃತಿಗಳು

ಡಾ. ಡಿ. ಆರ್. ಪಾಂಡುರಂಗ

## ಹೊಯ್ಸಳ ಕರ್ನಾಟಕ ಸಂಘದ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ

ಹೊಯ್ಸಳ ಕರ್ನಾಟಕ ಸಂಘವು ತನ್ನ ಸುವರ್ಣಮಹೋತ್ಸವ ಸಂದರ್ಭದಲ್ಲಿ ಸ್ಮರಣಸಂಚಿಕೆಯೊಂದನ್ನು ಸಂಪಾದಿಸುವ ಜವಾಬ್ದಾರಿಯನ್ನು ಪ್ರೊ ಜಿ. ವಿ. ಅವರಿಗೆ ನೀಡಿತ್ತು. 1995 ಮಾರ್ಚ್ 5 ಕ್ಕೆ ಸಂಘದ ಉತ್ಸವವಾದ್ದರಿಂದ ಆದಿನ ಸಂಚಿಕೆ ಹೊರತರುವ ತುರ್ತು ಇದ್ದುದರಿಂದ ಕೆಲವೇ ದಿನಗಳಲ್ಲಿ ಈ ಸಂಚಿಕೆಯನ್ನು ಪ್ರೊ. ಜಿ. ವೆಂಕಟಸುಬ್ಬಯ್ಯ ಹೊರತರಬೇಕದ್ದರಿಂದ ಈ ಹೊಯ್ಸಳ ಕರ್ನಾಟಕ ಬ್ರಾಹ್ಮಣರ ವಿಚಾರವಾಗಿ ಆರುಪುಟಗಳ ಲೇಖನವೊಂದನ್ನು ಬರೆದು ಪ್ರೊ. ಜಿ. ವಿ ಯವರಿಗೆ ಕಳಿಸಿದ್ದೆ. ಅವರು ಆ ಲೇಖನ ಪರಿಶೀಲಿಸಿ ಉತ್ತಮವಾದ ಈ ಕೆಲವು ಅಂಶಗಳನ್ನು ದಾಖಲಿಸಿದರು ಈ ಬ್ರಾಹ್ಮಣರ ವೈಶಿಷ್ಟ್ಯ. ಐತಿಹಾಸಿಕ ಹಿನ್ನೆಲೆ, ಸಳನ ಕಥೆ, ಇವರು ವಾಸಿಸುವ ಪ್ರದೇಶಗಳು ಮತ್ತು ಈ ಪಂಗಡದ ಬಗ್ಗೆ ವಿದ್ವಾಂಸರ ವಿಚಾರಗಳು, ಬ್ರಾಹ್ಮಣ ಪಂಗಡಗಳೊಡನೆ ಇವರಿಗಿರುವ ಸಂಬಂಧ, ಒಳಪಂಗಡ, ಬ್ರಾಹ್ಮಣಕರ್ಮ–ಗಳು, ಆರಾಧನೆ–ಉಪಾಸನೆ, ಹಬ್ಬಹರಿದಿನ ಇಂದಿನ ಸ್ಥಿತಿಗತಿ ಮುಂತಾದ ವಿಚಾರಗಳನ್ನು ಪರಿಷ್ಕರಿಸಿ ಮುದ್ರಿಸಿದರು.

ಈ ಸಂಚಿಕೆಗೆ ಬರೆದ 'ಸಂಪಾದಕನ ಬಿನ್ನಹ' ಎಂಬ ಲೇಖನದಲ್ಲಿ ಈ ಸಂಘ ಮೈಸೂರಿನಲ್ಲಿ 1943ರಲ್ಲಿ ಪ್ರಾರಂಭವಾದ ಕಾಲ, ಆ ದಿನದ ತೀರ್ಮಾನಗಳು ಬೆಂಗಳೂರು ಶಾಖೆ ಪ್ರಾರಂಭವಾದುದು 1944ರಲ್ಲಿ, ಅನಂತರ 1969ರಲ್ಲಿ ಈ ಸಂಘದ ರಜತ ಮಹೋತ್ಸವ ಮುಂತಾದ ವಿವರಗಳನ್ನು ಪ್ರಸ್ತಾವಿಸಿದ್ದಾರೆ. ಈ ಪಂಗಡದ ಬಗ್ಗೆ ತಿಳಿಸುತ್ತಾ '1943ನೆಯ ಇಸವಿ ತನಕ ನಮ್ಮ ಬಾಂಧವರಲ್ಲಿ ಹಿಂದಿನ ಮುಂದಾಳುಗಳು ಯಾವ ಪ್ರಯತ್ನವನ್ನು ಮಾಡಲಿಲ್ಲ ಎಂದು ನಿರ್ಧಾರವಾಗಿ ಹೇಳುವಂತಿಲ್ಲ. 1890ರ ಸುಮಾರಿನಲ್ಲಿ ಈ ಬಗ್ಗೆ ನಮ್ಮ ಹಿಂದಿನ ಹಿರಿಯರು

ಮಾಡಿದ ಪ್ರಯತ್ನವೂ ಫಲದಾಯಕವಾಗುವಂತೆ ಕಂಡಾಗ ಮೈಸೂರು ದೇಶದ ಅನೇಕ ಕಡೆಗಳಲ್ಲಿ ಪ್ಲೇಗಿನ ಉಪದ್ರವ ಉಂಟಾಗಿ ಅನೇಕ ಸಾವು ನೋವುಗಳುಂಟಾದವು. ಅದರ ಆಘಾತದಿಂದ ಎಚ್ಚೆತ್ತು ಕೊಳ್ಳಬೇಕಾದರೆ ಸುಮಾರು ಇಪ್ಪತ್ತು ವರ್ಷಗಳೇ ಬೇಕಾದವು' ಎಂಬ ಮಾಹಿತಿ ನೀಡಿರುತ್ತಾರೆ.

1908 ನೆಯ ಇಸವಿ ಎಪ್ರಿಲ್ 19, 20 ನೇ ತಾರೀಖುಗಳಲ್ಲಿ "ಹೊಯ್ಸಳ ಕರ್ನಾಟಕ ಮಹಾಸಭೆ" ಎಂಬ ಹೆಸರಿನಲ್ಲಿ ಸಮ್ಮೇಳನ ನಡೆಯಿತು. ಅದರ ಅಧ್ಯಕ್ಷತೆಗೆ ಶಿವಮೊಗ್ಗದ ಎಸ್. ಸೀತಾರಾಮಯ್ಯ ಅವರನ್ನು ಆರಿಸಲಾಗಿತ್ತು. ಪ್ರೊ. ಜಿ. ವಿ. ಅವರು, ಆ ಸಭೆಯಲ್ಲಿ ಮಂಗಳಾಚರಣೆ ಪದ್ಯ ರಚಿಸಿ ಹಾಡಿದ ಮೈಸೂರಿನ ಆಸ್ಥಾನ ವಿದ್ವಾಂಸ ರಾಮಾಶಾಸ್ತ್ರಿಗಳ ಶ್ಲೋಕವೊಂದನ್ನು ಉಲ್ಲೇಖಿಸಿದ್ದರು. ಆ ಶ್ಲೋಕ ಹೊಯ್ಸಳ ಬ್ರಾಹ್ಮಣರ ಹಿಂದಿನ ಹೆಸರು ಮತ್ತು ಖ್ಯಾತಿಯನ್ನು ತಿಳಿಸುತ್ತವೆ. ಆ ಶ್ಲೋಕ ಹೀಗಿದೆ–

ಉದ್ದೇಶಾದ್ಯತ ಏತ್ಯ 'ಹೌಸಣಿಗ' ಕರ್ಣಾಟಾನ್ಮಯೋದ್ಧಾರಿಣಃ
ಶ್ರೀಮಂತೋ ಮಿಳಿತಾಃ ಪ್ರಸಿದ್ಧ ಯಶಸಸ್ಸರ್ವೇ ಸಭಾಯಾಮಿಹ
ಉದ್ದೇಶಸ್ಸ ಯಥಾಭವೇನ್ನಿಜ ಕುಲೋಚ್ಛ್ರಾಯಾರ್ಥಿನಾಂ ಸಾರ್ಥಕಃ
ಕಾರುಣ್ಯೇನ ತಥಾನುಗೃಹ್ಯ ಭಗವಾನವ್ಯಾಧ್ವಿಭುಃ ಶ್ರೀ ಹರಿಃ

–ಇದೊಂದು ಉಲ್ಲೇಖನೀಯ ಶ್ಲೋಕ.

ಈ ಸಭೆಯ ಹಿರಿಯರು ಆಡಿದ ಮಾತುಗಳಂತೆ "ದೈವಭಕ್ತಿಯೂ ಸಮಾಜ ಸೇವಾಶಕ್ತಿಯೂ ಸಮಾನವಾಗಿ ಮಿಶ್ರಣಗೊಂಡಿದ್ದು ಇಂದಿಗೂ ನಮಗೆ ಆದರ್ಶ–ವಾಗಿರುವುದು ಕಾಣಬರುತ್ತದೆ." ಆಗಿನ ಹೊಯ್ಸಳ ಕರ್ನಾಟಕ ಜನಸಂಖ್ಯೆಯ ವಿವರ ನೀಡುತ್ತಾ 1891ನೇ ಜನಗಣತಿ ಪ್ರಕಾರ ಬೆಂಗಳೂರು ಜಿಲ್ಲೆ ೯೨೩, ಕೋಲಾರ ೭೯, ತುಮಕೂರು ೧೪೬೬, ಮೈಸೂರು ೨೮೬೬, ಹಾಸನ ೧೮೬೭, ಶಿವಮೊಗ್ಗ ೧೨೨, ಚಿಕ್ಕಮಗಳೂರು ೯೮೨, ಚಿತ್ರದುರ್ಗ ೨೩, ಒಟ್ಟು ೮೩೨೮ ಇದರಲ್ಲಿ ೪೧೨೧ ಜನ ಗಂಡಸರು ೪೨೦೭ ಜನ ಹೆಂಗಸರು. ಇವಲ್ಲದೆ ದಕ್ಷಿಣಕನ್ನಡಜಿಲ್ಲೆಯಲ್ಲಿ ಸುಮಾರು ೪೦೦ ಜನಗಳು, ಕುಂಭಕೋಣದಲ್ಲಿ ೬೦೦ ಜನಗಳೂ ಇದ್ದರು. ಇದು ಆ ಕಾಲದ ಹೊಯ್ಸಳ ಬ್ರಾಹ್ಮಣರ ಬಾಹುಳ್ಯವನ್ನು ಮತ್ತು ಪ್ರಸರಣವನ್ನು ತಿಳಿಸುವ ದಾಖಲೆ–ಯಾಗಿದೆ.

ಮುಂದೆ ಈ ಸಂಘದ ಚಟುವಟಿಕೆಗಳು ಅಲಭ್ಯ. ಆದರೆ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ಕಾರ್ಯಕ್ರಮಗಳನ್ನು ಸಂಘದಲ್ಲಿ ಹಮ್ಮಿಕೊಳ್ಳಲಾಗುತ್ತಿತ್ತು. ವಿದ್ಯಾ–ಭ್ಯಾಸಕ್ಕೂ ಸಂಪೂರ್ಣ ಮಹತ್ತ್ವ ನೀಡಬೇಕೆಂಬ ಸಲಹೆಯನ್ನು ಪ್ರೊ. ಜಿ. ವಿ. ತಮ್ಮ ಸಂಪಾದಕೀಯದಲ್ಲಿ ತಿಳಿಸಿದ್ದಾರೆ. ಅವರು ಹೇಳುವಂತೆ 'ನಮ್ಮ ಬಾಂಧವರಲ್ಲಿ ವಿದ್ಯಾವಂತನಲ್ಲದ ಒಬ್ಬ ಯುವಕನೂ, ವಿದ್ಯಾವತಿಯಲ್ಲದ ಒಬ್ಬ ಯುವತಿಯೂ ಇರಬಾರದು' ಎಂಬುದು ಇವರ ಆಶಯ. ಈ ಅಂಶ ಬಹುತೇಕ ಇಂದು ವಾಸ್ತವವಾಗಿದೆ.

ಈ ಸಂಚಿಕೆಯಲ್ಲಿ ಶ್ರೀ ಎ. ಕೃಷ್ಣ ರಾಯರು ಅಡ್ವೊಕೇಟ್ ಅವರು ಮಾಡಿದ ಪೂರ್ಣಭಾಷಣವನ್ನು ದಾಖಲಿಸಿದ್ದಾರೆ. ಅದು ಆರುಪುಟಗಳಷ್ಟು ದೀರ್ಘವಾಗಿದೆ. ಸಂಚಿಕೆಯಲ್ಲಿ 'ಐವತ್ತರ ಐಸಿರಿ – ಒಂದು ವರದಿ' ಎಂಬ ಬಿ. ಎಸ್. ಅನಂತನಾರಾಯಣರು ನೀಡಿದ ಮಾಹಿತಿ, ಚಾರಿತ್ರಿಕ ಹಿನ್ನೆಲೆ ಮತ್ತು ಹಿಂದಿನ ಕಾಲದ ಹೊಯ್ಸಳ ಕರ್ನಾಟಕ ಪಂಗಡದ ಮುಂದಾಳುಗಳ ವಿವರವನ್ನೊಳಗೊಂಡ ಲೇಖನ ನಾಲ್ಕುಪುಟಗಳು, ಆ ಕಾಲದ ಈ ಪಂಗಡದ ಸಾಹಿತಿಗಳ ವಿವರಗಳು, ಆ ಕಾಲದಲ್ಲಿ ಹೊಯ್ಸಳ ಕರ್ನಾಟಕ ಬ್ರಾಹ್ಮಣರಲ್ಲಿ ವಿರಾಜಮಾನರಾಗಿದ್ದ ಸಂಸ್ಕೃತ ಸಾಹಿತ್ಯ, ವೇದ ಉಪನಿಷತ್ತು, ತರ್ಕ ಮತ್ತು ವ್ಯಾಕರಣಾದಿ ಶಾಸ್ತ್ರಗಳಲ್ಲಿ ವಿದ್ವಾಂಸ–ರಾದವರ ವಿವರಗಳು, ಎಂಜಿನಿಯರಿಂಗ್ ಹಾಗೂ ವಿಜ್ಞಾನ ಕ್ಷೇತ್ರಗಳಲ್ಲಿ ಹೊಯ್ಸಳ ಬಾಂಧವರ ಕೊಡುಗೆ, ಖ್ಯಾತ ವಿಜ್ಞಾನಿಗಳು ಮಾಡಿದ ಸಾಧನೆ ಮತ್ತು ಪರಿಚಯ, ನಾನಾಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಮಾಜಸೇವೆ ಮಾಡುತ್ತಿದ್ದ ಹೊಯ್ಸಳ ಕರ್ನಾಟಕ ಪಂಗಡದ ಮಹಿಳೆಯರು, ಕ್ರೀಡಾಕ್ಷೇತ್ರದ ಸಾಧಕರು ವೈದ್ಯಕೀಯಕ್ಷೇತ್ರದಲ್ಲಿ ಸೇವೆ, ಸಂಶೋಧನೆ ನಡೆಸುವವರು ಪತ್ರಿಕಾರಂಗದ ಧುರೀಣರು, ವಾಣಿಜ್ಯ ಕೈಗಾರಿಕಾಕ್ಷೇತ್ರದಲ್ಲಿ ತೊಡಗಿಸಿಕೊಂಡು ದೇಶ ಕಟ್ಟುವವರು, ವಕೀಲರು ಕಲಾವಿದರು ಮುಂತಾಗಿ ದಾಖಲಿಸಿದ ವಿವರಗಳನ್ನು ನೀಡಿದ್ದಾರೆ.

ಡಾ. ಪಾಂಡುರಂಗರು ಬರೆದ ಹೊಯ್ಸಳ ಕರ್ನಾಟಕ ಬ್ರಾಹ್ಮಣರು – 'ಸಾಂಸ್ಕೃತಿಕ ಅಧ್ಯಯನ'ಕ್ಕೆ ಪೂರಕವಾಗಿ ಪ್ರೊ. ಜಿ. ವಿ.ಯವರು ಬರೆದಿರುವ ಮುನ್ನುಡಿ ಈ ಪಂಗಡದವರನ್ನು ಕುರಿತ ವಿಶೇಷ ಮಾಹಿತಿಗಳಿಂದ ಕೂಡಿದೆ. 2010ರಲ್ಲಿ ಡಾ. ಪಾಂಡುರಂಗ ಅವರು ಸಂಪಾದಿಸಿದ ಲಕ್ಷ್ಮೀಶನ ಜೈಮಿನಿಭಾರತಕ್ಕೆ ಬರೆದ ಮುನ್ನುಡಿ ಸುದೀರ್ಘವಾಗಿದ್ದು ಈ ಕಾವ್ಯಕ್ಕೊಂದು ಮೆರುಗನ್ನು ತಂದಿದೆ. ಈ ಸಂಘದ ಬೆಳ್ಳಿಹಬ್ಬದ ಸಂದರ್ಭದಲ್ಲೂ ಪ್ರೊ. ಜಿ. ವಿ ಅವರ ಸಂಪಾದಕತ್ವದ ಸಂಚಿಕೆ ಹಲವು ಉತ್ಕೃಷ್ಟ ಲೇಖನಗಳ ಸಂಗ್ರಹಕ್ಕೊಂದು ಮಾದರಿಯಂತಿದೆ. ಈ ಸಂಚಿಕೆಗಳ ಸಂಪಾದನೆ ಪ್ರೊ. ಜಿ. ವಿ ತಮ್ಮ ಪಂಗಡದವರ ಬಗ್ಗೆ ಹೊಂದಿರುವ ಕಾಳಜಿಗೆ ಕೈಗನ್ನಡಿಗಳಾಗಿವೆ

ಪ್ರೊ. ಜಿ. ವಿ. ಅವರು ಮುನ್ನಡಿ ಬರೆದ 'ಹೊಯ್ಸಳ ಕರ್ನಾಟಕ ಬ್ರಾಹ್ಮಣರ ಸಾಂಸ್ಕೃತಿಕ ಅಧ್ಯಯನ' ಕೃತಿಯನ್ನು ಪ್ರಕಟಿಸಿದವರು ಬೆಂಗಳೂರಿನ ಹೊಯ್ಸಳ ಕರ್ನಾಟಕ ಸಂಘದವರು. ಈ ಕೃತಿಯನ್ನು ಪರಿಷ್ಕರಿಸಿ ಅದಕ್ಕೆ ಹಲವು ಮಾಹಿತಿ ನೀಡಿದವರೂ ಪ್ರೊ. ಜಿ. ವಿಯವರೇ. ಅವರು ಈ ಪಂಗಡದ ಬಗ್ಗೆ ನೀಡಿದ ಮುಖ ವಿವರಗಳೆಂದರೆ "ಚಾರಿತ್ರಿಕವಾಗಿ ಈ ಪಂಗಡಕ್ಕೆ ಹೊಯ್ಸಳ ಎಂಬ ಹೆಸರು ಏಕೆ ಬಂತು ಎಂಬುದರ ಬಗ್ಗೆಯಾಗಲಿ, ಹೊಯ್ಸಳ ಶಬ್ದದ ಉತ್ಪತ್ತಿಯ ಬಗ್ಗೆಯಾಗಲಿ ನಿರ್ಧಾರವಾಗಿ ನಾವು ಏನೂ ಹೇಳುವಂತಿಲ್ಲ. 12ನೆಯ ಶತಮಾನದ ಶಾಸನಗಳಲ್ಲಿಯೇ 'ಹೊಸಣದೇಶ' ಎಂಬ ಹೆಸರು ದಾಖಲಾಗಿದೆ. ಹೊಯಿಸಣ, ಹೊಯಿಸಣಿಗ, ಎಂಬ ಶಬ್ದಗಳು ಗ್ರಂಥಗಳೆಲ್ಲ ದೊರೆಯುತ್ತವೆ. ಹೊಯ್ಸಣ, ಹೊಯ್ಸಳ ಎಂಬ ಪರ್ಯಾಯರೂಪಗಳು ಭಾಷಾಶಾಸ್ತ್ರದ ದೃಷ್ಟಿಯಿಂದ ಸಾಧುವಾದವು.

ಸಳ ಮತ್ತು ಹುಲಿಯ ಕಥೆ ಸಂಪೂರ್ಣವಾಗಿ ಕಲ್ಪಿತವಾದುದು. ಶಿಲ್ಪದಲ್ಲಿ ಇಂಥ ಕಥೆಗೆ ಆಧಾರ ದೊರೆಯುವುದಾದರೂ ಆ ಶಿಲ್ಪ ಕೂಡ ಈ ಕಥೆ ಕಲ್ಪಿತವಾದ ಮೇಲೆ ಕೆತ್ತಲ್ಪಟ್ಟದ್ದು. ಆದುದರಿಂದ ಹೊಯ್ಸಳ ಎಂಬ ಶಬ್ದದ ಮುಂದೆ ಒಂದು ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿ ಮುಂದಿನ ಮಾತಿಗೆ ತೊಡಗುವುದು ಉಚಿತ.

ಒಂದಾನೊಂದು ಕಾಲದಲ್ಲಿ ದಕ್ಷಿಣದೇಶದ ಬ್ರಾಹ್ಮಣರೆಲ್ಲ ಸ್ಮಾರ್ತ ಮತಸ್ಥರಾಗಿ ಅದ್ವೈತ ಮತಾನುಯಾಯಿಗಳಾಗಿದ್ದುದು ಮಾತ್ರ ಚಾರಿತ್ರಿಕವಿಚಾರ. ಶಂಕರಾಚಾರ್ಯರ ತತ್ತ್ವಪ್ರತಿಪಾದನೆಯಿಯ ಬಳಿಕ ಎಲ್ಲರೂ ಅದ್ವೈತಿಗಳಾಗಿಯೇ ಮುಂದುವರಿದರು. ಆದರೂ ಕೆಲವು ಮನೆತನಗಳಲ್ಲಿ ಕರ್ಮಮೀಮಾಂಸೆಗೆ ಹೆಚ್ಚು ಪ್ರಾಧಾನ್ಯ ದೊರೆತುದೂ ನಮ್ಮ ತಿಳುವಳಿಕೆಗೆ ಬರುತ್ತದೆ.

ಶೃಂಗೇರಿಯ ಮಠದಲ್ಲಿ ವಿದ್ಯಾರಣ್ಯರು ಮಠಾಧಿಪತಿಗಳಾಗಿದ್ದಕಾಲದಿಂದ ಹಿಂದೆಯೇ ಹೊಯ್ಸಳ ಸಾಮ್ರಾಜ್ಯದ ಕಾಲದಲ್ಲಿ ವೈದಿಕವಿದ್ಯೆಯಲ್ಲಿ ಪರಿಣತರಾದ ಅನೇಕ ಮೇಧಾವಿಗಳು ಹೊಯ್ಸಳ ರಾಜ್ಯದ ಬೇರೆ ಬೇರೆ ಭಾಗಗಲ್ಲಿ ನೆಲಸಿ ತಮ್ಮ ತಮ್ಮ ಜೀವನೋಪಾಯಕ್ಕೆ ಮಾರ್ಗಗಳನ್ನು ಕಂಡುಕೊಂಡರು. ಇವರೆಲ್ಲರಿಗೂ ಹೊಯ್ಸಳಕರ್ನಾಟಕ ಎಂಬ ಹೆಸರು ಒಟ್ಟಾಗಿ ಪ್ರಯೋಗವಾಗುತ್ತಾ ಬಂದಿದೆ." ಇಂಥ ಹತ್ತು ಹಲವು ವಿಚಾರಗಳನ್ನು ಪ್ರಸ್ತಾಪಿಸಿರುವ ಮುನ್ನುಡಿ ಮತ್ತು ಈ ಬ್ರಾಹ್ಮಣರ ಅಧ್ಯಯನ ಕೃತಿ ಪ್ರಕಟವಾದದ್ದು 1995ರ ಸಂಘದ ಸುವರ್ಣೋತ್ಸವದ ಸಂದರ್ಭದಲ್ಲಿ ಎಂಬುದು ಗಮನಾರ್ಹ.

## ಹೊಯ್ಸಳ ಮಾಲೆಯ ಕೃತಿಗಳು

ಬೆಂಗಳೂರಿನ ಹೊಯ್ಸಳ ಕರ್ನಾಟಕ ಸಂಘದವರು 'ಹೊಯ್ಸಳ ಕರ್ನಾಟಕ ಬ್ರಾಹ್ಮಣ ಪಂಗಡದಲ್ಲಿ ಅಪೂರ್ವ ಸೇವೆ ಸಲ್ಲಿಸಿ ಕೀರ್ತಿಶೇಷರಾದ ನೂರು ಜನ ವಿವಿಧ ಕ್ಷೇತ್ರದಲ್ಲಿ ದುಡಿದ ವಿದ್ವಾಂಸರು, ವೈದ್ಯರು ಸಾಹಿತಿಗಳು, ವೇದವಿದರು ಮುಂತಾದವರ ವಿವರಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಒಲವು ತೋರಿದವರು. ಇಂಥ ಕೃತಿಗಳ ಸಂಪಾದನೆಗೆ ಅತಿಪ್ರಬುದ್ಧ ವಿದ್ವಾಂಸರಾದ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರನ್ನು ನಮ್ಮ ಹಿರಿಯರ ಸಾಧನೆ ಸಿದ್ಧಿಗಳನ್ನು ಪುಸ್ತಕರೂಪದಲ್ಲಿ ತಂದು ಸಮಾಜಕ್ಕೆ ಉಪಕಾರ ಮಾಡಬೇಕೆಂದು ಸಂಘದ ಪದಾಧಿಕಾರಿಗಳು ವಿನಮ್ರವಾಗಿ ವಿನಂತಿಸಿದರು. ಪ್ರೊ. ಜಿ. ವಿ. ಅವರು ಈ ಕೃತಿಗಳ ಪ್ರಕಟನೆಗೆ ಆಸಕ್ತಿ ತೋರಿದ್ದರಿಂದ 'ಹೊಯ್ಸಳ ಮಾಲೆ' ಯ ಸಂಪಾದಕ ಮಂಡಳಿಯನ್ನು ರಚಿಸಲಾಯಿತು. ಇದರಲ್ಲಿ

೧. ಪ್ರೊ. ಜಿ. ವೆಂಕಟಸುಬ್ಬಯ್ಯ, ಪ್ರಧಾನಸಂಪಾದವರು
೨. ಶ್ರೀ ಗರುಡನಗಿರಿ ನಾಗರಾಜ – ಸದಸ್ಯರು
೩. ಶ್ರೀ ಬಿ. ಜಿ. ಶ್ರೀರಂಗಯ್ಯ
೪. ಶ್ರೀ ಬಿ. ಎಸ್. ಅನಂತನಾರಾಯಣ

೫. ಶ್ರೀಮತಿ ಶಾರದ ಶಾಮಣ್ಣ
೬. ಶ್ರೀ ಎಂ. ವಿ. ಸತ್ಯನಾರಾಯಣ

ಮೊದಲು ಕಿಂಚಿತ್‌ಪೂರ್ವದಲ್ಲಿ ಬದುಕಿದ್ದ ಹಿರಿಯರಲ್ಲಿ ಹತ್ತು ಜನರನ್ನು ಗುರುತಿಸಿ ೬೪ ಪುಟಗಳ ಕಿರುಹೊತ್ತಗೆ ಬರೆಯುವುದು. ಇದನ್ನು ಬರೆದು ಕೊಡುವವರು 'ಸತ್ಯಕ್ಕೆ ಅಪಚಾರವಾಗದ ಹಾಗೆ, ಯಾವ ವಿರೋಧವೂ ಅನುಮಾನ-ಗಳು, ಅತಿ ಪ್ರಚಾರಗಳು, ಅವಮಾನಗಳು ಇಲ್ಲದಂತೆ ಕೃತಿ ಬರಬೇಕು. ಅತಿಶಯೋಕ್ತಿ, ಅತ್ಯುಕ್ತಿಗಳು ಇಲ್ಲದಂತೆ ರಚನೆಯಾಗಬೇಕು. ಬರವಣಿಗೆಯಲ್ಲಿ ಪ್ರಸನ್ನತೆ ಗಾಂಭೀರ್ಯ-ಗಳಿರಬೇಕೆಂಬ' ಕೆಲವು ನಿಯಮಗಳನ್ನು ಪ್ರೊ. ಜಿ. ವಿ. ಲೇಖಕರಿಗೆ ತಿಳಿಸಿ ಪುಸ್ತಕ-ಗಳನ್ನು ಬರೆಯಿಸಿ ಪ್ರೋತ್ಸಾಹಿಸಿದರು.

ಹೊಯ್ಸಳ ಕರ್ನಾಟಕ ಸಂಘದ ಅಧ್ಯಕ್ಷರಾದ ಅರಕೆರೆ ಗೌರಿಶಂಕರ ಅವರು 'ಪ್ರಸಿದ್ಧಿ ಪಡೆದ ಹಿರಿಯ ವ್ಯಕ್ತಿಗಳನ್ನು ನಮ್ಮ ಪೀಳಿಗೆಯವರಿಗೆ ಪರಿಚಯಿಸಿ, ಅವರಿಗೆ ಚೇತನ ಮತ್ತು ಸ್ಫೂರ್ತಿಯನ್ನು ತುಂಬುವುದೇ ಈ ಹೊಯ್ಸಳ ಮಾಲೆಯ ಧ್ಯೇಯ' ಎಂಬುದನ್ನು ಸಮಾಜಕ್ಕೆ ಬರಹರೂಪದಲ್ಲಿ ತಿಳಿಸಿದರು.

ಈ ಹಿನ್ನೆಲೆಯಲ್ಲಿ ರಚನೆಗೊಂಡ ಪುಸ್ತಕಗಳೆಂದರೆ 'ಶಸ್ತ್ರವೈದ್ಯ ಪ್ರವೀಣ ಡಾ. ಎಸ್. ಸುಬ್ಬರಾಯರು', ಎರಡನೇ ಕೃತಿ 'ತೀ. ನಂ. ಶ್ರೀಕಂಠಯ್ಯ' ಹೊಯ್ಸಳ ಮಾಲೆಯ ಮೂರನೇ ಕೃತಿ 'ಆಸ್ಥಾನ ವಿದ್ವಾನ್ ಜ್ಯೋತಿಸ್ಸಿದ್ಧಾಂತ ಕೇಸರಿ ಕೊಳ್ಳೆಗಾಲದ ವೆಂಕಟಸುಬ್ಬಾಶಾಸ್ತ್ರಿಗಳು', ನಾಲ್ಕನೆಯವರು 'ವೈಣಿಕಶಿಖಾಮಣಿ, ವಿ ವೆಂಕಟಗಿರಿಯಪ್ಪ', ಐದನೇ ಕೃತಿ 'ಡಾ. ಕೆ. ಎಸ್. ನರಸಿಂಹಸ್ವಾಮಿ', ಆರನೆಯದು 'ಶಿಕಾರಿಪುರದ ಸೀತಾರಾಮಯ್ಯ', ಏಳನೆಯ ಕೃತಿ 'ಜ್ವಾಲಾಮುಖಿ', ಎಂಟನೆಯ ಹೊತ್ತಗೆ 'ಪ್ರೊ. ಎ. ಎಸ್. ಮೂರ್ತಿರಾಯರ ಪರಿಚಯ'. ಹೀಗೆ ಪ್ರಸ್ತುತ ಎಂಟು ಕೃತಿಗಳು ಪ್ರಕಟವಾದರೂ ಪ್ರೊ. ಜಿ. ವಿ. ಅವರು ತಮ್ಮ ಆಶಯದಂತೆ ನೂರು ಕೃತಿಗಳನ್ನು ಹೊರತರುವ ಬಗೆಗೆ ಸಂಘಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಈ ಕೃತಿಗಳು ಬರಬೇಕಾದಲ್ಲಿ ಒಂದು ಲಕ್ಷ ರೂಪಾಯಿ ದತ್ತಿಯನ್ನು ಠೇವಣಿಯಾಗಿ ಇಡಬೇಕಾಗುತ್ತದೆ. ಆಗ ಸಂಘದ ಆಶಯ ಈಡೇರಲಿದೆ. ಈಗಾಗಲೇ ಹಲವು ದಾನಿಗಳು ಈ ಬಗ್ಗೆ ಆಸಕ್ತಿ ತೋರಿ ತಮ್ಮ ದೇಣಿಗೆ ನೀಡಿದ್ದಾರೆ. ಮೊದಲ ದೇಣಿಗೆ ಹಿಂದಿನ ಅಧ್ಯಕ್ಷರಾದ ಶ್ರೀ ಎಂ. ವಿ. ಸತ್ಯನಾರಾಯಣ ಅವರು ನೀಡಿದ ಪುದವಟ್ಟು ಮತ್ತು ಅವರ ಸಂಚಾಲಕತ್ವ ಗಮನಾರ್ಹ.

ಹೊಯ್ಸಳ ಮಾಲೆಯ ಮೊದಲ ಕೃತಿ ಡಾ. ಸುಬ್ಬರಾಯರನ್ನು ಕುರಿತದ್ದು. ಇದಕ್ಕೆ ಪೂರಕವಾದ ಮಾಹಿತಿಗಳನ್ನು ಬರೆದುಕೊಟ್ಟವರು ಸುಬ್ಬರಾಯರ ಕುಟುಂಬ ವರ್ಗದವರು. ಇದಕ್ಕೆ ಆಕರಕೃತಿಯೆಂದರೆ ಡಿ.ವಿ.ಜಿ.ಯವರು ಬರೆದ ಜ್ಞಾಪಕ ಚಿತ್ರಶಾಲೆಯ 'ಹೃದಯಸಂಪನ್ನರು' ಎಂಬ ಕೃತಿ. ಪ್ರೊ. ಜಿ. ವಿ. ಮಾಹಿತಿಗಳನ್ನು ಕ್ರಮಬದ್ಧವಾಗಿ ನಿರೂಪಿಸಿ ಶಸ್ತ್ರವೈದ್ಯ ಸುಬ್ಬರಾಯರಿಗೆ ನುಡಿನಮನ ಸಲ್ಲಿಸಿದ್ದಾರೆ. ಡಾ. ಸುಬ್ಬರಾಯರ ಜನನ ೨೪-೬-೧೮೮೩. ಇವರ ತಂದೆ ಅಬಕಾರಿ

ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀಕಂಠಯ್ಯನವರು. ಸುಬ್ಬರಾಯರಿಗೆ ಸೇವಾಮನೋಭಾವ ವಂಶಗತವಾಗಿ ಬಂದ ಆದರ್ಶ. ಜನಸೇವೆಯೇ ಜನಾರ್ದನ ಸೇವೆ ಎಂದು ತಿಳಿದವರು. ಅಷ್ಟೇನೂ ಶ್ರೀಮಂತರಲ್ಲದಿದ್ದರೂ ಆ ಕಾಲದಲ್ಲಿ ವೈದ್ಯಕೀಯ ಶಿಕ್ಷಣಕ್ಕೆ ಆದ್ಯತೆ ನೀಡಿದವರು. ಶ್ರೀಕಂಠಯ್ಯ ಅವರ ಕುಟುಂಬದ ವಿವರಗಳನ್ನೂ ಅವರ ಸಾಧನೆಗಳನ್ನೂ ಈ ಕೃತಿಯಲ್ಲಿ ದಾಖಲಿಸಲಾಗಿದೆ.

ಸುಬ್ಬರಾಯರು ಸೆಂಟ್ರಲ್ ಕಾಲೇಜಿನಲ್ಲಿ 1895–1898ರ ವರೆಗೆ ವಿದ್ಯಾಭ್ಯಾಸ ಮಾಡಿ ಬಿ.ಎ. ಪದವೀಧರರಾಗಿ ಚಿನ್ನದ ಪದಕ ಪಡೆದವರು. ಅವರು ಅಧ್ಯಯನ ಮಾಡಲು ಆರಿಸಿಕೊಂಡ ವಿಷಯ ರಸಾಯನಶಾಸ್ತ್ರ, ಗಣಿತಶಾಸ್ತ್ರ, ಭೌತಶಾಸ್ತ್ರಗಳು. ಮುಂದಿನದು ಮೆಡಿಕಲ್ ಕಾಲೇಜಿನ ವ್ಯಾಸಂಗ, 1903–04ರಲ್ಲಿ ವೈದ್ಯಕೀಯ ಪದವಿ. ಇದಕ್ಕೆಲ್ಲಾ ಮಹಾರಾಜ ಜಯಚಾಮರಾಜ ಒಡೆಯರ ಪ್ರೋತ್ಸಾಹ. ಆ ಕಾಲದಲ್ಲಿ 'ವಿದೇಶಯಾತ್ರೆ' ಮಾಡಿದವರಿಗೆ ಬಹಿಷ್ಕಾರವಿತ್ತು. 1908ರಲ್ಲಿ ರಾಯಲ್ ಕಾಲೇಜ್ ಆಫ್ ಸರ್ಜನ್ಸ್‌ನಲ್ಲಿ ಅಧ್ಯಯನ, ಕೇಂಬ್ರಿಡ್ಜ್‌ನಲ್ಲಿ ಡಿ.ಪಿ.ಎಚ್. ಪದವಿ. ಇಂಥ ವೃತ್ತಿಗೆ ಸಂಬಂಧಿಸಿದ ದಾಖಲೆಗಳನ್ನು ಎಲ್ಲ ವಿದ್ಯಾರ್ಥಿಗಳಿಗೆ ಸ್ಫೂರ್ತಿಯಾಗುವಂತೆ ಪ್ರೊ. ಜಿ. ವಿ. ನಿರೂಪಿಸಿದ್ದಾರೆ. 1910ರಿಂದ ಸ್ವದೇಶದಲ್ಲಿ ವೃತ್ತಿಜೀವನ ನಡೆಸಿ ಸಾರ್ಥಕ ಬದುಕನ್ನು ಬಾಳಿದವರು. ಅಲ್ಲದೆ ಸಮಾಜಬಾಂಧವರ ಟೀಕೆಗಳನ್ನು ಸುಬ್ಬರಾಯರು ಸಹಿಸಿಕೊಳ್ಳಬೇಕಾಯಿತು. ಶೃಂಗೇರಿ ಮಠದವರು ಇವರಿಗೆ ವಿದೇಶಕ್ಕೆ ಹೋದ ನೆಲೆಯಲ್ಲಿ ಪ್ರಾಯಶ್ಚಿತ್ತ ಕರ್ಮಗಳನ್ನು ನೆರವೇರಿಸಿದರು. ಅನಂತರ ಕುಟುಂಬ, ಮಕ್ಕಳು, ಪತ್ನಿವಿಯೋಗ, ಪುನರ್ವಿವಾಹ, ಬೇರೆ ಬೇರೆ ಕಡೆ ವೈದ್ಯಾಧಿಕಾರಿಯಾಗಿ ಸಲ್ಲಿಸಿದ ಸೇವೆ ಮುಂತಾದ ವಿವರಗಳನ್ನು ಇಲ್ಲಿ ನೀಡಲಾಗಿದೆ. ಈ ವಿವರಗಳು ಮತ್ತೊಂದು ಪುಸ್ತಕರಚಿಸುವಷ್ಟು ವಿಸ್ತಾರವಾದ ದಾಖಲೆಗಳಾಗಿವೆ. 1937ರಲ್ಲಿ ಜಯಚಾಮರಾಜ ಒಡೆಯರ್ ಜೊತೆಯಲ್ಲಿ ಜಪಾನ್ ಹಾಗೂ ಪೂರ್ವದೇಶಗಳಿಗೆ ಹೋದ ವಿವರಗಳಿವೆ. ನಾಲ್ಮಡಿ ಕೃಷ್ಣರಾಜ ಒಡೆಯರು 'ಶಸ್ತ್ರವೈದ್ಯ ಪ್ರವೀಣ' ಎಂಬ ಬಿರುದುನೀಡಿ ಗೌರವಿಸಿದ್ದಾರೆ. ಗಾಂಧೀಜಿ ಜೊತೆಯಲ್ಲೂ ಕೆಲವು ದಿನ ಇವರಿದ್ದರು. ಇವರು ಬರೆದ ಕೃತಿಗಳ ದಾಖಲೆ, ಸುಬ್ಬರಾಯರ ಮಕ್ಕಳ ವಿವರ, ಮಾಸ್ತಿಯವರು ನವರಾತ್ರಿ ಸಂದರ್ಭದಲ್ಲಿ ಇವರ ಕುರಿತು ಬರೆದ ಕವನ, 'ಸಂಘ'ದ ಬಗ್ಗೆ ಇದ್ದ ಕಾಳಜಿ ಪತ್ರಗಳು ಮುಂತಾಗಿ ವಿಶಿಷ್ಟ ವಿವರಗಳು ನೀಡಿದ್ದಾರೆ. ಇವರು 2-1-1955ರಲ್ಲಿ ವಿಧಿವಶರಾದರು.

ಹೊಯ್ಸಳ ಮಾಲೆಯ ಎರಡನೇ ಕೃತಿ ಪ್ರೊ. ತೀ. ನಂ. ಶ್ರೀ ಅವರನ್ನು ಕುರಿತದ್ದು. ಇದನ್ನು ಬರೆದವರು ಅವರ ಮಗ ತೀ. ಶ್ರೀ. ನಾಗಭೂಷಣ. ಅದನ್ನು ಮುದ್ರಣಕ್ಕೆ ಅಣಿಗೊಳಿಸಿದವರು ಪ್ರಧಾನ ಸಂಪಾದಕ ಜಿ. ವಿ. ಅವರು. ಈ ಕೃತಿ ರಚನೆಗೆ ತೀ. ಶ್ರೀ ನಾಗಭೂಷಣ ಎಚ್. ಜಿ. ಸಣ್ಣಗುಡ್ಡಯ್ಯ ಅವರ ಕೃತಿಯನ್ನು ಬಳಸಿಕೊಂಡಿದ್ದಾರೆ. ಪ್ರಾರಂಭದಲ್ಲಿ ತೀ.ನಂ.ಶ್ರೀ ಮನೆತನದ ವಿವರ, ತೀರ್ಥಪುರದ ವಿವರ, ಶ್ಯಾನುಭೋಗ ವೃತ್ತಿ, ಇವರ ತಾತ ಸೂರ್ಯನಾರಾಯಣಪ್ಪ ಮತ್ತು ಅವರ ಕುಟುಂಬದ ವಿವರ ನೀಡಿದ್ದಾರೆ. ತೀ.ನಂ.ಶ್ರೀ. ೧೯೨೬ರಲ್ಲಿ ಮೈಸೂರು ಮಹಾರಾಜ

ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ. ಆಗ ೧೯ನೇ ವಯಸ್ಸು, ತರುವೇಕರೆ ಜಯಲಕ್ಷ್ಮಮ್ಮ ಅವರ ಜೊತೆ ವಿವಾಹ ಮುಂತಾದ ಇತರ ಕೌಟುಂಬಿಕ ವಿವರಗಳಿವೆ. ಆ ಬಗೆಗಿನ ಸಂತಸದ ಕ್ಷಣಗಳು ಅವರ ಪ್ರೇಮಗೀತ ಸಂಕಲನದಲ್ಲಿ ದಾಖಲಾಗಿದೆ. ಮಕ್ಕಳು ಇಬ್ಬರು ಮೊಲನೆಯವರು ನಾಗರತ್ನ, ಮಗ ನಾಗಭೂಷಣ, ಬಿ.ಇ. ಎಂಬಿ.ಎ. ಪದವೀಧರ ಉನ್ನತ ಹುದ್ದೆನ್ನು ಅಲಂಕರಿಸಿದವರು. ಇವರ ಕುಟುಂಬದ ವಿವರಗಳನ್ನು ಇಲ್ಲಿ ನೀಡಲಾಗಿದೆ. ತೀನಂಶ್ರೀ ಅವರ ಎಲ್ಲ ಸಾಧನೆಯ ವಿವರಗಳು ಈ ಕೃತಿಯಲ್ಲಿ ಲಭ್ಯವಾಗುವಂತೆ ಜಿ.ವಿ. ಗಮನಿಸಿದ್ದಾರೆ.

ತೀ.ನಂ.ಶ್ರೀ. ಮೈಸೂರು ಬೆಂಗಳೂರಿಗೆ ಬಂದು ನೆಲೆಸಿದ್ದು ಮುಂದಿನ ಎಲ್ಲ ಜ್ಞಾನದಾಹಕ್ಕೂ ಅವಕಾಶ ಕಲ್ಪಿಸಿತು. ಜೊತೆಗೆ ಬಂಧು-ಬಾಂಧವರ ಶಿಕ್ಷಣ, ಆಶ್ರಯ ಬೇಡಿ ಬಂದವರಿಗೆ ಸಹಾಯ, ಅವರ ಶಿಕ್ಷಣಕ್ಕೆ ಅನುಕೂಲ ಮಾಡಿಕೊಟ್ಟ ತೀ.ನಂ.ಶ್ರೀ ಧಾರಾಳತನವನ್ನು ಸೇವಾಮನೋಭಾವವನ್ನು ಈ ಕೃತಿಯಲ್ಲಿ ನಿರೂಪಿಸಲಾಗಿದೆ. ತೀರ್ಥಪುರದ ವಿದ್ಯಾಭ್ಯಾಸ 1919ರಲ್ಲಿ ಅಜ್ಜಿಯ ಮನೆಯಲ್ಲಿದ್ದು ತುಮಕೂರು ಶಿಕ್ಷಣ, 1923ರ ಎಂಟ್ರೆನ್ಸ್ ಪರೀಕ್ಷೆ, 1926ರಲ್ಲಿ ಬಿ.ಎ. ಆರು ಸುವರ್ಣ ಪದಕಗಳೊಂದಿಗೆ, 1926ರಲ್ಲಿ ಕನ್ನಡ ಎಂ.ಎ. 1928ರಲ್ಲಿ ಮೈಸೂರು ಸಿವಿಲ್ ಪರೀಕ್ಷೆ ನಂತರ ಅಮಲ್ದಾರ್ ಹುದ್ದೆ ಮುಂತಾಗಿ ಶೈಕ್ಷಣಿಕ ಸಾಧನೆಗಳನ್ನು ಅಭಿಮಾನಪೂರ್ವಕ ದಾಖಲಿಸಿದ್ದಾರೆ.

ವೃತ್ತಿ 1929ರಿಂದ ಮಹಾರಾಜ ಕಾಲೇಜಿನಲ್ಲಿ ಪ್ರಾರಂಭವಾಗಿ, ಬೇರೆ ಬೇರೆ ಹಿರಿಯ ಪ್ರಸಿದ್ಧ ಕಾಲೇಜಿನಲ್ಲಿ ಮತ್ತು ಧಾರವಾಡ, ಹಾಗೂ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸಿದ ವಿವರಗಳಿವೆ. 1966 ಆಗಸ್ಟ್‌ನಲ್ಲಿ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ತಜ್ಞರ ಸಭೆಗೆ ಹೋಗಿ ಬಂದರು. ಕನ್ನಡ ಭಾಷಾ ಚರಿತ್ರೆ ಬರೆಯಬೇಕೆಂಬ ಹಂಬಲವೂ ಇತ್ತು. ರಾಂಚಿಯಲ್ಲಿ ಕುಟುಂಬದವರೊಡನೆ ಒಂದು ವಾರವಿದ್ದರು. ಕಲ್ಕತ್ತಕ್ಕೆ ಬಂದು ಸೆಪ್ಟೆಂಬರ್ 7ರಂದು ಹೃದಯಾಘಾತದಿಂದ ನಿಧನರಾದರು. ಸುಪ್ರಸಿದ್ಧ ಸಾಹಿತಿಗಳ ಒಡನಾಟದ ವಿವರ, ಇವರ ಸಾಹಿತ್ಯ ಸಾಧನೆ, ವಿಶೇಷವಾಗಿ ಭಾರತೀಯ ಕಾವ್ಯಮೀಮಾಂಸೆ ಗಣನೀಯ ಕೃತಿ - ಇತ್ಯಾದಿ ವಿವರಗಳು ಪುಸ್ತಕದಲ್ಲಿವೆ.

ಹೊಯ್ಸಳ ಮಾಲೆಯ ಮೂರನೆಯ ಕೃತಿ ಆಸ್ಥಾನ ವಿದ್ವಾನ್ ಜ್ಯೋತಿಸ್ಸಿದ್ಧಾಂತ ಕೇಸರಿ ಕೊಳ್ಳೆಗಾಲದ ವೆಂಕಟಸುಬ್ಬಶಾಸ್ತ್ರಗಳನ್ನು ಕುರಿತಾದ್ದು. ಇದನ್ನು ಬರೆದವರು ಶಾಸ್ತ್ರಿಗಳ ಮಗಳ ಮಗ ಶ್ರೀ ಕೆ. ಎನ್. ಗೋಪಾಲಕೃಷ್ಣ ಶಾಸ್ತ್ರಿಗಳವರು.

ವೆಂಕಟಸುಬ್ಬ ಶಾಸ್ತ್ರಿಗಳವರು ಕ್ರಿ ಶ. 1886ನೇ ಇಸವಿ ವ್ಯಯನಾಮ ಸಂವತ್ಸರದ ಪುಷ್ಯ ಶುಕ್ಲ ಚೌತಿ ಬುಧವಾರ ಜನಿಸಿದರು. ಸಾಮವೇದಿಗಳು. ಇವರ ತಂದೆ ಸಿದ್ಧಾಂತಿ ತಮ್ಮಯ್ಯ ಶಾಸ್ತ್ರಿಗಳು. ಹಾಗೂ ಪಿತಾಮಹ ವೆಂಕಟಕೃಷ್ಣ ಶಾಸ್ತ್ರಿಗಳು ಪ್ರಕಾಂಡಪಂಡಿತರು ಮಹಾರಾಜರ ಕೃಪಾಭಾಜನರು. ಇವರ ವಂಶವೃಕ್ಷವನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ. ಇವರ ಹಿರಿಯರು ಜ್ಯೋತಿಶ್ಶಾಸ್ತ್ರ ಪರಿಣತರು. ಇವರಿಗೆ 'ಸಿದ್ಧಾಂತಿ' ಎಂಬ ವಿಶೇಷಣವಿತ್ತು. ಮಹಾರಾಜರಾದ ಶ್ರೀ ಚಿಕ್ಕದೇವರಾಜ

ಒಡೆಯರು ನೀಡಿದ ಧನಗೇರಿ ಅಗ್ರಹಾರದಲ್ಲಿ ಹಿರಿಯರು ನೆಲೆಸಿದ್ದರು – ಮುಂತಾಗಿ ಹಿರಿಯರ ಕುರಿತಾದ ವಿವರಗಳು ಇಲ್ಲಿ ದಾಖಲಾಗಿದೆ. ಇವರ ಮುತ್ತಾತರಾದ ಶ್ರೀ ತಿಮ್ಮಣ್ಣ ಶಾಸ್ತ್ರಿಗಳು ಶ್ರೀಮತಿ ಅಹಲ್ಯಾಬಾಯಿ ಮಧ್ಯಪ್ರದೇಶದ ಆಗಿನ ರಾಣಿಯವರಲ್ಲಿ ಆಸ್ಥಾನವಿದ್ವಾಂಸರಾಗಿದ್ದರು. ವಾಸ ಶ್ರೀರಂಗಪಟ್ಟಣದಲ್ಲಿ. ಈ ಹಿರಿಯರ ಧಾರ್ಮಿಕ ಕೈಂಕರ್ಯಗಳನ್ನು ಯಜ್ಞಯಾಗಾದಿ ಕರ್ಮಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಶ್ರೀ ಕೊಳ್ಳೇಗಾಲದ ವೆಂಕಟಸುಬ್ಬಾ ಶಾಸ್ತ್ರಿಗಳಿಗೆ ಆಗಿನ ಶೃಂಗೇರಿ ಜಗದ್ಗುರು ಶ್ರೀ ದೊಡ್ಡ ನರಸಿಂಹ ಭಾರತಿಗಳ ಹೆಚ್ಚಿನ ಅಭಿಮಾನ ದೊರೆತಿತ್ತು. ತುಂಬಾ ಸಂಪ್ರದಾಯಬದ್ಧ ವಿದ್ಯಾರ್ಥಿಗಳಿಗೆ ವೇದಪಾಠ ಕಲಿಸುವುದು ಇವರಿಗೆ ಸಂತೋಷ ತರುತಿತ್ತು. ಇವರು ಸಂಸ್ಕೃತ–ಕನ್ನಡ ವಿದ್ವಾಂಸರಾಗಿದ್ದು ಪಂಡಿತಮಾನ್ಯರೆನಿಸಿದ್ದರು.

ಹೈಸ್ಕೂಲಿನಲ್ಲಿ ಕನ್ನಡ ಪಂಡಿತವೃತ್ತಿ, ಜ್ಯೋತಿಷ, ವಿಶೇಷ ಶಾಸ್ತ್ರ ಜ್ಞಾನಾರ್ಜನೆ ಇವರ ಹವ್ಯಾಸ. 1927ರಲ್ಲಿ ಪಂಚಾಂಗ ಸಮನ್ವಯ ಸಮಿತಿ ಬಹುಮಾನ, 1930ರಲ್ಲಿ 'ಉಪರಾಗ ಮೀಮಾಂಸಾನಿರಾಸ' ಎಂಬ ಕೃತಿ ಮುಂತಾಗಿ ಶಾಸ್ತ್ರಸಂಬಂಧ ಕೃತಿ ರಚನೆಯ ವಿವರಗಳಿವೆ. ಮುಂದೆ ಮಹಾರಾಜರು ಆಸ್ಥಾನವಿದ್ವಾಂಸರನ್ನಾಗಿ ನೇಮಿಸಿ-ಕೊಂಡರು. ಇವರಿಗೆ 'ಜ್ಯೋತಿಸ್ಸಿದ್ಧಾಂತಕೇಸರಿ' ಎಂಬ ಬಿರುದನ್ನು ದ್ವಾರಕಾಪೀಠದ ಜಗದ್ಗುರುಗಳು ನೀಡಿದರು. ಮುಂದೆ ಅನೇಕ ಮಹಾಸಭೆಗಳಲ್ಲಿ ಪಾಲ್ಗೊಂಡರು. ಉದಾ: ಲಕ್ನೋ ಅಖಿಲಭಾರತ ಜ್ಯೋತಿಷ ಸಮ್ಮೇಲನ, 1974ರಲ್ಲಿ ಸಹಾರನ್-ಪುರದ ಸಮ್ಮೇಳನ ಮುಂತಾಗಿ. ಶ್ರೀ ಶಾಸ್ತ್ರಿಗಳು ಜ್ಯೋತಿಶ್ಶಾಸ್ತ್ರನ್ಯಾಯಮಾಲಾ (ಸಂಸ್ಕೃತ), ಅಯನಾಂಶ ವಿಮರ್ಶಃ ಮುಂತಾಗಿ ಕೃತಿರಚನೆ ಮಾಡಿದರು. ಇವರ ಸಾಧನೆ, ಪುಸ್ತಕ ರಚನೆ, ಜ್ಯೋತಿಶ್ಶಾಸ್ತ್ರದಿಂದ ಪಡೆದ ಪ್ರಸಿದ್ಧಿ ಮುಂತಾದ ವಿವರಗಳು ಈ ಕೃತಿಯಲ್ಲಿವೆ.

ಪ್ರೊ. ಜಿ. ವಿ. ಅವರಿಂದ ಸಂಪಾದಿತವಾದ ಹೊಯ್ಸಳ ಮಾಲೆಯ ಮತ್ತೊಂದು ವಿಶಿಷ್ಟ ಕೃತಿ ವೈಣಿಕ ಶಿಖಾಮಣಿ ವಿ. ವೆಂಕಟಗಿರಿಯಪ್ಪ ಅವರನ್ನು ಕುರಿತದ್ದು. ಇದು ಈ ಮಾಲೆಯಲ್ಲಿ ನಾಲ್ಕನೆಯದು. ಮೈಸೂರು ಸಂಸ್ಥಾನ ಸುಪ್ರಸಿದ್ಧ ಸಂಗೀತಗಾರರಿಗೆ ವೈಣಿಕಶ್ರೇಷ್ಠರಿಗೆ ಪುರಸ್ಕಾರ ನೀಡಿ ಗೌರವಿಸಿದ ಸಂಸ್ಥಾನ. ಇಲ್ಲಿ ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪ, ಕಲಾನಿಧಿ ಕೆ. ವಾಸುದೇವಾಚಾರ್ಯರು ಬಹು ಪ್ರಸಿದ್ಧರಾಗಿ ನಾಡನ್ನು ಬೆಳಗಿದವರು. ವೀಣೆ ಶೇಷಣ್ಣನವರ ಆದರ್ಶ ಶಿಷ್ಯರಲ್ಲಿ ವೆಂಕಟಗಿರಿಯಪ್ಪ ಅವರು ಗಮನಾರ್ಹರು. ಇವರು ವೀಣಾಪ್ರಪಂಚಕ್ಕೆ ಅದರಲ್ಲೂ ಮೈಸೂರಿಗೆ ಶಾಶ್ವತಕೀರ್ತಿ ದೊರೆಯುವಂತೆ ಮಾಡಿದವರು. ಮೈಸೂರಿನ ಇತಿಹಾಸ-ದಲ್ಲಿ ಕೃಷ್ಣರಾಜರ ಆಳ್ವಿಕೆಯ ಕಾಲ ಲಲಿತಕಲೆಗಳ ಸುವರ್ಣಕಾಲ. ಸ್ವತಃ ಮಹಾ-ರಾಜರೇ ಸಂಗೀತಕಲೆಯಲ್ಲಿ ನಿಷ್ಣಾತಪಂಡಿತರು. ಹಾಗಾಗಿ ಇವರನ್ನು ಮೆಚ್ಚಿಸಿ ಆಸ್ಥಾನ ವಿದ್ವಾಂಸರಾಗುವುದು ಸುಲಭವಾಗಿರಲಿಲ್ಲ. ಇಂಥ ಅಪೂರ್ವವಿವರಗಳನ್ನು ಈ ಕೃತಿಕರ್ತೃ ಶ್ರೀಮತಿ ಅಮೃತಾ, ಶ್ರೀಮತಿ ಶಾರದಾಶಾಮಣ್ಣ ಚೆನ್ನಾಗಿ ನೀಡಿದ್ದಾರೆ.

ಇವರು 2–4–1887ರಲ್ಲಿ ಹೆಗ್ಗಡದೇವನ ಕೋಟೆಯಲ್ಲಿ ಜನಿಸಿದರು. ಮಗುವಾಗಿರುವಾಗಲೇ ಪಿತೃವಿಯೋಗ. ತಾತನಾದ ದೊಡ್ಡ ಸುಬ್ಬರಾಯರು, ಮುಮ್ಮಡಿ

ಕೃಷ್ಣರಾಜರಲ್ಲಿ ವೀಣಾವಿದ್ವಾಂಸರಾಗಿದ್ದರು. ಎಂದರೆ ಇವರ ಐದು ತಲೆಮಾರಿನವರು ವೀಣಾವಾದನ ವಿದ್ವಾಂಸರಾಗಿದ್ದರು. ತಮ್ಮ ಐದನೇ ವರ್ಷದಿಂದ ವೀಣೆ ಕಲಿಕೆ. ತಂದೆಯು ಮರಣ ಹೊಂದಿದ್ದರಿಂದ ಬಂಧುಗಳಲ್ಲಿ ಆಶ್ರಯ ಮುಂತಾಗಿ ಬದುಕಿನ ಕಷ್ಟಕರ ಪ್ರಸಂಗಗಳನ್ನು ದಾಖಲಿಸಿದ್ದಾರೆ. ಇವರು ಆಸ್ಥಾನವಿದ್ವಾಂಸರಾಗಿ ಸಂಗೀತ ವಿದ್ವಾಂಸರ ಸ್ಥಾನಮಾನಗಳನ್ನು ಉತ್ತಮಗೊಳಿಸಿದರು. ನಾಲ್ಮಡಿ ಕೃಷ್ಣರಾಜ ಒಡೆಯರು ಸಾಕಷ್ಟು ಗೌರವಾದರ, ಸೌಲಭ್ಯಗಳನ್ನೆಲ್ಲಾ ಇವರ ಸಲಹೆಯಂತೆ ನೀಡಿದ್ದರು. ಪಾಶ್ಚಾತ್ಯ ಸಂಗೀತ, ಔತ್ತರೇಯ ಸಂಗೀತದಲ್ಲೂ ಮಹಾರಾಜರಿಗೆ ಅಭಿರುಚಿ ಇದ್ದಿತು. ಪಿಯಾನೊ, ಪರಮಿನ್, ಆರ್ಗನ್ ವಾದ್ಯಗಳನ್ನು ಶಾಸ್ತ್ರಬದ್ಧ ಕಲಿಯುವ ಅವಕಾಶ-ವನ್ನು ಕಲ್ಪಿಸಿದ್ದರು. ಪಾಶ್ಚಾತ್ಯ ವಾದ್ಯಸಂಗೀತ ಕಲಿತ ಗಿರಿಯಪ್ಪ ಅವರ ಜವಾಬ್ದಾರಿ ಹೆಚ್ಚಾಯಿತು. ಮತ್ತು ಅರಮನೆಯ ಕರ್ನಾಟಕ ಬ್ಯಾಂಡಿನ ಮೇಲ್ವಿಚಾರಕರೂ ಆದರು. ವಿಶೇಷ ರಾಗಜೋಡಣೆಗಳನ್ನು ಮಾಡಿ ರಾಜರ ಹೃದಯವನ್ನು ಗೆದ್ದವರಿವರು. ಇವರು 'ಸಂಗೀತಾಮೃತಸಾರ' ಎಂಬ ಸಂಕಲನ ಗ್ರಂಥರಚಿಸಿದರು. ಜೊತೆಗೆ ಸರ್ಕಾರಿ ಟ್ರೈನಿಂಗ್ ಕಾಲೇಜು, ಮಹಾರಾಜ ಹೈಸ್ಕೂಲಿನಲ್ಲಿ ಸಂಗೀತದ ಅಧ್ಯಾಪಕರಾಗಿ ದುಡಿದರು. ಇತರರಿಗೂ ಸಂಗೀತಶಿಕ್ಷಕರಾಗುವ ಅವಕಾಶ ಕಲ್ಪಿಸಿದರು. 1940ರಲ್ಲಿ ತಿರುವಾಂಕೂರಿನಲ್ಲಿ ವೀಣಾ ಕಛೇರಿ ನಡೆಸಿ ಅಲ್ಲೆಲ್ಲಾ ನಾದವೈಭವವನ್ನು ಸ್ಥಾಪಿಸಿದರು. ಶೃಂಗೇರಿ, ಕಂಚಿ, ಕುಂಭಕೋಣಂ ಮಠಗಳಲ್ಲಿ ನುಡಿಸಿ 'ವೈಣಿಕಶಿಖಾಮಣಿ' ಬಿರುದು ಪಡೆದರು. ಇಂಥ ಹಲವು ಸಾಧನೆಯ ಹಿರಿಮೆ, ಗರಿಮೆಗಳನ್ನು ತುಂಬಾ ನಾಜೂಕಾಗಿ ಸಂಗ್ರಾಹ್ಯವಾಗಿ ಅಚ್ಚುಕಟ್ಟಾಗಿ ಪ್ರೊ. ಜಿ. ವಿ. ಸಹೃದಯರಿಗೆ ದೊರೆಯುವಂತೆ ಮಾಡಿದ್ದಾರೆ.

ಪ್ರೊ. ಜಿ. ವಿ. ಸಂಪಾದಿಸಿದ ಹೊಯ್ಸಳ ಮಾಲೆಯ ಐದನೇ ಕೃತಿ ಕವಿ ಡಾ. ಕೆ. ಎಸ್. ನರಸಿಂಹ ಸ್ವಾಮಿಯವರನ್ನು ಕುರಿತದ್ದು. ಇದನ್ನು ಬರೆದವರು ಇವರ ಮಗ ಕೆ. ಎನ್. ಹರಿಹರ ಅವರು. ಪ್ರಾರಂಭದಲ್ಲಿ ಇವರ ಹಿರಿಯರ ಬಗ್ಗೆ ಹರಿಹರ ಪ್ರಸ್ತಾಪಿಸುತ್ತಾರೆ. ೧೮ನೇ ಶತಮಾನದಲ್ಲಿ ಇವರ ಹಿರಿಯರು ಮಾಗಡಿ ನರಸಪ್ಪಯ್ಯ ಅಕ್ಕೀ ಹೆಬ್ಬಾಳಿಗೆ ಬಂದು ನೆಲೆಸಿದ ವಿವರ ನಂತರ ಕೊನೆಯ ಮಗ ಕಿಕ್ಕೇರಿಗೆ ಬಂದು ನೆಲೆಸಿದ್ದು ಮುಂತಾದ ವಿವರಗಳನ್ನು ಶ್ರೀ ಹರಿಹರ ನೀಡುತ್ತಾರೆ. ಕೆ. ಎಸ್. ಎನ್ ಅವರ ತಂದೆ ಕೆ. ಸುಬ್ಬರಾವ್. ಇವರು ಪಿಟೀಲು ನುಡಿಸುವುದರಲ್ಲಿ ನಿಷ್ಣಾತರಾಗಿದ್ದರು.

1915ನೇ ಇಸವಿಯಲ್ಲಿ ಸುಬ್ಬರಾವ್, ಹೊಸಹೊಳಲು ನಾಗಮ್ಮ ಅವರ ಸುಪುತ್ರರಾಗಿ ಕೆ. ಎಸ್. ಎನ್. ಜನಿಸಿದರು. ಪ್ರೌಢಶಾಲಾ ವಿದ್ಯಾಭ್ಯಾಸ ಮಹಾರಾಜಾ ಹೈಸ್ಕೂಲಿನಲ್ಲಿ. ಮಿತ್ರರು ನೀಡಿದ ರಾಬರ್ಟ್ ಬರ್ನ್ಸ್ ಕವನಗಳು ಇವರಲ್ಲಿ ಕಾವ್ಯಾ-ಸಕ್ತಿಗೆ ಕಾರಣವಾಯಿತು. ಮೊದಲು ಇಂಗ್ಲಿಷಿನಲ್ಲಿ ಬರೆದರು. 1931ರಲ್ಲಿ 'ಕಬ್ಬಿಗನ ಕೂಗು' ಪ್ರೊ. ಎ. ಆರ್. ಕೃ. ಅವರ ಒತ್ತಾಸೆಯಿಂದ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತು. ಅನಂತರ ಬಿ.ಎ.ಗೆ ಸೇರಿ ಇಂಗ್ಲಿಷ್, ಫಿಸಿಕ್ಸ್, ಮ್ಯಾಥ್ಸ್ ವಿಷಯ-ವನ್ನು ಆಯ್ಕೆ ಮಾಡಿಕೊಂಡರು. ತಂದೆಯವರ ನಿಧನದಿಂದ ವಿದ್ಯಾಭ್ಯಾಸ ಮುಗಿದು ಗುಮಾಸ್ತರಾಗಿ ಕೆಲಸಮಾಡತೊಡಗಿದರು. 1936ರಲ್ಲಿ ವೆಂಕಮ್ಮನವರೊಂದಿಗೆ

ವಿವಾಹವಾಯಿತು. 1937ರಲ್ಲಿ ಸರ್ಕಾರಿ ನೌಕರಿ ದೊರೆಯಿತು. ೧೯೫೪ರಲ್ಲಿ ಬೆಂಗಳೂರು ಸ್ಥಳೀಯ ಸಂಸ್ಥೆಗೆ ವರ್ಗಾವಣೆ. ಅನಂತರ ಡೀಸೀ ಅವರ ನಿಕಟ ಸ್ನೇಹವಾಯಿತು. ಮತ್ತೆ ಗೃಹಮಂಡಳಿಗೆ ವರ್ಗಾವಣೆಯಾಯಿತು. ನಿಸ್ಪೃಹ ಸೇವೆಯಿಂದ ಕೆ.ಎಸ್.ಎನ್. ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದರು.

ಸಾಂಸಾರಿಕ ವಿಚಾರಗಳನ್ನು ಮಗ ಕೆ. ಎಸ್. ಹರಿಹರ ಸಾಕಷ್ಟು ವಿವರವಾಗಿಯೇ ನೀಡಿದ್ದಾರೆ. ಸರಳ ಬದುಕನ್ನು ಇವರು ಇಷ್ಟಪಡುತ್ತಿದ್ದರು. ಪಂಚೆ-ಜುಬ್ಬ ಇವರ ಉಡುಗೆ ಯಾರು ಸಹಾಯ ಕೇಳಿಕೊಂಡು ಬಂದರೂ ನೆರವಾಗುತ್ತಿದ್ದರು. ಕಾರ್ಮಿಕ ವಸತಿಗೃಹಗಳನ್ನು ಆದಾಯದ ಮಿತಿ ನೋಡಿ ಮಂಜೂರು ಮಾಡಲು ಶಿಫಾರಸ್ ಮಾಡುತ್ತಿದ್ದರು.

ಸಾಹಿತ್ಯಕ್ಷೇತ್ರದಲ್ಲಿ ಇವರ ಸಾಧನೆ ಮಹತ್ತ್ವದ್ದು. ಅದನ್ನು ನರಹಳ್ಳಿ ಬಾಲಸುಬ್ರಹ್ಮಣ್ಯ ವಿವರವಾಗಿ ಬರೆದಿದ್ದಾರೆ. ತೀ. ನಂ. ಶ್ರೀ ಇವರ ೪೦ ಕವನಗಳನ್ನು ಆಯ್ಕೆ ಮಾಡಿ ಪ್ರಕಟಿಸಿದ್ದು ಅದಕ್ಕೆ 'ಮೈಸೂರು ಮಲ್ಲಿಗೆ' ಎಂದೇ ನಾಮಕರಣವಾಯಿತು. ಅವನ್ನು ದೇವಂಗಿ ಚಂದ್ರಶೇಖರ ಸುಮಧುರ ಕಂಠದಿಂದ ಹಾಡಿದರು. ಸ್ವತಃ ಕೃಷ್ಣ ಶಾಸ್ತ್ರಿಗಳು ಚಿರೋಟಿ ಊಟಬಡಿಸಿ ಸಂತೋಷಪಟ್ಟರು. ಅನಂತರ ಸಾಕಷ್ಟು ಧ್ವನಿಮುದ್ರಿಕೆಗಳಾದವು. ಈ ಕವಿತಾ ಸಂಕಲನ ೩೦ ಬಾರಿ ಮರುಮುದ್ರಣಗೊಂಡು ಖ್ಯಾತವಾಗಿದೆ. ನಂತರ ಸಾಕಷ್ಟು ಗೋಷ್ಠಿ, ಪ್ರಸಿದ್ಧ ಹಾಡುಗಾರರಿಂದ ಪ್ರಚಾರ ಕಡೆಗೆ ಸಿನಿಮವೂ ಆಯಿತು. ಐರಾವತ, ದೀಪದಮಲ್ಲಿ ಉಂಗುರ ಮುಂತಾದ ೧೬ ಸಂಕಲನ ತಂದಿದ್ದಾರೆ.

ಪ್ರೊ. ಜಿ. ವಿ. ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದ ಹೊಯ್ಸಳ ಮಾಲೆಯ ಆರನೇ ಹೊತ್ತಗೆ ಶಿಕಾರಿಪುರದ ಸೀತಾರಾಮಯ್ಯ ಅವರನ್ನು ಕುರಿತದ್ದು. ಇದರ ಕರ್ತೃ ಶಿ. ದಾ. ಸೀತಾರಾಮಯ್ಯ ಅವರು. 1908ನೇ ಇಸವಿಯಲ್ಲಿ ಮೈಸೂರಿನಲ್ಲಿ ಸ್ಥಾಪಿತವಾದ ಹೊಯ್ಸಳ ಕರ್ನಾಟಕದ ಸಂಘದ ಅಧ್ಯಕ್ಷ ಶ್ರೀ ಎಸ್. ಸೀತಾರಾಮಯ್ಯ ಅವರು. ಇವರು ಶಿವಮೊಗ್ಗದಲ್ಲಿ ಅಡ್ವಕೇಟ್ ಆಗಿ ಜನಪ್ರಿಯರಾಗಿದ್ದರು.

ಇವರು ಹುಟ್ಟಿದ್ದು 1862ರಲ್ಲಿ. ಜೋಯಿಸರ ಮನೆತನದವರು. ಇವರ ಹಿರಿಯರು ಶಿಕಾರಿಪುರದ ಬನಶಂಕರಿ ದೇವಸ್ಥಾನದ ಪೂಜಾರರು ಮತ್ತು ಪೌರೋಹಿತ್ಯ ನಡೆಸುವವರು. ಈ ಹಿರಿಯರ ಬಗೆಗಿನ ಕೌಟುಂಬಿಕ ವಿವರಗಳನ್ನು ಈ ಕೃತಿಯಲ್ಲಿ ನೀಡಲಾಗಿದೆ. ಇವರ ಪತ್ನಿ ಲಕ್ಷ್ಮೀದೇವಮ್ಮನವರು. ಶಿವಮೊಗ್ಗದ ಪ್ರಿಚಪರ ದೊಡ್ಡ ಬಂಗಲೆ ಕೊಂಡು ಅಲ್ಲೇ ವಾಸ ಮತ್ತು ಕಛೇರಿ ನಡೆಸುತ್ತಿದ್ದರು. ಎಲ್ಲ ನ್ಯಾಯಾಧೀಶರ ಗೌರವಕ್ಕೂ ಇವರು ಭಾಜನರಾಗಿದ್ದರು. ಮೈಸೂರಿನ ನ್ಯಾಸವಿಧಾಯಕ ಸಭೆಯಲ್ಲೂ ಸದಸ್ಯರಾಗಿ ರಾಜ್ಯದ ಜನತೆಯ ಸೇವೆ ಮಾಡಿದ್ದರು. 1914ರಲ್ಲಿ ಜರುಗಿದ ಮೈಸೂರು ಸಂಸ್ಥಾನದ ಐದನೇ ಲಾಯರುಗಳ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಇವರಿಗೆ ನಾಲ್ವರು ಗಂಡುಮಕ್ಕಳು, ನಾಲ್ಕು ಜನ ಹೆಣ್ಣು ಮಕ್ಕಳಿದ್ದು, ಎಲ್ಲರೂ ಉತ್ತಮ ಶಿಕ್ಷಣ ಪಡೆದವರು. ಬಡಮಕ್ಕಳಿಗೆ ಊಟ, ವಸತಿ ನೀಡಿ ಧನಸಹಾಯ-ವನ್ನು ಒದಗಿಸುತ್ತಿದ್ದರು. ಹಲವು ವಿದ್ಯಾರ್ಥಿಗಳು ವಾರಾನ್ನಕ್ಕಾಗಿ ಬರುತ್ತಿದ್ದರು. 1924ರಲ್ಲಿ ತುಂಗಾಪ್ರವಾಹದಿಂದ ನಿರ್ವಸಿತರಾದವರಿಗೆ ಇವರು ಆಸರೆ ನೀಡಿದರು. 1932ರ ಮೆಗಾನ್ ಆಸ್ಪತ್ರೆಗೆ ಉದಾರ ಧನಸಾಹಯ ಮಾಡಿದರು. ಸೊಸೈಟಿ ಹಾಗೂ ಹಾಸ್ಟೆಲ್‌ಗಳಿಗೂ ವ್ಯವಸ್ಥೆ ಮಾಡಿದ್ದರು. ದೇವಾಲಯಕ್ಕೆ ದಾನ, ಬನಶಂಕರಿ ಆರಾಧನೆ, ಮುಂತಾದ ಧಾರ್ಮಿಕ ಕಾರ್ಯಗಳಲ್ಲಿ ಇವರು ಶ್ರದ್ಧಾಳು ಆಗಿದ್ದರು. ಇವರು 1934ನೇ ಇಸವಿ ತಮ್ಮ ೭೩ನೇ ವಯಸ್ಸಿನಲ್ಲಿ ನಿಧನರಾದರು. ಇವರು ಮೈಸೂರಿನ ಹೊಯ್ಸಳ ಕರ್ನಾಟಕ ಸಂಘದ ಅಧ್ಯಕ್ಷರಾಗಿ ಮಾತನಾಡಿದ ವಿವರಗಳು ಈ ಕೃತಿಯಲ್ಲಿ ದಾಖಲಾಗಿದೆ. ಈ ಸಂಘದ ಮುಖೇನ ಸಮಾಜದವರಿಗೆ ಮಾಡಬಹುದಾದ ಅನುಕೂಲಗಳನ್ನು ಎಲ್ಲರೂ ಸಹಕಾರ ನೀಡಬೇಕು. ಇದರಿಂದ ಬಾಂಧವರಿಗೆ ಅನುಕೂಲವಾಗುತ್ತದೆಂದು ಅಭಿಪ್ರಾಯಪಟ್ಟಿರುವ ವಿವರಗಳು ಇಲ್ಲಿ ಸ್ಪಷ್ಟಗೊಂಡಿದೆ.

ಈ ಮಹನೀಯರು ಸಂಘದ ಅಭಿವೃದ್ಧಿಗಾಗಿ ಮತ್ತು ಮೈಸೂರು ರಾಜ್ಯದಲ್ಲಿ ಹೊಯ್ಸಳ ಕರ್ನಾಟಕ ಪಂಗಡದವರು ತಮ್ಮ ಶಾಖಾಸಂಘ ಸ್ಥಾಪಿಸಿ ಅನುಸರಿಸ-ಬೇಕಾದ ವಿವರಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಹೊಯ್ಸಳ ಮಾಲೆಯ ಏಳನೇ ಕೃತಿ 'ಜ್ವಾಲಾಮುಖಿ' ಎಂಬ ಪತ್ರಿಕೆಯನ್ನು, ಅವರ ಪ್ರಖರ ಸತ್ಯಗಳನ್ನು ವರದಿ ಮೂಲಕ ನೀಡುತ್ತಿದ್ದ ಸಿ. ಎಸ್. ಸತ್ಯ ಅವರ ಸಾಧನೆಯ ಪಥವನ್ನು ತೋರಿಸುವುದಾಗಿದೆ. ಜ್ವಾಲಾಮುಖಿ ಆ ಕಾಲದ ಒಂದು ನಿರ್ಭೀತ ವಾರಪತ್ರಿಕೆ. ಸತ್ಯರವರು ಮೊದಲು ಟೈಲರ್ ವೃತ್ತಿಯನ್ನು ಹಾಸನದಲ್ಲಿ ನಡೆಸುತ್ತಿದ್ದರು. ನಂತರ ಬೆಂಗಳೂರಿಗೆ ಸ್ಥಳಾಂತರಿಸಿದರು. ಇವರಿಗೆ 'ಕಿಡಿ' ಪತ್ರಿಕೆ ಶೇಷಪ್ಪ, ಪ್ರಜಾವಾಣಿಯ ಟಿ. ಎಸ್. ಆರ್., ಬಾಸು ಕೃಷ್ಣಮೂರ್ತಿ, ಖಾದ್ರಿ ಶಾಮಣ್ಣ ಅವರ ಪರಿಚಯವಾಗಿ ಸತ್ಯ ಅವರು 'ಜ್ವಾಲಾಮುಖಿ' ವಾರ ಪತ್ರಿಕೆಯನ್ನು 1953ರಲ್ಲಿ ಆರಂಭಿಸಿದರು. ಇವರ ಪತ್ರಿಕೆಗೆ ಬಾಸುಕೃ, ರಾಮಸ್ವಾಮಿ, ಖಾದ್ರಿ ಶಾಮಣ್ಣ, ಸಿ. ವಿ. ರಾಜಗೋಪಾಲ, ಜಾಗೀರ್ದಾರ್, ದೇವನಾಥ್ ಮೊದಲಾದವರು ಲೇಖನ ಬರೆಯು-ತ್ತಿದ್ದರು. ಬಟ್ಟೆ ಉದ್ಯಮ ಮುಚ್ಚಿ ಪತ್ರಿಕೆ ತರಲು ಹರಸಾಹಸ ಮಾಡತೊಡಗಿದರು. ಅಚ್ಚುಮೊಳೆ ಬಳಸಿ ಹಣಹೊಂಚಿ ಪತ್ರಿಕೆ ಮುದ್ರಿಸಿ, ಕರ್ನಾಟಕದ ಮೂಲೆ ಮೂಲೆಗೆ ಮಾರಿ ಅಂತೂ ಪತ್ರಿಕೆ ಪ್ರಕಟಿಸುತ್ತಿದ್ದರು. 1986ರಲ್ಲಿ ಲೆಟರ್‌ಪ್ರೆಸ್‌ನಿಂದ ಆಫ್‌ಸೆಟ್‌ಗೆ ಪರಿವರ್ತನೆ ಮುಂತಾಗಿ ವಿವರಗಳನ್ನು ಲೇಖಕ ಎಂ. ಸಿ. ಸತ್ಯನಾರಾಯಣ ರೋಚಕವಾಗಿ ನಿರೂಪಿಸಿದ್ದಾರೆ. ಅವರ ಪತ್ರಿಕಾ ಸಾಧನೆಯ ರಾಜಕೀಯ ವರದಿಗಳ, ವಿಚಾರ ಚರ್ಚೆಗಳನ್ನು ವಿನೋದ್ ಕಡಕೋಳ್ ಒಂದು ಲೇಖನವಾಗಿ ನಿರೂಪಿಸಿದ್ದಾರೆ.

ಶ್ರೀ ಸತ್ಯ ಅವರ ಕೌಟುಂಬಿಕ ವಿವರಗಳನ್ನು ರಾಮಚಂದ್ರಮೂರ್ತಿಯವರು ವಿವರಿಸಿದ್ದಾರೆ. ಇವರು ಸೂರ್ಯಜೋಯಿಸರ ವಂಶದಲ್ಲಿ 1920ನೇ ಡಿಸೆಂಬರ್ ೨೫ರಂದು ಜನ್ಮವೆತ್ತಿದ್ದರು. ಅರಸೀಕೆರೆ ಇವರ ಹುಟ್ಟಿದ ಸ್ಥಳ. ವೃತ್ತಿ ಅನುಭವಿಸಿದ

ಸಂಕಷ್ಟಗಳ ವಿವರಗಳಿವೆ. ಮುಂದೆ ದರ್ಜಿಯ ಅಂಗಡಿಯಲ್ಲಿ ಕೆಲಸಕ್ಕೆ ಸೇರಿ ಮುಂದೆ ಸಿದ್ಧಉಡುಪಿನ ಅಂಗಡಿ ನಡೆಸಿದರು. ಬೇಕಾದಷ್ಟು ಆದಾಯವೂ ಇತ್ತು.

1950ರಲ್ಲಿ ಕೇಷಪ್ಪ ಎಂಬುವವರ ಪರಿಚಯವಾಗಿ ಅವರ ಪ್ರೀತಿಯೂ ಹೆಚ್ಚಿ ಇವರು ಪತ್ರಿಕೆತರಲು ಹುರಿದುಂಬಿಸಿದರು. ಅವಲ್ಲಿ ಕೆಟ್ಟ ಧೈರ್ಯ ಉಂಟಾಗಿ 1953ರಲ್ಲಿ ಜ್ವಾಲಾಮುಖಿ ಹುಟ್ಟಿಕೊಂಡಿತು. ಇದರ ಪ್ರಚಾರ, ಸಾಧನ ಸಿದ್ಧಿಯ ವಿವರಗಳಿಂದ ಸತ್ಯದ ವಿಚಾರಗಳಿಂದ ಈ ಪತ್ರಿಕೆ ಖ್ಯಾತವಾಯಿತು. ಮತ್ತೆ ಇವರ ಪ್ರಾಮಾಣಿಕತೆ, ಸತ್ಯನಿಷ್ಠತೆ, ಮತದೊಂದಿಗಿನ ಬಾಂಧವ್ಯ ಬಿರುದು ಬಾವಲಿಗಳು ಇಲ್ಲಿ ದಾಖಲಾಗಿದೆ. ತುಂಬಾ ಸಾಧನೆಯ ಪ್ರತೀಕವೆನಿಸುವ ಇವರ ಕೀರ್ತಿಗೆ ಪೂರಕವೆನಿಸುವ ಛಾಯಾಚಿತ್ರಗಳು ಬೇಕಾದಷ್ಟಿವೆ. ಇದೊಂದು ಹೊಯ್ಸಳ ಕರ್ನಾಟಕ ಪಂಗಡದ ಪತ್ರಿಕಾ ರಂಗದಲ್ಲಿನ ಸಾಧನೆಯನ್ನು ಗುರುತಿಸುವ ಕೃತಿ.

ಹೊಯ್ಸಳಮಾಲೆಯ ಎಂಟನೆ ಹೊತ್ತಗೆ ಪ್ರೊ. ಎ. ಎನ್. ಮೂರ್ತಿರಾಯ-ರನ್ನು ಕುರಿತದ್ದು. ಇದನ್ನು ಮೂರ್ತಿರಾಯರ ತಮ್ಮನ ಮಗಳು ಕುಸುಮ ಅವರು ಬರೆದಿದ್ದಾರೆ. ಸುಮಾರು ೩೨ ಪುಟಗಳ ಈ ಕಿರುಹೊತ್ತಗೆಯಲ್ಲಿ ಲೇಖಕಿ ಬರೆದು-ಕೊಟ್ಟ ವಿವರಗಳನ್ನು ಸಂಗ್ರಹವಾಗಿ, ಅಚ್ಚುಕಟ್ಟಾಗಿ ಪ್ರೊ. ಜಿ.ವಿ ಸಂಪಾದಿಸಿ-ಕೊಟ್ಟಿದ್ದಾರೆ.

ಇವರ ಹೆಸರು ನರಸಿಂಹ ಮೂರ್ತಿ. ಹೊಯ್ಸಳಕರ್ನಾಟಕ ಮನೆತನದ ಸುಬ್ಬರಾಯರು ಮತ್ತು ಪುಟ್ಟಮ್ಮ ದಂಪತಿಗಳ ಹಿರಿಯಮಗ, ಎ. ಎನ್. ಮೂರ್ತಿರಾಯರೆಂದೇ ಖ್ಯಾತರಾದವರು. ಅಕ್ಕಿ ಹೆಬ್ಬಾಳದಲ್ಲಿನ ಬ್ರಾಹ್ಮಣರಲ್ಲಿ ೫೦ಕ್ಕೂ ಹೆಚ್ಚು ಕುಟುಂಬಗಳು ಹೊಯ್ಸಳ ಕರ್ನಾಟಕ ಪಂಗಡದವರು. ಮೂರ್ತಿರಾಯರ ತಂದೆ ಸುಬ್ಬರಾಯರು. ಪಿ.ಡಬ್ಲ್ಯುಡಿ ಇಲಾಖೆಯಲ್ಲಿ ಓವರ್ ಸೀನಿಯರ್ ಆಗಿ ನಿವೃತ್ತಿಗೆ ಮುನ್ನವೇ ಕೆಲಸ ತೊರೆಯಬೇಕಾಯಿತು. ಅವರಿಗೆ ೭ ರೂ ಪಿಂಚಣಿ ದೊರೆಯುತ್ತಿತ್ತು. ಕೌಟುಂಬಿಕ ವಿವರಗಳೂ ಈ ಕೃತಿಯಲ್ಲಿ ಲಭ್ಯ.

ಉನ್ನತ ವಿದ್ಯಾಭ್ಯಾಸವನ್ನು ಸಬ್ಜೆಕ್ಟ್ ಸ್ಕಾಲರ್ ಶಿಪ್ ನೆರವಿನೊಂದಿಗೆ ಬಿ. ಎ. ಪದವಿ ಪಡೆದರು. ಆ ಕಾಲದಲ್ಲಿ ತಂದೆ ವಿಧವಶರಾದರು. ಅನಂತರ ಇಂಗ್ಲಿಷ್ ವಿಷಯದಲ್ಲಿ ಎಂ.ಎ. ಪದವಿ. ಹೆಚ್ಚು ಅಂಕಗಳಿಸುತ್ತಿದ್ದ ಎಂ.ಎ ವಿದ್ಯಾರ್ಥಿ ಟ್ಯೂಟರ್ ಆಗಿ ಕೆಲಸಮಾಡುವ ಅವಕಾಶವೂ ದೊರೆಯಿತು. ಎಂ.ಎ.ಯಲ್ಲಿ ಉತ್ತಮದರ್ಜೆ-ಯಲ್ಲಿ ತೇರ್ಗಡೆಯಾದರು. ಮುಂದೆ ೧೯೨೫-೨೭ ಮಹಾರಾಜ ಹೈಸ್ಕೂಲ್ ಅಧ್ಯಾಪಕರು. ಒಳ್ಳೆಯ ವಿದ್ವಾಂಸರ ಸಹವಾಸ ದೊರೆತ ವಿಚಾರಗಳಿವೆ. ಇವರಿಗೆ ಇಂಗ್ಲಿಷ್ ಸಾಹಿತ್ಯಾಭಿರುಚಿ ಮಾಡಲು ಕಾರಣರಾದ ಡಿ. ಎಸ್. ಮೂರ್ತಿಯವರು, ಮಹಾರಾಜಾ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕ ಪ್ರೊ. ರಾಲೋ ಅವರು. ಈ ಬಗ್ಗೆ ಅವರ ಅಭಿಮಾನವನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ. ಮುಂದೆ ಡಾ. ರಾಧಾಕೃಷ್ಣನ್, ಜೆ. ಸಿ. ರಾವ್, ಬಿ. ಎಂ. ಶ್ರೀ., ತೀ. ನಂ. ಶ್ರೀ. ಮುಂತಾದವರೊಡನೆ ಇವರ ಗೌರವಾದರಗಳನ್ನು ಇವರು ಹೊಂದಿದ್ದ ವಿಚಾರಗಳು ನಿರೂಪಿತವಾಗಿದೆ.

ಇವರ ವೃತ್ತಿಜೀವನ ಪಡೆದುಕೊಂಡು ಅನುಭವಗಳ ವಿವರಗಳನ್ನು ಇಲ್ಲಿ ನೀಡಲಾಗಿದೆ. ಮಹಾರಾಜಕಾಲೇಜು, ನಂತರ 1940ರಲ್ಲಿ ಶಿವಮೊಗ್ಗ 1951ರಲ್ಲಿ ಮತ್ತೆ ಮಹಾರಾಜಾ ಕಾಲೇಜಿನಲ್ಲಿ ವಿಶೇಷ ಪ್ರಾಧ್ಯಾಪಕ ಹುದ್ದೆ ಓಗೆ ಕಾರ್ಯನಿರ್ವಹಿಸಿ 1955ರಲ್ಲಿ ನಿವೃತ್ತಿಯಾದರು. ಇವರ ಕೃತಿ 1937ರಲ್ಲಿ 'ಹಗಲುಗನಸುಗಳು', ಮರಳಿ ಮಣ್ಣಿಗೆ ಕಾದಂಬರಿ ಇಂಗ್ಲಿಷ್‌ಗೆ ಅನುವಾದ 'ಹವಳದ ದೀಪ' ಕನ್ನಡದ ಪಠ್ಯವಾಗಿ ನಿಗದಿಯಾಯಿತು. ನಿವೃತ್ತಿಯನಂತರ ಕನ್ನಡ ಸಂಸ್ಕೃತಿ ಇಲಾಖೆ ನಿರ್ದೇಶಕರು, 1954–55ರ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ನಂತರದ ಅವರ ಸಾಹಿತ್ಯ ಸೇವೆಗಳನ್ನು ತಿಳಿಸಲಾಗಿದೆ. ಅವರ ವಿದೇಶಿ ಪ್ರವಾಸಗಳನ್ನು ದಾಖಲಿಸಲಾಗಿದೆ.

ನೂರಮೂರುವರ್ಷ ಬದುಕಿದ ರಾಯರು ಆಗಸ್ಟ್ 3, 2003ರಂದು ಮರಣ ಹೊಂದಿದರು.

ಪ್ರೊ. ಜಿ. ವಿ ಸಂಪಾದಿಸಿದ ಈ ಎಲ್ಲ ಕೃತಿಗಳೂ ಅಮೂಲ್ಯ. ಈ ಮಹನೀಯರ ಬಗ್ಗೆ ಪ್ರಬಂಧ ಬರೆಸಿ, ಅದನ್ನು ಪರಿಶೀಲಿಸಿ ವ್ಯವಸ್ಥೆ ಮಾಡಿ, ಕರಡು ತಿದ್ದಿ, ಸುಂದರವಾಗಿ ಮುದ್ರಿಸಲು ಕಾರಣರಾದ ಪ್ರೊ. ಜಿ .ವಿ ಅಭಿನಂದನಾರ್ಹರು. ೭೭ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಸ್ಥಾನ ಅವರ ಯೋಗ್ಯತೆಗೆ ಸಂದ ಗೌರವವೆನ್ನಬಹುದು. ಬೆಂಗಳೂರಿನ ಹೊಂಬೇಗೌಡ ನಗರದಲ್ಲಿರುವ ಹೊಯ್ಸಳ ಕರ್ನಾಟಕ ಸಂಘ ಇಂತಹ ಪ್ರಾತಃಸ್ಮರಣೀಯರನ್ನು ಕುರಿತು ಸಮಾಜಕ್ಕೆ ಪರಿಚಯಿಸುತ್ತಿರುವುದು ಸ್ತುತ್ಯರ್ಹಕಾರ್ಯವಾಗಿದೆ.



# ಕರ್ನಾಟಕ ಏಕೀಕರಣದ ಅನುಭವಗಳು

ಡಾ. ನಾ. ಮೊಗಸಾಲೆ

ಇಂದು ಕನ್ನಡದ ಯುವಪೀಳಿಗೆಯವನೊಬ್ಬನನ್ನು ತಡೆದು ನಿಲ್ಲಿಸಿ 'ನೀನು ಯಾವ ರಾಜ್ಯದವನು?' ಎಂದು ಕೇಳಿದರೆ ಆತ ತತ್‌ಕ್ಷಣ 'ನಾನು ಕರ್ನಾಟಕ-ದವನು!' ಎಂದೇ ಎನ್ನುತ್ತಾನೆ. ಅದು ನಿಜ ಮತ್ತು ಅವನ ಅನುಭವ ಕೂಡಾ. ಆದರೆ ತಾನು ಕರ್ನಾಟಕದವನು ಎಂದು ಆತ ಎನ್ನಬೇಕಾದರೆ, ಆತನಿಗೆ ಕರ್ನಾಟಕದ ಏಕೀಕರಣ ಹೇಗೆ ಆಯಿತು, ಯಾಕೆ ಆಯಿತು ಎಂಬ ಸತ್ಯ ತಿಳಿದಿರಬೇಕಾಗಿಲ್ಲ. ಕೇವಲ ಪಠ್ಯವಾಗಿ ಅಥವಾ ಆತ ತನ್ನ ವಿಳಾಸದ ದಾಖಲಾತಿಯಿಂದ ಅದನ್ನು ಒಪ್ಪಿಕೊಂಡಿರುತ್ತಾನೆ. ಆದರೆ ಕರ್ನಾಟಕ ರಾಜ್ಯ ಯಾವಾಗ ಆಯ್ತು, ಹೇಗೆ ಆಯ್ತು ಎಂದರೆ ಗೊತ್ತಿರುವುದಿಲ್ಲ.

ಕರ್ನಾಟಕ ಎಂಬುದು ಇಂದು ನೆರೆಯ ರಾಜ್ಯಗಳಾದ ಕೇರಳ, ಮಹಾರಾಷ್ಟ್ರ, ಆಂಧ್ರಪ್ರದೇಶವೇ ಮೊದಲಾದ ರಾಜ್ಯಗಳಿಗೆ ಇರುವ ಭೌಗೋಳಿಕ ಮತ್ತು ರಾಜಕೀಯ ಅಸ್ತಿತ್ವದ ಹಾಗಿರುವ ಒಂದು ಅಸ್ತಿತ್ವವಷ್ಟೇ ಎಂದು ನಮ್ಮ ಯುವಜನತೆ ತಿಳಿದಿದ್ದರೆ ಅದು ಅವರ ತಪ್ಪಲ್ಲ. ನಾವು ನಮ್ಮ ಇತಿಹಾಸವನ್ನು ಹೆಚ್ಚೆಂದರೆ ಪ್ರೌಢವಿದ್ಯಾಭ್ಯಾಸದ ಹಂತದ ತನಕ ಮಾತ್ರ ನಮ್ಮ ಪಠ್ಯಗಳ ಮೂಲಕ ನಮ್ಮ ಮಕ್ಕಳ ಮುಂದೆ ತೆರೆದಿಡುತ್ತೇವೆ. ಅನಂತರ ಅದರ ಅವಶ್ಯಕತೆ ಅವರಿಗೆ ಇಲ್ಲ. ಆಮೇಲೆ ಏನಿದ್ದರೂ ಬೇಕಾಗಿರುವುದು ಧನಸಂಪಾದನೆ, ಅದಕ್ಕಾಗಿ ವಿಜ್ಞಾನ ಮತ್ತು ತದಂಗವಾದ ವಿಭಿನ್ನಶಾಖೆಗಳ ಅಭ್ಯಾಸ ಸಾಕು ಎಂದುಕೊಂಡಿದ್ದೇವೆ. ಎಲ್ಲ ಅಭ್ಯಾಸವೂ ಈಗ ಜ್ಞಾನಕ್ಕಾಗಿ ಅಲ್ಲ, ಉದರಂಭರಣೆಗಾಗಿ ಎಂಬುದನ್ನು ವಸ್ತುಶಃ ನಾವೂ ಒಪ್ಪಿದ್ದೇವೆ ಮತ್ತು ಖಚಿತವಾಗಿ ಪಾಲಿಸುತ್ತಲೂ ಬಂದಿದ್ದೇವೆ. ಹಾಗಾಗಿ ನಾವು ಆಡುವ ಭಾಷೆ, ಆ ಭಾಷೆ ನೀಡಬಹುದಾದ ಭಾವನಾತ್ಮಕ ಸುಖ, ಅಂಥ ಆ ಭಾಷೆಯ ಹಿನ್ನೆಲೆ ಅದರಲ್ಲಿನ ಸಾಹಿತ್ಯ ಸಂಪತ್ತು ಎಲ್ಲ ಇಂದು ನಗೆ ನಗಣ್ಯವಾಗಿದೆ. ಇವೆಲ್ಲವುಗಳ ನಡುವೆ ಇರುವ ಕರ್ನಾಟಕ ಎಂಬ ಹೃದಯಾಂತರ್ಗತವಾದ ನಮ್ಮ ರಾಜ್ಯ ಅಂದರೆ ಏನು, ಅಂಥ ಒಂದು ಕಲ್ಪನೆಗೆ ಕಾರಣ ಏನು, ಅದು ಹೇಗಾಯಿತು ಎನ್ನುವುದು ಕೂಡಾ ಈಗ ಇತಿಹಾಸಕ್ಕೆ ಸೇರಿ ಹೋಗಿದೆ. ಆದರೂ ಕಾಟಾಚಾರಕ್ಕಾಗಿಯಾದರೂ ಎಂಬಂತೆ ಕರ್ನಾಟಕ ರಾಜ್ಯೋತ್ಸವವನ್ನು ನಾವು ಪ್ರತಿ ವರುಷದ ನವಂಬರ ತಿಂಗಳು

ಪೂರ್ತಿ ಆಚರಿಸುತ್ತಾ ಬರುತ್ತಿದ್ದೇವೆ. ಅದು ನಮ್ಮ ಗಣೇಶೋತ್ಸವದ ಹಾಗೆ ಡಾಂಭಿಕ ಆಚರಣೆಗೆ ಮತ್ತು ವಿಜೃಂಭಣೆಗೆ ಮೀಸಲಿದ್ದ ಹಾಗಾಗಿದೆ. ಇನ್ನು ಕೆಲವು ಬಾರಿ ಅದು ಉದರಂಭರಣಕ್ಕಾಗಿ ಇರುವ ದಾರಿಯಾದ ಹಾಗೂ ಇದೆ.

ಆದರೂ ಏಕೀಕರಣಗೊಂಡ ಕರ್ನಾಟಕ ರಾಜ್ಯ ಹುಟ್ಟಿ ೫೦ ವರುಷ ಆದ ಸಂದರ್ಭದಲ್ಲಿ ನಮ್ಮ ಘನ ಸರಕಾರವು ಸುವರ್ಣಕರ್ನಾಟಕ ಉತ್ಸವವನ್ನು ನಾಡಿನ ಸರ್ವಾಂಗೀಣ ಸಮೃದ್ಧಿಯ ಸಂಕೇತವಾಗಿ ಆಚರಿಸಿತು. ಅಷ್ಟೇ ಅಲ್ಲ, ಆಚರಿಸ–ಬೇಕೆಂದೂ ಕರೆಕೊಟ್ಟಿತು. ಆ ಸಂದರ್ಭದಲ್ಲಿ ನಮ್ಮ ನಡುವಿನ ಪ್ರಸಿದ್ಧ ಪ್ರಕಾಶನ ಸಂಸ್ಥೆಯಾದ ಸ್ವಪ್ನ ಪುಸ್ತಕ ಪ್ರಕಾಶನವು ಹಿರಿಯರಾದ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರನ್ನು ಸಂಪರ್ಕಿಸಿ, 'ಏಕೀಕರಣದ ಅನುಭವಗಳನ್ನು ಅದರ ಅನುಭವ ಇರುವವರಿಂದ ಬರೆಯಿಸಿಕೊಡಿ' ಎಂದೂ ವಿನಂತಿಸಿತು. ಸ್ವತಃ ಏಕೀಕರಣದಲ್ಲಿ ಭಾಗಶಃ ಭಾಗವಹಿಸಿದ್ದ ಪ್ರೊ. ಜಿ. ವಿ.ಯವರು ಇದನ್ನು ಖುಶಿಯಿಂದಲೇ ಒಪ್ಪಿಕೊಂಡು ಸಂಪಾದನಕಾರ್ಯದಲ್ಲಿ ತೊಡಗಿದರು. ಕರ್ನಾಟಕ ಏಕೀಕರಣದಲ್ಲಿ ನೇರವಾಗಿ ಪಾಲ್ಗೊಂಡವರನ್ನಷ್ಟೇ ಅಲ್ಲದೆ, ಅದರ ಕುರಿತಾಗಿ ಅಧಿಕೃತವಾಗಿ ಬರೆಯಬಲ್ಲವರಲ್ಲಿ ಆಯ್ದ ಇಪ್ಪತ್ತು ಮಂದಿಯನ್ನು ಪ್ರೊ. ಜಿ. ವಿ.ಯವರು ಸಂಪರ್ಕಿಸಿದರು. ಅದಕ್ಕೆ ಸ್ಪಂದಿಸಿದವರು ಕೇವಲ ಹನ್ನೆರಡು ಮಂದಿ ಮಾತ್ರ. ಆ ಹನ್ನೆರಡು ಮಂದಿಯ ಜೊತೆಗೆ ತಾವೂ ತಮ್ಮ ಬರೆಹವೊಂದನ್ನು ಸೇರಿಸಿ ಪ್ರೊ. ಜಿ. ವಿ.ಯವರು ಒಟ್ಟು ಹದಿಮೂರು ಲೇಖನಗಳನ್ನು 'ಕರ್ನಾಟಕ ಏಕೀಕರಣದ ಅನುಭವಗಳು' ಎಂಬ ಹೆಸರಿನಲ್ಲಿ ಹೊರತಂದರು. ಇದು ಕೇವಲ ೮೪ ಪುಟಗಳ ಪುಟ್ಟ ಹೊತ್ತಗೆಯಾದರೂ ಅದರಲ್ಲಿ ವಸ್ತುವೈಶಿಷ್ಟ್ಯದಿಂದಾಗಿ ದಾಖಲಾತಿಯ ಖಚಿತತೆಯಿಂದಾಗಿ ಅದು ಒಂದು ಚಾರಿತ್ರಿಕ ದಾಖಲೆಯಗಿ ಅನಾವರಣಗೊಂಡದ್ದಷ್ಟೇ ಅಲ್ಲದೇ ಇಲ್ಲಿಯ ಲೇಖನಗಳನ್ನು ಓದುತ್ತಾ ಹೋದ ಹಾಗೆ ಇದು ಕನ್ನಡ ಭಾಷೆಯ ಸ್ವಾತಂತ್ರ್ಯ ಹೋರಾಟವೇ ಎನ್ನುಷ್ಟು ರೋಚಕವೂ ಅದ್ಭುತವೂ ಪವಾಡಸದೃಶವೂ ಆಗಿ ಕಾಣುತ್ತದೆ.

ಈ ಹದಿಮೂರು ಲೇಖನಗಳಲ್ಲಿ ಕರ್ನಾಟಕ ಏಕೀಕರಣದಲ್ಲಿ ನೇರವಾಗಿ ಪಾಲ್ಗೊಂಡವರು ಹೆಚ್. ಎಸ್. ದೊರೆಸ್ವಾಮಿ, ಡಾ. ಕಯ್ಯಾರ ಕಿಞ್ಞಣ್ಣ ರೈ ಅವರು ಮಾತ್ರ. ಡಾ. ದೇಜಗೌ, ಪ್ರೊ. ಎಲ್. ಎಸ್. ಶೇಷಗಿರಿ ರಾವ್, ಪ್ರೊ. ಜಿ. ವೆಂಕಟಸುಬ್ಬಯ್ಯ, ಅನ್ನದಾನಯ್ಯ ಪುರಾಣಿಕ, ಡಾ. ಚಿದಾನಂದ ಮೂರ್ತಿ, ಡಾ. ಸಾ. ಶಿ. ಮರುಳಯ್ಯ. ಹೀ. ಚಿ. ಶಾಂತವೀರಯ್ಯ ಇವರು ಭಾಗಶಃ ಅದರಲ್ಲಿ ಭಾಗವಹಿಸಿದ್ದರು. ಎಂದರೆ ಆ ದಿನಗಳಲ್ಲಿ ಇವರಲ್ಲಿ ಕೆಲವರು ವಿದ್ಯಾಭ್ಯಾಸದಲ್ಲಿ ತೊಡಗಿಸಿಕೊಂಡವರಾಗಿದ್ದರೆ, ಮತ್ತೆ ಉಳಿದವರು ಅದೇ ತಾನೇ ಉದ್ಯೋಗಸ್ಥರಾಗಿ ತಮ್ಮ ಎದೆಯಲ್ಲಿ ಕರ್ನಾಟಕ ಏಕೀಕರಣದ ಕನಸನ್ನು ಬೆಚ್ಚಗೆ ಹಚ್ಚಿಕೊಂಡು ಸುಖಪಟ್ಟವರು. ಡಾ. ಎಚ್. ಎಸ್. ಗೋಪಾಲರಾವ್, ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಡಾ. ಚಂದ್ರಶೇಖರ ಪಾಟೀಲ, ಪ್ರೇಮಾ ಭಟ್ಟರು ಮಾತ್ರ ಆಗಿನ್ನೂ ಎಳೆಯರೇ. ವಿಶೇಷವೆಂದರೆ 'ಕರ್ನಾಟಕ ಏಕೀಕರಣದ ಇತಿಹಾಸ'ವನ್ನು ಬರೆದ ಡಾ. ಹೆಚ್.

ಎಸ್. ಗೋಪಾಲರಾಯರಿಗೆ ಕರ್ನಾಟಕ (ಆಗ ವಿಶಾಲ ಮೈಸೂರು ರಾಜ್ಯ) ರಾಜ್ಯೋದಯವಾದಾಗ (1 ನವೆಂಬರ್ 1956) ಹತ್ತು ವರುಷ ತುಂಬಲು ಇನ್ನೂ ಹದಿನೆಂಟುದಿನ ಬೇಕಿತ್ತು. ಅಂಥ 'ಹುಡುಗ' ಏಕೀಕರಣಕ್ಕೆ ಸಂಬಂಧಿಸಿದ ಹಾಗೆ ಮುಂದೆ ಅಧಿಕೃತ ಎನ್ನಬಹುದಾದ ಕೃತಿಕಾರರಾದದ್ದಷ್ಟೇ ಅಲ್ಲ, ಅವರು ಅದಕ್ಕಾಗಿ ಪಟ್ಟ ಪರಿಶ್ರಮ ತೋರಿಸಿದ ಉತ್ಸಾಹವೂ ಒಂದು ಅಪರೂಪದ ದಾಖಲೆಯೇ. ಅವರ ಆ ದಾಖಲೆಯ ಪುಟ್ಟ ತೊರೆಯೊಂದು ಈ ಹೊತ್ತಗೆಯಲ್ಲಿ ವಿಶೇಷವಾಗಿ ಕಣ್ಸೆಳೆಯುತ್ತದೆ.

ಈ ಇಡೀ ಹೊತ್ತಗೆ ಏಕೀಕರಣವನ್ನು ಹತ್ತಿರದಿಂದ ನೋಡಿದ ಇಲ್ಲವೇ ನೇರವಾಗಿ ಭಾಗವಹಿಸಿದ ಅಥವಾ ಅಂಥವರ ಸಂಪರ್ಕವನ್ನು ಪಡೆದವರಿಂದ ರೂಪುಗೊಂಡಿರುವುದರಿಂದ ಈ ನೆಲೆಯಲ್ಲಿ ಅದಕ್ಕೆ ಮೂರು ನೆಲೆಯ ಆಯಾಮಗಳು ಒದಗಿ ಬಂದಿವೆ. ಹೆಚ್. ಎಸ್. ದೊರೆಸ್ವಾಮಿಯವರು ಈ ಏಕೀಕರಣದ ಹೋರಾಟಗಾರರ ಜೊತೆ ಆಗ ನಮ್ಮನ್ನು ಆಳುತ್ತಿದ್ದ ನಮ್ಮದೇ ದಿಲ್ಲಿ ದರ್ಬಾರಿನ ದೊರೆಗಳ ಮರ್ಜಿಯನ್ನು ನೋಡಿದವರು ಮತ್ತು ಅನುಭವಿಸಿದವರು. ಆ ಹಿನ್ನೆಲೆಯ ಅವರ ಅನುಭವ ತುಂಬ ರೋಚಕವಾದದ್ದು. ಪ್ರಧಾನಿ ಜವಾಹರ-ಲಾಲ್ ನೆಹರೂ, ಡಾ. ರಾಜೇಂದ್ರ ಪ್ರಸಾದ್ ಅವರನ್ನು ಕರ್ನಾಟಕ ಏಕೀಕರಣಕ್ಕಾಗಿ ಭೇಟಿ ಮಾಡಿದ ಯುವಕರ ತಂಡಕ್ಕೆ (ದೊರೆಸ್ವಾಮಿಯವರೂ ಈ ತಂಡದಲ್ಲಿದ್ದರು) ಅವರಿಂದ ಯಾವುದೇ ಆಶ್ವಾಸನೆ ಸಿಗದೆ ಹೋದಾಗ, ಮರುದಿನ ಆ ತಂಡ ಅಂದಿನ ಗೃಹಮಂತ್ರಿ ಸರ್ದಾರ್ ವಲ್ಲಭಬಾಯಿ ಪಟೇಲರನ್ನು ಭೇಟಿ ಮಾಡಿ, ಅವರ ಮುಂದೆ ತಮ್ಮ ಅಹವಾಲನ್ನು ಮಂಡಿಸಿತು. ಆಗ ಅವರು 'Is that so ? Go and remove your Maharaja' ಎಂದರಂತೆ. 'Shall we take it as your message?' ಎಂದು ಇವರು ಇದ್ದ ನಿಯೋಗ ಮರು ನುಡಿದಾಗ 'Yes, Do so' ಎಂದರಂತೆ. ಅಂಥ ದೃಢನಿರ್ಧಾರದ ಮತ್ತು ಎದೆಗಾರಿಕೆಯ ಗೃಹಮಂತ್ರಿಗಳು ಇಂದು ಇಲ್ಲವಲ್ಲ ಎನ್ನುವುದು ಈ ಮಾತನ್ನು ಕೇಳಿದಾಗ ನಮ್ಮನ್ನು ಕಾಡುತ್ತದೆ. ಅಷ್ಟೇ ಅಲ್ಲ, ಕಾಶ್ಮೀರ ಸಮಸ್ಯೆಯಿಂದ ಹಿಡಿದು ಈ ದೇಶವನ್ನು ಕಾಡುವ ಬಹುತೇಕ ಅಧ್ವಾನಗಳಿಗೆ ನಮ್ಮ ರಾಜಕಾರಣಿಗಳು ಹೇಗೆ ಪರೋಕ್ಷವಾಗಿ 'ಕಾರಣ'ವಾಗಿದ್ದಾರೆ ಎಂದೂ ವಿಷಾದ-ವಾಗುತ್ತದೆ. ಅದೇ ಹೊತ್ತಿಗೆ ಪಟೇಲರಂಥವರ ಪ್ರಭಾವ ಇರಬೇಕೆಂಬಂತೆ ಈಗಲೂ ಎಚ್. ಎಸ್. ದೊರೆಸ್ವಾಮಿಯವರು ನ್ಯಾಯನಿಷ್ಠುರತೆಗೆ ಮತ್ತು ತತ್ತ್ವನಿಷ್ಠೆಗೆ ರೂಪಕವಾಗಿ ನಮ್ಮ ನಡುವೆ ಇದ್ದಾರೆ ಎನ್ನುವುದೂ ಸಂತೋಷವೇ.

ಕರ್ನಾಟಕದ ಏಕೀಕರಣದಲ್ಲಿ ಭಾಗವಹಿಸಿದ ಇನ್ನೊಬ್ಬ ಹಿರಿಯರಲ್ಲಿ ಕಯ್ಯಾರ ಕಿಞ್ಞಣ್ಣ ರೈಗಳು ಒಬ್ಬರಷ್ಟೇ ಅಲ್ಲ ಮುಖ್ಯರಾದವರು ಕೂಡಾ. ಅವರ ಏಕೀಕರಣದ ಸ್ವಾನುಭವ, ಏಕೀಕರಣದ ಅನಂತರ ಕರ್ನಾಟಕಕ್ಕೆ ಸೇರದೇ ಹೋದ ಕಾಸರಗೋಡಿನ ಪಾಡಿಗಾಗಿ ಅವರ ತಹತಹ ಇಲ್ಲಿ ತುಂಬ ಹೃದಯಸ್ಪರ್ಶಿಯಾಗಿ ಅನಾವರಣಗೊಂಡಿದೆ. ಅವರ 'ಬೆಂಕಿ ಬಿದ್ದಿದೆ ಮನೆಗೆ' ಕವನವನ್ನು ಈಗ ಹೇಳುವವರೂ ಇಲ್ಲ ಕೇಳುವವರೂ ಇಲ್ಲ! ಆದರೆ ಆ ಕವನವನ್ನು ಅವರು 1965ರಲ್ಲಿ

ಕುವೆಂಪು ಅವರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದುವಾಗ, ಇಡೀ ಸಭೆ ನಿಶ್ಶಬ್ದತೆಯಿಂದ ಅದನ್ನು ಕೇಳಿದ್ದು ಮಾತ್ರವಲ್ಲ ಬಸವರಾಜ ಕಟ್ಟೀಮನಿ ಅವರು ಎದ್ದು ನಿಂತು 'ರೈಗಳೇ, ನಾವು ನಿಮ್ಮೊಂದಿಗ ಇದ್ದೇವೆ' ಎಂದಾಗ ಇಡೀ ಸಭೆ ಅದಕ್ಕೆ ದನಿಗೂಡಿಸಿದ್ದು ಇಂದಿಗೂ ರೋಮಾಂಚನಕೊಡುವ ಪ್ರಸಂಗವೇ.

ಹಿರಿಯರಾದ ಎಲ್. ಎಸ್. ಶೇಷಗಿರಿರಾಯರು ತಮ್ಮ ಲೇಖನದಲ್ಲಿ ಪ್ರಕಟಿಸಿದ ಒಂದು ಅಪರೂಪದ ಪ್ರಸಂಗ. ಡಾ. ಮಾಸ್ತಿಯವರ ಹೃದಯಶ್ರೀಮಂತಿಕೆಗೆ ಮತ್ತೆ ಕನ್ನಡಿ ಹಿಡಿಯುವ ಹಾಗಿದೆ. ಏಕೀಕರಣದ ಬೇಡಿಕೆಯು ಬಲವತ್ತರವಾಗಿ ಹೋದ ಹಾಗೆ ಕೇಂದ್ರ ಸರಕಾರವು ಧಾರ್ ಸಮಿತಿಯನ್ನು ನೇಮಿಸಿ ಅದಕ್ಕೆ ಕರ್ನಾಟಕದ ಗಣ್ಯರ ಅಭಿಪ್ರಾಯಗಳನ್ನು ಸಂಗ್ರಹಿಸಲು ಧಾರವಾಡದಲ್ಲಿ ಸಭೆ ಹೂಡಿತ್ತು. ಆ ಸಭೆಗೆ ಮಾಸ್ತಿ, ತಿ. ತಾ. ಶರ್ಮ, ಶಿವಮೂರ್ತಿ ಶಾಸ್ತ್ರಿ ಮತ್ತು ಶೇಷಗಿರಿರಾಯರಿಗೆ ಆಹ್ವಾನ ಬಂತು. ಶೇಷಗಿರಿರಾಯರು ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ-ಯಾಗಿದ್ದರು. ಕಿರಿಯರಾಗಿದ್ದ ಅವರು ಈ ಹಿರಿಯರೊಂದಿಗೆ ಹೊರಡಲು ಅನುವಾದಾಗ ಮಾಸ್ತಿಯವರು 'ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ (ತಿ. ತಾ. ಶರ್ಮ) ಮತ್ತು ಕಾರ್ಯದರ್ಶಿ (ಶೇಷಗಿರಿರಾವ್) ಹೋದರೆ ಇಡೀ ಕನ್ನಡ ನಾಡನ್ನೇ ಪ್ರತಿನಿಧಿಸಿದ ಹಾಗೆ ಆಯಿತು' ಎಂದರಂತೆ. ಅದಕ್ಕೆ ಶೇಷಗಿರಿರಾಯರು 'ನಾನು ಚಿಕ್ಕವ' ಎಂದರೆ 'ಎಲ್ಲಾದರೂ ಉಂಟೆ? ನೀವು ಚಿಕ್ಕವರಾಗುವುದು ಹೇಗೆ? ನೀವು ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ, ಕೇವಲ ಶೇಷಗಿರಿರಾಯರಲ್ಲ' ಎಂದು ಶೇಷಗಿರಿರಾಯರ ಬಾಯಿ ಮುಚ್ಚಿಸಿದರಂತೆ.

ಪ್ರೊ. ಜಿ. ವಿ ಅವರ ಅನುಭವ ಇದಕ್ಕಿಂತ ಭಿನ್ನವಾದುದು. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯಲ್ಲಿ ಸದಸ್ಯರಾಗಿ ಕರ್ನಾಟಕ ಏಕೀಕರಣಕ್ಕಾಗಿ ಬೀದರ್ ನಗರಕ್ಕೆ ಹೋದಾಗ ಅಲ್ಲಿಯ ಅಂಗಡಿ ಬೀದಿಯಲ್ಲಿ ಕನ್ನಡದ ನಾಮಫಲಕಗಳೇ ಇರಲಿಲ್ಲವಂತೆ. ಎಲ್ಲವೂ ಮರಾಠಿಮಯ ಅಷ್ಟೇ ಅಲ್ಲ, ಅಲ್ಲಿಯ ಜನ ಕನ್ನಡ ಮಾತಾನಾಡುತ್ತಿದ್ದರೂ ಅವರಿಗೆ ಕನ್ನಡಕ್ಕೊಂದು ವರ್ಣಮಾಲೆ ಇದೆ ಎಂಬುದೇ ತಿಳಿದಿರಲಿಲ್ಲ ಎನ್ನುತ್ತಾರೆ ಅವರು. ಏಕೀಕರಣದ ಹೆಸರಿನಲ್ಲಿ ಅಲ್ಲಿಯ ಮಂದಿಯಲ್ಲಿ ಕನ್ನಡತನವನ್ನು ಬಡಿದೆಬ್ಬಿಸಲು ಕುದುರೆಯಲ್ಲಿ ಪ್ರಯಾಣ ಮಾಡಬೇಕಾದ ಪ್ರಸಂಗವೂ ಬಂದದ್ದಿದೆ ಎನ್ನುತ್ತಾರೆ ಅವರು.

ಅನ್ನದಾನಯ್ಯ ಪುರಾಣಿಕರ ಅನುಭವಗಳಂತೂ ತುಂಬ ಗಂಭೀರವಾದುವು. ಅವರು ಆಗ ವಿದ್ಯಾರ್ಥಿನಾಯಕರಾಗಿ ರೂಪುಗೊಂಡದ್ದು, ವಿದ್ಯಾರ್ಥಿಗಳನ್ನು ಬಡಿದೆಬ್ಬಿಸಿ ಏಕೀಕರಣದ ಚಳವಳಿಯನ್ನು ಶಾಂತಿಯುತವಾಗಿ ಸಂಘಟಿಸಿದ್ದು ನಿಜವಾದ ಸ್ವಾತಂತ್ರ್ಯ ಹೋರಾಟದ ಹಾಗೇ ಇತ್ತು. ನಡುವೆ ಅದರಗುಂಚಿ ಶಂಕರಗೌಡ ಎಂಬವರು ಏಕೀಕರಣಕ್ಕಾಗಿ ಗಾಂಧೀಜಿಯ ಹಾಗೆ ಆಮರಣ ಉಪವಾಸ ಪ್ರಾರಂಭಿಸಿದಾಗ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ವಿದ್ಯಾರ್ಥಿ ಚಳವಳಿ ತೀವ್ರವಾಗಿ ವಿದ್ಯಾರ್ಥಿಗಳು ಶಾಂತಿಯುತವಾಗಿ ರಸ್ತೆಗಿಳಿದರು. ಹುಬ್ಬಳ್ಳಿಯ ದುರ್ಗದ ಬೈಲಿನಲ್ಲಿ

ಬೃಹತ್ ವಿದ್ಯಾರ್ಥಿ ಸಮಾವೇಶ ನಡೆಯಿತು. ರೈಲು ತಡೆಯುಂಥ ಪ್ರತಿಭಟನೆಗಳೂ ಆದುವು. 19 ಏಪ್ರಿಲ್ 1953ರಂದು ಕೆ.ಪಿ.ಸಿ.ಸಿ.ಯ ಮಹತ್ವದ ಸಭೆಯು ಹುಬ್ಬಳ್ಳಿಯಲ್ಲಿ ನಡೆದಾಗ ಆ ಸಭೆಯಲ್ಲಿ ರಾಜ್ಯದ ಅನೇಕ ಗಣ್ಯರು ಭಾಗವಹಿಸಿದ್ದರು. ಕಿಡಿಗೇಡಿಗಳು ಈ ಸಂದರ್ಭವನ್ನು ಉಪಯೋಗಿಸಿ ಪೋಲೀಸ್ ವ್ಯಾನಿಗೆ ಬೆಂಕಿ ಹಚ್ಚಿದರು. ಗೋಲಿಬಾರ್ ನಡೆಯಿತು. ಪುರಾಣಿಕರು ಶಾಂತಿಯನ್ನು ಕಾಪಾಡಲು ಗೆಳೆಯರೊಂದಿಗೆ ಶಕ್ತಿಮೀರಿ ಪ್ರಯತ್ನಿಸಿದ್ದಲ್ಲದೆ ಪೋಲೀಸರಿಗೂ ನೆರವಾದರು. ಆದರೆ ಮರುದಿನ ಪುರಾಣಿಕರನ್ನು ಬಲವಂತವಾಗಿ ಪೋಲೀಸ್ ಜೀಪಿನಲ್ಲಿ ಕರೆದೊಯ್ದು ಈ ದೊಂಬಿಗೆ ಅವರೇ ಕಾರಣರೆಂದು ಆರೋಪಿಸಿ ಜೈಲಿಗೆ ತಳ್ಳಲಾಯಿತು. ಅದಕ್ಕೆ ಕಾರಣರಾದವರು ಏಕೀಕರಣದ ಹೋರಾಟದಲ್ಲಿದ್ದ ಶ್ರೀ ಹಳ್ಳಿಕೇರಿಯವರು. ಯಾಕೆಂದರೆ ಅವರನ್ನು ವಿದ್ಯಾರ್ಥಿನಾಯಕ ಪುರಾಣಿಕರು ಟೀಕಿಸುತ್ತಿದ್ದರು.

ಇಂಥ ಅನೇಕ ಹೋರಾಟಗಾರರ ಅಪರೂಪದ ಅನುಭವಗಳಿಂದ ರೂಪುಗೊಂಡ ನಮ್ಮ ಈ ಕರ್ನಾಟಕದ ಗತಿಸ್ಥಿತಿ ಏನಾಗಿದೆ ಎಂಬುದನ್ನು ವಸ್ತುನಿಷ್ಠವಾಗಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಇಲ್ಲಿ ತೆರೆದಿಟ್ಟಿದ್ದಾರೆ. ಕರ್ನಾಟಕ ಎಂಬುದೇ ಒಂದು 'ಸಾಂಸ್ಕೃತಿಕ ಏಕೀಕರಣದ ಸ್ವರೂಪ' ಎಂದಿಟ್ಟುಕೊಂಡರೆ ಅದು ಇನ್ನೂ ಆ ಹಂತಕ್ಕೆ ತಲುಪಿಲ್ಲ ಎಂಬುದನ್ನು ಅವರು ಅನೇಕ ಉದಾಹರಣೆಗಳ ಮೂಲಕ, ಮತ್ತು ತಮ್ಮ ಲೋಕಸಂಚಾರದ ಅನುಭವಗಳ ಮೂಲಕ ಇಲ್ಲಿ ವಿಷಾದದಿಂದ ತೆರೆದಿಡುತ್ತಾರೆ. ಇದೊಂದು ರೀತಿಯಲ್ಲಿ ಮಹಾಭಾರತದ ಮಹಾಪ್ರಸ್ಥಾನದ ಹಾಗೆಯೇ. ಹಾಗೆಂದು ಅವರು ಹೇಳದಿದ್ದರೂ, ನಾವು ಗೆದ್ದದ್ದು ಏನನ್ನು? ಒಗ್ಗಟ್ಟಾಗಿರುವುದು ಯಾವ ರೀತಿಯಲ್ಲಿ? ಎಂಬುದಕ್ಕೆ ಉದಾಹರಣೆಯನ್ನು ಏಕೀಕರಣವಾದ ಈ ೫೦ ವರುಷದಲ್ಲಿ ನಮಗೆ ಇನ್ನು ಹೇಳಲಾಗಲಿಲ್ಲ ಎಂಬಂಥ ಅವರ ಅನಿಸಿಕೆ ನಮ್ಮೆಲ್ಲರದ್ದೂ ಹೌದು. ನಾವು 'ಬಾರಿಸು ಕನ್ನಡ ಡಿಂಡಿಮವ' ಎಂದು ಆಶಿಸಿದ್ದು ಅಥವಾ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂದು ಕನಸು ಕಂಡದ್ದು ಕಾವ್ಯದಲ್ಲಿ ಮಾತ್ರ ಎಂಬುದಕ್ಕೆ ಅವರ ಬರಹ ಒಂದು ಅಪರೂಪದ ರೂಪಕವಾಗಿ ಹೊರಹೊಮ್ಮಿದೆ.

ಹೀಗೆ ಕರ್ನಾಟಕ ಏಕೀಕರಣದ ಅನುಭವಗಳನ್ನು, ಅದರಿಂದ ನಾವು ನಿರೀಕ್ಷಿಸಿದ್ದನ್ನು, ತೆರೆದಿಟ್ಟ ಇಲ್ಲಿಯ ಲೇಖನಗಳೆಲ್ಲ ಎಲ್ಲಾ ಅರ್ಥದಲ್ಲಿ ಇಂದು ನಮ್ಮ ನಾಯಕರು ಕಣ್ಣುತೆರೆದು ಓದಬೇಕಾದ 'ಭಗವದ್ಗೀತೆ'ಯಾಗಿದೆ. ಏಕೀಕರಣಕ್ಕೆ ಮುಂಚೆ ಕನ್ನಡ ಮಾತನಾಡುವ ಒಂದು ಪ್ರದೇಶದ ಮಂದಿ ಅದೇ ಕನ್ನಡ ಮಾತನಾಡುವ ಇನ್ನೊಂದು ಪ್ರದೇಶದ ಮಂದಿಯ ಮೇಲೆ ಹೇಗೆ ಸವಾರಿ ಮಾಡುತ್ತಿದ್ದರು ಎಂಬುದೂ ಇಲ್ಲಿಯ ಕೆಲವು ಬರೆಹಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡಿದೆ. ಇದು ಏಕೀಕರಣಕ್ಕೆ ಹೇಗೆ ಅಡ್ಡಿಯಾಗಿತ್ತು ಎಂಬುದನ್ನು ಆಯಾ ಲೇಖಕರು ಸರಿಯಾಗಿಯೇ ಗುರುತಿಸಿದ್ದಾರೆ. ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ, ಕೊಡಗು ಕರ್ನಾಟಕ, ಮದ್ರಾಸ್ ಕರ್ನಾಟಕ ಎಂದು ಚದುರಿಹೋಗಿದ್ದ ಕರ್ನಾಟಕದ ಭಾಗಗಳಲ್ಲಿಯ ಜನನಾಯಕರು (ಮತ್ತು ಕೆಲವು ಅಧಿಕಾರಿಗಳೂ ಕೂಡಾ) ಅಖಂಡ

ಕರ್ನಾಟಕದ ಉದಯವಾದರೆ ತಾವು ಕಳೆದುಕೊಳ್ಳುವುದು ಏನೇನನ್ನು ಎಂದು ಲೆಕ್ಕಹಾಕಿದ್ದೂ ಇದೆ ಎಂದು ಇಂತಹ ಬರಹಗಳಿಂದ ಸ್ಪಷ್ಟವಾಗುತ್ತದೆ. ಆದರೆ ಇವರೆಲ್ಲರ ಅಂತರಂಗದಲ್ಲಿ ಮಾತ್ರ ಕನ್ನಡತನ ಇತ್ತು, ಕನ್ನಡ ಪ್ರೀತಿ ಇತ್ತು ಅದ್ದರಿಂದಲೇ ಅವರೆಲ್ಲರೂ ಕೊನೆಗೆ ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಸ್ವಾರ್ಥವನ್ನು ಕೈಬಿಟ್ಟರು ಎಂಬುದು ಕೊನೆಗೆ ವೇದ್ಯವಾಗುತ್ತದೆ. ಆದರೆ ಈಗ ಏನಾಗಿದೆ ? ಕನ್ನಡತನವೂ ಕನ್ನಡ ಪ್ರೀತಿಯೂ ಇಲ್ಲ ಎಂಬ ಸ್ಥಿತಿ ನಮ್ಮದು. ನಾವೆಲ್ಲ ಭೌಗೋಳಿಕವಾಗಿ ಕರ್ನಾಟಕದಲ್ಲಿ ಇದ್ದರೂ ನಮ್ಮ ಮನಸ್ಸುಗಳು ಒಂದಾಗಿಲ್ಲ. ಆದ್ದರಿಂದಲೇ ಮತ್ತೆ ಕರ್ನಾಟಕವನ್ನು ಒಡೆಯುವ ಮಾತು ಆಗಾಗ ಕೇಳಿ ಬರುತ್ತಿದೆ ಎಂಬ ನಿಟ್ಟುಸಿರನ್ನು ಬಿಡುವ ಸ್ಥಿತಿ ಈ ಪುಸ್ತಕವನ್ನು ಓದಿ ಕೆಳಗಿಟ್ಟಾಗ ಆಗುತ್ತದೆ. ಇಂಥ ನಿಟ್ಟುಸಿರು ಇರುವಷ್ಟು ದಿನ ಕರ್ನಾಟಕಕ್ಕೆ ಅರ್ಥ ಏನು ಎಂಬುದನ್ನು ನಾವು ಮತ್ತೆ ಕೇಳಿಕೊಳ್ಳಬೇಕಾಗಿದೆ.

ಕುತೂಹಲದ ವಿಚಾರವೆಂದರೆ ಕರ್ನಾಟಕದ ಏಕೀಕರಣದಲ್ಲಿ ವಿಶೇಷ ಆಸಕ್ತಿ ವಹಿಸಿದವರು ಎಂದುಕೊಂಡ ಕಾಂತಾವರದ ಕೆ. ಬಿ. ಜಿನರಾಜ ಹೆಗ್ಡೆ ಮತ್ತು ಕೋಟ ರಾಮಕೃಷ್ಣ ಕಾರಂತರ ಹೆಸರುಗಳು ಕೇವಲ ಹೆಸರಾಗಿ ಮಾತ್ರ ಒಂದೆರಡು ಕಡೆ ಕಾಣಿಸಿಕೊಳ್ಳುತ್ತದೆಯೇ ವಿನಾ, ಏಕೀಕರಣಕ್ಕೆ ಅವರ ಕೊಡುಗೆ ಏನು ಎನ್ನುವುದು ಇಲ್ಲಿಲ್ಲ. ಏಕೀಕರಣದ ಅನಂತರ ಈ ಹಿರಿಯರಿಬ್ಬರೂ ರಾಜಕೀಯದಿಂದ ನಿಧಾನವಾಗಿ ದೂರ ಹೋದುದರಿಂದ ಪ್ರಾಯಃ ಅಪ್ರಸ್ತುತರಾಗಿರಬಹುದೇ? ಎನ್ನುವ ಪ್ರಶ್ನೆ ಗಾಢವೂ ನಿಗೂಢವೂ ಆಗಿದೆ! ಪ್ರಾಯಶಃ ಈ ಪ್ರಶ್ನೆಗೆ ಈಗ ಉತ್ತರ ನಿರೀಕ್ಷಿಸುವವರೂ ಇಲ್ಲ, ಹೇಳುವವರೂ ಇಲ್ಲ.



# ಬಾಳಿಗೊಂದು ಬೆಳಕು : ರಾಮಾಯಣ ದೃಷ್ಟಿ

ಡಾ. ಎಂ. ಪ್ರಭಾಕರ ಜೋಶಿ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹಲವು ಬಗೆಯಿಂದ ಸೇವೆಗೈದ ಹಿರಿಯರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಂದ ಸಂಪಾದಿತವಾದ ಕೃತಿ 'ಬಾಳಿಗೊಂದು ಬೆಳಕು: ರಾಮಾಯಣ ದೃಷ್ಟಿ' ಶ್ರೀ ಜಯರಾಮ ಸೇವಾ ಮಂಡಳಿ, ಬೆಂಗಳೂರು ನಡೆಸಿದ ಉಪನ್ಯಾಸ ಮಾಲೆಯ ಸಂಗ್ರಹ. ಸಾಹಿತ್ಯಕ, ಧಾರ್ಮಿಕ, ಸಾಂಸ್ಕೃತಿಕ ದೃಷ್ಟಿಗಳನ್ನು ಅನುಸರಿಸಿ ರಾಮಾಯಣದ ಹಲವು ಅಂಶಗಳನ್ನು ಅಳವಡಿಸಿ ಬರೆಯಲಾಗಿರುವ ಇಲ್ಲಿಯ ಹದಿನೇಳು ಉಪನ್ಯಾಸ – ಲೇಖನಗಳು, ಒಟ್ಟಾಗಿ ರಾಮಾಯಣದ ಅಧ್ಯಯನದ ವಿವಿಧ ನೋಟಗಳ ಒಂದು ಒಳ್ಳೆಯ ಚಿತ್ರಣವನ್ನು ನೀಡುತ್ತವೆ. ರಾಮಾಯಣವನ್ನು ಹೇಗೆಲ್ಲ ನೋಡಬಹುದು (ಆ ಸಾಧ್ಯತೆ ಅಪಾರ) ಎಂಬ ಒಂದು ಪ್ರಮಾಣದ ಚಿಂತನೆಯೂ ಈ ಗ್ರಂಥದ ವಾಚನದಿಂದ ಒದಗುತ್ತದೆ. ರಾಮಾಯಣದಲ್ಲಿ ವೈದಿಕ ಸಂಸ್ಕೃತಿ (ಡಾ. ಸಿ. ಎಲ್. ಪ್ರಭಾಕರ), ಶಾಶ್ವತ ಮೌಲ್ಯಗಳು (ಡಾ. ವನಿತಾ ರಾಮಸ್ವಾಮಿ), ಪಿತೃವಾಕ್ಯ ಪರಿಪಾಲನೆ (ಸೂರ್ಯನಾರಾಯಣ), ರಾಮನ ಗುಣಶೀಲಗಳು (ಡಾ. ಎಸ್. ಕೃಷ್ಣ ಕುಮಾರ್) ವಾತ್ಸಲ್ಯದ ಪ್ರಭಾವ (ಡಾ. ವೈ. ಎನ್. ಗಾಯತ್ರಿ), ದಾಂಪತ್ಯದಲ್ಲಿ ಅನ್ಯೋನ್ಯತೆ (ಡಾ. ಮಲ್ಲೇಪುರಂ ಜಿ. ವೆಂಕಟೇಶ), ರಾಮಾಯಣದಲ್ಲಿ ಋಷ್ಯಾಶ್ರಮಗಳು (ಶ್ರೀ ಶ್ರೀ ರಂಗಪ್ರಿಯ ಸ್ವಾಮಿ), ರಾಮಾಯಣದಲ್ಲಿ ರಾಮಸ್ತೋತ್ರಗಳು (ಎಲ್. ಸುಬ್ರಹ್ಮಣ್ಯ), ಭರತನ ಸೋದರ ಪ್ರೀತಿ (ಡಾ. ಎನ್. ಎಸ್. ಅನಂತರಂಗಾಚಾರ್), ರಾಮಾಯಣ – ಸ್ತ್ರೀವಾದದ ದೃಷ್ಟಿಯಲ್ಲಿ (ಡಾ. ಎಸ್. ಆರ್. ಲೀಲಾ), ರಾಮಾಯಣವನ್ನು ಸೀತಾಚರಿತ್ರ ಎನ್ನಬಹುದೆ? (ಲಲಿತಮ್ಮ), ರಾಮಾಯಣ ಪ್ರಜಾಪ್ರಭುತ್ವ (ಪ್ರೊ. ಕೆ. ಇ. ರಾಧಾಕೃಷ್ಣ), ಜೈನ ರಾಮಾಯಣ (ಡಾ. ಪಿ. ವಿ. ನಾರಾಯಣ), ಇಂಡೋನೇಷಿಯದ ರಾಮಕೀನ್ (ಡಾ. ಎಸ್. ರಂಗನಾಥ್) ಮತ್ತು ಸಂಪಾದಕರೆ ಬರೆದ ಮೂರು ಲೇಖನಗಳು – ದಶರಥನ ಸಂಸಾರ, ಕುಂಭಕರ್ಣ ಮತ್ತು ಅದ್ಭುತ ರಾಮಾಯಣ – ಸೇರಿ ಈ ಸಂಕಲನದ ಹದಿನೇಳು ಲೇಖನಗಳು ರಾಮಾಯಣ ಅಧ್ಯಯನದ ಹಲವು ಹಾದರಿಗಳನ್ನು ಕಾಣಿಸಿ, ರಾಮಾಯಣಕ್ಕೆ ಒಳ್ಳೆಯ ಪ್ರವೇಶಿಕೆಯನ್ನು ಒದಗಿಸುತ್ತವೆ. ಮಾತ್ರವಲ್ಲ ಒಟ್ಟಾಗಿ ಕಥೆಯ ಮುಖ್ಯ ಘಟ್ಟಗಳನ್ನೂ ಪರಿಚಯಿಸುತ್ತವೆ. ಹೆಚ್ಚಿನ ಲೇಖನಗಳು ಉಪನ್ಯಾಸಗಳನ್ನು ಆಧರಿಸಿದುದರಿಂದ ಸರಳವಾಗಿದ್ದು ಎಲ್ಲ ಮಟ್ಟದ

ಓದುಗರಿಗೆ ತಲುಪುವಂತೆ ಇವೆ. ರಾಮಾಯಣ ವಿಶ್ಲೇಷಣೆಯ ಒಂದು ಹದವಾದ ಮಾದರಿಯಾಗಿವೆ. ಎಲ್ಲ ಲೇಖನಗಳೂ ವಿಚಾರ ಮತ್ತು ಅಭಿವ್ಯಕ್ತಿಗಳಲ್ಲಿ ಒಳ್ಳೆಯ ಗುಣಮಟ್ಟ ಹೊಂದಿವೆ.

ರಾಮಾಯಣದ ವಿವಿಧ ಮೌಲ್ಯಗಳು, ಘಟ್ಟಗಳು, ಮತ್ತು ಅಂಶಗಳ ಕುರಿತು ಈಗಾಗಲೇ ಚರ್ಚಿತವಾಗಿರುವ ವಿಷಯಗಳ ಮೇಲೆ ಇರುವ ಬರಹಗಳಲ್ಲೂ, ಹೊಸತನವಿದೆ. ಉದಾ: ದಾಂಪತ್ಯದ ಕುರಿತು ಡಾ. ಮಲ್ಲೇಪುರಂ, ಋಷ್ಯಾಶ್ರಮಗಳ ಕುರಿತು ಶ್ರೀ ಶ್ರೀ ರಂಗಪ್ರಿಯ ಸ್ವಾಮೀಜಿ, ಶಾಶ್ವತಮೌಲ್ಯಗಳ ಕುರಿತು ಡಾ. ವನಿತಾ ರಾಮಸ್ವಾಮಿ ಅವರ ಬರಹಗಳು.

'ರಾಮಾಯಣ ಮತ್ತು ಪ್ರಜಾಪ್ರಭುತ್ವ' (ಪ್ರೊ. ರಾಧಾಕೃಷ್ಣ ಕೆ. ಇ.) ಲೇಖನವು ಮಹಾಕಾವ್ಯವೊಂದರಲ್ಲಿ ಬರುವ ಪ್ರಭುತ್ವ ಜನಾಭಿಪ್ರಾಯ ವಿಚಾರವನ್ನು ಸಾರ್ವಕಾಲಿಕ ಮತ್ತು ತತ್ಕಾಲೀನ ಸಾಂಸ್ಕೃತಿಕ ಪರಿವೇಶದಲ್ಲಿ ಹೊಗೆ ನೋಡಬಹುದೆಂಬುದರ ಒಳ್ಳೆಯ ಉದಾಹರಣೆ. ಡಾ. ಎಸ್. ಆರ್. ಲೀಲಾ ಅವರ 'ರಾಮಾಯಣ – ಸ್ತ್ರೀವಾದದ ದೃಷ್ಟಿಯಲ್ಲಿ' ಲೇಖನವು, ಸ್ತ್ರೀವಾದ ಮತ್ತು ಎಡಪಂಥೀಯ ಚಿಂತನೆಗಳ ಅತಿರೇಕದ ವಿಶ್ಲೇಷಣೆಗಳಿಗೆ ಸೂಕ್ತ ಪ್ರತಿವಾದವೂ, ಸ್ತ್ರೀಪಾತ್ರಗಳ, ನೆಲೆಗಳ ಒಳ್ಳೆಯ ಪರಿಶೀಲನೆಯೂ ಆಗಿ ಮೌಲಿಕವಾಗಿದೆ. 'ಜೈನರಾಮಾಯಣ' (ಡಾ. ಪಿ. ವಿ. ನಾರಾಯಣ) ಇಂಡೋನೇಶಿಯನ್ ರಾಮಕೀನ್ (ಡಾ. ಎಸ್. ರಂಗನಾಥ್) ಲೇಖನಗಳು – ರಾಮಕಥೆ ಯಾವೆಲ್ಲ ದಿಕ್ಕುಗಳಲ್ಲಿ, ದೇಶ, ಮತಗಳ ನೆಲೆಯಲ್ಲಿ ಮರುಹುಟ್ಟು ಪಡೆದಿದೆ ಎಂಬುದನ್ನು ಅಭ್ಯಸಿಸಲು ಸೀಮಿತ ಚಿಂತನಗಳನ್ನು ಮೀರಿ ಯೋಚಿಸಲು ಪ್ರೇರಕ.

ರಾಮಾಯಣವನ್ನು 'ಸೀತಾಯಾಃ ಚರಿತಂ ಮಹತ್' ಎಂದು ವಾಲ್ಮೀಕಿಯೇ ಹೇಳಿರುವುದರ ಸುಂದರ ಸಮರ್ಥನೆ ಶ್ರೀಮತಿ ಲಲಿತಮ್ಮನವರ ಲೇಖನ ಸೀತಾಚರಿತ್ರೆ.

ಸಂಪಾದಕರಾದ ಪ್ರೊ. ವೆಂಕಟಸುಬ್ಬಯ್ಯನವರು ಬರೆದಿರುವ ಮೂರು ಲೇಖನಗಳು ದಶರಥನ ಸಂಸಾರ, ಕುಂಭಕರ್ಣ, ಅದ್ಭುತ ರಾಮಾಯಣ ಇವು ರಾಮಾಯಣದ ಬಗೆಗಿನ ತಿಳಿವನ್ನು ವಿಸ್ತರಿಸುವ ಬರಹಗಳಾಗಿವೆ. ಗ್ರಂಥದ ಯೋಜನೆ, ನಿರ್ವಹಣೆ ಚೆನ್ನಾಗಿದ್ದು ಸಂಪಾಕರ ಕಾರ್ಯವು ಅಭಿನಂದನಾರ್ಹ. ಕನ್ನಡದ ರಾಮಾಯಣಸಾಹಿತ್ಯಕ್ಕಿದು ಬೆಲೆಯುಳ್ಳ ಸೇರ್ಪಡೆ. ಕನ್ನಡದಲ್ಲಿರುವ ರಾಮಾಯಣ ಪರಂಪರೆಯ ಬಗೆಗೂ, ಒಂದು ಲೇಖನ ಇರಬಹುದಾಗಿತ್ತು.

'ಬಾಳಿಗೊಂದು ಬೆಳಕು' ಗ್ರಂಥವನ್ನು ಪರಿಚಯಿಸಿ ಅದರ ಸಂಪಾದಕರನ್ನು ಅಭಿನಂದಿಸುವ ಹೊತ್ತಿನಲ್ಲಿ ಈ ಗ್ರಂಥದಂತೆ ಅವರ ಜೀವನ, ಕಾರ್ಯವಿಧಾನ, ಸತತ ಸಾಹಿತ್ಯ ಕೈಂಕರ್ಯಗಳು, ಅವರ ಪಕ್ವ, ಗುಣಗ್ರಾಹಿ, ಸಮತೋಲ ವ್ಯಕ್ತಿತ್ವವೂ ಈ ಗ್ರಂಥದ ಹೆಸರಿನಂತೆಯೆ ಕನ್ನಡಿಗರಿಗೆ ಮಾರ್ಗದರ್ಶಿಯಾಗಿದೆ ಎಂಬುದನ್ನು ಬರಿಯ ಪ್ರಶಂಸೆಯಿಲ್ಲದ ವಾಸ್ತವವಾಗಿ ಹೇಳಬಹುದು.



# ಶ್ರೀರಾಮಸಂಭವ

■ ದ್ವಿವೇದಿ ವಿದ್ವಾನ್ ಕೊರ್ಗಿ ವೇಂಕಟೇಶ್ವರ ಉಪಾಧ್ಯಾಯ

ಅಮಂತ್ರಮಕ್ಷರಂ ನಾಸ್ತಿ ನಾಸ್ತಿಮೂಲಮನೌಷಧಂ ।
ಅಯೋಗ್ಯಃ ಪುರುಷೋ ನಾಸ್ತಿ ಯೋಜಕಸ್ತತ್ರ ದುರ್ಲಭಃ ॥

– ಮಂತ್ರವಾಗದ ಅಕ್ಷರವಿಲ್ಲ. ಔಷಧಕ್ಕಾಗದ ಮೂಲಿಕೆಯಿಲ್ಲ. ಪ್ರಯೋಜನಕ್ಕೆ ಬಾರದ ಮನುಷ್ಯನಿಲ್ಲ. ಆದರೆ ಇದನ್ನರಿತು ಅಳವಡಿಸಿಕೊಳ್ಳುವಂತೆಸಗುವ ವಿನಿಯೋಗ ವಿಧಿಜ್ಞರು, ಸಮನ್ವಯಸಾಧಕರು, ಒಗ್ಗೂಡಿಸುವ ಸಂಘಟಕರು, ಕಳೆಹಾಕುವ ಬಲ್ಲಿವರು, ಸಂಗಮಸ್ಥಾನವನ್ನು ಕಲ್ಪಿಸುವ ಜಂಗಮರು ಜಗದಲ್ಲಿ ಬೆರಳೆಣಿಕೆಗೂ ಸಿಗುವುದು ಕಷ್ಟ. ಅಂತಹ ಸರಳಸಹೃದಯಿ ಲೋಕದಲ್ಲಿ ವಿರಳ.

'ಧಾತಾ ಯಥಾಪೂರ್ವಮಕಲ್ಪಯತ್' ಸೃಷ್ಟಿಯಲ್ಲಿ ಯಾವುದೂ ಹೊಸತಲ್ಲ; ಹೊಸತಿಲ್ಲ. ಎಲ್ಲವೂ ಹಳೆಯವೇ. ಹಳೆಯದರಲ್ಲಿ ಹೊಸತನ ಬರುವುದೂ ಚೆಲವು ಕೊನರುವುದೂ ಅವುಗಳ ಸಂಯೋಜನೆಯಿಂದ. ಒಟ್ಟಂದವನ್ನು ಹುಟ್ಟುಹಾಕುವುದೇ ಮೇಲಾದ ಕೆಲಸ; ಮಿಗಿಲಾದ ಮಿನುಗು.

ಅಕ್ಕಿ ಇದೆ; ನೀರಿದೆ; ಪಾತ್ರೆಯಿದೆ; ಒಲೆಯಿದೆ; ಬೆಂಕಿ ಇದೆ; ಬೆಲ್ಲವಿದೆ; ಹಾಲಿದೆ; ಇಷ್ಟಕ್ಕೇ ಸ್ವಾದಿಷ್ಟವಾದ ಪಾಯಸ ಸಿದ್ಧವಾಗದು. ಇವನ್ನೆಲ್ಲ ರುಚಿಗೆಡದಂತೆ ಹದವರಿತು ಪ್ರಮಾಣಬದ್ಧವಾಗಿ ಸೇರಿಸಿ ಬೇಯಿಸಿ ಲೋಕಮೆಚ್ಚುವಂತೆ ಪಾಕ ಮಾಡುವ ಪಾಚಕನೊಬ್ಬ ಬೇಕೇ ಬೇಕು. ಹೂವುದಾರಗಳಿದ್ದ ಮಾತ್ರಕ್ಕೆ ಹಾರವಾಗುವುದಿಲ್ಲ. ಕೊಯ್ದಾಯ್ದು ಕಟ್ಟುವ ಮಾಲೆಗಾರನೊಬ್ಬ ಬೇಕೇ ಬೇಕು.

'ಯೋಜಕಸ್ತತ್ರ ದುರ್ಲಭಃ' ಅಂತಹ ಪುಣ್ಯಾತ್ಮರು, ಪರೋಪಕಾರಿಗಳು, ಪ್ರತಿಭಾಶಾಲಿಗಳು ಲೋಕದಲ್ಲಿ ಸಿಗುವುದು ಕಷ್ಟವೆಂಬುದನ್ನು ಮೇಲಿನ ಸುಭಾಷಿತ ಸುಂದರವಾಗಿ ಬಿಂಬಿಸುತ್ತದೆ. ಬೆಂಗಳೂರಿನ ಜಯನಗರದ 'ಶ್ರೀಜಯರಾಮ ಸೇವಾಮಂಡಲಿ'ಯು 1996ರಲ್ಲಿ ಪ್ರಕಟಿಸಿದ 'ಶ್ರೀ ರಾಮಸಂಭವ' ಎಂಬ ೨೦೦ ಪುಟಗಳ ರಾಮಾಯಣದ ಕುರಿತಾದ ೧೬ ಉಪನ್ಯಾಸಗಳ ಸುಂದರ ಸಂಕಲನದ ಈ ಪುಸ್ತಿಕೆಯನ್ನು ಓದಿದಾಗ 'ಯೋಜಕಸ್ತತ್ರದುರ್ಲಭಃ' ಎಂಬ ಮೇಲಣ ಸುಭಾಷಿತದ ಮಾತು ಅಕ್ಷರಶಃ ಸತ್ಯವೆಂಬುದು ಯಾರಿಗೂ ಅರಿವಾಗುತ್ತದೆ: ಅನುಭವಕ್ಕೆ ಬರುತ್ತದೆ.

ಡಾ. ಶ್ರೀರಾಮ ಭಟ್ಟರ ಸಾಂಗತ್ಯದೊಂದಿಗೆ ಈ ಸಂಕಲನವನ್ನು ಸಂಪಾದಿಸಿ-ದವರು ವಿದ್ವದ್ವೃದ್ಧರೂ ವಯೋವೃದ್ಧರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು.

ಶ್ರೀರಾಮಸಂಭವವೆಂಬ ರಾಮಾಯಣೋಪನ್ಯಾಸಗಳ ಈ ಸಂಕಲನವು ತುಂಬಾ ವಿಶಿಷ್ಟವಾಗಿದೆ. ಮಾತ್ರವಲ್ಲ ಏಕಾಭಿಲಕ್ಷ್ಯದ ಸಾರಸ್ವತಯಜ್ಞಕ್ಕೆ ಮಾರ್ಗ-ದರ್ಶಿಯೂ ಮಾದರಿಯೂ ಆಗಿದೆ.

ಸಂಸ್ಕೃತ-ಕನ್ನಡ-ತಮಿಳು ಈ ಮೂರು ಭಾಷೆಗಳ ರಾಮಾಯಣ ಹಾಗೂ ತತ್ಸಂಬಂಧಿನೀಕೃತಿಗಳ ಸ್ಥೂಲ ಹಾಗೂ ಸಂಕ್ಷಿಪ್ತಪರಿಚಿತಿಯನ್ನು ಸಂಪಾದಕ-ರುಭಯರೂ ಸೇರಿದಂತೆ ಹದಿನಾಲ್ಕು ಮಂದಿ ವಿದ್ವಾಂಸರೂ ಈರ್ವರು ವಿದುಷಿಯರೂ ಹೃದಯಸ್ಪರ್ಶಿಯೂ ರಸಸ್ಯಂದಿಯೂ ಆದ ಒಂದೆರಡು ಉದಾಹರಣೆಗಳೊಂದಿಗೆ ಅಚ್ಚುಕಟ್ಟಾಗಿ ಕೆಲವೇ ಪುಟಗಳ ಕಿರುಗನ್ನಡಿಯಲ್ಲಿ ಕೃತಿಗಳ ವಿರಾಡ್ರೂಪವನ್ನೂ ಅಂತಃಸೌಂದರ್ಯವನ್ನೂ ಓದುಗರ ಚಿತ್ತಭಿತ್ತಿಯಲ್ಲಿ ಅಚ್ಚೊತ್ತುವಂತೆ ಪ್ರತಿಬಿಂಬಿಸಿದ್ದಾರೆ.

ವಾಲ್ಮೀಕಿ ರಾಮಾಯಣ-ಚಂಪೂ ರಾಮಾಯಣ – ಅಧ್ಯಾತ್ಮರಾಮಾಯಣ ಭಾಸ ಕಾಲಿದಾಸ ಭವಭೂತಿಯರ ಕಾವ್ಯಗಳಲ್ಲಿ ರಾಮಾಯಣ – ಕಂಬರಾಮಾಯಣ – ಕುಮುದೇಂದು ರಾಮಾಯಣ – ಪಂಪರಾಮಾಯಣ – ಲಕ್ಷ್ಮೀಶನ ಕನ್ನಡ ಜೈಮಿನಿಭಾರತದ ಪ್ರಸಂಗ – ಮುದ್ದಣನ ಅದ್ಭುತರಾಮಾಯಣ ಹಾಗೂ ಇತರ ರಾಮಾಯಣಸಂಬಂಧಿನಿಯಾದ ಕೃತಿಗಳು, ನರಹರಿ ಕವಿಯ ತೊರವೆ ರಾಮಾಯಣ – ಶ್ರೀರಾಮಪರೀಕ್ಷಣಂ (ಡಿ.ವಿ.ಜಿ) – ಶ್ರೀರಾಮಪಟ್ಟಾಭಿಷೇಕ (ಮಾಸ್ತಿ) – ಶ್ರೀರಾಮಾಯಣದರ್ಶನಂ (ಕುವೆಂಪು) – ಕೊನೆಯ ಬರೆಹವಾಗಿ ಸಂಸ್ಕೃತದ ಕೆಲವು ರಾಮಕಥಾ ಕಾವ್ಯನಾಟಕ ಸ್ತೋತ್ರಗಳು – ಹೇಗೆ ಹೇಗೆ ರಾಮಾ-ಯಣವು ವಿಶ್ವತೋಮುಖವೂ ವಿಶ್ವತಶ್ಚಕ್ಷುವೂ ಆಗಿ ಇತರೇತರ ಭಾಷೆ ಹಾಗೂ ಸಾಹಿತ್ಯಪ್ರಕಾರಗಳಲ್ಲಿ ಮೆಯ್ದಾಳಿದೆ ಎಂಬುದನ್ನು ಅಂಗೈಯಲ್ಲಿ ಅರಮನೆ ತೋರಿದಂತೆ ಕಾವ್ಯಾಂತರಂಗವನ್ನು ಅಕ್ಷರೀಕರಿಸಿದ ಚೊಕ್ಕ ಚಿತ್ರಣದ ಚಿಕ್ಕ ಸಂಕಲನವಿದು.

ಈ ಸಂಕಲನದ ಮೊದಲಲೇಖನ 'ರಾಮಾಯಣವನ್ನು ಕುರಿತು ಒಂದು ಅವಲೋಕನ' ಇದನ್ನು ಬರೆದವರು ಪ್ರಸ್ತುತ ಪುಸ್ತಿಕೆಯ ಸಂಪಾದಕರಲ್ಲಿ ಪ್ರಥಮ-ರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು. ನಲ್ವತ್ತಾರು ಪುಟಗಳ ವ್ಯಾಪ್ತಿಯ ಈ ಅವಲೋಕನ ಲೇಖನದಲ್ಲಿ 'ಭಾರತದ ಇತಿಹಾಸ ಮತ್ತು ರಾಮಾಯಣ' ಎಂಬುದರಿಂದ ತೊಡಗಿ, ಕನ್ನಡ ಭಾಷೆಯಲ್ಲಿ ರಾಮಾಯಣಗಳು ಎಂಬಲ್ಲಿವರೆಗೆ ಒಟ್ಟು ಹನ್ನೆರಡು ಪರಿಚ್ಛೇದಗಳು ಇವೆ. ರಾಮಾಯಣದ ಕಥಾಕಾಯವನ್ನೂ ಕಾವ್ಯವನ್ನೂ ನಾನಾಕೋನಗಳಿಂದ ಹಿತವಾಗಿ ಹದವಾಗಿ ತೂಕತಪ್ಪದಂತೆ ಪಾಕ ಕೆಡದಂತೆ ಕಂಡರಿಸಿದ ಬರೆಹವಿದು.

ಹಸ್ತಪ್ರತಿಗಳನ್ನು ಕಾಲಾನುಸಾರಿಯಾಗಿ ಹೇಗೆ ಅಭ್ಯಾಸಮಾಡಬೇಕೆಂಬುದಕ್ಕೆ ಇಲ್ಲಿ ಐದು ಸೂತ್ರಗಳಿವೆ

೧. ಶಬ್ದಸ್ವರೂಪ ಪರಿಶೀಲನೆ

೨. ಉತ್ಖನನ ಹಾಗೂ ಇತರ ಸಂಶೋಧನೆಗಳನ್ನು ಗಮನಿಸುವುದು

೩. ಕಥೆಯಲ್ಲಿ ಬರುವ ಭೌಗೋಳಿಕ ಪ್ರದೇಶ ಮತ್ತು ಅಲ್ಲಿ ವಾಸಿಸುತ್ತಿದ್ದ ಜನಾಂಗಗಳ ಪರಿಶೀಲನೆ

೪. ಜನರ ಧಾರ್ಮಿಕಶ್ರದ್ಧೆ ಮತ್ತು ತತ್ತ್ವಶಾಸ್ತ್ರೀಯವಾದ ಆಲೋಚನೆಗಳ ಕುರಿತಾದ ಸೂಚನೆ ವಿವರಣೆಗಳನ್ನು ಗಮನಿಸುವುದು.

೫. ತತ್ತತ್ಪ್ರದೇಶಲಭ್ಯವಾದ ಪ್ರಾಣಿ-ಪಕ್ಷಿ-ಸಸ್ಯಗಳ ಕುರಿತಾದ ದಾಖಲೆಗಳನ್ನು ಪರಿಶೀಲಿಸುವುದು.

ರಾಮಾಯಣದ ರಚನೆಗೆ ಮೂಲ ಉದ್ದೇಶವೇನು? ಎಂಬ ಪರಿಚ್ಛೇದದ ಮಾತುಗಳು ಸಹೃದಯರ ಮನೋಮೇಧೆಗಳನ್ನು ತಟ್ಟುವಂತಿವೆ, ಮುಟ್ಟುವಂತಿವೆ.

'ಇದು ಮುಖ್ಯವಾಗಿ ರಾಮನ ಕಥೆ. ಇತರರೊಡನೆ ರಾಮನು ಕಂಡುಕೊಂಡ ಜೀವನಾನುಭವದ ಕಥೆ. ರಾವಣಾದಿರಾಕ್ಷಸರು ಹತರಾದ ಕಥೆ. ಆದರೆ ಈ ಕಥೆ ಅಷ್ಟಕ್ಕೆ ನಿಲ್ಲುವುದಿಲ್ಲ. ರಾಮನೆಂಥವನು ಎಂಬುದನ್ನು ಪರ್ಯಾಲೋಚಿಸಲು ನಮಗೆ ಮಾರ್ಗದರ್ಶನಮಾಡುತ್ತದೆ.'

'ಒಬ್ಬ ಮಹಾಶಕ್ತನಾದ ಪುರಾಣಪುರುಷನು ಹೇಗೆ ಎಲ್ಲೂ ಅಧರ್ಮಕ್ಕೆ ಎಡೆಗೊಡದೆ ನಡೆದುಕೊಂಡ ಎಂಬುದು ಮನದಟ್ಟಾಗಿ ಬೆಳೆದುನಿಲ್ಲುತ್ತದೆ. ರಾಮಾಯಣ-ವನ್ನು ಪೂರ್ತಿ ಓದಿದ ಮೇಲೆ ಈ ಕಥೆಯ ಉದ್ದೇಶವೇನು ಎಂದು ಕೇಳಿಕೊಂಡರೆ ನೂರಾರು ಭಾವನೆಗಳು ಮುನ್ನುಗ್ಗಿ ನಾವೆಲ್ಲ ರಾಮಾಯಣದ ಉದ್ದೇಶಗಳೇ ಎಂದು ನಮ್ಮ ಮನಸ್ಸಿಗೆ ತಟ್ಟುವಂತೆ ಹೇಳುತ್ತಿರುವಂತೆ ಚಿತ್ರಮೂಡುತ್ತದೆ.'

ಈ ಪರಿಚ್ಛೇದದ ಕೊನೆಯ ಮಾತು ಹೀಗಿದೆ –

'ಹೀಗೆ ಸೀತಾರಾಮರ ಇಹದ ಬಾಳಿನ ಕೊನೆಯನ್ನು ಚಿತ್ರಿಸುವುದು ವಾಲ್ಮೀಕಿಯ ಉದ್ದೇಶಿತ ಕಾರ್ಯವಲ್ಲ ಎಂದು ಹೇಳುವುದು ಹೇಗೆ?'

ಮುಂದೆ 'ರಾಮನ ವ್ಯಕ್ತಿತ್ವ', 'ರಾಮಾಯಣದ ಇತರ ಪಾತ್ರಗಳು', 'ಸೀತೆ ರಾಮಾಯಣದ ಕೇಂದ್ರಬಿಂದು', 'ಹನುಮಂತ', 'ರಾವಣ, 'ಇತರ ಪಾತ್ರಗಳು-ಪ್ರಸಂಗಗಳು', 'ಅನ್ಯದೇಶಗಳಲ್ಲಿ ರಾಮಾಯಣ', 'ಕನ್ನಡ ಭಾಷೆಯ ರಾಮಾಯಣ' ಎಂಬ ಪರಿಚ್ಛೇದಗಳಲ್ಲಿ ತತ್ತದ್ವಿಷಯಗಳ ಹೃದಯಭಾಗವನ್ನು ತೆರೆದು ತೋರಲಾಗಿದೆ.

'ರಾಮಾಯಣದ ಕಾವ್ಯಗುಣ' ಎಂಬ ಪರಿಚ್ಛೇದದಲ್ಲಿ ಹತ್ತು ಅಂಶಗಳನ್ನು ಪಟ್ಟಿ ಮಾಡಿ ಕೊಡಲಾಗಿದೆ.

೧. ರಾಮಸೀತೆಯರ ಕಥೆ ಒಂದೊಂದು ಹಜ್ಜೆಯಲ್ಲೂ ಆಸಕ್ತಿಯನ್ನು ಕೆರಳಿಸುವ ಸ್ವಾರಸ್ಯ ಉಳ್ಳದ್ದಾಗಿದೆ.

೨. ಈ ಕಥೆಯನ್ನು ಹೇಳುವ ಭಾಷೆಯಲ್ಲಿ ಅಕ್ಲಿಷ್ಟವೂ ಪ್ರಸನ್ನವೂ ಆದ ಗಾಂಭೀರ್ಯವೂ ಇದೆ.

೩. ಈ ಕಾವ್ಯದ ಛಂದಸ್ಸು ಶ್ಲೋಕವಾದುದರಿಂದ ಬಹು ಸುಲಭವಾಗಿ ಓದಬಹುದಾದ ಪಠನ ಮಾಡುಬಹುದಾದ ಗುಣವನ್ನು ಹೊಂದಿದೆ.

೪. ಕಥಾನಾಯಕನು ರಾಮ. ವೈದೇಹಿ ಆತನ ಪತ್ನಿ. ಲಕ್ಷ್ಮಣ ರಾಮನ ತಮ್ಮ, ಇವರ ಕಥೆ 'ಉದಾರವೃತ್ತಾರ್ಥಪದೈರ್ಮನೋರಮ' ಸೊಗಸಾದ ನಿರೂಪಣೆ ಇದೆ.

೫. ವಿದ್ವಾಂಸರ ವ್ಯಾಕರಣ ಮರ್‍ಯಾದೆಯನ್ನನುಸರಿಸಿ ಸಂಧಿ–ಸಮಾಸ–ಗುಣ ಮಾಧುರ್ಯ–ಅರ್ಥ–ವ್ಯಕ್ತಿ – ಇತ್ಯಾದಿಗಳಿಂದ ಕೂಡಿ ಬಂಧವು ಭವ್ಯವಾಗಿದೆ.

೬. ಲೋಕಜೀವನದ ವರ್ಣನೆ ಇದೆ. ಪ್ರಕೃತಿವರ್ಣನೆ ಇದೆ. ದೈವ ಮಹಿಮೆ ಇದೆ.

೭. ನವರಸರಗಳ ನಿರೂಪಣೆಯು ಹೊಂದಿಕೊಂಡಿದೆ.

೮. ಇದು ಕಾಮಾರ್ಥಗುಣಸಂಯುಕ್ತವಾದದ್ದು. ಧರ್ಮಾರ್ಥಗುಣ ವಿಸ್ತರ-ವಾದದ್ದು. ಸಮುದ್ರದಂತೆ ರತ್ನಾಢ್ಯವಾದದ್ದು. ಮನೋಹರವಾದದ್ದು.

೯. ಉಪಮಾರೂಪಕಾದಿ ಅರ್ಥಾಲಂಕಾರಗಳಿಂದಲೂ ಅನೇಕ ಶಬ್ದಾ-ಲಂಕಾರಗಳಿಂದಲೂ ರಮ್ಯವಾದ್ದು.

೧೦. ಎಲ್ಲಕ್ಕಿಂತ ಮುಖ್ಯವಾಗಿ ಮಾನವರ ಬಾಳಿಗೆ, ಸುಸಂಸ್ಕೃತಜೀವನಕ್ಕೆ ಮಾರ್ಗದರ್ಶಕವಾದ್ದು. ದೈವತ್ವದಲ್ಲಿ ನಂಬಿಕೆಯನ್ನು ಉದ್ಬೋಧಿಸುವ ಗುಣ ಇಲ್ಲಿದೆ. ಹೀಗಿರುವುದರಿಂದ ರಾಮಾಯಣದ ಯಾವಭಾಗವನ್ನು ಆರಿಸಿ ಓದಿದರೂ ನಮಗೆ ಕಾವ್ಯಗುಣ ಸೂಸುತ್ತಿರುವುದು ಗೋಚರವಾಗುತ್ತದೆ.

'ಭಾರತದ ಭಾಷೆಗಳಲ್ಲಿ ರಾಮಾಯಣಗಳು' ಎಂಬ ಪರಿಚ್ಛೇದದಲ್ಲಿ ಅಸ್ಸಾಮಿಯಿಂದ ತೊಡಗಿ ಹಿಂದಿಯತನಕ ಹತ್ತು ಭಾಷೆಗಳಲ್ಲಿರುವ ರಾಮಾಯಣದ ಕವಿ–ಕೃತಿಗಳನ್ನು ಹೆಸರಿಸಲಾಗಿದೆ.

ಈ ಅವಲೋಕನದ ಕೊನೆಯ ಮಾತು ಹೀಗಿದೆ.

ಕನ್ನಡದ ರಾಮಾಯಣದ ಕೃತಿಗಳನ್ನು ಪರಿಶೀಲಿಸಿ ವಿಸ್ತಾರವಾದ ಗ್ರಂಥವನ್ನು ರಚಿಸಬೇಕಾಗದ ಅಗತ್ಯವಿದೆ. ಈ ಗ್ರಂಥವು ಅಂಥ ಕಾರ್ಯಕ್ಕೆ ಪ್ರೇರಣೆಯಾಗಲಿ ಎಂದು ನಾನು ಹಾರೈಸುತ್ತೇನೆ.

ತುಳುನಾಡಿನ ಸಂಸ್ಕೃತಿ ಹಾಗೂ ಪರಿಸರದ ಚಿತ್ರಣದೊಂದಿಗೆ ಮೂಡಿಬಂದ ಸುಂದರ ಪರಿವರ್ತನೆ ಪರಿಕಲ್ಪನೆಗಳನ್ನೊಳಗೊಂಡ, ಆಧುನಿಕ ತುಳುಭಾಷೆಯ ಮೊದಲ ಕಾವ್ಯ 'ಮಂದಾರರಾಮಾಯಣ'. ಇದನ್ನು ಬರೆದವರು ದಿ। ಮಂದಾರ ಕೇಶವ ಭಟ್ಟರು. ಈ ಪ್ರಸ್ತಾವ ಇದರಲ್ಲಿರಬೇಕಿತ್ತು. ಹೀಗೆ ಇನ್ನೆಷ್ಟೋ ಕೃತಿಗಳು ಗೋಚರವಾಗದೇ ಉಳಿದಿರಬಹುದು. ಶತಕೋಟಿಪ್ರವಿಸ್ತರವಾದ ರಾಮಾಯಣದ ಎಲ್ಲ ಕೃತಿಗಳ ಪಟ್ಟಿಯನ್ನು ಸಮಗ್ರವಾಗಿ ಒದಗಿಸುವುದು ದುಸ್ತರವೇ ಸರಿ.



# ಸಂಸ್ಕೃತದ ರಾಮಾಯಣ ನಾಟಕಗಳಲ್ಲಿ ಪಾತ್ರ ವೈವಿಧ್ಯ

ಜಿ. ಪಿ. ಪ್ರಭಾಕರ, ಮಣಿಪಾಲ

ರಾಮಾಯಣ ಮತ್ತು ಮಹಾಭಾರತ ಗ್ರಂಥಗಳು ಭಾರತೀಯರ ಎರಡು ಕಣ್ಣುಗಳಿದ್ದಂತೆ ಎಂದರೆ ಅತಿಶಯೋಕ್ತಿ ಅಲ್ಲ. ಇಡೀ ನಮ್ಮ ಪ್ರಾಚೀನ ಸಾಹಿತ್ಯ ಪರಂಪರೆ, ಸಂವೇದನೆ ರೂಪಿಸಿದ ಈ ಎರಡು ಕೃತಿಗಳು ಸಾವಿರಾರು ರೂಪಾಂತರದಲ್ಲಿ ಕಥಾಂತರದಲ್ಲಿ ಪ್ರಕಟವಾಗಿದೆ. ಕನ್ನಡ ನಾಡಿನ ಹಿರಿಯ ಚಿಂತಕ-ಸಾಧಕ ಕೆ. ವಿ. ಸುಬ್ಬಣ್ಣ ಅವರು ಒಂದೆಡೆ ಹೇಳುವಂತೆ ರಾಮಾಯಣ ಮಹಾಭಾರತ ಎರಡು ಭಾಷೆಗಳು. ಭಾಷೆ ಹೇಗೆ ಒಂದು ಜನಸಮುದಾಯದ ಸಂವಹನದ ಮಾಧ್ಯಮವೋ ಹಾಗೆಯೇ ರಾಮಾಯಣವಾಗಲಿ, ಮಹಾಭಾರತವಾಗಲಿ, ಭಾರತದ ಯಾವುದೇ ಜನಸಮುದಾಯವು ಸಾಂಸ್ಕೃತಿಕವಾಗಿ ಸ್ಪಂದಿಸುವ ಸಾಮಾನ್ಯಮಾಧ್ಯಮ. ಭಾರತದೊಳಗಿನ ಎಲ್ಲ ಜನಸಮುದಾಯದವರಿಗೆ ತಮ್ಮ ನಿಜಜೀವನದ ಸಮಸ್ಯೆಗಳನ್ನು ಕೂಡ ರಾಮಾಯಣ ಮಹಾಭಾರತಗಳ ಮೂಲಕ ಅರ್ಥ ಮಾಡುವುದು ಸುಲಭವಾಗುತ್ತದೆ. ಆದುದರಿಂದ ಇದಕ್ಕೆ ಭಾಷೆಯ ಸ್ಥಾನವನ್ನು ಅವರು ನೀಡಿದ್ದಾರೆ. ಈ ರೀತಿಯಲ್ಲಿ ಇವು ಇತಿಹಾಸ, ಕಾವ್ಯ, ಪುರಾಣ, ಮೂರನ್ನು ಸೇರಿಸಿದ ವಿಭಿನ್ನ ಜ್ಞಾನಸಾಧನವಾಗಿದೆ.

ಸಂಸ್ಕೃತಸಾಹಿತ್ಯದ ದೃಷ್ಟಿಯಿಂದಂತೂ ಮುಖ್ಯವಾಗಿ ಈ ಎರಡು ಕೃತಿಗಳೇ ಮಹತ್ತ್ವದ ಆಕರಗ್ರಂಥಗಳಾಗಿವೆ. ಮಹಾಭಾರತ ರಾಮಾಯಣಗಳು ಇಡೀ ಸಂಸ್ಕೃತ ಸಾಹಿತ್ಯವಾಹಿನಿಯ ಮೂಲಸ್ರೋತ. ಮತ್ತು ಸ್ಫೂರ್ತಿ ಎಂದರೂ ತಪ್ಪಿಲ್ಲ. ಸಾಂಪ್ರದಾಯಿಕ ರಾಮಾಯಣಕಥೆಯನ್ನೇ ಕವಿಗಳು ತಮ್ಮ ಪ್ರತಿಭೆಯಮೂಸೆಯಲ್ಲಿ ರಸಸ್ಯಂದಿ ನಾಟಕವಾಗಿಸಿದ ಉದಾಹರಣೆಗಳೇ ಹೆಚ್ಚು.

ಈ ಹಿನ್ನೆಲೆಯಲ್ಲಿ ಬೆಂಗಳೂರು ಜಯನಗರದ ಜಯರಾಮ ಸೇವಾಮಂಡಳಿ 'ರಾಮಾಯಣದ' ಕುರಿತು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಇದರಲ್ಲಿ 'ಸಂಸ್ಕೃತದ ರಾಮಾಯಣ ನಾಟಕಗಳ' ಕುರಿತು ತಜ್ಞ ವಿದ್ವಾಂಸರಿಂದ ಉಪನ್ಯಾಸಗಳ ವಿಸ್ತೃತ ಕಾರ್ಯಕ್ರಮ ಆಯೋಜಿಸಿತ್ತು. ಈ ಉಪನ್ಯಾಸಗಳ ಲಿಖಿತ ರೂಪವೇ ಈ

'ಸಂಸ್ಕೃತದ ರಾಮಾಯಣ ನಾಟಕಗಳಲ್ಲಿ ಪಾತ್ರ ವೈವಿಧ್ಯ' ಎಂಬ ಕೃತಿ ಸಂಪಾದನೆಗೆ ಮೂಲವಾಯಿತು. ಕನ್ನಡನಾಡಿನ ಹಿರಿಯ ವಿದ್ವಾಂಸ, ನಿಘಂಟುತಜ್ಞ ಜಿ. ವೆಂಕಟ-ಸುಬ್ಬಯ್ಯನವರ ಸಂಪಾದಕತ್ವದಲ್ಲಿ ರಚನೆಗೊಂಡ ಈ ಕೃತಿ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಒಂದು ಅಪೂರ್ವ ಕೊಡುಗೆ ಎಂದೇ ಹೇಳಬಹುದು.

ಹಲವು ಸಂಶೋಧನಪ್ರಬಂಧ ಬರೆಯುವಷ್ಟು ಮೂಲದ್ರವ್ಯ ಜಿ. ವೆಂಕಟ-ಸುಬ್ಬಯ್ಯನವರು ಸಂಪಾದಿಸಿದ ಈ ಕೃತಿಯಲ್ಲಿರುವುದು ಗಮನಾರ್ಹ. ಒಂದೇ ಕಡೆಯಲ್ಲಿ ರಾಮಾಯಣದ ವಿವಿಧ ಪ್ರಯೋಗಶೀಲ, ಸೃಜನಶೀಲ ಪ್ರತಿಭಾಪ್ರವಾಹದ ನೋಟ ಎದ್ದು ಕಾಣುತ್ತದೆ. ಮುಖ್ಯವಾಗಿ ಸಂಸ್ಕೃತದ ರಾಮಾಯಣ ಆಧಾರಿತ ಪ್ರಸಿದ್ಧ ನಾಟಕಗಳ ಒಳ-ಹೊರಗನ್ನು ಈ ಕೃತಿಯಲ್ಲಿ ಪರಿಣಾಮಕಾರಿಯಾಗಿ ವಿದ್ವತ್ತಾಪೂರ್ಣವಾಗಿ ವಿಮರ್ಶಿಸಲಾಗಿದೆ.

ಭಾಸನ ಪ್ರಸಿದ್ಧ ನಾಟಕಗಳಾದ 'ಪ್ರತಿಮಾನಾಟಕ,' 'ಯಜ್ಞಫಲ,' ಅಭಿಷೇಕ ನಾಟಕಗಳು ಭವಭೂತಿಯ 'ಉತ್ತರರಾಮಚರಿತ' ಮತ್ತು 'ಮಹಾವೀರಚರಿತ' ಶಕ್ತಿಭದ್ರನ 'ಆಶ್ಚರ್ಯಚೂಡಾಮಣಿ' ದಿಙ್ನಾಗನ 'ಕುಂದಮಾಲಾ' ಮುರಾರಿ ಕವಿಯ 'ಅನರ್ಘರಾಘವಂ' ಜಯದೇವ ಕವಿಯ 'ಪ್ರಸನ್ನರಾಘವ' ರಾಮಾಯಣಾಧಾರಿತ ನಾಟಕಗಳನ್ನು ಪ್ರಮುಖವಾಗಿ ಇಲ್ಲಿ ವಿಮರ್ಶಿಸಲಾಗಿದೆ. ಮೌಖಿಕ ಪರಂಪರೆಯಲ್ಲಿ ಹರಿದುಬಂದ ಯಕ್ಷಗಾನಪ್ರಕಾರಗಳಲ್ಲಿ ರಾಮಾಯಣದ ಕಥಾವಸ್ತುವಿನ ವಿವಿಧ ಆಯಾಮಗಳ ಪ್ರಯೋಗವನ್ನೂ ಕೂಡ ಸೂಕ್ಷ್ಮವಾಗಿ ವಿಮರ್ಶಿಸಲಾಗಿದೆ. ಯಕ್ಷಗಾನದ ಜೊತೆಗೆ ತೌಲನಿಕವಾಗಿ ಕಥಕಳಿ ಪ್ರಕಾರವನ್ನು ವಿಮರ್ಶಿಸಿರುವುದರಿಂದ ಪಾರ್ತಿಸುಬ್ಬನ ಪ್ರತಿಭೆಯ ಆಳ ಪರಿಚಯವಾಗುತ್ತದೆ. ಪಾರ್ತಿಸುಬ್ಬ ರಚಿಸಿದ ರಾಮಾಯಣಾಧಾರಿತ ಕುಂಭಕರ್ಣಕಾಳಗ, ಅತಿಕಾಯಕಾಳಗ, ಪ್ರಸಂಗಗಳ ವಿವರವಾದ ಚರ್ಚೆ ಮಾಡ-ಲಾಗಿದೆ.

ತುಳುಭಾಷೆಯಲ್ಲಿ ರಚಿತವಾಗಿರುವ ರಾಮಾಯಣಾಧಾರಿತ ಕೆಲ ಪ್ರಸಂಗಗಳ ವಿಮರ್ಶೆ ಕೂಡಾ ಇದರಲ್ಲಿ ಇದೆ. ಯಕ್ಷಗಾನ ಮತ್ತು ಸಂಸ್ಕೃತ ವಿದ್ವಾಂಸರಾದ ಕೊರ್ಗಿ ವೇಂಕಟೇಶ್ವರ ಉಪಾಧ್ಯಾಯರ ವಿಸ್ತೃತ ವಿಮರ್ಶೆ ಹಾಗೂ ರಾಮಾಯಣಾ-ಧಾರಿತ ಪ್ರಸಂಗಗಳ ಸೂಚಿಯೂ ಅಧ್ಯಯನಪೂರ್ಣವಾಗಿದೆ.

ನಾಡಿನ ಹಿರಿಯ ವಿದ್ವಾಂಸರಾದ ಪ್ರೊ. ಎಸ್. ರಾಮಚಂದ್ರ ಶಾಸ್ತ್ರಿ, ಡಾ. ವನಿತಾ ರಾಮಸ್ವಾಮಿ, ಡಾ. ಟಿ. ಎಸ್. ಸತ್ಯವತಿ, ಪ್ರೊ. ಕೆ. ಇ. ರಾಧಾಕೃಷ್ಣ, ಡಾ. ಶ್ರೀರಾಮ ಭಟ್, ಡಾ. ಜಯಂತಿ ಮನೋಹರ್, ಡಾ. ಎಸ್. ಆರ್. ಲೀಲಾ, ಡಾ. ಆರ್. ಎನ್. ನಾಗರಾಜ್. ಡಾ. ಪ್ರಭಾವತಿ ನಾಗರಾಜ್, ಡಾ. ಎಂ. ಕೆ. ಶ್ರೀಧರ್, ಕೊರ್ಗಿ ವೇಂಕಟೇಶ್ವರ ಉಪಾಧ್ಯಾಯ, ಡಾ. ಎಸ್. ರಂಗನಾಥ್, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಸೇರಿದಂತೆ ವಿದ್ವಾಂಸರ ಅತ್ಯುತ್ತಮ ಲೇಖನಗಳು ಇದರಲ್ಲಿ ಸೇರಿವೆ.

ಡಾ. ಎಸ್. ರಂಗನಾಥರ ಲೇಖನದಲ್ಲಿ ಆಧುನಿಕ ಕವಿಗಳಾದ ಜಗ್ಗು ವಕುಲಭೂಷಣರ 'ಮಂಜುಳಮಂಜೀರಂ', 'ದಾಶರಥಿದರ್ಶನಂ' ಮೊದಲಾದ ನಾಟಕಗಳ ವಿವರಗಳು ಹೊಸ ಅಧ್ಯಯನಕ್ಕೆ ಅವಕಾಶ ನೀಡುವಂತಿದೆ. ಆಧುನಿಕ



ಕಾಲದಲ್ಲೂ ಸಂಸ್ಕೃತ ಸಾಹಿತ್ಯನಿರ್ಮಾಣಪರಂಪರೆ ಮುಂದುವರಿಯುತ್ತದೆ ಎಂಬ ಆಶಾವಾದ ಹುಟ್ಟುತ್ತದೆ. ಈ ವಿದ್ವಾಂಸರ ಲೇಖನಗಳನ್ನು ಸಂಪಾದಿಸಿರುವ ಜಿ. ವೆಂಕಟಸುಬ್ಬಯ್ಯ ಸಮೀಕ್ಷಾತ್ಮಕವಾದ ಮತ್ತು ಕೃತಿಪ್ರವೇಶಿಕೆಯ ರೂಪದ ಅಚ್ಚುಕಟ್ಟಾದ ಮುನ್ನುಡಿಯೊಂದನ್ನು ಬರೆದಿದ್ದಾರೆ. ಪುಸ್ತಕದ ಕೊನೆಯ ಭಾಗದಲ್ಲಿ ಸಂಸ್ಕೃತ-ನಾಟಕಗಳಲ್ಲಿ ಭರತವಾಕ್ಯವಿರುವಂತೆ ಈ ಕೃತಿಗೂ ವೆಂಕಟಸುಬ್ಬಯ್ಯ ಭರತವಾಕ್ಯ ಬರೆದಿರುವುದು ಕೃತಿರಚನೆಯ ಒಟ್ಟು ಆಶಯದಂತಿದೆ.

ಈ ಪುಸ್ತಕದ ಮೊದಲ ಲೇಖನವೇ 'ರಾಮನ ಪಾತ್ರದಲ್ಲಿ ಅನೌಚಿತ್ಯಗಳು ಇವೆಯೇ?' ಇದು ರಾಮಾಯಣದ ಕೇಂದ್ರ ಬಿಂದುವಾದ ರಾಮನ ವ್ಯಕ್ತಿತ್ವದ ಬಗ್ಗೆ ಕೇಳಬಂದ ಹಲವು ಆಪಾದನೆಗಳನ್ನು ಸಕಾರಣವಾಗಿ ನಿರಾಕರಿಸುವುದಾಗಿದೆ. ಅನೌಚಿತ್ಯಗಳನ್ನು ಗುರುತಿಸಿ ತಾರ್ಕಿಕವಾಗಿ ಸೈದ್ಧಾಂತಿಕ ತೀರ್ಮಾನಗಳನ್ನು ನೀಡಲು ಪ್ರಯತ್ನಿಸಿರುವ ಪ್ರೊ. ಎಸ್. ರಾಮಚಂದ್ರ ಶಾಸ್ತ್ರಿಯವರು ವಿದ್ವತ್ಪೂರ್ಣ ಲೇಖನ ಬರೆದಿದ್ದಾರೆ. ಜಿ. ವಿ. ಅವರು ಗುರುತಿಸಿರುವಂತೆ ಈ ವಾದಕ್ಕೆ ವಾಲ್ಮೀಕಿಯವರ ಮಾತನ್ನೇ ಆಧಾರವಾಗಿಸಿ ಬರೆದಿರುವುದರಿಂದ ರಾಮಾಯಣದ ಬಗ್ಗೆ ನಮಗೆ ಭಾರಿ ಒಳನೋಟಗಳು ದೊರೆಯುತ್ತದೆ. ವಾಲಿವಧೆ, ಶಂಬೂಕವಧೆಯಂತಹ ರಾಮನ ವ್ಯಕ್ತಿತ್ವದ ಅತ್ಯಂತ ವಿವಾದಾತ್ಮಕ ವಿಷಯಗಳ ಬಗ್ಗೆ ರಾಮಚಂದ್ರ ಶಾಸ್ತ್ರಿ ವಾಲ್ಮೀಕಿ-ರಾಮಾಯಣದ ಅಂತಃಸಾಕ್ಷ್ಯವನ್ನೇ ಆಧರಿಸಿ ಸಮತೋಲನದ ವಿಮರ್ಶೆ ಮಾಡಿದ್ದಾರೆ.

ಭಾಸನ ಪ್ರತಿಮಾನಾಟಕದ ಬಗ್ಗೆ ಜಿ.ವಿ. ಅವರು ಅಭಿಪ್ರಾಯಪಡುವಂತೆ 'ಪ್ರತಿಮಾನಾಟಕ ಸುಂದರನಾಟಕ. ಪ್ರತಿಮಾಗೃಹದ ದೃಶ್ಯವಂತೂ ರಸಸ್ಥಾನಗಳಲ್ಲಿ ಎದ್ದು ಕಾಣುತ್ತದೆ. ಅನುಭವಪೂರ್ಣ ನಾಟಕ ನಿರ್ದೇಶಕರ ಯಾಂತ್ರಿಕ ಆನುಕೂಲ್ಯ-ಗಳ ಆಯಾಮಗಳಿಂದ ಇದು ಪ್ರದರ್ಶಿತವಾದರೆ ಆಗುವ ಕಲಾನುಭವವನ್ನು ಕಲ್ಪಿಸಿಕೊಂಡೇ ಅನುಭವಿಸಬಹುದು' ನಾಟಕದ ಶ್ರೇಷ್ಠತೆಗೊಂದು ಸೂಚಕವಾದ ಮಾತು ಇದು.

ಭಾಸನದೆಂದು ಹೇಳಲಾದ 'ಯಜ್ಞಫಲ' ನಾಟಕವು ವಿಶಿಷ್ಟವಾದ ಕಥಾವಸ್ತು-ವಿನಿಂದ ಗಮನ ಸೆಳೆಯುತ್ತದೆ. ಸೀತಾರಾಮರಲ್ಲಿಯ ಶೃಂಗಾರದೃಶ್ಯವಂತೂ ಹೊಸ ಕಲ್ಪನೆಯಾಗಿದೆ. ಮೂರು ಯಜ್ಞಗಳು ನಡೆಯುವುದರ ಮೂಲಕ ಈ ಯಜ್ಞಗಳ ಉದ್ದೇಶವು ರಾಮನನ್ನು ಹುಡುಕುವುದೇ ಆದ್ದರಿಂದ ಈ ನಾಟಕಕ್ಕೆ 'ಯಜ್ಞಫಲ' ಎಂಬ ಸಾರ್ಥಕ ಹೆಸರು ನೀಡಿರುವುದನ್ನು ಜಿ.ವಿ. ಗುರುತಿಸುತ್ತಾರೆ. ಯಜ್ಞಫಲ ನಾಟಕದ ಅಪರೂಪದ ದೃಶ್ಯ ಎನ್ನಬಹುದಾದ್ದು ದಶರಥನು ತನ್ನ ಮೂರು ರಾಣಿಯರೊಂದಿಗೆ ಸಮಾಲೋಚನೆ ಮಾಡುವುದು. ಈ ಕೃತಿಯ ಮುಖಪುಟದಲ್ಲಿ ಈ ಚಿತ್ರವನ್ನೇ ಚಿತ್ರಿಸಲಾಗಿದೆ.

ಇಡೀ ಈ ಕೃತಿಯ ತಾತ್ತ್ವಿಕ ಭೂಮಿಕೆಯನ್ನು ನಿರ್ದೇಶಿಸುವ ಎರಡು ಪ್ರಮುಖ ನಾಟಕಕಾರರೆಂದರೆ ಭಾಸ ಮತ್ತು ಭವಭೂತಿ. ಮೂಲರಾಮಾಯಣದಿಂದ ತಮ್ಮ ನಾಟಕಕ್ಕೆ ಈ ಇಬ್ಬರು ಅಳವಡಿಸಿದ ಕಥಾವಸ್ತುವಿನ ಬದಲಾವಣೆ, ರಂಗತಂತ್ರ,

ಸಂವಿಧಾನ, ಮುಂದಿನ ಹಲವು ನಾಟಕಕಾರರಿಗೆ ಮಾರ್ಗದರ್ಶಕವಾಗಿತ್ತು. ಕೈಕೇಯಿಗೆ ಮೂಲರಾಮಾಯಣದಲ್ಲಿದ್ದ ಹಲವು ಅಪವಾದಗಳನ್ನು ದೂರಮಾಡಿ ಅವಳಲ್ಲಿ ಕರುಣಭಾವವನ್ನು ಉಂಟುಮಾಡಿದವನು ಭಾಸ. ಹಾಗೆಯೇ ಭವಭೂತಿ ಕೂಡ ಮಂಥರೆಯಲ್ಲಿ ಶೂರ್ಪಣಖಿಯನ್ನು ಆಹ್ವಾನಿಸಿ ಕೈಕೇಯಿಯ ಸ್ವಭಾವವನ್ನು ಮರೆ-ಮಾಚುತ್ತಾನೆ. ಭವಭೂತಿಯ 'ಮಹಾವೀರಚರಿತ' ನಾಟಕ ಒಂದು ಸ್ನೇಹ-ಮೀಮಾಂಸೆಯನ್ನು ಸೂಚಿಸುತ್ತದೆ ಎಂಬ ಜಿ.ವಿ.ಯವರ ಮಾತು ಈ ನಾಟಕದ ರಚನಾಮೀಮಾಂಸೆಯನ್ನು ವಿವರಿಸುತ್ತದೆ.

ಭಾರತೀಯಜೀವನದ ಸಾಂಸ್ಕೃತಿಕ ದಾಖಲೆಯಾಗಿ ರಾಮಾಯಣ ಮಹಾಭಾರತವನ್ನು ನೋಡಿರುವುದು ಈ ಕೃತಿಯಲ್ಲಿ ಸ್ಪಷ್ಟವಾಗುತ್ತದೆ. ಶ್ರೀರಾಮನ ಕಥೆ ಭಾರತೀಯ ಜನಮಾನಸದಲ್ಲಿ ವಿವಿಧ ರೂಪಾಂತರ ಕಥಾಂತರದ ಮೂಲಕ ಅಜರಾಮರವಾಗಿದೆ. ಎಲ್ಲಾ ಭಾರತೀಯ ಭಾಷೆಗಳ ಮೂಲದ್ರವ್ಯವಾಗಿ ರಾಮಾಯಣ ಮಹಾಭಾರತ ಕಥೆಗಳಿವೆ ಎನ್ನುವ ಜಿ. ವಿ.ಯವರ ಮಾತು ಮನನೀಯ. ಮಹಾಭಾರತ ಕಥಾಧಾರಿತ ನಾಟಕಗಳಿಗಿಂತ ರಾಮಾಯಣಾಧಾರಿತ ನಾಟಕಗಳ ಸಂಖ್ಯೆಯೇ ಪ್ರಧಾನವಾಗಿರುವುದೂ ಕೂಡಾ ಈ ಕೃತಿಸಂಪಾದನೆಗೆ ಪ್ರೇರಣೆ ಎಂಬ ಜಿ. ವಿ. ಅವರ ಮುನ್ನುಡಿಯ ಮಾತು ರಾಮಾಯಣದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಮುನ್ನುಡಿಯಲ್ಲಿ ಜಿ. ವಿ.ಯವರು ಹೇಳಿರುವಂತೆ ಯಕ್ಷಗಾನಸಾಹಿತ್ಯವನ್ನು ಕನ್ನಡ ವಿದ್ವತ್‌ಪರಂಪರೆ ಗಂಭೀರವಾಗಿಯೇ ಪರಿಗಣಿಸಿಲ್ಲ. ಈ ಹಿನ್ನೆಲೆಯಲ್ಲಿ ಕೊರ್ಗಿ ವೇಂಕಟೇಶ್ವರ ಉಪಾಧ್ಯಾಯರ ಲೇಖನದಲ್ಲಿರುವ ಅತೃಪ್ತಿಯ ಮಾತು ಉಲ್ಲೇಖನೀಯ. ಯಕ್ಷಗಾನದಲ್ಲಿಯ ಸಾಹಿತ್ಯ ಮತ್ತು ಕಥೆಯ ರೂಪಾಂತರ ಎಂಥವರನ್ನೂ ನಿಬ್ಬೆರಗಾಗಿಸುತ್ತದೆ. ರಾಮಾಯಣ ಕಥೆಗಳಿಗೆ ಯಕ್ಷಗಾನದಲ್ಲಿ ಕೊಟ್ಟಷ್ಟು ತಿರುವು ಇನ್ನಾವುದೇ ಕಲಾಪ್ರಕಾರದಲ್ಲಿ ನೀಡಿಲ್ಲ ಎಂಬುದು ಗಮನೀಯ. ಪಾರ್ತಿಸುಬ್ಬ, ಮುದ್ದಣ, ಮೊದಲಾದ ಯಕ್ಷಗಾನ ಕವಿಗಳು ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದ ಕನ್ನಡ ಕವಿಗಳ ಸಾಲಿನಲ್ಲೇ ಸೇರಬೇಕಾದವರು.

ವಾಲ್ಮೀಕಿಯ ಕಾಣ್ಕೆಯನ್ನು ಪ್ರಧಾನಭೂಮಿಕೆಯಲ್ಲಿಟ್ಟುಕೊಂಡು ಎಲ್ಲಾ ನಾಟಕ-ಗಳ ಪಾತ್ರರಚನೆಯನ್ನು ಎಲ್ಲ ಸಂಸ್ಕೃತ ಕವಿಗಳು ಮಾಡಿದ್ದಾರೆ. ಕಥೆಯ ದೃಷ್ಟಿಯಿಂದ ಕೆಲ ಮಾರ್ಪಾಡುಗಳನ್ನು ಮಾಡಲಾಗಿದ್ದರೂ ರಸಪೋಷಣೆ, ಕಲಾಸ್ವಾದನೆ ದೃಷ್ಟಿ-ಯಿಂದ ವಾಲ್ಮೀಕಿಗಳ ಕಾಣ್ಕೆಯ ಮೇರೆಯನ್ನು ಯಾರೂ ಮೀರಿಹೋದಂತೆ ಅನಿಸುವುದಿಲ್ಲ.

ವಿವಿಧ ನಾಟಕಗಳ ರೂಪದಲ್ಲಿ ರಾಮಾಯಣದ ಕಥೆ ಇಲ್ಲಿ ಹರಡಿಕೊಂಡರೂ ಬೇರೆ ಬೇರೆ ಪಾತ್ರಗಳ ಮೇಲೆ ಕವಿಪ್ರತಿಭೆಯ ಚೆಂಬೆಳಕು ಕಾಣಿಸುತ್ತದೆ. ಮೂಲರಾಮಾಯಣದಲ್ಲಿ ಸ್ವಲ್ಪ ಕಾಂತಿಹೀನ ಎನಿಸಿದ್ದ ಪಾತ್ರಗಳು ಇಲ್ಲಿ ಮರುಜೀವ ಪಡೆದು ಮಿನುಗುತ್ತವೆ. ಸೃಜನಶೀಲ ಲೇಖಕನಿಗೆ ಯಾವಾಗಲೂ ಮೂಲಕೃತಿನಿಷ್ಠೆ ಒಂದು ಸವಾಲು. ಸೃಷ್ಟಿಶೀಲ ಪ್ರತಿಭಾಪ್ರವಾಹಕ್ಕೆ ಮೂಲವನ್ನು ಬದಲಾಯಿಸಿಕೊಳ್ಳಲು ಹವಣಿಸುವ ಕವಿಪ್ರತಿಭೆಯನ್ನು ವಿಮರ್ಶಿಸುವುದು ಕಷ್ಟಕರ. ವಿಮರ್ಶೆಯ ನೆಲೆಗಳು

ಬೇರೆಯೇ ಆಗಿರುವುದು ಇದಕ್ಕೆ ಕಾರಣ. ಮೂಲನಿಷ್ಠೆ ಇಟ್ಟುಕೊಂಡೇ ಕೃತಿಯನ್ನು ಕಲಾಕೃತಿಯಾಗಿಸಲು ಪ್ರಯತ್ನಿಸುವ ಕವಿಗೆ ಮಾರ್ಪಾಟು ಎನ್ನುವುದು ಕೂಡಾ ಮೂಲ ಚೌಕಟ್ಟಿನಲ್ಲೇ ಇರಬೇಕೆಂಬ ಕಲ್ಪನೆ ಪ್ರಾಚೀನರದು. ನಾಟಕ ಸುಖಾಂತ್ಯ-ವಾಗಿರಬೇಕೆಂಬ ಭಾರತೀಯ ಕಲ್ಪನೆ ಕೂಡಾ ಹಲವು ನಾಟಕಗಳ ಬದಲಾವಣೆಯಲ್ಲಿ ಕೆಲಸ ಮಾಡಿದೆ.

ಆಧುನಿಕವಿಮರ್ಶೆಯ ಮನಸ್ಸು ಸೃಜನಶೀಲತೆಯನ್ನೇ ಅಪವ್ಯಾಖ್ಯಾನಿಸಿರು-ವುದೂ ಕೂಡ ಕೃತಿವಿಮರ್ಶೆಯಲ್ಲಿ ಹಲವು ಬಾರಿ ಸಮಸ್ಯೆಯನ್ನೇ ತಂದೊಡ್ಡುತ್ತವೆ. ಮೂಲರಾಮಾಯಣದ ಪಾತ್ರಗಳ, ಸನ್ನಿವೇಶಗಳ, ಕಥೆಯ ಬದಲಾವಣೆ ಮಾಡಿರುವ ಕವಿಪ್ರತಿಭೆಯ ಹಿನ್ನೆಲೆಯನ್ನು ಮೂಲ ಆಶಯಕ್ಕೆ ವಿರುದ್ಧವಾಗಿ ಪ್ರಮೇಯ ಕಟ್ಟುವ ಆಧುನಿಕ ವಿಮರ್ಶೆಗೆ ಕೂಡಾ ಇಲ್ಲಿ ಉತ್ತರವಿದೆ. ವಿವಿಧ ರೀತಿಯ ಅಪವ್ಯಾಖ್ಯಾನ-ಗಳಿಗೆ ಉತ್ತರ ನೀಡುತ್ತಲೇ ಇಲ್ಲಿಯ ಎಲ್ಲಾ ಲೇಖಕರು ಕೃತಿನಿಷ್ಠ ವಿವರಗಳನ್ನೇ ನೆಚ್ಚಿ ಪ್ರಬುದ್ಧ ರಸಪೂರ್ಣವಿಮರ್ಶೆ ಮಾಡಿರುವುದು ಪ್ರಶಂಸನೀಯ.

ಈ ಕೃತಿಯಲ್ಲಿ ಕೆಲವೆಡೆ ಮುದ್ರಣದೋಷವಿದ್ದರೂ ಜಿ. ವಿ.ಯವರ ಶ್ರದ್ಧೆ ಮತ್ತು ವಿದ್ವತ್ತೆಗಳ ಸೂಕ್ಷ್ಮವನ್ನು ಕಾಣಿಸುವ ಮುನ್ನುಡಿ ಕೃತಿಗೆ ಘನತೆ ತಂದುಕೊಟ್ಟಿದೆ. ಕೇರಳ ಪ್ರಾಂತದವನಾದ ಶಕ್ತಿಭದ್ರನ 'ಆಶ್ಚರ್ಯಚೂಡಾಮಣಿ' ಬಗ್ಗೆ ಬರೆಯುತ್ತಾ ಜಿ. ವಿ. ಕೇರಳದ ಕೂಡಿಯಾಟ್ಟಂ ಕಲಾಪ್ರಕಾರದಲ್ಲಿ ಇಂದು ಕೂಡಾ ಸಂಸ್ಕೃತದ ನಾಟಕಗಳ ಬಳಕೆ ಇರುವುದನ್ನು ಗುರುತಿಸುತ್ತಾರೆ. ಇದೊಂದು ಪ್ರಾಚೀನ ನಾಟಕ ಪ್ರಕಾರವಾಗಿದ್ದು ಇಂದೂ ಉಳಿದು ಬಂದಿದೆ. ಇದೇ ಸಂದರ್ಭದಲ್ಲಿ ಸಂಸ್ಕೃತ ನಾಟಕಗಳಿಗೆ ಜಾನಪದ ಬಯಲಾಟಗಳು ಮೂಲವೆಂಬ ಜಿ. ವಿ. ಅವರ ಮಾತು ಸಂಶೋಧನಯೋಗ್ಯ ಎನಿಸುತ್ತದೆ. ಸಂಸ್ಕೃತ ನಾಟಕಕ್ಷೇತ್ರದ ಭವಿಷ್ಯದ ಕುರಿತು ಜಿ. ವಿ. ಹಲವು ಪ್ರೇರಣಾದಾಯಕ ಮಾತುಗಳನ್ನು ಹೇಳಿದ್ದಾರೆ. ಆಧುನಿಕ ನಾಟಕದ ಹೊಸ ತಂತ್ರಗಳನ್ನು ಈ ನಾಟಕಗಳಿಗೆ ಅಳವಡಿಸುವ ಅಗತ್ಯದ ಬಗ್ಗೆ ಕೂಡಾ ಸೂಚಿಸಿದ್ದಾರೆ.

ಈ ಕೃತಿಯಲ್ಲಿ ಮೂಲನಾಟಕಗಳ ಸನ್ನಿವೇಶಗಳನ್ನು, ಕೆಲವು ಸೊಗಸಾದ ಸಂಭಾಷಣೆಗಳನ್ನು, ಕೆಲವು ಶ್ಲೋಕಗಳನ್ನು ತಾತ್ಪರ್ಯದೊಂದಿಗೆ ವಿವರಿಸಿರುವುದು ಕೇವಲ ಕನ್ನಡ ಜ್ಞಾನ ಇರುವವರಿಗೂ ರಸಾಸ್ವಾದನೆಗೆ ಅನುಕೂಲವಾಗಿದೆ. ಕಥಾ ಸಾರಾಂಶ, ಕವಿಯ ಸಂಕ್ಷಿಪ್ತಪರಿಚಯ ನೀಡಿರುವುದು, ಅಂಕಗಳ ಸಾರಾಂಶ ಕೊಟ್ಟಿರುವುದು ಕೂಡಾ ನಾಟಕಪ್ರಿಯರಿಗೆ ಅನುಕೂಲವಾಗಿದೆ. ಸಂಸ್ಕೃತವನ್ನು ಅರಿಯದ ಕನ್ನಡದ ನಾಟಕಾಸಕ್ತರಿಗೂ ಇದರಲ್ಲಿ ಹೊಸ ಆಲೋಚನೆ ಹುಟ್ಟಬಹುದು. ಇದನ್ನೇ ಜಿ. ವಿ. ಮುನ್ನುಡಿಯಲ್ಲಿ ಹೇಳಿದ್ದಾರೆ. ಇಡೀ ಕೃತಿ ಓದಿದ ಮೇಲೆ ಹೊಸ ನಾಟಕ ಮೀಮಾಂಸೆಯೊಂದು ನಮ್ಮನ್ನು ಕಾಡದೇ ಇರುವುದಿಲ್ಲ. ಕನ್ನಡದ ವೃತ್ತಿರಂಗಭೂಮಿ, ಮತ್ತು ಹವ್ಯಾಸಿರಂಗಭೂಮಿಗಳು ಇಂತಹ ನಾಟಕಗಳನ್ನು ಹೊಸ ಆಶಯ ಮತ್ತು ತಂತ್ರಗಳಲ್ಲಿ ಪ್ರದರ್ಶಿಸುವ ಅವಕಾಶ ಇದ್ದೇ ಇದೆ. ರಾಮಾಯಣ

ನಾಟಕಗಳಾದರೂ ಸಮಕಾಲೀನ ಮೌಲ್ಯಗಳನ್ನು, ಮನುಷ್ಯನ ಅಂತರಂಗದ ಮೂಲ ಪ್ರವೃತ್ತಿಯನ್ನು ಬಗೆದು ತೋರುವ ಈ ಎಲ್ಲಾ ನಾಟಕಗಳಲ್ಲೂ ಜೀವಪರ ಧ್ವನಿ ಇದೆ. ಜೀವನಪ್ರೀತಿ ಇದೆ.

ಈ ಹಿಂದೆ ಬಂದ ಎ. ಆರ್. ಕೃಷ್ಣ ಶಾಸ್ತ್ರಿಯವರ 'ಸಂಸ್ಕೃತ ನಾಟಕ' ಕೃತಿಯ ಬಳಿಕ ಹೆಚ್ಚು ಪ್ರಬುದ್ಧಚಿಂತನೆಗಳಿರುವ ಒಳನೋಟವಿರುವ ಕೃತಿ ಇದು. ಇದರಿಂದಾಗಿ ಕನ್ನಡಕ್ಕೊಂದು ಅಪೂರ್ವ ರಾಮಾಯಣ ನಾಟಕ ಪ್ರಪಂಚವೊಂದರ ಪರಿಚಯ ದಕ್ಕಿದೆ.

"ಯಾವ ಪ್ರಾಚೀನ ಇತಿಹಾಸವೂ ಆಸಕ್ತಿಯನ್ನು ಕಳೆದುಕೊಳ್ಳುವುದಿಲ್ಲ. ಇನ್ನೂ ಹೊಸ ಹೊಸ ಅಂಶಗಳನ್ನು ಅದು ಮತ್ತೆ ನೀಡುತ್ತದೆ. ಅವುಗಳ ಸತ್ವವೇ ಅಂಥದ್ದು. ಒಮ್ಮೆ ಓದಿ ಬೀಸಿ ಎಸೆಯುವ ಕಾಗಕ್ಕ, ಗುಬ್ಬಕ್ಕ ಕಥೆಗಳಲ್ಲ ನಮ್ಮ ಇತಿಹಾಸಗಳು. ಹೀಗಿರುವುದರಿಂದ ಇತಿಹಾಸಗಳನ್ನೇ ಅನೇಕ ಸಲ ಓದಬೇಕು. ಅವುಗಳಿಂದ ಉತ್ಪತ್ತಿಹೊಂದಿದ ಇತರ ಮಹಾಕಾವ್ಯಗಳನ್ನು ಮಹಾನಾಟಕಗಳನ್ನು ಓದದಿದ್ದರೆ ನಾವೇ ನಷ್ಟವನ್ನು ಅನುಭವಿಸುತ್ತೇವೆ. ಹೊಸ ಬಗೆಯ ಸಾಹಿತ್ಯವು ಸೃಷ್ಟಿಯಾಗುತ್ತಲೇ ಇರುತ್ತದೆ. ನಾವು ಅವುಗಳನ್ನು ಓದುತ್ತಲೇ ಇರುತ್ತೇವೆ." ಜಿ. ವೆಂಕಟಸುಬ್ಬಯ್ಯನವರ ಈ ಮಾತು ಇಡೀ ಕೃತಿ ರಚನೆಯ ಆಶಯವನ್ನು ಧ್ವನಿಸುವಂತಿದೆ.

ಖ್ಯಾತ ವಿಮರ್ಶಕ ಡಾ. ಕೀರ್ತಿನಾಥ ಕುರ್ತಕೋಟಿ ಹೇಳುವ ಮಾತು "ಪುರಾಣ ಕತೆಗಳ ಸ್ವಭಾವವೆಂದರೆ ಅವು ಪುನರುಕ್ತಿಯಾಗುವುದು. ಒಂದೇ ಕತೆ ಮತ್ತೆ ಮತ್ತೆ ಹಾಗಾಗಿ ಕಾಣಿಸಿಕೊಳ್ಳುತ್ತದೆ. ಪುನರುಕ್ತವಾದರೆ ನಮ್ಮ ತಿಳುವಳಿಕೆ ಹೆಚ್ಚುತ್ತದೆ. ತಿಳುವಳಿಕೆ ಹೆಚ್ಚುವುದರಿಂದ ಅರ್ಥಪ್ರಪಂಚ ವಿಸ್ತಾರಗೊಳ್ಳುತ್ತದೆ. ಹೊಸ ಹೊಸ ಅರ್ಥಗಳು ಮೂಡತೊಡಗುತ್ತವೆ." ಈ ಕೃತಿಯಿಂದ ಹಳೆ ನಾಟಕಗಳಿಗೆ ಹೊಸ ಹೊಸ ಅರ್ಥಪ್ರಪಂಚ ದಕ್ಕಲಿ ಎಂಬುದೇ ಆಶಯದ ಮಾತು.



# ಚೌಂಡರಾಜಕೃತ ನಳಚಂಪು ಸಂಗ್ರಹ

ಡಾ. ವಸಂತ ಕುಮಾರ್

ಕನ್ನಡದ ಚಂಪೂಪರಂಪರೆಯ ಕೊನೆಯ ಕವಿಗಳಲ್ಲಿ ಚೌಂಡರಾಜ ಅಥವಾ ಚೌಂಡರಸನೂ ಒಬ್ಬ. ಈತನ ಕಾಲದ ಬಗ್ಗೆ ವಿದ್ವಾಂಸರೊಳಗೆ ಸ್ವಲ್ಪಮಟ್ಟಿಗೆ ಭಿನ್ನಾಭಿಪ್ರಾಯಗಳಿವೆ. ಕೆಲವು ವಿದ್ವಾಂಸರು ಈತನ ಕಾಲವನ್ನು ಕ್ರಿ. ಶ. ಸುಮಾರು 1300 ಎಂದೂ ಇನ್ನು ಕೆಲವರು ಕ್ರಿ. ಶ. ಸುಮಾರು 1240 ಎಂದೂ ತರ್ಕಿಸಿದ್ದಾರೆ. ನಳಚಂಪು ಸಂಗ್ರಹದ ಸಂಪಾದಕರಾದ ಪ್ರೊ. ಜಿ. ವೆಂಕಟಸುಬ್ಬಯ್ಯ ಹಾಗೂ ಮ. ಸು. ಕೃಷ್ಣಮೂರ್ತಿಯವರು ಇತರ ಕೃತಿಗಳನ್ನು ಪರಿಶೀಲಿಸಿ ಇತರ ಕಾವ್ಯಗಳಲ್ಲಿಯ ಉಲ್ಲೇಖಗಳನ್ನು ಪರಿಭಾವಿಸಿ ಚೌಂಡರಾಜ(ಚೌಂಡರಸ)ನ ಕಾಲವನ್ನು ಕ್ರಿ.ಶ ಸುಮಾರು 1186 ರಿಂದ 1240ರ ಒಳಗೆ ಎಂದು ತೀರ್ಮಾನಿಸಿದ್ದಾರೆ. ಒಟ್ಟಾರೆಯಾಗಿ ಈತನ ಕಾಲವನ್ನು ಹದಿಮೂರನೆಯ ಶತಮಾನವೆಂದು ಒಪ್ಪಿಕೊಳ್ಳಬಹುದು.

ಚೌಂಡರಾಜನ 'ದಶಕುಮಾರಚರಿತೆ'ಯಿಂದ ಆತನ ಬಗೆಗಿನ ಕೆಲವು ವಿಚಾರಗಳು ತಿಳಿದು ಬರುತ್ತವೆ. ಆತ ಈ ಕಾವ್ಯದಲ್ಲಿ ಪಂಪ, ರನ್ನ, ಚಂದ್ರ ಹಾಗೂ ರುದ್ರರನ್ನು ವಿಶೇಷವಾಗಿ ನೆನೆದುಕೊಂಡಿರುವುದರಿಂದ ಚೌಂಡರಾಜ ಇವರೆಲ್ಲರ ಅನಂತರದ ಕವಿ ಎಂಬುದೂ ಇವರೆಲ್ಲರಿಂದ ವಿಶೇಷ ಪ್ರಭಾವಕ್ಕೆ ಒಳಗಾಗಿದ್ದ-ನೆಂಬುದೂ ತಿಳಿದುಬರುತ್ತದೆ. ಅಲ್ಲದೆ ಈತನೊಬ್ಬ ಬ್ರಾಹ್ಮಣ ಕವಿ ಎಂಬುದೂ ಈತನ ಕಾವ್ಯಗಳಿಂದ ತಿಳಿದುಬರುತ್ತದೆ.

ಚೌಂಡರಾಜ 'ಬಾಣಾಸುರವಿಜಯ', 'ನಳಚರಿತ್ರೆ' ಹಾಗೂ 'ದಶಕುಮಾರ ಚರಿತೆ' ಎಂಬ ಮೂರು ಕಾವ್ಯಗಳನ್ನು ಬರೆದಂತೆ ಅವನೇ ತನ್ನ 'ದಶಕುಮಾರ ಚರಿತೆ'ಯಲ್ಲಿ ಹೇಳಿಕೊಂಡಿದ್ದಾನೆ. ಆದರೆ ಈ ಕೃತಿಗಳಲ್ಲಿ 'ಬಾಣಾಸುರವಿಜಯ' ಉಪಲಬ್ಧವಿಲ್ಲ. ಉಳಿದೆರಡು ಕಾವ್ಯಗಳಲ್ಲಿ 'ನಳಚರಿತ್ರೆ'(ನಳಚಂಪು) ಒಂದು ಪ್ರೇಮ ಕಥೆಯನ್ನು ಒಳಗೊಂಡಿದ್ದರೆ 'ದಶಕುಮಾರಚರಿತೆ' ಒಂದು ಅದ್ಭುತರಮ್ಯ ಕಥಾನಕ-ವನ್ನು ಒಳಗೊಂಡಿದೆ. ಈ ಕವಿಗೆ 'ಕರ್ನಾಟಕವಂಶಶೃಂಗಾರರಸ' ಮೊದಲಾದ ಬಿರುದುಗಳೂ ಇದ್ದಂತೆ ಕಂಡುಬರುತ್ತದೆ. ಶ್ರೀ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್ ಚೌಂಡರಾಜನ 'ನಳಚಂಪು'ವನ್ನು ಸಂಪಾದಿಸಿದವರಲ್ಲಿ ಮೊದಲಿಗರು. ಅನಂತರ 1966ರಲ್ಲಿ ಶ್ರೀ ಜಿ. ವೆಂಕಟಸುಬ್ಬಯ್ಯ ಹಾಗೂ ಶ್ರೀ ಮ. ಸು.

ಕೃಷ್ಣಮೂರ್ತಿಯವರು ಈ ಕಾವ್ಯವನ್ನು ಸಂಗ್ರಹಿಸಿ ಸಂಪಾದಿಸಿದ್ದಾರೆ. ಇದೊಂದು ಅತ್ಯುತ್ತಮ ಸಂಪಾದನಸಂಗ್ರಹ.

ಒಂದು ಕಾವ್ಯವನ್ನು ಸಂಪಾದಿಸುವುದು ಸುಲಭದ ಕಾರ್ಯವಲ್ಲ. ಅದರಲ್ಲೂ ಅದನ್ನು ಸಂಗ್ರಹಿಸುವುದು ಸಂಪಾದನೆಗಿಂತಲೂ ಕ್ಲಿಷ್ಟಕರವಾದ ಕಾರ್ಯ. ಪ್ರಸ್ತುತ ಸಂಪಾದಕರು ಈ ಕಾವ್ಯಸಂಗ್ರಹಕ್ಕೆ ಸುಮಾರು ೧೧೨ ಪುಟಗಳ ವಿಸ್ತೃತ ಹಾಗೂ ವಿವರವಾದ ಪೂರ್ವಪೀಠಿಕೆಯನ್ನು, ಕವಿಪರಿಚಯ ಹಾಗೂ ಕಾವ್ಯವಿಮರ್ಶೆಯನ್ನು ನೀಡಿದ್ದಾರೆ. ಚೌಂಡರಾಜನ 'ನಳಚರಿತ್ರೆ' ಒಂದು ಪ್ರೇಮಕಾವ್ಯವಾಗಿರುವುದರಿಂದ ಇದಕ್ಕೆ ಪೂರಕವಾಗಿ ಭಾರತೀಯ ಭಾಷೆಗಳಲ್ಲಿ ರಚನೆಯಾಗಿರುವ ಪ್ರೇಮಾಖ್ಯಾನಗಳ ಇತಿಹಾಸವನ್ನು ನಿರೂಪಿಸಿದ್ದಾರೆ. ಇದರಿಂದ ಭಾರತೀಯರ ಭಾಷೆಗಳ ಸಾಹಿತ್ಯ-ಚರಿತ್ರೆಯಲ್ಲಿ ಪ್ರೇಮಾಖ್ಯಾನಗಳಿಗಿರುವ ಮಹತ್ತ್ವವನ್ನು ತಿಳಿದುಕೊಳ್ಳುವುದಕ್ಕೆ ತುಂಬಾ ಅನುಕೂಲವಾಗಿದೆ. ಅಲ್ಲದೆ ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿರುವ ಪ್ರೇಮಾ-ಖ್ಯಾನಗಳ ಪರಂಪರೆಯ ಹಿನ್ನೆಲೆಯಲ್ಲಿ ನಳಚರಿತ್ರೆಯನ್ನು ಪರಿಶೀಲಿಸುವುದಕ್ಕೆ ಸಾಧ್ಯವಾಗಿದೆ. ಕನ್ನಡ ಕಾವ್ಯಸಂಪಾದನೆಯ ಸಂದರ್ಭದಲ್ಲಿ ಇದೊಂದು ಹೊಸ ಹಾಗೂ ಶ್ಲಾಘ್ಯಪ್ರಯತ್ನವೆಂದೇ ಹೇಳಬೇಕು. ಇದರಿಂದ ಬೇರೆ ಬೇರೆ ಪ್ರೇಮಕಾವ್ಯ-ಗಳಲ್ಲಿಯ ಸಾದೃಶ್ಯ ಹಾಗೂ ವೈಸಾದೃಶ್ಯಗಳನ್ನು ಅರಿತುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

'ನಳಚಂಪುಸಂಗ್ರಹ'ದ ಪೀಠಿಕಾಭಾಗವೇ ಯಥೇಷ್ಟ ಮಾಹಿತಿಯನ್ನು ನೀಡುವ ಭಾಗವಾಗಿದೆ. ಪೂರ್ವಪೀಠಿಕೆಯೇ ಕಾವ್ಯಭಾಗಕ್ಕಿಂತ ದೀರ್ಘವಾಗಿದೆ ಎಂದು ಯಾರಾದರೂ ಆಕ್ಷೇಪಿಸಬಹುದು. ಆದರೆ ಕಾವ್ಯಾಧ್ಯಯನ ಹಾಗೂ ಕಾವ್ಯಾಸ್ವಾದನಕ್ಕೆ ಈ ಪೂರ್ವಪೀಠಿಕೆಯೇ ಒಂದು ಉತ್ತಮ ಮಾರ್ಗದರ್ಶಿಯಾಗಿದೆ ಎಂಬುದನ್ನು ಒಪ್ಪಿಕೊಳ್ಳಬೇಕು. ನಳದಮಯಂತಿಯರ ಕಥೆ ಒಂದು ಪ್ರೇಮಕಥೆಯಾಗಿರುವುದರಿಂದ ಇದರ ರಸಾಸ್ವಾದನೆಗೆ ಈ ಪೂರ್ವಪೀಠಿಕೆ ಪೂರಕವಾಗಿದೆ.

ಪ್ರೇಮಾಖ್ಯಾನಗಳನ್ನು ವಸ್ತುವಾಗುಳ್ಳ ಕಾವ್ಯಗಳು ಪ್ರಾಚೀನಕಾಲದಿಂದಲೂ ಪ್ರಚಲಿತದಲ್ಲಿವೆ. ಚೌಂಡರಜನ 'ನಳಚಂಪು ಸಂಗ್ರಹ'ಕ್ಕೆ ನೀಡಿರುವ ಪೂರ್ವಪೀಠಿಕೆ-ಯಿಂದ ಭಾರತೀಯ ಪರಂಪರೆಯಲ್ಲಿ ಪ್ರೇಮಾಖ್ಯಾನಗಳಿಗೆ ಸಂದ ಮಹತ್ತ್ವದ ಅರಿ-ವಾಗುತ್ತದೆ. ಭಾರತೀಯ ವಾಙ್ಮಯಗಳಾದ ವೇದ, ಉಪನಿಷತ್ತುಗಳಲ್ಲಿ ಉಲ್ಲೇಖಿತ-ವಾಗಿರುವ ಪ್ರೇಮಾಖ್ಯಾನಗಳು, ರಾಮಾಯಣ, ಮಹಾಭಾರತಗಳಲ್ಲಿ ಉಲ್ಲೇಖಿತ-ವಾಗಿರುವ ಪ್ರೇಮಾಖ್ಯಾನಗಳು, ಭಾರತದ ಇತಿಹಾಸದಲ್ಲಿ ಉಲ್ಲೇಖಿತವಾಗಿರುವ ಪ್ರೇಮಾಖ್ಯಾನಗಳು ಮೊದಲಾದವುಗಳ ಸಂಕ್ಷಿಪ್ತಪರಿಚಯವನ್ನು ಈ ಪೀಠಿಕೆ ಹೊಂದಿದೆ. ಋಗ್ವೇದದಲ್ಲಿ ಮೊದಲಿಗೆ ಕಂಡುಬರುವ ಪ್ರೇಮಾಖ್ಯಾನಗಳು ಮುಂದ ಬ್ರಾಹ್ಮಣಗಳಲ್ಲಿ, ಉಪನಿಷತ್ತುಗಳಲ್ಲಿ, ಭಾಗವತ-ಮಹಾಭಾರತಗಳಲ್ಲಿ ನಿರಂತರ ಬೆಳೆದು ಕೊಂಡು ಬಂದಿರುವುದು ಮುಂದೆ ಮಹಾಭಾರತದಲ್ಲಿ ಬರುವ ನಳದಮಯಂತಿ-ಯರ ಪ್ರೇಮಾಖ್ಯಾನಕ್ಕೆ ಪೂರ್ವಪೀಠಿಕೆಯನ್ನು ಒದಗಿಸುತ್ತದೆ. ಇದರಿಂದ ನಳ ದಮಯಂತಿಯರ ಪ್ರೇಮಾಖ್ಯಾನಕ್ಕೂ ಹಿಂದಿನ ಪ್ರೇಮಾಖ್ಯಾನಗಳಿಗೂ ಇರುವ ಸಾದೃಶ್ಯ - ವೈಸಾದೃಶ್ಯಗಳನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

'ನಳಚಂಪು ಸಂಗ್ರಹ'ದ ಪೂರ್ವಪೀಠಿಕೆಯಿಂದ ಇನ್ನೂ ಹಲವಾರು ವಿಶೇಷ-ವಾದ ಹಾಗೂ ಅಷ್ಟೇ ಕುತೂಹಲಕಾರಿಯಾದ ಅಂಶಗಳು ಮನವರಿಕೆಯಾಗುತ್ತವೆ. ಇವರಲ್ಲಿ ಮೊದಲನೆಯದು - ಭಾರತೀಯ ಭಾಷೆಗಳಲ್ಲಿಯ ವೈವಿಧ್ಯಮಯ ಪ್ರೇಮಾಖ್ಯಾನಗಳು. ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮೊದಲಾದ ಭಾಷೆಗಳಲ್ಲಿಯ ಪ್ರೇಮಾಖ್ಯಾನಗಳ ವೈವಿಧ್ಯ ಹಾಗೂ ಅವುಗಳ ಪ್ರಾಚೀನತೆಯನ್ನು ತಿಳಿದುಕೊಳ್ಳುವು-ದಕ್ಕೆ ಅನುಕೂಲವಾಗಿದೆ. ಅಲ್ಲದೆ ಭಾರತೀಯ ಸಾಹಿತ್ಯದಲ್ಲಿ ಪ್ರೇಮಾಖ್ಯಾನಗಳ ಸಲ್ಲುತ್ತಿರುವ ಕಥಾನಕ ರೂಪಗಳನ್ನು ಸಂಪಾದಕರು ಹೆಸರಿಸಿದ್ದಾರೆ. ಈ ರೂಢಿಗಳನ್ನು ಪರಿಶೀಲಿಸಿದರೆ ಭಾರತೀಯಕಾವ್ಯಗಳಲ್ಲಿ ಪ್ರೇಮಾಖ್ಯಾನಗಳ ವ್ಯಾಪ್ತಿಯ ಅರಿವಾಗು-ತ್ತದೆ. ಮಾತ್ರವಲ್ಲದೆ, ಭಾರತೀಯಪರಂಪರೆಯಲ್ಲಿ ಪ್ರೇಮಾಖ್ಯಾನಗಳಿಗೆ ಒದಗಿದ ಮಹತ್ತ್ವದ ಅರಿವೂ ಆಗುತ್ತದೆ.

ಪೂರ್ವಪೀಠಿಕೆಯ ಎರಡನೆಯ ವಿಶೇಷತೆ ಎಂದರೆ ಹಿಂದೂ, ಜೈನ ಹಾಗೂ ಬೌದ್ಧ ಧರ್ಮೀಯ ಆಖ್ಯಾನಗಳು. ಧಾರ್ಮಿಕ ನಂಬಿಕೆ, ಸಂಪ್ರದಾಯ ಹಾಗೂ ಸಂಸ್ಕೃತಿಗಳನ್ನು ಅವಲಂಬಿಸಿ ಅವುಗಳೊಳಗೆ ಕಂಡುಬರುವ ವೈವಿಧ್ಯ ಹೊಸತನ-ಗಳನ್ನು ಕಂಡುಕೊಳ್ಳುವುದಕ್ಕೆ ಈ ಪೂರ್ವಪೀಠಿಕೆ ನೆರವಾಗುತ್ತದೆ. ಜೈನ, ಬೌದ್ಧ ಪ್ರೇಮಾಖ್ಯಾನಗಳು ಪೌರಾಣಿಕ ಹಾಗೂ ಐತಿಹಾಸಿಕಗಳೆಂಬ ಎರಡು ಪ್ರಕಾರಗಳಲ್ಲಿ ಕಂಡುಬರುತ್ತವೆ. ಈ ಪ್ರೇಮಾಖ್ಯಾನಗಳು ಆಯಾ ಧಾರ್ಮಿಕ ನಂಬಿಕೆ, ಸಂಪ್ರದಾಯ, ಸಂಸ್ಕೃತಿಗಳನ್ನು ಅರಿತುಕೊಳ್ಳುವುದಕ್ಕೆ ಅನುಕೂಲಕರವಾಗಿದೆ.

ಜೈನ ಹಾಗೂ ಬೌದ್ಧ ಪ್ರೇಮಾಖ್ಯಾನಗಳು ಹೆಚ್ಚಿನ ಮಟ್ಟಿಗೆ ಪ್ರಾಕೃತ ಹಾಗೂ ಅಪಭ್ರಂಶ ಭಾಷೆಗಳಲ್ಲಿವೆ. ಈ ಆಖ್ಯಾನಗಳು ಮುಂದೆ ಕನ್ನಡದಂತಹ ಇತರ ಭಾರತೀಯ ಭಾಷೆಗಳ ಸಾಹಿತ್ಯದಲ್ಲಿಯೂ ಸ್ಥಾನಪಡೆದಿವೆ. ಜೈನ ಹಾಗೂ ಬೌದ್ಧ ಪ್ರೇಮಾಖ್ಯಾನಗಳು ಕೆಲವೆಡೆ ಸ್ವತಂತ್ರವಾಗಿ ಕಾವ್ಯರೂಪದಲ್ಲಿ ಬಂದರೆ, ಇನ್ನು ಕೆಲವೆಡೆ ಪ್ರಾಸಂಗಿಕವಾಗಿ ಬಂದಿರುವುದನ್ನು ಸಂಪಾದಕರು ಉಲ್ಲೇಖಿಸಿದ್ದಾರೆ. ಇದರಿಂದ ಪ್ರೀತಿ ಪ್ರಣಯದಂತಹ ವಿಚಾರಗಳು ಮನುಷ್ಯನ ಜೀವನದಲ್ಲಿ ಹೊಂದಿರುವ ಸ್ಥಾನಮಾನ-ಗಳು ಹಾಗೂ ಸಾಹಿತ್ಯದಲ್ಲಿ ಅವು ಹೊಂದಿರುವ ಮಹತ್ತ್ವದ ಅರಿವಾಗುತ್ತದೆ.

ಭಾರತೀಯ ಪ್ರೇಮಾಖ್ಯಾನಗಳ ಪರಂಪರೆಯಲ್ಲಿ ಹಿಂದೂ ಪ್ರೇಮಾಖ್ಯಾನ-ಗಳು ಅದರಲ್ಲಿಯೂ ವೈದಿಕ, ಪೌರಾಣಿಕ ಪ್ರೇಮಾಖ್ಯಾನಗಳ ಸಂಖ್ಯೆ ಅತ್ಯಂತ ದೊಡ್ಡದು. ಇವುಗಳಲ್ಲಿ ಕೆಲವು ಸ್ವತಂತ್ರ ಇನ್ನು ಕೆಲವು ಪ್ರಾಸಂಗಿಕ. ವೈದಿಕ ಪ್ರೇಮಾ-ಖ್ಯಾನಗಳಲ್ಲಿ ಅಸ್ಪಷ್ಟತೆ, ಭಾಷ್ಯಕಾರರು ನೀಡಿರುವ ಪ್ರತಿಮಾತ್ಮಕವಾದ ವಿವರಗಳು ಈ ಆಖ್ಯಾನಗಳ ಮಹತ್ತ್ವವನ್ನು ಅರಿಯಲು ಹಾಗೂ ಆ ಮೂಲಕ ಅವುಗಳ ರಸಗ್ರಹಣಕ್ಕೆ ತೊಡಕಾಗಿದೆ ಎಂಬುದನ್ನು ಸಂಪಾದಕರು ಉಲ್ಲೇಖಿಸಿದ್ದಾರೆ..

'ನಳಚಂಪು ಸಂಗ್ರಹ'ದ ಪೂರ್ವಪೀಠಿಕೆಯ ಇನ್ನೊಂದು ಮುಖ್ಯ ಲಕ್ಷಣ-ವೆಂದರೆ ಭಾರತೀಯ ಪರಂಪರೆಯಲ್ಲಿಯ ಪ್ರೇಮಾಖ್ಯಾನಗಳ ಜೊತೆಗೆ ಪಾಶ್ಚಾತ್ಯ ಪರಂಪರೆಯಲ್ಲಿಯ ಪ್ರೇಮಾಖ್ಯಾನಗಳ ಬಗ್ಗೆ ನೀಡಿದ ಪರಿಚಯ. ಯೂರೋಪ್ ಮೊದಲಾದ ದೇಶಗಳಲ್ಲಿ ಪ್ರೇಮಾಖ್ಯಾನಗಳು ಹನ್ನೊಂದನೆಯ ಶತಮಾನದ ಈಚೆಗೆ

ಪ್ರಾರಂಭವಾದರೂ ಅವುಗಳಲ್ಲಿ ಕಂಡುಬರುವ ವೈವಿಧ್ಯ, ಅನಂತರದ ಕಾಲಘಟ್ಟಗಳಲ್ಲಿ ಅವುಗಳಲ್ಲಿ ಕಂಡುಬರುವ ಬದಲಾವಣೆಗಳು ಮೊದಲಾದವುಗಳನ್ನು ಸಂಪಾದಕರು ಉಲ್ಲೇಖಿಸಿದ್ದಾರೆ. ಈ ಪ್ರೇಮಾಖ್ಯಾನಗಳ ಸ್ವರೂಪ, ಲಕ್ಷಣಗಳು, ಕಥಾವಸ್ತು ಸಂಕೇತಗಳು ಮೊದಲಾದ ವಿಚಾರಗಳನ್ನು ಉಲ್ಲೇಖಿಸಿದ್ದಾರೆ. ಅಲ್ಲದೆ ಭಾರತೀಯ ಹಾಗೂ ಪಾಶ್ಚಾತ್ಯ ಪ್ರೇಮಾಖ್ಯಾನಗಳಲ್ಲಿನ ಸಾದೃಶ್ಯ-ವೈಸಾದೃಶ್ಯಗಳನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾರೆ.

ಭಾರತೀಯ ಪ್ರೇಮಾಖ್ಯಾನಗಳ ವೈಲಕ್ಷಣ್ಯಗಳು ಅದರ ಸ್ವರೂಪ, ಪಾತ್ರ ವೈವಿಧ್ಯ, ಪರಂಪರಾಗತ ನಂಬಿಕೆ, ಜೀವನಮೌಲ್ಯ ಮೊದಲಾದುವುಗಳನ್ನು ತಿಳಿದು-ಕೊಳ್ಳುವುದರ ಜೊತೆಗೆ ಅವುಗಳೊಂದಿಗೆ ಪಾಶ್ಚಾತ್ಯ ಪ್ರೇಮಾಖ್ಯಾನಗಳನ್ನು ಅವುಗಳ ಸ್ವರೂಪಲಕ್ಷಣ, ಪಾತ್ರವೈವಿಧ್ಯ, ನಂಬಿಕೆ ಜೀವನಮೌಲ್ಯಗಳೊಂದಿಗೆ ತೌಲನಿಕವಾಗಿ ಪರಿಶೀಲಿಸುವುದಕ್ಕೆ ಸಂಪಾದಕರು ನೀಡಿರುವ ಪೂರ್ವಪೀಠಿಕೆ ಅತ್ಯಂತ ಉಪಯುಕ್ತವೂ ಸಹಕಾರಿಯೂ ಆಗಿದೆ. ಇದರಿಂದ ಎರಡೂ ಪರಂಪರೆಗಳ ಪ್ರೇಮಾಖ್ಯಾನಗಳ ತೌಲನಿಕ ಪರಿಶೀಲನಗೆ ಅವಕಾಶ ಲಭ್ಯವಾಗುವುದರ ಜೊತೆಗೆ ಪ್ರೇಮಾಖ್ಯಾನಗಳ ಬಗೆಗಿನ ಸಂಶೋಧನೆಗೆ ಈ ಪೂರ್ವಪೀಠಿಕೆ ಒಂದು ಉತ್ತಮ ಆಕರವೂ ಮಾರ್ಗದರ್ಶಿಯೂ ಆಗಿದೆ ಎಂಬುದರಲ್ಲಿ ಸಂದೇಹವಿಲ್ಲ.

'ನಳಚಂಪುಸಂಗ್ರಹ'ದ ಪೂರ್ವಪೀಠಿಕೆಯ ಇನ್ನೊಂದು ಪ್ರಮುಖ ವೈಶಿಷ್ಟ್ಯ-ವೆಂದರೆ ಕನ್ನಡ ಪ್ರೇಮಾಖ್ಯಾನಗಳ ಪರಿಚಯ. ಇದು ಸಾಕಷ್ಟು ದೀರ್ಘವಾಗಿದ್ದು, ಕನ್ನಡ ಕಾವ್ಯಗಳಲ್ಲಿ ಬಂದಿರುವ ಪ್ರೇಮಾಖ್ಯಾನಗಳನ್ನೂ ಅವುಗಳ ಲಕ್ಷಣಗಳನ್ನೂ ಪರಿಚಯಿಸುತ್ತದೆ. ಇದರಿಂದ ಕನ್ನಡ ಕಾವ್ಯಪರಂಪರೆಯಲ್ಲಿ ಪ್ರೇಮಾಖ್ಯಾನಗಳ ಸ್ಥಾನಮಾನಗಳು, ಸಂಸ್ಕೃತ, ಪ್ರಾಕೃತ ಭಾಷಾಸಾಹಿತ್ಯದ ಪ್ರಭಾವ, ಜಾನಪದ ಕಥಾನಕಗಳು ಕಾಲಕ್ರಮೇಣ ಶಿಷ್ಟರೂಪಗಳನ್ನು ಪಡೆದು ಕಾವ್ಯಗಳಲ್ಲಿ ಸ್ಥಾನಪಡೆದಿರ-ಬಹುದಾದ ರೀತಿ, ಕನ್ನಡ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಸ್ವತಂತ್ರ ಹಾಗೂ ಪ್ರಾಸಂಗಿಕ ಆಖ್ಯಾನಗಳು. ಅವುಗಳ ವೈಶಿಷ್ಟ್ಯ ಮೊದಲಾದ ಅಂಶಗಳನ್ನು ಸಂಪಾದಕರು ಈ ಭಾಗದಲ್ಲಿ ಚರ್ಚಿಸಿದ್ದಾರೆ. ಈ ಭಾಗವೇ ಕನ್ನಡ ಪ್ರೇಮಾಖ್ಯಾನಗಳ ಬಗೆಗಿನ ಸ್ವತಂತ್ರ ಅಧ್ಯಯನಕ್ಕೆ ಅಥವಾ ಸಂಶೋಧನೆಗೆ ದಾರಿಮಾಡಿಕೊಟ್ಟಿದೆ. ಮಾತ್ರವಲ್ಲ ಈ ಸಮಗ್ರ ಪೂರ್ವಪೀಠಿಕೆಯೇ ಹಲವಾರು ಸ್ತರಗಳ ಸಂಶೋಧನೆಗೆ ಅವಕಾಶ ತೋರಿಸಿಕೊಟ್ಟಿರುವುದು ಅಕ್ಷರಶಃ ಸತ್ಯ. ಈ ಪ್ರೇಮಾಖ್ಯಾನಗಳ ಕುರಿತು ಆಸಕ್ತಿ ತಾಳುವ ಸಂಶೋಧನಾರ್ಥಿಗಳಂತೂ ಈ ಕಾವ್ಯಸಂಗ್ರಹದ ಸಂಪಾದಕರಿಗೆ ಕೃತಜ್ಞತೆಗಳನ್ನು ಸಲ್ಲಿಸಲೇಬೇಕಾಗುತ್ತದೆ.

ಕನ್ನಡದ ಪ್ರಾಚೀನಕವಿಗಳು ಮಹಾಕಾವ್ಯಗಳನ್ನು ರಚಿಸುವ ನಿರ್ಧಾರಕ್ಕೆ ಮತ್ತು ಅನಿವಾರ್ಯತೆಗೆ ಕಟ್ಟುಬಿದ್ದು ತಮ್ಮ ಕಾವ್ಯಗಳಲ್ಲಿ ನವರಸಗಳ ಪ್ರತಿಪಾದನೆಗೆ ತೊಡಗಿರುವುದು ಕಂಡುಬರುತ್ತದೆ. ನವರಸಗಳಲ್ಲಿ ಶೃಂಗಾರವೂ ಒಂದಾಗಿರುವುದ-ರಿಂದ ಕವಿಗಳು ಅಲ್ಲಲ್ಲಿ ಶೃಂಗಾರರಸಪ್ರತಿಪಾದನೆಗೆ ಪ್ರಾಸಂಗಿಕವಾಗಿ ಕೆಲವು ಪ್ರೇಮಾಖ್ಯಾನಗಳನ್ನು ವರ್ಣಿಸಿರುವುದು ಎಲ್ಲರಿಗೂ ತಿಳಿದಿರುವ ವಿಚಾರ. ಈ

ನಿಟ್ಟಿನಲ್ಲಿ ಬಹುಶಃ ಪ್ರೇಮಾಖ್ಯಾನ ಅಥವಾ ಪ್ರಣಯಸನ್ನಿವೇಶಗಳು ಇಲ್ಲದ ಕನ್ನಡ ಕಾವ್ಯವೇ ಇಲ್ಲವೆನ್ನಬಹುದು. ಅಷ್ಟರಮಟ್ಟಿಗೆ ಕನ್ನಡ ಕಾವ್ಯಗಳು ಪ್ರೇಮಾಖ್ಯಾನಗಳ ಅಥವಾ ಪ್ರೇಮಸಲ್ಲಾಪಗಳ ಸನ್ನಿವೇಶಗಳಿಂದ ನಿರ್ಭರವಾಗಿದೆ.

'ನಳಚಂಪೂಸಂಗ್ರಹ'ದ ಪೂರ್ವಪೀಠಿಕೆಯಲ್ಲಿ ಕನ್ನಡ ಕಾವ್ಯಗಳಲ್ಲಿಯ ಪ್ರೇಮಾಖ್ಯಾನಗಳು ಮಾತ್ರವಲ್ಲದೆ ಪ್ರಾಸಂಗಿಕ ಪ್ರೇಮ-ಪ್ರಣಯ ಸನ್ನಿವೇಶಗಳನ್ನು ಸಂಪಾದಕರು ವಿಶ್ಲೇಷಿಸಿದ್ದಾರೆ. ಈ ವಿಶ್ಲೇಷಣೆ ಸಂಕ್ಷಿಪ್ತವಾದುದಾದರೂ ಅತ್ಯಂತ ಮೌಲಿಕವೂ ಪ್ರಸ್ತುತವೂ ಆಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಒಂದರ್ಥದಲ್ಲಿ ಚೌಂಡರಸನ 'ನಳಚಂಪು' ಕಾವ್ಯದ ರಸಾಸ್ವಾದನೆಗೆ ಪೂರ್ವತಯಾರಿಯನ್ನು ಇದು ಒದಗಿಸುತ್ತದೆ. ಕನ್ನಡದ ಪ್ರಸಿದ್ಧ ಕವಿಗಳು ಹಾಗೂ ಅವರ ಕಾವ್ಯಗಳಲ್ಲಿಯ ಕೆಲವು ಸನ್ನಿವೇಶಗಳ ವಿಶ್ಲೇಷಣೆ ಹಾಗೂ ಅವುಗಳ ಪರಿಶೀಲನೆಯಿಂದ ಕನ್ನಡ ಕವಿಗಳ ಈ ಸಂಬಂಧವಾದ ಮನೋಭಾವದ ವಿವೇಚನೆ ಸಾಧ್ಯವಾಗುತ್ತದೆ. ಜೊತೆಗೆ ಈ ಪ್ರೇಮಾಖ್ಯಾನಗಳನ್ನು, ಅವುಗಳ ಕಾವ್ಯಾತ್ಮಕ ನಿರ್ವಹಣೆಯನ್ನು, ಅವುಗಳಲ್ಲಿನ ವಿವಿಧ ರಸಭಾವಗಳ ಪ್ರತಿಪಾದನೆಯನ್ನು ಚೌಂಡರಸನ 'ನಳಚಂಪು'ವಿನೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಲು ಸಾಧ್ಯವಾಗುತ್ತದೆ.

'ನಳಚಂಪುಸಂಗ್ರಹ'ದ ಪೂರ್ವಪೀಠಿಕೆ ಚೌಂಡರಸನ ಪೂರ್ವಕವಿಗಳ ಪ್ರೇಮಾಖ್ಯಾನ ಕಾವ್ಯಗಳನ್ನು ಹಾಗೂ ಕಾವ್ಯಪ್ರಸಂಗಗಳನ್ನು ಮಾತ್ರ ಒಳಗೊಂಡಿರದೆ ಚೌಂಡರಸನ ಅನಂತರದ ಕವಿಗಳ ಕಾವ್ಯಗಳನ್ನು, ಕಾವ್ಯಪ್ರಸಂಗಗಳ ಪರಿಶೀಲನೆಯನ್ನು ಒಳಗೊಂಡಿದೆ. ಇದರಿಂದ ಕನ್ನಡ ಕಾವ್ಯಪರಂಪರೆಯಲ್ಲಿ ಪ್ರೇಮಾಖ್ಯಾನಗಳು ಕಾಲಾನುಕ್ರಮದಲ್ಲಿ ಪರಿವರ್ತನೆಗೊಂಡಿರಬಹುದಾದ ರೀತಿಯನ್ನು ಪರಂಪರೆ ಹಾಗೂ ಹೊಸತನಗಳನ್ನು ಪರಿಶೀಲಿಸುವುದಕ್ಕೆ ಸಾಧ್ಯವಾಗುತ್ತದೆ. ಅಲ್ಲದೆ, ಚೌಂಡರಸನ ನಳಚಂಪುವನ್ನು ಅವನ ಅನಂತರದ ಕನಕದಾಸರ 'ನಳಚರಿತ್ರೆ'ಯೊಂದಿಗೆ ತುಲನೆ ಮಾಡುವುದಕ್ಕೆ, ವಸ್ತು, ಕಥೆ, ತಂತ್ರ, ಪಾತ್ರ ರಸ-ಭಾವಗಳಲ್ಲಿ ಆಗಿರುವ ಬದಲಾವಣೆಗಳನ್ನು ಕಂಡುಕೊಳ್ಳುವುದಕ್ಕೆ ಹಾಗೂ ಅದರ ಪರಿಶೀಲನೆಗೆ ಸಹಾಯಕವಾಗಿದೆ. ಮಾತ್ರವಲ್ಲದೆ, ಸಂಪಾದಕರು ನೀಡಿರುವ ನಳಚರಿತ್ರೆ, ನಳ ಹಾಗೂ ದಮಯಂತಿಯರ ಪಾತ್ರವೈಶಿಷ್ಟ್ಯ, ಕಥೆಯ ಸೊಬಗು ಈ ಕಥೆ ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಕಾವ್ಯವಾಗಿ ರೂಪುಗೊಂಡ ಬಗೆ, ಅವುಗಳಲ್ಲಿಯ ವೈವಿಧ್ಯ ಮೊದಲಾದ ಅಂಶಗಳನ್ನು ಈ ಪೀಠಿಕೆ ಒಳಗೊಂಡಿರುವುದರಿಂದ ಮೂಲಕಥೆಯ ಒಟ್ಟಾರೆ ರೂಪರೇಖೆಗಳನ್ನೂ ಅದರ ಸೊಬಗನ್ನೂ ಅರಿತುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಚೌಂಡರಸನ ಕಾಲ, ದೇಶಾದಿ ವಿಚಾರಗಳನ್ನು, ಆತನ ಕಾವ್ಯವಿಮರ್ಶೆಯನ್ನು ಈ ಪೂರ್ವಪೀಠಿಕೆ ಒಳಗೊಂಡಿದೆ. ಇದರಿಂದ ಚೌಂಡರಸನ ಮೇಲಾಗಿರುವ ಪೂರ್ವಕವಿಗಳ ಪ್ರಭಾವ, ಪ್ರೇರಣೆಗಳು, ಆಕರಗಳು, ಕಥಾವಸ್ತುವಿನ ಆಯ್ಕೆ, ಮಾಡಿಕೊಂಡಿರುವ ಬದಲಾವಣೆಗಳು ಇವೆಲ್ಲವುಗಳಿಂದ ಕಥಾವಸ್ತುವಿಗೆ ಹಾಗೂ ಕಾವ್ಯಕ್ಕೆ ಒದಗಿರುವ ಸೌಂದರ್ಯ ಮೊದಲಾದವುಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ.

ಮೂಲತಃ ಮಹಾಭಾರತದಲ್ಲಿ ಬರುವ 'ನಳೋಪಾಖ್ಯಾನ'ದೊಂದಿಗೆ ಚೌಂಡರಸನ ನಳಚಂಪೂ ಕಾವ್ಯದ ಕಥೆಯನ್ನು ತೌಲನಿಕವಾಗಿ ಪರಿಶೀಲಿಸಲಾಗಿದೆ. ಇದರಿಂದ ಮೂಲಕಥೆಗೂ ಚೌಂಡರಸನ ಕೃತಿಗೂ ಇರುವ ವ್ಯತ್ಯಾಸಗಳನ್ನು ತಿಳಿಯುವುದರ ಜೊತೆಗೆ ಈ ಬದಲಾವಣೆಯ ಔಚಿತ್ಯದ ಅರಿವಾಗುತ್ತದೆ.

ಚೌಂಡರಸ ಚಿತ್ರಿಸಿರುವ ಪಾತ್ರಗಳು, ಅವುಗಳ ವೈಶಿಷ್ಟ್ಯ, ರಸಪ್ರತಿಪಾದನೆ ಮೊದಲಾದ ಅಂಶಗಳನ್ನು ಈ ಪೀಠಿಕೆ ಒಳಗೊಂಡಿದ್ದು ಕಾವ್ಯಪರಿಶೀಲನೆ ಮತ್ತು ರಸಾಸ್ವಾದನೆಗೆ ಉತ್ತಮ ತಳಹದಿಯನ್ನು ನಿರ್ಮಿಸಿಕೊಟ್ಟಿದೆ. ಒಟ್ಟಿನಲ್ಲಿ ಈ ಕಾವ್ಯಕ್ಕೆ ಸಂಪಾದಕರು ನೀಡಿರುವ ಪೂರ್ವಪೀಠಿಕೆ ಕಾವ್ಯಭಾಗಕ್ಕಿಂತ ದೀರ್ಘವಾದುದಾದರೂ ಹಲವಾರು ಕಾರಣಗಳಿಂದ ಬಹು ಉಪಯುಕ್ತವಾಗಿದೆ. ಕನ್ನಡ ಕಾವ್ಯಸಂಪಾದನೆಯ ಪರಂಪರೆಯಲ್ಲಿ ಇದೊಂದು ಅಪೂರ್ವವಾದ ಮತ್ತು ವಿಶಿಷ್ಟವಾದ ಪ್ರಯತ್ನ. ಇದಕ್ಕಾಗಿ ಸಹೃದಯರು, ಸಂಶೋಧನಾರ್ಥಿಗಳು ಸಂಪಾದಕರನ್ನು ಶ್ಲಾಘಿಸಲೇಬೇಕು.

'ನಳಚಂಪುಸಂಗ್ರಹ' ಒಟ್ಟು ಎಪ್ಪತ್ತು ಪುಟಗಳ ಒಂದು ಕಿರುಕಾವ್ಯ. ಮೂಲದಲ್ಲಿ ವಿಸ್ತಾರವಾದುದಾದರೂ ಸಂಗ್ರಹದಲ್ಲಿ ಕಥೆಯ ಸ್ವಾರಸ್ಯ ಕೆಡದ ರೀತಿಯಲ್ಲಿ ಸಂಪಾದನೆ ಮಾಡಿರುವುದು ಗಮನಾರ್ಹವಿಷಯ. ಕಾವ್ಯಗಳನ್ನು ಸಂಪಾದಿಸುವುದೇ ಕ್ಲಿಷ್ಟಕರ-ವಾದ, ಶ್ರಮದಾಯಕವಾದ ಕೆಲಸ. ಅದರಲ್ಲೂ ಸಂಗ್ರಹಿಸುವುದು ಮತ್ತೂ ಕಷ್ಟಕರ-ವಾದ ಕೆಲಸ. ಕಥೆಯ ಹಂದರ, ಭಾವ, ರಸ ಮೊದಲಾದವುಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ಸಂಗ್ರಹಿಸುವುದು ಸಾಹಸದ ಕೆಲಸವೇ ಸರಿ. ಈ ನಿಟ್ಟಿನಲ್ಲಿ ಈ ಕಾವ್ಯ-ಸಂಗ್ರಹದ ಸಂಪಾದಕರು ಯಶಸ್ವಿಯಾಗಿದ್ದಾರೆ.

ಈ ಕಾವ್ಯ ಸಂಗ್ರಹದಲ್ಲಿ 'ಕವಿಗೆ ನಾಲಗೆಯುತ್ಸವಂ', 'ಸ್ವರ್ಣಸಾರಥಿ', 'ದಮಯಂತೀವನಿತಾಸ್ವಯಂವರಮಪೂರ್ವಂ', 'ಒಳ್ಗುಣವನಾರ್ ಪಡೆವರ್ ಕಲಿ ನಿಮಗೆಯ್ತರಲ್', 'ನೋಡಿ ನಗುತ್ತುಡಲಿತ್ತನಾಕ್ಷಣಂ', 'ರಥವಭ್ಯುದಯಾವಸಥಂ ಮನೋರಥಂ' ಎಂಬ ಹೆಸರಿನ ಆರು ಅಧ್ಯಾಯಗಳನ್ನು ಒಳಗೊಂಡಿದೆ. ಕಾವ್ಯದ ಸಂಪಾದಕರು ಇವುಗಳನ್ನು ಅಧ್ಯಾಯ ಅಥವಾ ಪರಿಚ್ಛೇದಗಳೆಂದು ಹೆಸರಿಸಿರ-ದಿದ್ದರೂ ಅವುಗಳನ್ನು ಅಧ್ಯಾಯಗಳೆಂದು ಒಪ್ಪಿಕೊಳ್ಳಬಹುದು.

ಮೊದಲನೆಯ ಅಧ್ಯಾಯದಲ್ಲಿ ಕವಿಯ ಇಷ್ಟದೇವತಾ ಸ್ತುತಿ, ನಿಷಧದೇಶದ ವರ್ಣನೆ, ಅಲ್ಲಿಯ ವೈಭವ, ಸಂಪತ್ತು, ಅದರ ಶೋಭೆ, ಪ್ರಾಕೃತಿಕ ಚೆಲುವು, ನಳಮಹಾರಾಜನ ಜನನ, ಮಗುವಿನ ಚೆಲುವು-ಬೆಳವಣಿಗೆ, ಪಟ್ಟಾಭಿಷೇಕ, ನಳನ ರಾಜ್ಯಪರಿಪಾಲನೆ, ದಮಯಂತಿಯ ರೂಪ-ಲಾವಣ್ಯಗಳು, ಸೌಂದರ್ಯದ ಹಿರಿಮೆ – ಗರಿಮೆಗಳು ಮೊದಲಾದವುಗಳ ವರ್ಣನೆ ಇದೆ.

ಎರಡನೆಯ ಅಧ್ಯಾಯದಲ್ಲಿ ನಳನ ಬೇಟೆಯ ತಯಾರಿ, ಬೇಟೆಯಾಟದ ವರ್ಣನೆ, ನಳನ ಸಾಹಸ, ವನಾಂತರದ ಸರೋವರದ ವರ್ಣನೆ, ಸ್ವರ್ಣಹಂಸದ ವರ್ಣನೆ, ನಳನು ಹಂಸೆಯೊಂದಿಗೆ ನಡೆಸಿದ ಸಂಭಾಷಣೆ, ದಮಯಂತಿಯ ವಿಚಾರ, ಆಕೆಯ ರೂಪವರ್ಣನೆ, ವಿದರ್ಭದೇಶದ ವರ್ಣನೆ, ಹಂಸೆ ದಮಯಂತಿಯನ್ನು

ಭೇಟಿಯಾಗಿ ನಳನ ಬಗ್ಗೆ ವರದಿ ಒಪ್ಪಿಸುವ ಪ್ರಸಂಗ. ಹಂಸೆಯೊಂದಿಗಿನ ದಮಯಂತಿಯ ಸಂಭಾಷಣೆ ಮೊದಲಾದ ವಿಚಾರಗಳಿವೆ.

ಮೂರನೆಯ ಅಧ್ಯಾಯದಲ್ಲಿ ದಮಯಂತಿಯ ಸ್ವಯಂವರಸಿದ್ಧತೆ, ಸ್ವಯಂವರಕ್ಕೆ ಆಗಮಿಸುವ ನಾರದ, ದೇವೇಂದ್ರ, ವರುಣ, ಅಗ್ನಿ, ಯಮ ಮೊದಲಾದವರ ವಿಚಾರ, ಸುರರೂಪವನ್ನು ತ್ಯಜಿಸಿ ನಳನರೂಪವನ್ನು ಧರಿಸುವ ಅಮರರ ವಿಚಾರ, ಅಮರರ ಅಪೇಕ್ಷೆಯಂತೆ ನಳನ ದೌತ್ಯ, ನಳನ ದೌತ್ಯಕ್ಕೆ ಅಮರರ ಮೆಚ್ಚುಗೆ, ಅನುಗ್ರಹ. ಸ್ವಯಂವರಮಂಟಪದಲ್ಲಿ ಪಂಚನಳರನ್ನು ಕಂಡು ದಮಯಂತಿಯ ಕಳವಳ, ಪರೀಕ್ಷೆಗಳಲ್ಲಿ ದಮಯಂತಿಯ ಗೆಲುವು. ನಳನೊಂದಿಗೆ ವಿವಾಹಸಂಭ್ರಮ, ನಳನಿಗೆ ದೇವೇಂದ್ರನಿಂದ ಅಷ್ಟಮ್ರದಯದ ವರ. ವಿವಾಹ ವಿಧಿಗಳು ಮೊದಲಾದ ವಿಷಯಗಳ ವರ್ಣನೆಯಿದೆ. ಈ ಭಾಗ ಕಾವ್ಯದಲ್ಲಿಯೆ ಅತ್ಯಂತ ಮಹತ್ತ್ವಪೂರ್ಣವಾಗಿದ್ದು, ದೀರ್ಘವಾಗಿ ಶೃಂಗಾರಮಯವಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ದಮಯಂತೀಸಮೇತನಾದ ನಳನ ನಿಷಧದೇಶದ ಪ್ರವೇಶ, ಪ್ರಜಾಜನರ ಸಂಭ್ರಮ, ಕಾಲಕ್ರಮದಲ್ಲಿ ಮಕ್ಕಳೊಂದಿಗಿನ ಸಂಸಾರ, ನಿಷಧದೇಶಕ್ಕೆ ಕಲಿಪ್ರವೇಶ, ನಳನಲ್ಲಿ ಉಂಟಾಗುವ ಮಾರ್ಪಾಡುಗಳು, ಸ್ವಭಾವ ಪರಿವರ್ತನೆ, ಕರ್ಮವಶದಿಂದ ಉಂಟಾಗುವ ದುರ್ಗುಣಗಳು, ದಾಯಾದ ಪುಷ್ಕರನೊಂದಿಗೆ ದ್ಯೂತ, ಸೋತು ಎಲ್ಲವನ್ನು ಕಳೆದುಕೊಂಡು ದೇಶಿಗನಾಗುವ ಪ್ರಸಂಗ, ದೇಶಭ್ರಷ್ಟ ಸ್ಥಿತಿ, ಮಕ್ಕಳನ್ನು ಕುಂಡಿನಪುರಕ್ಕೆ ಕಳುಹಿಸಿ ಕಾಡುಪಾಲಾಗುವ ಸನ್ನಿವೇಶ, ನಳನನ್ನೇ ಹಿಂಬಾಲಿಸುವ ಸತಿ ದಮಯಂತಿಯ ಪಾತಿವ್ರತ್ಯದ ಮೇಲ್ಮೆ, ಬಟ್ಟೆಯನ್ನು ಕಳೆದುಕೊಳ್ಳುವ ನಳ, ದಮಯಂತಿ ನೀಡಿದ ಸೀರೆಯ ತುಂಡನ್ನು ಉಟ್ಟುಕೊಳ್ಳುವ ಅಸಹಾಯಕಸ್ಥಿತಿ, ಕಾಡಿನಲ್ಲಿ ದಮಯಂತಿಯನ್ನು ಬಿಟ್ಟುಹೋಗುವ ಸನ್ನಿವೇಶ, ದಮಯಂತಿಯ ವಿಹ್ವಲತೆ, ದಾರಿಹೋಕರ ಸಹಾಯದಿಂದ ಕುಂಡಿನಪುರಕ್ಕೆ ಪ್ರಯಾಣ, ಬೇಡನೊಬ್ಬನ ಕಾಟ, ವರ್ತಕರಿಂದ ಅವಮಾನ, ಕೆಲವು ಬ್ರಾಹ್ಮಣರ ಸಹಾಯದಿಂದ ಅನಂತನಿಧಿ ಪಟ್ಟಣದ ರಾಣಿಯ ಬಳಿ ಸೈರಂಧ್ರಿವೃತ್ತಿ, ಜೊತೆಯಲ್ಲಿ ನಳನಿಲ್ಲದುದರಿಂದ ಮಾಸಿದ ಸೀರೆಯಲ್ಲಿಯೇ ಜೀವನ ಮೊದಲಾದ ಪ್ರಸಂಗಗಳನ್ನು ವರ್ಣಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ದಮಯಂತಿಯನ್ನು ಅಗಲಿದುದಕ್ಕಾಗಿ ನಳನ ದುಃಖ, ಕಾಡಿನಲ್ಲಿ ಎದುರಾಗುವ ಕಷ್ಟಗಳು. ಕಾಡಿನಲ್ಲಿ ಹಬ್ಬಿದ ಕಾಳ್ಗಿಚ್ಚಿನ ಅನಾಹುತಗಳು, ಸಿಕ್ಕಿಹಾಕಿಕೊಂಡ ಕಾರ್ಕೋಟಕನ ರಕ್ಷಣೆ, ಕಾರ್ಕೋಟಕನ ವಿಷದಿಂದ ನಳನ ವಿಕೃತಿ, ಕಾರ್ಕೋಟಕನಿಂದ ಸಾಂತ್ವನ. ಅಯೋಧ್ಯಾಪುರ ಪ್ರವೇಶ, ಋತುಪರ್ಣನಲ್ಲಿ ಬಾಹುಕನೆಂಬ ಹೆಸರಿನಲ್ಲಿ ಕುದುರೆಗಳನ್ನು ನೋಡಿಕೊಳ್ಳುವ ವೃತ್ತಿ, ನಳನನ್ನು ಅರಸಲು ದಿಕ್ಕುದಿಕ್ಕಿಗೂ ದೂತರ ರವಾನೆ ಮೊದಲಾದ ಪ್ರಸಂಗಗಳ ವರ್ಣನೆಯಿದೆ.

ಆರನೆಯ ಹಾಗೂ ಕೊನೆಯ ಅಧ್ಯಾಯದಲ್ಲಿ ದಮಯಂತಿಗೆ ಪುನಃಸ್ವಯಂವರದ ಏರ್ಪಾಡು. ಈ ನೆಪದಲ್ಲಿ ನಳನನ್ನು ಕುಂಡಿನಪುರಕ್ಕೆ ಬರಮಾಡಿಕೊಳ್ಳುವ

ಪ್ರಯತ್ನ, ನಳನೊಂದಿಗೆ ಕುಂಡಿನಪುರಕ್ಕೆ ಋತುಪರ್ಣನ ಪಯಣ ಮತ್ತು ಅದರ ವಿಶೇಷತೆ, ದಮಯಂತಿಯಿಂದ ನಳನ ಪಾಕಪರೀಕ್ಷೆ, ದೃಢಪಡಿಸಿಕೊಳ್ಳಲು ನಡೆಯುವ ಮುಖತಃ ಭೇಟಿ, ಕಾರ್ಕೋಟಕ ನೀಡಿದ ವಸ್ತ್ರದಿಂದ ನಳನ ಹಿಂದಿನ ರೂಪಪ್ರಾಪ್ತಿ, ಭೀಮರಾಜನ ಸಂತಸ, ಪುಷ್ಕರನೊಂದಿಗೆ ಮತ್ತೆ ದ್ಯೂತ, ಪುಷ್ಕರನ ಸೋಲು, ಮರಳಿ ರಾಜ್ಯಕೋಶಗಳ ಪ್ರಾಪ್ತಿ ಮೊದಲಾದ ಪ್ರಸಂಗಗಳ ವರ್ಣನೆಯಿದೆ.

ಕಾವ್ಯದುದ್ದಕ್ಕೂ ಎಲ್ಲಿಯೂ ಸ್ವಾರಸ್ಯಕೆಡದಂತೆ ಸಂಪಾದಕರು ಈ ಕಾವ್ಯವನ್ನು ಸಂಗ್ರಹಿಸಿ ಸಂಪಾದಿಸಿದ್ದಾರೆ. ಸಂಪಾದನೆ ಹಾಗೂ ಸಂಗ್ರಹದ ಸಂದರ್ಭದಲ್ಲಿ ಕಥೆಯ ಬೆಳವಣಿಗೆಯಲ್ಲಿ ಎಲ್ಲಿಯೂ ಸಮಸ್ಯೆಗಳು ತಲೆದೋರುವುದು ಕಂಡುಬರುವುದಿಲ್ಲ. ಪಾತ್ರಚಿತ್ರಣ, ರಸಗ್ರಹಣ ಮೊದಲಾದ ವಿಚಾರಗಳಲ್ಲಿಯೂ ಯಾವುದೇ ನ್ಯೂನತೆಗಳು ಕಂಡುಬರುವುದಿಲ್ಲ. ವಿಸ್ತೃತವಾದ ಪೂರ್ವಪೀಠಿಕೆಯಿಂದ ಕಾವ್ಯಾಸ್ವಾದನೆಗೆ ಒಳ್ಳೆಯ ಭೂಮಿಕೆಯನ್ನು ಸಂಪಾದಕರು ಕಲ್ಪಿಸಿಕೊಟ್ಟಿದ್ದಾರೆ. ಇದರಿಂದ ಚೌಂಡರಾಜನ ನಳ-ಚಂಪುವನ್ನು ಇತರ ನಳಚರಿತ್ರೆಗಳೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಿ ಕಾವ್ಯಾ-ಸ್ವಾದನೆ ಮಾಡುವ ಅವಕಾಶ ಲಭ್ಯವಾಗಿದೆ. ಕಾವ್ಯಾಸ್ವಾದನೆಗೆ, ರಸಾನುಭವಕ್ಕೆ ಧಕ್ಕೆಯಾಗದ ರೀತಿಯಲ್ಲಿ ನೀರಸವೆನಿಸಬಹುದಾದ ಭಾಗಗಳನ್ನು, ಪದ್ಯಗಳನ್ನು ಕೈಬಿಟ್ಟಿರುವುದರಿಂದ ಕಥೆಯ ನಡೆ ತುಸು ತ್ವರಿತಗತಿಯಲ್ಲಿ ಕಂಡುಬರುತ್ತದೆ. ಇದರಿಂದ ಕಥೆಯ ಓಟಕ್ಕೆ ಯಾವುದೇ ಧಕ್ಕೆಯಾದಂತೆ ಕಂಡುಬರುವುದಿಲ್ಲ. ಅಲ್ಲದೆ ಚೌಂಡರಸನ ಕಾವ್ಯನಿರೂಪಣೆ ದ್ರುತಗತಿಯಲ್ಲಿದೆ ಎಂಬುದು ಸಹೃದಯರು ಗಮನಿಸಬೇಕಾದ ವಿಷಯ.

ಪ್ರೊ. ಜಿ. ವೆಂಕಟಸುಬ್ಬಯ್ಯ ಹಾಗೂ ಮ. ಸು. ಕೃಷ್ಣಮೂರ್ತಿಯವರು ಸಂಪಾದಿಸಿರುವ ಈ ಚೌಂಡರಾಜಕೃತ 'ನಳಚಂಪುಸಂಗ್ರಹ' ಅಪೂರ್ವ ಹಾಗೂ ವಿಶೇಷ ಪ್ರಯತ್ನ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಕಾವ್ಯದ ಕೊನೆಯಲ್ಲಿ ಕಾವ್ಯದಲ್ಲಿಯ ಪದ್ಯಗಳ ಅಕಾರಾದಿಯನ್ನು ಹಾಗೂ ಕಠಿನ ಪದಗಳಿಗೆ ಅರ್ಥವನ್ನು ನೀಡಿರುತ್ತಿದ್ದರೆ ಕಾವ್ಯಾಭ್ಯಾಸಿಗಳಿಗೆ, ಸಹೃದಯರಿಗೆ ಇನ್ನೂ ಹೆಚ್ಚಿನ ಅನುಕೂಲ-ವಾಗುತ್ತಿತ್ತು ಎಂಬುದರಲ್ಲಿ ಸಂದೇಹವಿಲ್ಲ.



# ಅಕ್ರೂರಚರಿತ್ರೆಯ ಸಂಗ್ರಹ

ಡಾ. ಕೆ. ಎಂ. ರಾಘವ ನಂಬಿಯಾರ್

ಸೋಮನಾಥಕವಿಯ 'ಅಕ್ರೂರ ಚರಿತ್ರೆ'ಯನ್ನು ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಸಂಗ್ರಹವಾಗಿ ಸಂಪಾದಿಸಿದುದು 1966ಕ್ಕೂ ಮೊದಲು. ಈ ಗ್ರಂಥ ಬೆಂಗಳೂರು ವಿಶ್ವವಿದ್ಯಾಲಯದ ಪದವಿಪೂರ್ವ ತರಗತಿಗೆ ಪಠ್ಯಪುಸ್ತಕವಾಗಿ ಮಾನ್ಯವಾದ ಬಳಿಕ 1966ರಲ್ಲಿ ದ್ವಿತೀಯಮುದ್ರಣ ಪ್ರಕಟಗೊಂಡಿತು.

ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾಕೋಶಾಗಾರದಿಂದ ಪಡೆದ ಓಲೆಗರಿಯ ಪ್ರತಿಯಿಂದ ಈ ಗ್ರಂಥವನ್ನು ಸಂಪಾದಿಸಲಾಗಿದೆ. ಮೂಲಗ್ರಂಥವಲ್ಲಿ ಭಾಮಿನಿ ಷಟ್ಪದಿಗಳ ಐನೂರು ಪದ್ಯಗಳಿದ್ದರೆ, ವೆಂಕಟಸುಬ್ಬಯ್ಯನವರು ಕಥಾಭಾಗ-ವನ್ನು ಬಿಡದೆ ತೊಡಕಿಲ್ಲದಂತೆ, ವಿಶೇಷವಾದ ವರ್ಣನೆಗಳನ್ನು ಬಿಟ್ಟು, ಇನ್ನೂರ ಅರುವತ್ತೆರಡು ಪದ್ಯಗಳಲ್ಲಿ ಈ ಗ್ರಂಥವನ್ನು ಸಂಗ್ರಹ (ಪು. ೨೨) ಮಾಡಿದ್ದಾರೆ.

ಪ್ರಾಚೀನಕೃತಿಗಳ ಗ್ರಂಥಸಂಪಾದನೆಯ ರೀತಿಯನ್ನು ಮೊದಲು ಪರಿಚಯಿಸಿ-ಕೊಟ್ಟವರು ವಿದೇಶಿ ಮಿಷನರಿಗಳಲ್ಲಿದ್ದ ಅಧ್ಯಯನಾಸಕ್ತರು. ಸಂಪಾದನದ ಕೆಲಸ ಬಲು ಕ್ಲಿಷ್ಟವಾದ ಕಾಯಕ. ಮೂಲಗ್ರಂಥವನ್ನು ಅರ್ಥಮಾಡಿಕೊಳ್ಳುವುದು ಸಮ-ರ್ಪಕವಾದರೆ ಮಾತ್ರ ಶುದ್ಧಪಾಠದ ರಚನೆ ಸಾಧ್ಯ. ಅದಕ್ಕೆ ಬೇಕಾದ ವಿವಿಧ ಜ್ಞಾನಶಾಖೆಗಳ ಪರಿಚಯ ಸಂಗ್ರಹಕಾರನಿಗೆ ಇರಬೇಕು. ದೇಶೀಯ ವಿದ್ವಾಂಸರಲ್ಲಿ ಅನೇಕರು ಈ ಮಾರ್ಗಕ್ರಮಣದ ಪಂಥಾಹ್ವಾನವನ್ನು ದಿಟ್ಟವಾಗಿ ಸ್ವೀಕರಿಸಿದ್ದಾರೆ. ಅಂಥ ಆದಿಮರಲ್ಲಿ ಒಬ್ಬರು ವೆಂಕಟಸುಬ್ಬಯ್ಯನವರು.

ಭಾಗವತ ಪುರಾಣದಲ್ಲಿ ಬರುವ ಅಕ್ರೂರ-ಕೃಷ್ಣ ಸಮಾಗಮ, ಕಂಸವಧೆ ಈ ಕಾವ್ಯದ ಮುಖ್ಯವಸ್ತು. ಭಕ್ತಿಪಂಥದ ಮೇಲ್ಮೆಯನ್ನು ಈ ಕಾವ್ಯದ ಮೂಲಕ ಕವಿ ಪ್ರತಿಪಾದಿಸಿದ್ದಾನೆ. ವಿದ್ಯಾರ್ಥಿಗಳಿಗಾಗಿ ಸಿದ್ಧಪಡಿಸಿದ ಈ ಹೊತ್ತಗೆಯಲ್ಲಿ ಕವಿ, ಕಾವ್ಯ ಮತ್ತು ಅನೇಕ ಆನುಷಂಗಿಕ ವಿಷಯಗಳನ್ನು ತಿಳಿಯಾಗಿಯೂ ವೈಚಾರಿಕ ಘನತೆ-ಯೊಂದಿಗೂ ಸಂಪಾದಕರು ಚರ್ಚಿಸಿದ್ದಾರೆ.

ಕುಮಾರವ್ಯಾಸನನ್ನು ಸ್ತುತಿಸಿರುವ ಸೋಮನಾಥ ಕವಿಯ ದೇಶಕಾಲಗಳ ಬಗೆಗೆ ಏನೊಂದೂ ಮಾಹಿತಿ ಈ ಗ್ರಂಥದಲ್ಲಿಲ್ಲ. ಡಾ. ನರಸಿಂಹಾಚಾರ್ಯರು ಗುರುತಿಸಿದ ಕ್ರಿ. ಶ. 1600ನ್ನೆ ಕವಿಯ ಕಾಲವಾಗಿ ವೆಂಕಟಸುಬ್ಬಯ್ಯನವರೂ

ಪರಿಗಣಿಸಿರುತ್ತಾರೆ. ಅವರು ಊಹಿಸಿದಂತೆ ಕವಿ ಬ್ರಾಹ್ಮಣ, ಭಾಗವತಮತಾನು-ಯಾಯಿ ಎಂದಷ್ಟೆ ತಿಳಿಯಲು ಸಾಧ್ಯವಾಗಿದೆ. ಭಾಗವತ ಮತದ ಬಗೆಗೂ ಪೀಠಿಕೆಯಲ್ಲಿ ಮಾಹಿತಿಕೊಡಲಾಗಿದೆ.

'ಶುದ್ಧವಾದ ಭಾಷಾಪ್ರಯೋಗದಿಂದಲೂ, ಸರಳವಾದ ಕಥನಕ್ರಮದಿಂದಲೂ ಈ ಕಾವ್ಯವು ಹೃದ್ಯವಾಗಿದೆ.' ಈ ಕಾವ್ಯ ಪುರಾಣಾಧಾರಿತವಾಗಿರುವುದರಿಂದ ಸಂಪಾದಕರು 'ಭಾರತದ ಪುರಾಣಗಳು, ಅವುಗಳ ಮಹತ್ತ್ವ' ಎಂಬ ಶೀರ್ಷಿಕೆಯಲ್ಲಿ ಸಂಕ್ಷಿಪ್ತವಾದರೂ ಮಹತ್ತ್ವದ ಪರಿವೀಕ್ಷಣೆ ಮಾಡಿ ಪುರಾಣಗಳ ಕುರಿತಾದ ದೇಶೀಯ ಹಾಗೂ ವಿದೇಶೀಯ ವಿದ್ವಾಂಸರ ನಿಲುವುಗಳನ್ನು ಗುರುತಿಸಿದ್ದಾರೆ.

ಭಕ್ತಿಯನ್ನು ವನಿತೆಯಾಗಿಯೂ, ಜ್ಞಾನ-ವೈರಾಗ್ಯಗಳನ್ನು ಆಕೆಯ ಪುತ್ರರಾಗಿಯೂ ಚಿತ್ರಿಸಿದ ಕತೆಯೊಂದನ್ನು ಉದಾಹರಿಸಿದ ಸಂಪಾದಕರು ಭಕ್ತಿ ಪಂಥದ ಉಗಮ ದ್ರಾವಿಡ ದೇಶ(ತಮಿಳುನಾಡು)ದಲ್ಲಿ ಎಂಬ ಭಾಗವತ ಪುರಾಣಕಾರನ ಉಲ್ಲೇಖವನ್ನು ಉದ್ಧರಿಸಿ, 'ಭಕ್ತಿಕನ್ಯಕೆ ದ್ರಾವಿಡದೇಶದಲ್ಲಿ ಹುಟ್ಟಿ, ಕರ್ನಾಟಕ ದೇಶದಲ್ಲಿ ಚೆನ್ನಾಗಿ ಬೆಳೆದು. ಮಹಾರಾಷ್ಟ್ರಲ್ಲಿ ಅಲ್ಲಲ್ಲಿ ಅಡಗಿದ್ದು ಕೊನೆಗೆ ಗುರ್ಜರ ದೇಶದಲ್ಲಿ ಜೀರ್ಣವಾದಳು' (ಪು. ೧೧) ಎಂಬ ಚರಿತ್ರೆಯ ಮಾಹಿತಿಯನ್ನು ನೀಡುತ್ತಾರೆ. ಭಕ್ತಿಯ ಸಾರ್ಥಕ್ಯವಿರುವುದು ಜ್ಞಾನವೈರಾಗ್ಯಗಳ ಉದಯದಲ್ಲೆಂಬ ಮಹತ್ತ್ವದ ಆಶಯವನ್ನು ಸಂಪಾದಕರು ಧ್ವನಿಸಿದ್ದಾರೆ.

ಇದನ್ನು 'ಮಹಾಕಾವ್ಯ'ವೆಂದ ಹಿಂದಿನವರ ಗ್ರಹಿಕೆಯನ್ನು ಒಪ್ಪದ ಸಂಪಾ-ದಕರು, ಸೋಮನಾಥಕವಿ ಪಂಡಿತನೆಂಬುದನ್ನು ದೃಢೀಕರಿಸುತ್ತಾರೆ. ಕೃತಿಯಲ್ಲಿ ಕುಮಾರವ್ಯಾಸನ ಪ್ರಭಾವ ದಟ್ಟವಾಗಿರುವುದನ್ನು ಗುರುತಿಸುತ್ತಾರೆ. ಕನ್ನಡದಲ್ಲಿ ಭಾಗವತದ ಕಥೆಯನ್ನು ಇಡಿಯಾಗಿ ಹಾಗೂ ಆಂಶಿಕವಾಗಿ ಕಾವ್ಯವಾಗಿಸಿದವರನ್ನು ಹೆಸರಿಸುತ್ತಾರೆ. ಇವರಲ್ಲಿ ನಿತ್ಯಾತ್ಮಶುಕಯೋಗಿ ಕವಿಯ ಭಾಗವತ ಸೋಮನಾಥನ ಮೇಲೆ ಪ್ರಭಾವ ಬೀರಿದುದನ್ನೂ ಕಂಡುಕೊಂಡಿದ್ದಾರೆ. ಆದರೆ ನಿತ್ಯಾತ್ಮ ಶುಕಯೋಗಿಯ ನೆನವರಿಕೆ ಇಲ್ಲಿಲ್ಲ ಎಂಬುದಕ್ಕೆ ಅಚ್ಚರಿಪಟ್ಟಿದ್ದಾರೆ.

ವಿದ್ಯಾರ್ಥಿಗಳ ಅಧ್ಯಯನಕ್ಕೆ ಉಪಕರಿಸಲು ಕಾವ್ಯದ ಕಥಾನುಕ್ರಮಣಿಕೆ, ಕವಿಯ ಸಾಮರ್ಥ್ಯ, ಪಾತ್ರಗಳ ವ್ಯಕ್ತಿಚಿತ್ರ, ಪೂರ್ವಕತೆಗಳ ಬಗೆಗೆ ಟಿಪ್ಪಣಿ ಇತ್ಯಾದಿ-ಗಳನ್ನು ನೀಡಿ ಗ್ರಂಥವೊಂದನ್ನು ಸಂಪಾದಿಸುವುದರ ಜವಾಬ್ದಾರಿಯ ಹರಹನ್ನು ಸಂಪಾದಕರು ತೋರಿಕೊಟ್ಟಿದ್ದಾರೆ.

ಭಾರತೀಯ ಪುರಾಣಗಳು ಅರ್ವಾಚೀನರಚನೆಗಳೆಂಬ ಅಭಿಪ್ರಾಯಕ್ಕೆ ಸಹಮತ ಹೊಂದಿರುವ ವೆಂಕಟಸುಬ್ಬಯ್ಯ ಅವರು ಅವುಗಳು ಹಾಗೂ ವಿಶ್ವದ ಇತರ ಪುರಾಣಕಾವ್ಯಗಳೊಂದಿಗೆ ಹೇಗೆ ಸಾದೃಶ್ಯಹೊಂದಿವೆ ಎಂಬುದನ್ನೂ ಗುರುತಿಸುತ್ತಾರೆ.

'ಈ ಕಥೆಗಳೆಲ್ಲವೂ ನಿಜವಾಗಿ ಎಂದೂ ನಡೆಯಲಿಲ್ಲ. ಮಾನವನ ಜೀವಿತದ ಪ್ರಾರಂಭಕಾಲದಲ್ಲಿ ಆತನ ಪ್ರಗತಿ ಆದ ಕ್ರಮವನ್ನು ಈ ಕಥೆಗಳು ಸೂಚಿಸುತ್ತವೆ. ಹೊರಗಡೆ ಪ್ರಕೃತಿಯಲ್ಲಿಯೂ, ಅಂತರಂಗದಲ್ಲಿ ಮಾನವನ ಮನಸ್ಸಿನಲ್ಲಿಯೂ ನಡೆಯುವ ಸತ್-ಅಸತ್ ಶಕ್ತಿಗಳ ಘರ್ಷಣೆಯ ಪ್ರತಿಮೆಗಳು ಇವೆಲ್ಲ, ಅಷ್ಟೆ.' (ಪು

೩೯) ಎನ್ನುತ್ತ ಪುರಾಣಗಳನ್ನು ಹೇಗೆ ಪರಿಭಾವಿಸಬೇಕೆಂಬುದರ ಸ್ಪಷ್ಟ ಮಾರ್ಗ-ದರ್ಶನವನ್ನು ಅವರು ನೀಡುತ್ತಾರೆ.

'ಅಕ್ರೂರ ಚರಿತ್ರೆ'ಯಲ್ಲಿ ನಿಜವಾಗಿಯಾದರೆ ಭಕ್ತರ ಹೆಚ್ಚುಗಾರಿಕೆಯ ಪ್ರತಿ-ಪಾದನೆಯಿದೆ ಎಂಬುದನ್ನು ಸಂಪಾದಕರು ಧ್ವನಿಸಿದ್ದಾರೆ. 'ಕೃಷ್ಣನ ಉಪಚಾರಕ್ಕೆ ಒಳಗಾಗುವ ಪುಣ್ಯ ಮಾಡಿದ್ದವರು ಅಕ್ರೂರ, ಕುಬ್ಜೆ, ಸುದಾಮ, ಉಗ್ರಸೇನ; ಆತನ ಕೋಪಕ್ಕೆ ಒಳಗಾಗುವ ಪಾಪಿಗಳು ರಜಕ, ಕಂಸಾದಿ ರಕ್ಕಸರು. ಈ ಎರಡು ಪಂಗಡಗಳ ಕಥೆಗಳನ್ನು ಹೇಳುವಲ್ಲಿಯೂ ಕೃಷ್ಣನು ಭಕ್ತಪರಾಧೀನನೆಂಬ ಅಭಿ-ಪ್ರಾಯವನ್ನು ಸಮರ್ಥಿಸುವುದೇ ಕವಿಯ ಆಶಯ. ಭಕ್ತರ ಚರಿತೆ, ಭಕ್ತಿಯ ಸಫಲತೆ, ಪರಮಾತ್ಮನ ಪ್ರಸನ್ನತೆ ಇವುಗಳ ಹೃದ್ಯಸಮೀಕರಣವಾಗಿ ಈ ಕಾವ್ಯ ಬೆಳಗುತ್ತದೆ' (ಪು. ೨೮) ಎಂದು ಕವಿಯ ಆಶಯವನ್ನು ಅವರು ಹೊರಪಡಿಸಿದ್ದಾರೆ.

ಸೋಮಸಾಥನ ಕಾವ್ಯಕ್ಕೆ ಬರಬೇಕಾದ ಜನಮನ್ನಣೆ, ಆದರ ಸಿಗದಿರುವುದನ್ನು, ಅವನಿಗಿಂತ ಕಡಮೆ ಯೋಗ್ಯತೆಯ ಕವಿಗಳಿಗೆ ಪ್ರಾಧಾನ್ಯ ಬಂದಿರುವುದನ್ನು ಬೆಟ್ಟು ಮಾಡಿದ ವೆಂಕಟಸುಬ್ಬಯ್ಯ, 'ಭಕ್ತಿಯ ಕತೆಯನ್ನು ಕನ್ನಡದಲ್ಲಿ ಕೇಳಿದರೂ ಪುಣ್ಯಕ್ಕೇನೂ ಕಡಮೆಯಿಲ್ಲ; ಆನಂದವಂತೂ ಇದ್ದೇ ಇದೆ' (ಪು. ೨೮) ಎನ್ನುತ್ತಾರೆ. ಕ್ರೌನ್ ಅಷ್ಟಾಂಶ ಆಕೃತಿಯ ನೂರ ಹದಿನೈದು ಪುಟಗಳ ಹೊತ್ತಗೆಯಲ್ಲಿ ಸುಮಾರು ಮೂವತ್ತೊಂದು ಪುಟಗಳ ಸಂಪಾದಕರ ಅವಗಾಹನವಲ್ಲದೆ ಹನ್ನೊಂದು ಕಿರು ಅಧ್ಯಾಯಗಳಲ್ಲಿ ಕಾವ್ಯವನ್ನು ಒಪ್ಪಗೊಳಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಕ್ಲಿಷ್ಟ ಪದಗಳಿಗೆ ಅರ್ಥನೀಡುವ ಕೋಶವನ್ನೂ ನೀಡಲಾಗಿದೆ. ಅಧ್ಯಾಯಗಳಿಗೆ ಶೀರ್ಷಿಕೆ-ಯನ್ನು ಪದ್ಯಗಳ ತುಣುಕುಗಳಿಂದಲೆ ನೀಡಿ ಆಕರ್ಷಕಗೊಳಿಸಲಾಗಿದೆ. ಉದಾಹರಣೆಗೆ – ಕಂಸನಪಟಳಿದಳುಕಿ ಚಿಂತಿಸಿದ, ಹರಿ ನಿಮಗೆ ಮಗನಲ್ಲ, ಒರಲುತಿರ್ದುದು ಕುವಲಯಾಪೀಡ – ಇತ್ಯಾದಿ.

ಒಟ್ಟಿನಲ್ಲಿ ಗ್ರಂಥಸಂಪಾದನೆಗೆ ಒಂದು ಚೊಕ್ಕವಾದ ನಿದರ್ಶನವನ್ನು ಜಿ. ವೆಂಕಟಸುಬ್ಬಯ್ಯನವರು 'ಅಕ್ರೂರ ಚರಿತ್ರೆಯ ಸಂಗ್ರಹ'ದ ಮೂಲಕ ನೀಡಿದ್ದಾರೆ.



ಎರವಲು ಪದಗಳನ್ನು ಕುರಿತ ವ್ಯಾಸಂಗವು ಭಾಷಾಶಾಸ್ತ್ರದ ಬಹುಮುಖ್ಯವಾದ ಅಂಗವಾಗಿದೆ. ಭಾಷೆಯ ದೃಷ್ಟಿಯಿಂದ ಅದು ಎಷ್ಟು ಪ್ರಮುಖವೋ ಸಂಸ್ಕೃತಿಯ ದೃಷ್ಟಿಯಿಂದಲೂ ಅಷ್ಟೇ ಪ್ರಧಾನವಾದುದು. ಈ ಕ್ಷೇತ್ರದಲ್ಲಿ ನಡೆಯುವ ವ್ಯಾಸಂಗದಿಂದಲೂ ಸಂಶೋಧನೆಯಿಂದಲೂ ಎರವಲು ಪಡೆಯುವ ಮತ್ತು ಎರವಲು ನೀಡುವ ಎರಡು ಭಾಷೆಗಳ ಧ್ವನಿವ್ಯವಸ್ಥೆಗಳ ಪರಿಚಯವಾಗುತ್ತದೆ. ಅಲ್ಲದೆ ಒಂದು ಗೊತ್ತಾದ ಕಾಲಾವಾಧಿಯಲ್ಲಿ ಆಗಲಿ, ಅಥವಾ ಚಾರಿತ್ರಿಕ ಬೆಳವಣಿಗೆಯ ಮಜಲು-ಗಳಲ್ಲಿ ಆಗಲಿ, ಆ ಭಾಷೆಯಲ್ಲಿ ಆಗುವ ಧ್ವನಿವ್ಯವಸ್ಥೆಯ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಒಂದು ಭಾಷೆಯ ಚರಿತ್ರೆಯನ್ನು ಅಭ್ಯಾಸ ಮಾಡುವಾಗ ಆ ಭಾಷೆಯ ಧ್ವನಿವ್ಯವಸ್ಥೆ, ಶಬ್ದಸ್ವರೂಪ, ಅರ್ಥನಿರೂಪಣೆ, ವಾಕ್ಯಗಳ ನಿರ್ಮಾಣ, ವಾಕ್ಯಗಳಲ್ಲಿನ ಪದಗಳ ಆನುಪೂರ್ವಿ, ಮುಂತಾದವುಗಳನ್ನು ಮಾತ್ರ ಗಮನಿಸುವುದಲ್ಲ. ಕಾಲಕ್ರಮದಲ್ಲಿ ಆ ಭಾಷೆಯ ಮೇಲೆ ಇತರ ಭಾಷೆಗಳ ಪ್ರಭಾವವು ಎಷ್ಟಾಗಿದೆ ಎಂಬುದನ್ನೂ ಗುರುತಿಸಬೇಕಾಗುತ್ತದೆ.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

ವ್ಯಾಕರಣಪ್ರಕ್ರಿಯೆಗಳನ್ನು ಅನುಸರಿಸಿ ಶಬ್ದಗಳು ಪಡೆಯುವ ಎಲ್ಲ ರೂಪಗಳನ್ನು ಮಾದರಿಗಳಾಗಿ ಸಿದ್ಧಪಡಿಸುವ ನಿಘಂಟುಗಳು ಪಾಶ್ಚಾತ್ಯಭಾಷೆಗಳಲ್ಲಿ ಇವೆ. ಅವು ಉಪಾಧ್ಯಾಯರಿಗೆ ಶಬ್ದಬೋಧೆಯನ್ನು ಮಾಡಲು ಸಹಾಯಕವಾಗಿವೆ. ಕನ್ನಡದಲ್ಲಿ ಅಂಥ ಪ್ರಯತ್ನಗಳೇ ನಡೆದಿಲ್ಲ. ಒಂದು ನಾಮಪದ ವಿಭಕ್ತಿಪ್ರತ್ಯಯಗಳನ್ನು ಹತ್ತಿಸಿದಾಗ ಪಡೆ-ಯುವ ರೂಪಗಳನ್ನೂ, ಒಂದು ಧಾತು ಆಖ್ಯಾತಪ್ರತ್ಯಯಗಳನ್ನು ಹತ್ತಿಸಿದಾಗ ಹೊಂದುವ ರೂಪಗಳನ್ನೂ, ನಾಮಪದವನ್ನು ಕ್ರಿಯಾಪದ ಮಾಡುವ, ಕ್ರಿಯಾಪದವನ್ನು ನಾಮಪದವಾಗಿ ಪರಿವರ್ತಿಸುವ ಉಪಾಯ-ಗಳನ್ನೂ ಅವು ಕಲಿಸುತ್ತವೆ. ಶಿಕ್ಷಕರಾಗಿರುವವರು ಈ ದಿಕ್ಕಿನಲ್ಲಿ ಕೆಲಸ ಮಾಡಬೇಕು.

ಇಂಗ್ಲಿಷಿನಲ್ಲಿ Riverse Dictionary ಎಂಬ ಹೆಸರಿನ ನಿಘಂಟುಗಳನ್ನೂ ಸಿದ್ಧಪಡಿಸುತ್ತಾರೆ. ಇಂಥ ನಿಘಂಟಿನಲ್ಲಿ ಶಬ್ದಗಳ ಕೊನೆಯ ಅಕ್ಷರವನ್ನು ಹಿಡಿದು ಅಕಾರಾದಿಯಾಗಿ ಶಬ್ದ ಪಟ್ಟಿ ಮಾಡುತ್ತಾರೆ. ಇವುಗಳಲ್ಲಿ ಪ್ರತ್ಯಯಗಳೇ ಮುಖ್ಯವಾಗಿರುತ್ತವೆ. ಇಸು, ಇಕೆ, ಮೆ, ಪು, ಹು ಮುಂತಾದ ಪ್ರತ್ಯಯಗಳು ಹತ್ತುವ ಶಬ್ದಗಳೆಲ್ಲ ಒಂದೇ ಕಡೆ ಸಿಕ್ಕುವುದರಿಂದ ಪದ್ಯ ಬರೆಯುವವರಿಗೆ ಪ್ರಾಸ ಹುಡುಕುವವರಿಗೆ ಇಂಥ ನಿಘಂಟು ಬಹು ಸಹಾಯವಾಗುತ್ತದೆ. ಶಿಕ್ಷಕರಿಗೆ ಬೇಕಾದ ದೃಷ್ಟಾಂತಗಳನ್ನು ಬೇಗ ಹುಡುಕಲು ತುಂಬ ಸುಲಭ. ಈ ಬಗೆಯ ನಿಘಂಟುಗಳ ಬಗ್ಗೆ ನಮ್ಮ ಶಿಕ್ಷಕರಿಗೆ ಇನ್ನೂ ತಿಳುವಳಿಕೆಯಿಲ್ಲ.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

# ಶ್ರೀಶಂಕರಾಚಾರ್ಯರು

ಡಾ. ಎಚ್. ವಿ. ನರಸಿಂಹಮೂರ್ತಿ

ಪವಿತ್ರಭಾರತ ಜನ್ಮಕೊಟ್ಟ ಅಸಾಧಾರಣ ತತ್ತ್ವಜ್ಞಾನಿಗಳಲ್ಲಿ ಆದಿಶಂಕರಾಚಾರ್ಯರು ಪ್ರಮುಖರು. ಅತಿಕಡಿಮೆ ಅವಧಿಯಲ್ಲಿ ಈ ದೇಶದ ಚರಿತ್ರೆ ಮತ್ತು ಸಂಸ್ಕೃತಿಯ ಮಾರ್ಗವನ್ನೇ ಬದಲಿಸಿದ ಮಹಾಪುರುಷರು, ಅವರು. ಪವಾಡ ಸದೃಶವಾದ ತಮ್ಮ ಜೀವನ-ಸಾಧನೆಗಳ ಮೂಲಕ ಸನಾತನಧರ್ಮಕ್ಕೆ ನೆಲೆ-ಬೆಲೆಗಳನ್ನು ಒದಗಿಸಿಕೊಟ್ಟ ಅದ್ಭುತವ್ಯಕ್ತಿತ್ವ ಅವರದು. ಭಾರತೀಯ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ಅವರು ದೃಢವಾಗಿ ಪ್ರತಿಪಾದಿಸಿದ ಅದ್ವೈತವೇದಾಂತ ಬಹಳ ಮುಖ್ಯವಾದ ಒಂದು ಸಿದ್ಧಾಂತ. ಇಂತಹ ಯುಗಪುರುಷ ಶಂಕರರ ಜೀವನ-ಚರಿತ್ರೆಯ ಕುರಿತು ಅವರ ನಾಲ್ಕು ಮಂದಿ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಪದ್ಮಪಾದಾಚಾರ್ಯರಿಂದ ಮೊದಲ್ಗೊಂಡು ಇಂದಿನವರೆಗೆ ಅನೇಕರು ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 1957ರಲ್ಲಿ ಭಾರತ ಸರಕಾರದಿಂದ ಸ್ಥಾಪಿಸಲ್ಪಟ್ಟು, ಜನಸಾಮಾನ್ಯರಲ್ಲಿ ಪುಸ್ತಕಗಳ ಕುರಿತು ಹೆಚ್ಚಿನ ಆಸಕ್ತಿಯನ್ನು ಮೂಡಿಸುತ್ತಿರುವ ನ್ಯಾಷನಲ್ ಬುಕ್ ಟ್ರಸ್ಟಿನ 'ರಾಷ್ಟ್ರೀಯ ಜೀವನ ಚರಿತ್ರಮಾಲೆ'ಯಲ್ಲಿ ಪ್ರಕಟವಾದ 'ಶಂಕರಾಚಾರ್ಯ'ಗ್ರಂಥವೂ ಒಂದು. ಇದರ ಲೇಖಕರು ಪ್ರಸಿದ್ಧ ವಿದ್ವಾಂಸರಾದ ಡಾ. ಟಿ. ಎಂ. ಪಿ. ಮಹಾದೇವನ್ ಅವರು. ಸ್ವತಃ ಅದ್ವೈತವಾದಿಗಳಾದ ಅವರು ಆಚಾರ್ಯಶಂಕರರ ವಿಷಯದಲ್ಲಿ 'ಇದಮಿತ್ಥಂ' ಎಂದು ಅಧಿಕಾರಯುಕ್ತವಾಗಿ ಬರೆಯಬಲ್ಲ ಶ್ರೇಷ್ಠ ಬರಹಗಾರರು. ಪಾಶ್ಚಾತ್ಯದೇಶಗಳಲ್ಲಿ ವ್ಯಾಪಕವಾದ ಪ್ರವಾಸ ಕೈಗೊಂಡು ತತ್ತ್ವಶಾಸ್ತ್ರದ ಕುರಿತು ಅನೇಕ ಪ್ರವಚನಗಳನ್ನು ನೀಡಿದವರು. ಮದರಾಸು ವಿಶ್ವವಿದ್ಯಾನಿಲಯದ ತತ್ತ್ವಶಾಸ್ತ್ರವಿಭಾಗದ ಮುಖ್ಯಸ್ಥರಾಗಿ ಮತ್ತು 'ಸೆಂಟರ್ ಆಫ್ ಅಡ್ವಾನ್ಸ್ ಸ್ಟಡಿ ಆಫ್ ಫಿಲಾಸೊಫಿ' ಸಂಸ್ಥೆಯ ನಿರ್ದೇಶಕರಾಗಿ ಭಾರತದ ದರ್ಶನಗಳು ಮತ್ತು ಮತಗಳ ಕ್ಷೇತ್ರದಲ್ಲಿ ಅಪಾರವಾದ ಸೇವೆ ಸಲ್ಲಿಸಿದವರು. ವೇದಾಂತದ ಕುರಿತು ಅನೇಕ ಗ್ರಂಥಗಳನ್ನೂ ಅವರು ಬರೆದಿದ್ದಾರೆ. ಹಿಂದೂಧರ್ಮ, ತತ್ತ್ವಶಾಸ್ತ್ರ ಹಾಗೂ ಸಂಸ್ಕೃತಿಗಳ ಬಗ್ಗೆ ಅವರು ಸಲ್ಲಿಸಿರುವ ಸೇವೆಯನ್ನು ಗಮನಿಸಿ ಭಾರತಸರಕಾರ 1967ರಲ್ಲಿ ಅವರಿಗೆ 'ಪದ್ಮಭೂಷಣ' ಪ್ರಶಸ್ತಿ ನೀಡಿ ಗೌರವಿಸಿದೆ.

ಇಂತಹ ಹೆಸರಾಂತ ವಿದ್ವಾಂಸರೂ, ತತ್ತ್ವಶಾಸ್ತ್ರಜ್ಞರೂ ಆದ ಡಾ. ಟಿ. ಎಂ. ಪಿ. ಮಹಾದೇವನ್ ಅವರ 'ಶಂಕರಾಚಾರ್ಯ' ಕೃತಿಯನ್ನು ಕನ್ನಡಕ್ಕೆ ಅನು-

ಪಾದಿಸಿದವರು ಪ್ರಸಿದ್ಧ ನಿಘಂಟುತಜ್ಞರೂ, ಹಿರಿಯ ವಿದ್ವಾಂಸರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು. 2011ರಲ್ಲಿ ನಡೆಯಲಿರುವ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಇವರು ಸರ್ವಾನುಮತದಿಂದ ಆಯ್ಕೆಯಾದವರು. ಅನುವಾದಕಲೆಯಲ್ಲಿ ನೈಪುಣ್ಯ ಸಾಧಿಸಿರುವ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಪ್ರಸಿದ್ಧ ಅನುವಾದಿತ ಕೃತಿಗಳಲ್ಲಿ 'ಶಂಕರಾಚಾರ್ಯ' ಪ್ರಮುಖವಾದುದು. ಇದಕ್ಕೆ ಕಾರಣ ಅವರಿಗೆ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿರುವ ಹಿಡಿತ ಮತ್ತು ಪಾಂಡಿತ್ಯ. ಅವರ ಕುಟುಂಬಕ್ಕೆ ಸಂಸ್ಕೃತದ ಹಿನ್ನೆಲೆ ಇದೆ. ಅವರ ಸಹೋದರರಾದ ಪ್ರೊ. ಜಿ. ಸೀತಾರಾಮಯ್ಯನವರು ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಸಂಸ್ಕೃತ ವಿಭಾಗದ ಪ್ರಾಧ್ಯಾಪಕರಾಗಿ ನನಗೆ ಮತ್ತು ನನ್ನಂತಹ ಅನೇಕಮಂದಿಗೆ ಸಂಸ್ಕೃತ ಕಲಿಸಿದವರು. ಕನ್ನಡವಂತೂ ಜಿ. ವಿ.ಯವರಿಗೆ ಸುಲಿದ ಬಾಳೆಯ ಹಣ್ಣಿನಷ್ಟು ಸುಲಭ; ಸುಲಲಿತ. ಅವರ ಇಂಗ್ಲಿಷ್ ಭಾಷಾನೈಪುಣ್ಯವೂ ಪ್ರಶಂಸನೀಯ.

ಐದು ಅಧ್ಯಾಯಗಳಿಂದ ಕೂಡಿದ ಈ ಗ್ರಂಥ ಭಗವತ್ಪಾದ ಶಂಕರರ ಜನನ ಮತ್ತು ಬಾಲ್ಯ, ಕಾಲಟಿಯಿಂದ ಕಾಶಿಯವರೆಗಿನ ಅವರ ಪಯಣ, ಅನಂತರದ ವಿಜಯಯಾತ್ರೆ, ಅವರ ಉದ್ದೇಶದ ಸಾಧನೆ ಮತ್ತು ಶಾಂಕರಸಿದ್ಧಾಂತಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿದೆ. ಜಿ. ವಿ.ಯವರು ಈ ಅಧ್ಯಾಯಗಳನ್ನು ಕನ್ನಡದ ಆಬಾಲವೃದ್ಧರೂ ಓದಿ ಆಸ್ವಾದಿಸಬಹುದಾದ ಸುಲಭಶೈಲಿಯಲ್ಲಿ ಅನುವಾದಿಸಿದ್ದಾರೆ. ಅವರು ನಿಘಂಟುತಜ್ಞರಾದ್ದರಿಂದ ಮೂಲದಲ್ಲಿರುವ ಶಬ್ದಗಳಿಗೆ ಕರಾರುವಕ್ಕಾದ ಅರ್ಥಕೊಡುವ ಕನ್ನಡಶಬ್ದಗಳನ್ನು ಬಳಸಿದ್ದಾರೆ. ಅವರು ಈ ಗ್ರಂಥವನ್ನು ಅನುವಾದಿಸಿ ಸುಮಾರು ನಲವತ್ತು ವರ್ಷಗಳು ಸಂದರೂ, ಇಂದಿಗೂ ಅದು ಕನ್ನಡ ಓದುಗರಿಗೆಲ್ಲಾ ಅತ್ಯಂತ ಸಂತೋಷಕೊಡುವ ಗ್ರಂಥವಾಗಿ ಉಳಿದು ಬಂದಿರುವುದು ಅಭಿಮಾನದ ಸಂಗತಿ. ಈ ಗ್ರಂಥದ ಕೊನೆಯ ನಲವತ್ತನಾಲ್ಕು ಪುಟಗಳಲ್ಲಿರುವ 'ಶ್ರೀಮದ್ಭಗವತ್ಪೂಜ್ಯಪಾದಸೂಕ್ತಿಮಂಜರೀ' ಜಿ.ವಿ.ಯವರ ಅನುವಾದಕಲೆಯ ಪರಿಣತಿಗೆ ಒಂದು ಉತ್ತಮನಿದರ್ಶನ. ಲೋಕಗುರುಶಂಕರರ ಬೇರೆ ಬೇರೆ ಕೃತಿಗಳಿಗೆ ಸಂಬಂಧಿಸಿದ ಎಂಬತ್ತು ಸಂಸ್ಕೃತ ಸೂಕ್ತಿಗಳ ಸಂಗ್ರಹ, ಇಲ್ಲಿಯದು. ಬ್ರಹ್ಮಸೂತ್ರ ಭಾಷ್ಯದಲ್ಲಿ ಬರುವ ಜಟಿಲವಾಕ್ಯಗಳೂ ಇಲ್ಲಿವೆ; 'ಆತ್ಮಬೋಧ'ದಂತಹ ಪ್ರಕರಣ ಗ್ರಂಥಗಳ ಸರಳಶ್ಲೋಕಗಳೂ ಇವೆ. ಅನುವಾದಕರು ವಿಶೇಷವಾದ ಎಚ್ಚರವಹಿಸಿ, ಅವುಗಳ ಸಂದೇಶವನ್ನು ಕನ್ನಡ ಓದುಗರಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಆದ್ದರಿಂದಲೇ ಆದಿಶಂಕರಾಚಾರ್ಯರ ಕುರಿತು ತಿಳಿದುಕೊಳ್ಳಲು ಬಯಸುವ ಕನ್ನಡಿಗರು ಪುಸ್ತಕದ ಅಂಗಡಿಗಳಿಗೆ ಹೋದಾಗ ಮೊದಲು ಕೇಳುವ ಪ್ರಶ್ನೆ 'ವೆಂಕಟ ಸುಬ್ಬಯ್ಯನವರು ಅನುವಾದಿಸಿದ 'ಶಂಕರಾಚಾರ್ಯ' ಗ್ರಂಥವಿದೆಯೇ?' ಎಂದು. ಏಕೆಂದರೆ ಈ ಪುಸ್ತಕ ಕನ್ನಡ ಓದುಗರಿಗೆಲ್ಲ ಚಿರಪರಿಚಿತ. ಆಸಕ್ತಿ ಹುಟ್ಟಿಸಿ ಓದಿಸಿ-ಕೊಂಡು ಹೋಗುವ ಗುಣ ಈ ಅನುವಾದದಲ್ಲಿದೆ. ಭಾಷೆಯಂತೂ ಅಷ್ಟೊಂದು ಸರಳ; ಸುಲಭ. ಶತಮಾನದ ಹೊಸ್ತಿಲಿಗೆ ಕಾಲಿರಿಸುತ್ತಿರುವ ಅವರಿಂದ ಈ ಮಾದರಿಯ ಇನ್ನಷ್ಟು ಕೃತಿಗಳು ಬರಲಿ ಎಂಬ ಹಾರೈಕೆ ನಮ್ಮೆಲ್ಲರದು. ◈

# ತಿಳಿದುದೆಲ್ಲವ ಬಿಟ್ಟು....

ಎ. ಈಶ್ವರಯ್ಯ

ಇಪ್ಪತ್ತನೇ ಶತಮಾನದ ಶ್ರೇಷ್ಠ ಚಿಂತಕರಲ್ಲೊಬ್ಬರಾದ ಜೆ. ಕೃಷ್ಣಮೂರ್ತಿ ಅವರ ಉಪನ್ಯಾಸಗಳ ಕನ್ನಡ ಅನುವಾದ ಇದು. ಮೂಲ ಇಂಗ್ಲಿಷ್ ಆವೃತ್ತಿಯ ಮೊದಲ ಮುದ್ರಣ 1969ರಲ್ಲಿ ನಡೆಯಿತು. ಜೆ. ವೆಂಕಟಸುಬ್ಬಯ್ಯನವರು ಅನುವಾದಿಸಿರುವ ಈ ಗ್ರಂಥ ಪ್ರಕಟಗೊಂಡದ್ದು 2005ರಲ್ಲಿ. ಎರಡೂ ಆವೃತ್ತಿಗಳನ್ನು ಕೃಷ್ಣಮೂರ್ತಿ ಫೌಂಡೇಶನ್ ಪ್ರಕಟಿಸಿರುತ್ತದೆ. ೧೩೬ ಪುಟಗಳ ಈ ಗ್ರಂಥದ ಬೆಲೆ ರೂ. ೬೦/- ಜೆ. ಕೃಷ್ಣಮೂರ್ತಿಯವರು ವಿವಿಧ ಸಂದರ್ಭಗಳಲ್ಲಿ ನೀಡಿದ ೧೬ ಉಪನ್ಯಾಸಗಳನ್ನು ಸಂಗ್ರಹಿಸಿ ಈ ಸಂಕಲನದಲ್ಲಿ ನೀಡಲಾಗಿದೆ. ಮಾನವನ ಅನ್ವೇಷಣೆ, ಸರಳತೆ ಮತ್ತು ವಿನಯ, ಪ್ರಜ್ಞೆ, ಸುಖಾನ್ವೇಷಣೆ, ನಮ್ಮ ಕುರಿತ ಆತಂಕ, ಹಿಂಸೆ-ಕೋಪ-ಸಮರ್ಥನೆ, ಸಂಬಂಧ ಘರ್ಷಣೆ, ಸ್ವಾತಂತ್ರ್ಯ-ಬಂಡಾಯ, ಕಾಲ-ದುಃಖ-ಸಾವು, ಪ್ರೇಮ, ನೋಡುವುದು ಮತ್ತು ಕೇಳುವುದು, ಚಿಂತನೆ ಎಂದರೇನು?, ಗತಕಾಲದ ಭಾರಗಳು, ಅನುಭವ-ತೃಪ್ತಿ, ಸಂಪೂರ್ಣ ಕ್ರಾಂತಿ-ಹೀಗೆ ಹತ್ತು ಹಲವು ವಿಚಾರಗಳ ಕುರಿತ ಅಸಾಧಾರಣ ಒಳನೋಟಗಳಿರುವ ಚಿಂತನೆ ಈ ಉಪನ್ಯಾಸಗಳಲ್ಲಿ ಹರಿದು ಬಂದಿದೆ.

ಸ್ವಾತಂತ್ರ್ಯ ಮತ್ತು ಅರಿವು ಕೃಷ್ಣಮೂರ್ತಿಯವರ ಮುಖ್ಯ ಕಾಳಜಿಯಾಗಿದೆ. 'ಸ್ವಾತಂತ್ರ್ಯ ಎನ್ನುವುದು ಒಂದು ಮನಃಸ್ಥಿತಿ. ಅದು ಯಾವುದಾದರೊಂದರಿಂದ ಬಿಡುಗಡೆ ಹೊಂದುವುದಲ್ಲ. ಅದು ಸ್ವಾಂತ್ರ್ಯವೆಂಬುದರ ಪ್ರಜ್ಞೆ, ಅದು ಎಲ್ಲದರಲ್ಲೂ ಸಂದೇಹಪಟ್ಟು ಪ್ರಶ್ನಿಸುವ ಸ್ವಾತಂತ್ರ್ಯ. ಆದುದರಿಂದಲೇ ಅದು ಅಷ್ಟು ಗಾಢ, ಕ್ರಿಯಾಶೀಲ ಮತ್ತು ಉತ್ಸಾಹಯುಕ್ತವಾಗಿ ಎಲ್ಲ ಅವಲಂಬನೆ ದಾಸ್ಯ ಮತ್ತು ಹೊಂದಾಣಿಕೆ ಮತ್ತು ಅನುಸರಣೆಗಳನ್ನು ದೂರಮಾಡುತ್ತದೆ' ಎನ್ನುತ್ತಾರೆ ಕೃಷ್ಣಮೂರ್ತಿ. ಪ್ರಜ್ಞೆ ಮತ್ತು ಅರಿವಿನ ಸಂಬಂಧದ ಕುರಿತೂ ಕೃಷ್ಣಮೂರ್ತಿಯವರ ಚಿಂತನೆ ಹಲವು ಮಗ್ಗುಲುಗಳಲ್ಲಿ ನಡೆಯುತ್ತದೆ. ಪ್ರಜ್ಞೆ ಕ್ರಿಯೆಯೂ ಆಗಿರುವುದರಿಂದ ಅವನ್ನು ಬೇರ್ಪಡಿಸಲು ಬರುವುದಿಲ್ಲ ಎನ್ನುವುದು ಅವರ ನಿಲುವು. 'ಪ್ರಜ್ಞೆಯ ಸಂಪೂರ್ಣ ಕ್ಷೇತ್ರದ ಬಗ್ಗೆ - ಅದರ ಅಂಶ ಅಥವಾ ಭಾಗಮಾತ್ರದ ಬಗ್ಗೆ - ಸಮಗ್ರವಾಗಿ ಅರಿತುಕೊಳ್ಳಲು ಸಾಧ್ಯವೇ? ಆ ಸಮಷ್ಟಿಯ ಬಗ್ಗೆ ನಾವು ಅರಿತಿರುವುದು ನಮಗೆ ಸಾಧ್ಯವಾಗಿದ್ದರೆ ನಾವು ಸದಾ ನಮ್ಮ ಸಂಪೂರ್ಣಗಮನದಿಂದ -

ಅಂಶಗಮನದಿಂದಲ್ಲ – ಕೆಲಸ ಮಾಡುತ್ತಿದ್ದೇವೆ. ಇದನ್ನು ಅರ್ಥಮಾಡಿಕೊಳ್ಳುವುದು ಬಹುಮುಖ್ಯ. ಏಕೆಂದರೆ ಪ್ರಜ್ಞೆಯ ಸಂಪೂರ್ಣ ಕ್ಷೇತ್ರದ ಅರಿವು ನಮಗಿದೆ ಎಂದಾದರೆ ಯಾವ ಘರ್ಷಣೆಯೂ ಇಲ್ಲ ಎಂದರ್ಥ. ಆಲೋಚನೆ ಅನುಭವ ಕ್ರಿಯೆ ಎಲ್ಲವೂ ಆಗಿರುವ ಈ ಪ್ರಜ್ಞೆಯನ್ನು ಬೇರೆ ಬೇರೆ ಸ್ತರಗಳಾಗಿ ವಿಂಗಡಿಸಿದರೆ ಆಗ ಘರ್ಷಣೆಯುಂಟಾಗುತ್ತದೆ'.

ಇದೇ ಚಿಂತನಸರಣಿಯನ್ನು ಮುಂದುವರಿಸುತ್ತ ಕೃಷ್ಣಮೂರ್ತಿಯವರು ಏಕಾಗ್ರತೆಯನ್ನು ಲಕ್ಷಿಸುವುದರೊಂದಿಗೆ ಸಮೀಕರಿಸುವುದು ಸರಿಯಲ್ಲ ಎನ್ನುತ್ತಾರೆ. 'ಲಕ್ಷ್ಯವಿಡುವುದು, ಚಿತ್ತೈಕಾಗ್ರತೆ ಹೊಂದುವುದು ಎರಡು ಒಂದೇ ಅಲ್ಲ. ಚಿತ್ತೈಕಾಗ್ರತೆ ಎಂದರೆ ಪ್ರತ್ಯೇಕಿಸುವುದು; ಲಕ್ಷ್ಯವಿಡುವುದು ಎಂದರೆ ಯಾವುದನ್ನೂ ಬಿಡದೆ ಸಮಗ್ರವಾಗಿ ಅರಿಯುವುದು. ನಮ್ಮಲ್ಲಿ ಬಹುಮಂದಿ ನಾವೇನನ್ನು ಕುರಿತು ಮಾತ-ನಾಡುತ್ತೇವೆಂಬುದನ್ನಾಗಲಿ, ನಮ್ಮ ಪರಿಸರವನ್ನಾಗಲಿ, ನಮ್ಮ ಸುತ್ತಣ ಬಣ್ಣಗಳು, ಮರಗಳ ಆಕಾರ, ಮೋಡಗಳು, ನೀರಿನ ಹರಿವು – ಮುಂತಾದುವುಗಳನ್ನಾಗಲಿ ಅರಿತಿಲ್ಲವೆಂದು ನನಗನ್ನಿಸುತ್ತದೆ. ಬಹುಶಃ ನಾವು ನಮ್ಮ ಬಗ್ಗೆ ತುಂಬ ಆಸಕ್ತ-ರಾಗಿರುವುದರಿಂದ ನಮ್ಮ ಸಣ್ಣ ಪುಟ್ಟ ಸಮಸ್ಯೆಗಳು, ನಮ್ಮ ಭಾವನೆಗಳು, ನಮ್ಮ ಭೋಗಗಳು ಮತ್ತು ಹವ್ಯಾಸಗಳು ಮತ್ತು ಮಹತ್ತ್ವಾಕಾಂಕ್ಷೆಗಳು – ಇವುಗಳಲ್ಲಿ ಆಸಕ್ತರಾಗಿರುವುದರಿಂದ ನಾವು ವಸ್ತುನಿಷ್ಠರಾಗಿ ಅರಿವುಳ್ಳವರಾಗಿಲ್ಲ'.

ಜೆ. ಕೆ. ಅವರನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ಒಂದು ಓದಿನಲ್ಲಂತೂ ಅದು ಖಂಡಿತ ಸಾಧ್ಯವಿಲ್ಲ. ಅವರ ದರ್ಶನದ ಸ್ಥೂಲಪರಿಕಲ್ಪನೆ ಪೂರ್ವಭಾವಿಯಾಗಿ ನಮ್ಮಲ್ಲಿದ್ದರೆ ಅವರನ್ನು ಕ್ರಮೇಣ ಅರ್ಥೈಸಿಕೊಳ್ಳಲು ಸಾಧ್ಯ-ವಾಗಬಹುದು. ಮುರಾರಿ ಬಲ್ಲಾಳರು ಅನುವಾದಿಸಿರುವ 'ಜೆ. ಕೆ. ಜೀವನ ದರ್ಶನ' ಈ ನಿಟ್ಟಿನಲ್ಲಿ ನೆರವಾಗಬಹುದಾದ ಗ್ರಂಥ. ಪದರು ಪದರಾಗಿ, ಸರಪಣಿಯಂತೆ ಹೆಣೆದುಕೊಂಡು ಅಮೂರ್ತಸ್ತರದಲ್ಲಿ ಹೊರಹೊಮ್ಮುವ ಕೃಷ್ಣಮೂರ್ತಿಯವರ ವಿಚಾರಧಾರೆಯನ್ನು ಭಾಷಾಂತರಿಸುವುದೂ ಕಠಿನಸಾಧ್ಯವೇ. ಇದನ್ನು ವೆಂಕಟ-ಸುಬ್ಬಯ್ಯನವರು ತಮ್ಮ ಮುನ್ನುಡಿಯಲ್ಲೇ ಹೇಳಿರುತ್ತಾರೆ. 'ಜೆ.ಕೆ, ಅವರ ಇಂಗ್ಲಿಷ್ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡುವುದು ಸುಲಭದ ಕೆಲಸವಲ್ಲ. ಅಲ್ಲದೇ ನಾನು ಆರಿಸಿಕೊಂಡಿರುವ ಗ್ರಂಥ, ಭಾಷಣಗಳ ಸಂಕಲನ. ಜೆ.ಕೆ. ಅವರು ಅದ್ಭುತ ಮಾತುಗಾರರಾಗಿದ್ದರು. ಅವರ ಭಾಷಣಗಳಲ್ಲಿ ವಾಕ್ಯಗಳು ದೀರ್ಘವಾಗಿದ್ದು ಅಲ್ಲಲ್ಲಿ parenthesisಗಳಿಂದ ಕೂಡಿ ಕೇಳುಗರ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತಿದ್ದವು. ಅದೇ ಶೈಲಿಯಲ್ಲಿ ಅದರ ಸ್ವಾರಸ್ಯವನ್ನು ಉಳಿಸಿ ಕನ್ನಡಕ್ಕೆ ಅನುವಾದ ಮಾಡುವುದು ಕಷ್ಟ'. ಹೀಗೆಂದು ವಿನಯದಿಂದ ವೆಂಕಟಸುಬ್ಬಯ್ಯನವರು ಅರಿಕೆ ಮಾಡಿಕೊಂಡಿದ್ದರೂ ಇದನ್ನು ಅತ್ಯುತ್ತಮ ಅನುವಾದ ಎಂದು ಹೇಳಲೇಬೇಕಾಗಿದೆ. ಕನ್ನಡತನವನ್ನು ಉಳಿಸಿಕೊಂಡಿರುವ ಶೈಲಿ ಓದುವುದಕ್ಕೂ, ಗ್ರಹಿಸುವುದಕ್ಕೂ ಅನುಕೂಲಕರವಾಗಿದೆ. ಜೆ. ಕೆ.ಯವರನ್ನು ತಿಳಿದುಕೊಳ್ಳಲು ಅಪೇಕ್ಷಿಸುವವರು ಓದಲೇಬೇಕಾದ ಪುಸ್ತಕವಿದು.



# 'ಇದು ನಮ್ಮ ಭಾರತ' ಮಾಲಿಕೆಯ ಕೃತಿಗಳು

**ಕಾತ್ಯಾಯಿನಿ ಕುಂಜಿಬೆಟ್ಟು**

ಕನ್ನಡವ ಮೇರು ಸದೃಶ ಸಾಹಿತಿಗಳಾದ ಕುವೆಂಪು, ಡಾ. ಕೋಟ ಶಿವರಾಮ ಕಾರಂತ, ಪಂಜೆ ಮಂಗೇಶ ರಾವ್, ದಿನಕರ ದೇಸಾಯಿ, ಹೊಯಿಸಳ, ಸಿಸು ಸಂಗಮೇಶ, ಜಿ. ವಿ. ಕಾರಂತ, ಎನ್. ಎಸ್. ಎಲ್, ಪಳಕಳ ಸೀತಾರಾಮ ಭಟ್ಟ, ವೈದೇಹಿ, ಎಚ್. ಎಸ್. ವೆಂಕಟೇಶ ಮೂರ್ತಿ.... ಮೊದಲಾದವರಂತೆ ಪ್ರೌಢಸಾಹಿತ್ಯ ವೆಂಬ ಚೆಲುವಿನ ಕನ್ನಡಮ್ಮನ ಜತೆಜತೆಗೆ ಮಕ್ಕಳ ಸಾಹಿತ್ಯವೆಂಬ ಆಕೆಯ ಎಳೆಕಂದನನ್ನೂ ತಮ್ಮ ಸುಂದರವಾದ ಕೃತಿಗಳಿಂದ ಅಲಂಕರಿಸಿದವರು ಪ್ರೊ. ಜಿ. ವೆಂಕಟಸುಬ್ಬಯ್ಯನವರು.

ಸಾಮಾನ್ಯವಾಗಿ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಎರಡು ಹಂತಗಳ ಕೃತಿಗಳನ್ನು ಗಮನಿಸಬಹುದು. ಒಂದು, *ಏನೂ ಇಲ್ಲದಿದ್ದರೂ ಏನನ್ನೋ ಕಲ್ಪಿಸುವ, ಅಸಾಧ್ಯವಾದುದನ್ನು ಸಾಧ್ಯಮಾಡುವ ಅತೀಂದ್ರಿಯ ತುಡಿತವಿರುವ ಮಕ್ಕಳ 'ಕಲ್ಪನೆ'ಗೆ, ಈ ಕಲ್ಪನೆಯನ್ನು ಮುನ್ನಡೆಸುವ ಪ್ರತಿಭೆಗೆ ಚೇತನ ನೀಡುವ ಮುಗ್ಧತೆಯ ವಲಯದೊಳಗಿನ ಬಾಲಸಾಹಿತ್ಯ.* ಎರಡನೆಯದು, *ಮಕ್ಕಳು ಮುಗ್ಧತೆಯ ಗೂಡಿನಿಂದ ಹೊರಬಂದು ಜಗತ್ತನ್ನು ವಾಸ್ತವ ಕಂಗಳಿಂದ ಅವಲೋಕಿಸುವಂತೆ ಮಾಡಿ ಬುದ್ಧಿಗೆ ಚೇತನ ನೀಡುವ ಬೌದ್ಧಿಕ ವಲಯದೊಳಗಿನ ಮಕ್ಕಳ ಸಾಹಿತ್ಯ.* ಪ್ರೊ. ಜಿ. ವೆಂಕಟಸುಬ್ಬಯ್ಯನವರ 'ಇದು ನಮ್ಮ ಭಾರತ' (ಮೂಲ: ಸ್ವರಣ್ ಖಾಂಡ್‌ಪುರ್) ಮಾಲಿಕೆಯ ಅನುವಾದ ಕೃತಿಗಳ ಕುರಿತು ಹೇಳುವುದಾದರೆ ಅವು ಎರಡನೆಯ ಉದ್ದೇಶಕ್ಕಾಗಿ ಹುಟ್ಟಿಕೊಂಡು, ಎಂಟರಿಂದ ಹದಿನೈದು ವರ್ಷ ವಯಸ್ಸಿನ ಮಕ್ಕಳ ಜ್ಞಾನದ ಹಸಿವನ್ನು ತಣಿಸಬಲ್ಲ ಕೃತಿಗಳು. 'ಇದು ನಮ್ಮ ಭಾರತ' ಶೀರ್ಷಿಕೆಯ ಎಲ್ಲ ಕೃತಿಗಳ ಆಕರ್ಷಣೆಯ ಕೇಂದ್ರಗಳು ಅವುಗಳ ಮುಖಪುಟಗಳಲ್ಲಿ ಪ್ರಸಿದ್ಧ ಕಲಾವಿದರ ಕುಂಚಗಳಿಂದ ಅರಳಿರುವ ಬಣ್ಣ ಬಣ್ಣದ ಚಿತ್ರಗಳು. ಮುದ್ದು ಮಗು ಬರೆಯುವ ಚಿತ್ರಗಳಲ್ಲಿ ತೇಲುವ ಮೋಡ, ಸೂರ್ಯ, ಚಂದ್ರ, ಗಿಡ–ಮರ, ಜಡಜಗತ್ತು ಕೂಡ ಪ್ರಾಣಿಗಳ ಹಾಗೆ ಜೀವಿಗಳ ಹಾಗೆ ಕಾಣುವುದು ಸಹಜ. ಮಗುವಿನ ಈ ಮೂಲ ಸಹಜಗುಣವನ್ನು ಪ್ರಚೋದಿಸುವ ಚಿತ್ರಗಳು ಜೀವಂತಿಕೆಯನ್ನು ಹೊರಸೂಸುತ್ತಾ ಮೊದಲ ನೋಟದಲ್ಲೇ ಮಕ್ಕಳ ಮನಸೆಳೆದು

ಹಿಡಿದಿಡುತ್ತವೆ. ಪುಸ್ತಕಗಳ ಒಳಪುಟಗಳಲ್ಲಿ ಸಂದರ್ಭೋಚಿತವಾಗಿ ಕೃತಿಯ ವಸ್ತುಗಳಿಗೆ ಪೂರಕವಾಗಿ ಹರಡಿರುವ ಚಿತ್ರಗಳು, ದುಂಡಗಿನ ದೊಡ್ಡ ದೊಡ್ಡ ಅಕ್ಷರಗಳು ಕನ್ನಡದ ಮಕ್ಕಳ ಮನಗಳನ್ನು ಅಪಹರಿಸುತ್ತವೆ.

ಭಾರತದ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ವ್ಯಾಪ್ತಿಗೆ ಎಲ್ಲೆಯಿಲ್ಲ. ಜೀವನಪೂರ್ತಿ ಓದಿದರೂ ಮುಗಿಯುವಂತಹದಲ್ಲ. ದೊಡ್ಡ ದೊಡ್ಡ ವಿಚಾರಗಳನ್ನು ಮಕ್ಕಳಿಗೆ ಸರಳವಾಗಿ ತಿಳಿಯುವಂತೆ ಮಾಡಲು ಕೃತಿಗಳೊಳಗೆ *'ಭೂವಿವರ, ಚಾರಿತ್ರಿಕ ಮತ್ತು ಸಾಮಾನ್ಯ'* ಎಂಬ ಮೂರು ವಿಭಾಗಗಳನ್ನು ಮಾಡಿಕೊಂಡಿರುವುದು; ಅಲ್ಲಲ್ಲಿ ಜನಪದ, ಪೌರಾಣಿಕ, ಐತಿಹಾಸಿಕ ಕತೆಗಳನ್ನು ಕಥನಶೈಲಿಯಲ್ಲಿ, ಸರಳವಾದ ಭಾಷೆಯಲ್ಲಿ ನಿರೂಪಿಸಿರುವುದು..... ಹೀಗೆ ಬೇರೆ ಬೇರೆ ಆಯಾಮಗಳಿಂದ ಈ ಕೃತಿಗಳು ಅನುವಾದಿತ ಕೃತಿಗಳೆಂದು ಅನಿಸುವುದೇ ಇಲ್ಲ.

ಪ್ರಾಚೀನ ಭಾರತದ 'ಭೂವಿವರ' ವಿಭಾಗದಲ್ಲಿ ಭಾರತದ ಭೌಗೋಳಿಕ, ಪ್ರಾಕೃತಿಕ ಮತ್ತು ಜೈವಿಕ ಶ್ರೀಮಂತಿಕೆಯ ಮೇಲೆ ಬೆಳಕು ಚೆಲ್ಲಲಾಗಿದೆ. ಭಾರತದ ಬುಡಕಟ್ಟು ಜನಾಂಗಗಳಿಂದ ನಾಗರಿಕ ಜಗತ್ತಿನವರೆಗೆ, ಹುಳುಗಳಿಂದ ಹಿಡಿದು ಆನೆಗಳವರೆಗೆ ಜೀವಿಗಳ ಕೌತುಕ ಜಗತ್ತು ಇಲ್ಲಿ ಅನಾವರಣಗೊಂಡಿದೆ. ರೇಷ್ಮೆ ಹುಳ, ಅರಗು ಹುಳ, ಜೇನುಹುಳ, ಸಸ್ಯಗಳು, ಮರಗಳು, ಜಿಂಕೆಗಳು, ಚಿರತೆಗಳು, ಸಾಗರಜೀವಿಗಳು – ಹೀಗೆ ನಿಸರ್ಗದತ್ತ ಕೊಡುಗೆಗಳ ಕುರಿತು ತಿಳಿಸುತ್ತಾ ಮಕ್ಕಳಲ್ಲಿ ಜೀವ ಜಗತ್ತಿನ ಕುರಿತು ಪ್ರೀತಿ ಹಾಗೂ ವೈಜ್ಞಾನಿಕ ದೃಷ್ಟಿಕೋನವನ್ನು ಬೆಳೆಸಬಲ್ಲುವು.

ಕೃತಿಗಳೊಳಗಿನ ಚಾರಿತ್ರಿಕ ವಿಭಾಗವು ಭಾರತವನ್ನಾಳಿದ *ರಾಜವಂಶಗಳು; ಯುದ್ಧ, ಪರಿಣಾಮಗಳು; ಗುಡಿ, ಗೋಪುರ ಸ್ಮಾರಕಗಳು; ಮಹಮ್ಮದೀಯರಿಂದ ಪೋರ್ಚುಗೀಸರಿಂದ, ಇಂಗ್ಲಿಷರಿಂದ ಭಾರತದ ಸಂಸ್ಕೃತಿಯ ಮೇಲಾದ ಧನಾತ್ಮಕ* ಮತ್ತು *ಋಣಾತ್ಮಕ ಪರಿಣಾಮಗಳು.* ಹೀಗೆ ಚರಿತ್ರೆ ಹೆಜ್ಜೆಗಳನ್ನು ಎತ್ತಿಟ್ಟ ಹಾದಿಯ ಪುನರವಲೋಕನವಿದೆ. ಇವು ಮಕ್ಕಳ ಇತಿಹಾಸ ಪ್ರಜ್ಞೆಯನ್ನು ಹರಿತಗೊಳಿಸಬಲ್ಲವು.

ಇನ್ನು ಕೃತಿಗಳೊಳಗಿನ ಕೊನೆಯ ಭಾಗ 'ಸಾಮಾನ್ಯ'ವು ಮಕ್ಕಳ ಸಾಮಾನ್ಯ ಜ್ಞಾನಕ್ಕೆ ಪೂರಕವಾದುವು. ಅಮಿರ್ ಖುಸ್ರೋ, ಪಂ. ರವಿಶಂಕರ್‌ರಂತಹ ಸಂಗೀತ ಸಾಧಕರ; ಸಿತಾರ್, ತಬಲಾದಂತಹ ಸಂಗೀತವಾದ್ಯ ವಾದನಗಳ; ಒಡಿಸ್ಸಿ, ಮಣಿಪುರಿಯಂತಹ ಪ್ರಾಚೀನ ಲಲಿತನೃತ್ಯಗಳ; ಹಿಂದೂ, ಇಸ್ಲಾಂ, ಬೌದ್ಧ ಮೊದಲಾದ ಧರ್ಮಗಳ; ಭಕ್ತಿ, ಕಬೀರ ಮೊದಲಾದ ಪಂಥಗಳ; ವಾಸ್ತು ಶಿಲ್ಪ, ಮೂರ್ತಿಶಿಲ್ಪ ಮೊದಲಾದ ಎಲ್ಲಾ ಲಲಿತ ಕಲೆಗಳ ಸಾಂಸ್ಕೃತಿಕ ಪರಿಚಯಗಳಿವೆ.

ಒಟ್ಟಿನಲ್ಲಿ ಭಾರತದ ಹೃದಯ ಶ್ರೀಮಂತಿಕೆ ಅರಿತುಕೊಂಡು ಸ್ವದೇಶವನ್ನು ಪ್ರೀತಿಸುವ ಸ್ವಾಭಿಮಾನಿ ಭಾರತೀಯನನ್ನಾಗಿ ರೂಪಿಸುವಲ್ಲಿ ಇಂತಹ ಕೃತಿಗಳು ಮಕ್ಕಳಿಗೆ ಅತ್ಯಗತ್ಯ. ಮಕ್ಕಳ ಮಾನಸಿಕ, ಬೌದ್ಧಿಕ ಬೆಳವಣಿಗೆಗೆ ಸಹಾಯ ಮಾಡಬಲ್ಲ ಸ್ವಂತಿಕೆಯಿಂದ ಹೊಳೆಯುತ್ತಿರುವ ಅನುವಾದಿತ – ಆದರೂ ಸೃಜನಶೀಲಕೃತಿಗಳನ್ನು ನೀಡಿರುವ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಭಿನಂದನಾರ್ಹರು. ◈



# ವಿದ್ವಜ್ಜೀವಿತ



## ಭಾಗ – ಐದು



## ಸಂದರ್ಶನ

ಪ್ರೊ. ಜಿ. ವೆಂಕಟಸುಬ್ಬಯ್ಯನವರ ಜೊತೆಗಿನ ಮಾತುಕತೆಗಳು



ಇಂಗ್ಲಿಷನ್ನು ಅನುಸರಿಸಿಕೊಂಡು ಅದೇ ವಿಧಾನದಿಂದ ನಾವು ನಿಘಂಟುಗಳನ್ನು ತಯಾರಿಸಬೇಕೆಂದೇನೂ ಇಲ್ಲ. ನಮ್ಮ ಆವಶ್ಯಕತೆ-ಗಳೂ ಇಂಗ್ಲಿಷಿನ ಆವಶ್ಯಕತೆಗಳೂ ಬೇರೆಬೇರೆಯೇ ಎನ್ನಬಹುದು. ಇಂಗ್ಲಿಷಿಗೆ ಪ್ರಪಂಚದ ನಾನಾ ಭಾಷೆಗಳ ಸಂಪರ್ಕವಾಗಿ ಅಲ್ಲಿಯ ಶಬ್ದಭಂಡಾರ ಮತ್ತು ಅಭಿವ್ಯಕ್ತಿರೂಪಗಳಲ್ಲಿ ತುಂಬ ಬದಲಾವಣೆ-ಗಳಾಗಿವೆ; ಆಗುತ್ತಿವೆ. ಆದುದರಿಂದ ಅಲ್ಲಿ ನಿಘಂಟುಗಳನ್ನು ಸಮಕಾಲೀನಗೊಳಿಸುವ ಆವಶ್ಯಕತೆ ಹೆಚ್ಚು. ಅಲ್ಲದೆ ಉದ್ಯೋಗಗಳು, ವೃತ್ತಿಗಳು ವೈವಿಧ್ಯಪೂರ್ಣವಾದಾಗ ಹೊಸಹೊಸ ಶಬ್ದಗಳು ವ್ಯಾಪಕವಾಗಿ ಬಳಕೆಗೊಳ್ಳುತ್ತವೆ. ಮತ್ತು ಹೊಸಹೊಸ ಶಬ್ದಗಳು ಸೃಷ್ಟಿಸಲ್ಪಡುತ್ತವೆ. ಅಂತಹ ಸಂದರ್ಭದಲ್ಲಿ ಹಳೆಯ ನಿಘಂಟುಗಳಲ್ಲಿ ಅವು ದೊರಕಲಾರವು. ಆಗ ನಿಘಂಟುಗಳನ್ನು ಸಮಕಾಲೀನ-ಗೊಳಿಸಿಕೊಳ್ಳಬೇಕಾಗುತ್ತವೆ. ವಿಶ್ವದಾದ್ಯಂತೆ ಬಳಕೆಯಲ್ಲಿರುವ ಇಂಗ್ಲಿಷಿಗೆ ಆಗಾಗ ನಿಘಂಟುಗಳನ್ನು ಸಮಕಾಲೀನಗೊಳಿಸುವ ಆವಶ್ಯಕತೆ ಬೀಳುತ್ತದೆ. ಅದೇ ಮಾದರಿ ಕನ್ನಡಕ್ಕೆ ಪ್ರಸ್ತುತವಾಗದು. ಆದರೆ ಬೇರೆ ಬೇರೆ ಜನಸಮೂಹವನ್ನು ಉದ್ದೇಶದಲ್ಲಿರಿಸಿಕೊಂಡು ವಿಭಿನ್ನರೀತಿಗಳಲ್ಲಿ ರಚಿತವಾಗುವ ನಿಘಂಟುಗಳು ಕನ್ನಡಕ್ಕೆ ಅವಶ್ಯ-ವೆನ್ನಬಹುದು. ಉದಾಹರಣೆಗೆ ಚಿಕ್ಕಮಕ್ಕಳ ನಿಘಂಟು, ಚಿತ್ರಸಹಿತ ನಿಘಂಟು, ಚಿತ್ರಾಧಾರಿತ ನಿಘಂಟು, ವೈಜ್ಞಾನಿಕ ನಿಘಂಟು, ವಿವಿಧ ಶಾಸ್ತ್ರಸಂಬಂಧಿ ನಿಘಂಟುಗಳು, ಅನುವಾದೋಪಯೋಗಿ ನಿಘಂಟು-ಗಳು ಇತ್ಯಾದಿ.

– **ಪ್ರೊ. ಜಿ. ವೆಂಕಟಸುಬ್ಬಯ್ಯ**

# ಹೀಗೆಂದರು ಈ ಹಿರಿಯರು

## ಪ್ರೊ. ಜಿ. ವೆಂಕಟಸುಬ್ಬಯ್ಯನವರೊಂದಿಗೆ ಒಂದು ಮಾತುಕತೆ

ನಿರೂಪಣೆ : ಡಾ. ಪಾದೇಕಲ್ಲು ವಿಷ್ಣು ಭಟ್ಟ

ಸಂದರ್ಶನ
ಡಾ. ಪಾದೇಕಲ್ಲು ವಿಷ್ಣು ಭಟ್ಟ, ಡಾ. ಎನ್. ಟಿ. ಭಟ್, ಪ್ರೊ. ಹೆರಂಜೆ ಕೃಷ್ಣ ಭಟ್ಟ

ಪ್ರೊ. ಜಿ. ವೆಂಕಟಸುಬ್ಬಯ್ಯನವರ ಸಂದರ್ಶನವನ್ನಪೇಕ್ಷಿಸಿ ಅವರೊಡನೆ ಸಮಯಾವಕಾಶವನ್ನು ಕೇಳಿದಾಗ ಅವರು ಸಂತೋಷದಿಂದ ಒಪ್ಪಿಕೊಂಡು ಈ ಪ್ರಸ್ತಾವನೆಯನ್ನು ಸ್ವಾಗತಿಸಿದರು. ದಿನಾಂಕ 8-12-2010ರಂದು ಅವರ ಮನೆಗೆ ನಾವು ಮೂವರು ಹೋಗಿ ಒಂದಿಷ್ಟು ಹೊತ್ತು ಅವರೊಡನೆ ಮಾತಾಡಿ ಆ ಮಾತು-ಕತೆಗಳನ್ನು ದಾಖಲಾತಿಮಾಡಿಕೊಂಡು ಅವುಗಳನ್ನು ಬರಹರೂಪಕ್ಕಿಳಿಸಿ ಸಂದರ್ಶನ ಲೇಖನವಾಗಿ ಪ್ರಸ್ತುತ ಪುಸ್ತಕಕ್ಕೆ ಉಪಯೋಗಿಸಿಕೊಳ್ಳುವುದೆಂದು ನಿಶ್ಚಯಿಸಲಾಯಿತು.

ಆ ಪ್ರಕಾರ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ನಿರ್ದೇಶಕರಾದ ಪ್ರೊ. ಹೆರಂಜೆ ಕೃಷ್ಣ ಭಟ್ಟರು, ಡಾ. ಎನ್. ತಿರುಮಲೇಶ್ವರ ಭಟ್ಟರು ಮತ್ತು ಪ್ರಸ್ತುತ ಲೇಖಕ (ಪಾದೇಕಲ್ಲು ವಿಷ್ಣು ಭಟ್ಟ) - ಈ ಮೂವರು ದಿನಾಂಕ 7-12-2010ರಂದು ಉಡುಪಿಯಿಂದ ಹೊರಟು, ದಿನಾಂಕ ಎಂಟರಂದು ಬೆಳಗ್ಗೆ ಬೆಂಗಳೂರಿಗೆ ತಲುಪಿ, ಹೆರಂಜೆಯವರ ಸಹೋದರಿ ಶ್ರೀಮತಿ ಜಯಲಕ್ಷ್ಮಿ-ಗಣಪತಿ ಅಡಿಗರ ಮನೆಯಲ್ಲಿ ಸ್ನಾನ-ಉಪಾಹಾರಗಳನ್ನು ಮುಗಿಸಿಕೊಂಡು, ವೆಂಕಟಸುಬ್ಬಯ್ಯ-ನವರ ಜಯನಗರದ ನಿವಾಸಕ್ಕೆ ಬಂದೆವು. ಆ ದಿನ ಸ್ವಲ್ಪ ಶೀತವಾತಾವರಣವಿತ್ತು. ನಮ್ಮನ್ನು ಸ್ವಾಗತಿಸಲು ಚಳಿಯಂಗಿಯನ್ನು ಧರಿಸಿ ಅವರೇ ನಿಂತಿದ್ದರು. ಅವರ ಶ್ರೀಮತಿಯವರು ಮನೆಯಲ್ಲಿರಲಿಲ್ಲ. ಚಿಕ್ಕ ಪುಟ್ಟ ಆರೋಗ್ಯಸಮಸ್ಯೆಗಳಿಂದಾಗಿ ಆಸ್ಪತ್ರೆ-ಯಲ್ಲಿದ್ದರು. ಅವರ ಯೋಗಕ್ಷೇಮವನ್ನು ಮಗ ಜಿ. ವಿ. ಅರುಣ ಅವರು ನೋಡಿ-ಕೊಳ್ಳಲು ಹೋಗಿದ್ದರು. ವೆಂಕಟಸುಬ್ಬಯ್ಯನವರ ಸೊಸೆ ಶ್ರೀಮತಿ ಡಾ. ಹೇಮಾ ಅವರು ಬೆಂಗಳೂರಿನ ಎನ್.ಎಂ.ಕೆ.ಆರ್.ವಿ. ಕಾಲೇಜಿನಲ್ಲಿ ಆಂಗ್ಲಭಾಷಾ ಪ್ರಾಧ್ಯಾಪಿಕೆ. ಅವರು ನಮಗೆ ಬಿಸಿ ಬಿಸಿ ಪಾನೀಯಗಳನ್ನಿತ್ತು ಉಪಚರಿಸಿದರು. ಅನಂತರ ನಮ್ಮ ಸಂಭಾಷಣೆ ತೊಡಗಿತು.

ಸುಮಾರು ಎರಡೂವರೆ ಗಂಟೆಗಳ ಕಾಲ ನಾವು ಅವರೊಡನೆ ಸಂಭಾಷಣೆ ನಡೆಸಿದೆವು. ನಾವು ಅವರೊಡನೆ ಸಂಭಾಷಿಸಿದ್ದೆನ್ನುವುದಕ್ಕಿಂತಲೂ ಅವರೇ ನಮ್ಮೊಡನೆ ಮಾತಾಡುತ್ತ ಹೋದರು ಎನ್ನುವುದು ಉಚಿತವಾದುದು. ಆ ಮಾತುಕತೆಯನ್ನು ಡಾ. ಎನ್. ಟಿ. ಭಟ್ಟರು ದೃಶ್ಯ ಶ್ರವ್ಯ ರೂಪದಲ್ಲಿ ದಾಖಲುಗೊಳಿಸಿದರು. ಮಧ್ಯದಲ್ಲಿ ಒಂದೆರಡು ಬಾರಿ ದೂರವಾಣಿ ಕರೆಗಳು ಬಂದಿದ್ದುವು. ಪ್ರೊ. ಜಿ. ವಿ. ಅವರ ಆಪ್ತಮಿತ್ರರೂ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಬಹಳ ಕೆಲಸ ಮಾಡಿದ ಹಿರಿಯರೂ ಆಗಿದ್ದ ಪ್ರೊ. ತ. ಸು. ಶಾಮರಾಯರ ಸುಪುತ್ರಿಯವರು ಜಿ.ವಿ.ಯವರನ್ನು ಭೇಟಿಮಾಡಲು ಬಂದವರು ನಮ್ಮ ಸಂದರ್ಶನದ ಕೊನೆಯ ವರೆಗೆ ಇದ್ದರು. ಅವರೊಂದಿಗೆ ಜಿ. ವಿ.ಯವರ ಕಾಲೇಜು ದಿನಗಳ ಶಿಷ್ಯೆಯೂ ಒಬ್ಬರಿದ್ದರು. ಅವರು ಆ ದಿನಗಳನ್ನು ನೆನಪಿಸಿಕೊಂಡು ಜಿ.ವಿ.ಯವರು ವಿದ್ಯಾರ್ಥಿಗಳಿಗೆ ಕೊಡುತ್ತಿದ್ದ ಪ್ರೋತ್ಸಾಹವನ್ನು ವಿಶೇಷವಾಗಿ ಉಲ್ಲೇಖಿಸಿದರು. (ಆ ಭಾಗ ಈ ಸಂದರ್ಶನ ಲೇಖನದಲ್ಲಿ ದಾಖಲು ಮಾಡಲ್ಪಟ್ಟಿಲ್ಲ. ತ. ಸು. ಶಾಮರಾಯರ ಉಲ್ಲೇಖ ಈ ಲೇಖನದಲ್ಲಿ ಸಾಂದರ್ಭಿಕವಾಗಿ ಬಂದಿದೆ.)

ದಾಖಲಾದ ಸಂದರ್ಶನವನ್ನು ಬರಹರೂಪಕ್ಕಿಳಿಸಿ ಸ್ವಲ್ಪ ಮಟ್ಟಿಗೆ ಆಡುಮಾತಿನ ರೂಪವನ್ನುಳಿಸಿಕೊಂಡು ಅಷ್ಟಿಷ್ಟು ಅಸ್ತವ್ಯಸ್ತವಾಗಿದ್ದ ಸಂಭಾಷಣೆಯ ವಾಕ್ಯ ಮತ್ತು ಮಾತಿನ ರೂಪವನ್ನು ಒಂದಿಷ್ಟು ನೇರ್ಪುಗೊಳಿಸಿ ತಿದ್ದುಪಡಿ ಮಾಡಲಾಯಿತು. ಸಂದರ್ಶನಾನಂತರ ಅವರು ದೂರವಾಣಿಯ ಮೂಲಕ ತಿಳಿಸಿದ ಕೆಲವು ವಿಷಯಗಳನ್ನೂ ಅವರು ಬೇರೆ ಉಪನ್ಯಾಸ ಸಂದರ್ಭಗಳಲ್ಲಿ ಹೇಳಿದ ಒಂದೆರಡು ಅಭಿಪ್ರಾಯಗಳನ್ನೂ ಅಳವಡಿಸಿಕೊಳ್ಳಲಾಯಿತು. ಆ ಮೇಲೆ ಆ ಲೇಖನರೂಪವನ್ನು ಅವರಿಗೆ ಕಳುಹಿಸಿ ಅವರ ಒಪ್ಪಿಗೆ ಪಡೆದ ಬಳಿಕವೇ ಈ ಪುಸ್ತಕದಲ್ಲಿ ಬಳಸಿಕೊಳ್ಳಲಾಗಿದೆ. ಆದುದರಿಂದ ದೃಶ್ಯಶ್ರವ್ಯ ರೂಪದ ದಾಖಲಾತಿಗೂ ಈ ಲೇಖನಕ್ಕೂ – ಅಭಿಪ್ರಾಯದಲ್ಲಲ್ಲ, ನಿರೂಪಣೆಯಲ್ಲಿ – ಅಷ್ಟಿಷ್ಟು ವ್ಯತ್ಯಾಸಗಳಿವೆ.

ಪ್ರಸ್ತುತ ಪುಸ್ತಕವು ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ ಕರಾವಳಿ ಕರ್ನಾಟಕದ ಸಾಹಿತ್ಯಾಸಕ್ತರು ಸಲ್ಲಿಸುವ ಗೌರವವಾಗಿದ್ದು ಇಲ್ಲಿಯ ಬರಹಗಾರರೆಲ್ಲ ಕರಾವಳಿ ಕರ್ನಾಟಕ ಪ್ರದೇಶದವರೇ ಆಗಿದ್ದಾರೆ. ಕರಾವಳಿಗೂ ಜಿ.ವಿ.ಯವರಿಗೂ ಇರುವ ಸಂಪರ್ಕ ಮತ್ತು ಇಲ್ಲಿಯವರ ಸಾಹಿತ್ಯಕಾರ್ಯಗಳ ಕುರಿತಾಗಿ ಅವರ ಅಭಿಪ್ರಾಯಗಳು ಸಂದರ್ಶನ ಸಂದರ್ಭದಲ್ಲಿ ದಾಖಲಾಗಬೇಕೆಂಬ ಅಪೇಕ್ಷೆಯನ್ನು ಅವರಿಗೆ ಮೊದಲಾಗಿ ತಿಳಿಸಲಾಗಿತ್ತು. ಅವರಿಗೂ ಕರಾವಳಿ ಕರ್ನಾಟಕದ ಬಗೆಗೆ ತುಂಬ ಪ್ರೀತಿ ವಿಶ್ವಾಸಗಳಿವೆ. ಅವರು ಆ ಹಿನ್ನೆಲೆಯಿಂದಲೇ ಮಾತಾಡಿದರು. ಅದರೊಂದಿಗೆ ಕನ್ನಡದ ವಿಷಯದಲ್ಲಿ ಅತ್ಯವಶ್ಯವಾಗಿ ಸಮಾಲೋಚಿಸಬೇಕಾದ ಶಾಸ್ತ್ರೀಯ ಸ್ಥಾನಮಾನ, ನಿಘಂಟುರಚನೆ, ಶಿಕ್ಷಣಮಾಧ್ಯಮ, ಮತ್ತು ಭಾಷಾಭ್ಯಾಸ – ಈ ವಿಷಯಗಳು ಮಾತುಕತೆಯಲ್ಲಿ ಸಹಜವಾಗಿಯೇ ಬಂದಿದೆ.

ಇಲ್ಲಿ ಅವರು ಆಡಿದ ಹಲವು ವಿಷಯಗಳು ಈಗಾಗಲೇ ಬೇರೆ ಬೇರೆ ಲೇಖನಗಳಲ್ಲಿ ಮತ್ತು ಉಪನ್ಯಾಸಗಳಲ್ಲಿ ಅಷ್ಟಿಷ್ಟು ನಿರೂಪಿತವಾದುವೇ ಆಗಿರಬಹು-

ಹಾವರೂ ಅವುಗಳ ಬಗೆಗೆ ಇನ್ನೂ ಚಿಂತನೆ ನಡೆಸುತ್ತಿರುವ ಅವರ ತಮ್ಮ ಸ್ಪಷ್ಟ ಅಭಿಪ್ರಾಯಗಳನ್ನು ಬಹಳ ಖಚಿತವಾಗಿ ಮತ್ತು ಪ್ರೀತಿಯಿಂದ ಈ ಸಂದರ್ಭದಲ್ಲಿ ಹೇಳಿದ್ದಾರೆ. ಕನ್ನಡದ ಬಗೆಗಿನ ಅವರ ಕಳಕಳಿ ಈ ಸಂದರ್ಶನದುದ್ದಕ್ಕೂ ದಾಖಲಾಗಿದೆ. ಕಿರಿಯ ತಲೆಮಾರಿನವರ ಬಗೆಗೆ ಅವರಿಗಿರುವ ಭರವಸೆ ಇಲ್ಲಿ ಸುವ್ಯಕ್ತವಾಗಿದೆ. ಮೇಲಾಗಿ ಅವರಿಗಿಂತ ಹಿರಿಯ ತಲೆಮಾರಿನವರ ಬಗೆಗೆ ಅವರು ಇರಿಸಿಕೊಂಡಿರುವ ಗೌರವ ಇಲ್ಲಿ ಸ್ಫುಟವಾಗಿದೆ. ಹೀಗೆ ಕನ್ನಡ ಪರಂಪರೆಯಲ್ಲಿ ಭೂತ-ವರ್ತಮಾನ-ಭವಿಷ್ಯತ್ತುಗಳನ್ನು ತಾವು ನಿಂತ ಕಾಲದಲ್ಲಿ ಸಮೀಕ್ಷಿಸಿದ ಒಂದು ಹಿರಿಮೆ ಈ ಸಂದರ್ಶನ ಲೇಖನದೊಳಗಿದೆ.

ಸಂದರ್ಶನ ಮುಗಿದ ಮೇಲೆ ಈ ಮಾತುಕತೆಯ ಬಗೆಗೆ ಅವರು ತುಂಬ ಸಂತೋಷದ ಮತ್ತು ತೃಪ್ತಿಯ ಮಾತುಗಳನ್ನಾಡಿದರು. ಸಂದರ್ಶನದಲ್ಲಿ ಅವರೇ ಯಾವ ಆಯಾಸವೂ ಇಲ್ಲದೆ ಮಾತಾಡುತ್ತಾ ಹೋಗಿದ್ದರು. ನೆನಪಿಸಲಿಕ್ಕೆಂಬಂತೆ ಕೆಲವು ವಾಕ್ಯಗಳನ್ನು ಸಂದರ್ಶಕರು ಆಡಿರುತ್ತಾರೆ. ಅವರ ನೆನಪಿನ ಶಕ್ತಿಯನ್ನೂ ಯುವಕರನ್ನು ಕೂಡ ನಾಚಿಸುವ ಉತ್ಸಾಹವನ್ನೂ ನೋಡಿದಾಗ ಹೆಚ್ಚಿನ ಸಂತೋಷ ವುಂಟಾಗುತ್ತದೆ. ಅವರು ಮುಂದೆಯೂ ಹಲವಾರು ವರ್ಷ ಆರೋಗ್ಯವಂತರಾಗಿ ನಮಗೆ ಮಾರ್ಗದರ್ಶನ ಮಾಡುತ್ತಿರಬೇಕೆಂಬುದು ನಮ್ಮೆಲ್ಲರ ಅಪೇಕ್ಷೆ.

ಸಂದರ್ಶನಲೇಖನ ಮುಂದಿದೆ.

**ಪಾದೇಕಲ್ಲು** : ಸರ್, ಈ ಬಾರಿ ನೀವು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದದ್ದು ನಮಗೆ ತುಂಬ ಸಂತೋಷ. ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರಕ್ಕೂ ನಿಮಗೂ ಬಹಳ ವಿಶೇಷವಾದ ಸಂಬಂಧ ಉಂಟು. ಅದಲ್ಲದೆ, ಗೋವಿಂದ ಪೈಗಳು ಮತ್ತು ಆ ಎಲ್ಲ ಹಿರಿಯ ತಲೆಮಾರಿನವರನ್ನು ನೀವು ನೋಡಿದವರು. ಹಾಗಾಗಿ ಗೋವಿಂದ ಪೈ ಕೇಂದ್ರದ ಪತಿಯಿಂದ ನಿಮಗೆ ಅಭಿನಂದನೆ ಹೇಳುವ ಉದ್ದೇಶದಿಂದ ಬಂದಿದ್ದೇವೆ. ಕರಾವಳಿ ಕರ್ನಾಟಕದ ಕಡೆಯ ಅಭಿನಂದನೆಯೆಂದು ಇದನ್ನು ಸ್ವೀಕರಿಸಬೇಕು.

**ಜಿ. ವೆಂ.**: ತುಂಬ ಸಂತೋಷದ ವಿಷಯ ಪಾದೇಕಲ್ಲು ಅವರೆ. ನಾವೆಲ್ಲ ಒಂದು ದೃಷ್ಟಿಯಿಂದ ನೋಡಿದರೆ ತುಂಬ ದೂರವಾಗಿದ್ದೆವು – ಒಂದಾನೊಂದು ಕಾಲದಲ್ಲಿ. ಮಂಗಳೂರು ಉಡುಪಿ ಅನ್ನುವುದು ಬೆಂಗಳೂರು ಮೈಸೂರಿನವರಿಗೆ ತುಂಬ ದೂರವಾಗಿತ್ತು. ಉಡುಪಿ ಮತ್ತು ಅತ್ತಕಡೆಯ ದೇವಸ್ಥಾನಗಳ ಆಕರ್ಷಣೆ ಇತ್ತ ಕಡೆಯ ಎಲ್ಲರಿಗೂ ಇದ್ದೇ ಇತ್ತು; ಅದೇನು ತಪ್ಪಲ್ಲೇ ಇಲ್ಲ. ಆದರೆ ನಾವು ವಿದ್ಯಾರ್ಥಿಗಳಾಗಿದ್ದ ಕಾಲದಿಂದ ನಿಮ್ಮ ಕಡೆಯ ಹಿರಿಯ ವಿದ್ವಾಂಸರು ನಮ್ಮನ್ನು ಆಕರ್ಷಣೆ ಮಾಡುತ್ತಾ ಇದ್ದರು. ಆ ಆಕರ್ಷಣೆ ಮುಳಿಯ ತಿಮ್ಮಪ್ಪಯ್ಯನವರಿಂದ ಪ್ರಾರಂಭಗೊಂಡದ್ದು. ಅವರಿಗಿಂತ ಹಿಂದೆ ಬೇಕಾದಷ್ಟು ಜನ ವಿದ್ವಾಂಸರು ಆ ಕಡೆಯಲ್ಲಿ ಇದ್ದಿರಬೇಕು. ಆದರೆ ನಮಗೆ ತಿಳಿದಿರಲಿಲ್ಲ. ಆದರೆ ಮುಳಿಯರು ಕನ್ನಡದ ಅತಿಶ್ರೇಷ್ಠ ಕವಿಯಾದ ಪಂಪನ ಬಗ್ಗೆ ಮಾಡಿದ ವ್ಯಾಸಂಗ, ಗ್ರಂಥರಚನೆ ನಮ್ಮನ್ನು

ವಿಶೇಷವಾಗಿ ಆಕರ್ಷಣೆ ಮಾಡಿತು. ಹೀಗೆ ಮೊದಲು ನಮ್ಮನ್ನು ಸೆಳೆದದ್ದು ಮುಳಿಯರು. ಅಲ್ಲಿಂದ ಹಿಡಿದು ಇತ್ತೀಚಿನ ವರೆಗೂ ನನ್ನ ಮತ್ತು ದಕ್ಷಿಣ ಕನ್ನಡದ ಅಥವಾ ಕರಾವಳಿಯ ಸಂಬಂಧ ತುಂಬ ಗಾಢವಾದದ್ದಾಯಿತು. ಆ ವಿಷಯವಾಗಿ ನನಗೆ ತುಂಬ ಸಂತೋಷವಿದೆ.

ಪಂಪನ ಬಗ್ಗೆ ಮತ್ತು ಅವನ ಕೃತಿಗಳ ಬಗ್ಗೆ ಮುಳಿಯದವರು ಮಾಡಿದಷ್ಟು ಆಳವಾದ ಅಧ್ಯಯನ ಬೆಂಗಳೂರು ಮೈಸೂರು ಒಳಗಡೆಯ ವಿದ್ವಾಂಸರಲ್ಲಿ ಇರಲಿಲ್ಲ. ಮೈಸೂರು ಸಂಸ್ಥಾನದ ಒಳಗಡೆ ಮೈಸೂರು ಮುಖ್ಯಪಟ್ಟಣ. ಆ ಊರೇ ಕನ್ನಡಕ್ಕೆ ಆದ್ಯಸ್ಥಾನ. ಸಾಮಾನ್ಯವಾಗಿ ವಿದ್ವಾಂಸರಿದ್ದದ್ದು ಮೈಸೂರಿನಲ್ಲಿ ಮಾತ್ರ. ಉಳಿದೆಡೆ ಅಲ್ಲಲ್ಲಿ ಅಷ್ಟಿಷ್ಟು ಮಂದಿ ಹಂಚಿಕೊಂಡಿದ್ದರು. ಆದರೆ ಕರಾವಳಿಯಲ್ಲಿ ಒಬ್ಬ ವಿದ್ವಾಂಸರು ಈ ಕವಿಯನ್ನು ಅಷ್ಟು ಆಳವಾಗಿ ಅಧ್ಯಯನ ಮಾಡಿದ್ದಾರೆಂದು ಕೇಳಿದಾಗ ಮತ್ತು 'ನಾಡೋಜ ಪಂಪ' ಪುಸ್ತಕ ಹೊರಬಂದಾಗ ನಮಗೆ, ಮೈಸೂರು ಕಡೆಯ ಎಲ್ಲ ವಿದ್ವಾಂಸರಿಗೆ ಆಶ್ಚರ್ಯ ಆಯಿತು. ಆ ಕೆಲಸವನ್ನು ಅದುವರೆಗೆ ಯಾರೂ ಮಾಡಿಯೇ ಇರಲಿಲ್ಲ. ಹೀಗೆ ಅಧ್ಯಯನ ಮಾಡಬಹುದು ಎನ್ನುವ ದೃಷ್ಟಿ ಕೂಡ ನಮ್ಮತ್ತ ಕಡೆಯಲ್ಲಿ ಇಲ್ಲದೇ ಇದ್ದಾಗ ನಮ್ಮನ್ನು ಪಂಪನ ಕಡೆಗೆ ಎಳೆದವರು ದಕ್ಷಿಣ ಕನ್ನಡದವರು. ಅಲ್ಲಿಂದ ಪ್ರಾರಂಭವಾಯಿತು ಆ ಕಡೆಯ ಆಕರ್ಷಣೆ. ಪೂರ್ವದ ಕನ್ನಡ – ಪಶ್ಚಿಮದ ಕನ್ನಡ ಎಂದು ಭಿನ್ನ ಭಿನ್ನವಾಗಿದ್ದ ಸಂದರ್ಭದಲ್ಲಿ ಪೂರ್ವಪಶ್ಚಿಮಗಳು ಒಂದು ವಿಶಿಷ್ಟ ರೀತಿಯಲ್ಲಿ ಹೃದ್ಯವಾಗಿ ಸೇರಿದ್ದು ಮುಳಿಯ ತಿಮ್ಮಪ್ಪಯ್ಯನವರಿಂದ.

**ಪಾದೇಕಲ್ಲು:** ಒಂದೆಡೆ, ಕರಾವಳಿಯ ಕನ್ನಡ ಪಂಡಿತಪರಂಪರೆ ಉಂಟಾದದ್ದು ಮುಳಿಯ ತಿಮ್ಮಪ್ಪಯ್ಯನವರಿಂದಲೇ ಎಂದು ಸೇಡಿಯಾಪು ಹೇಳಿದ್ದರು. 'ಯಾರು ಬಂದು ನೆಲಸಿದುದರಿಂದಾಗಿ ಕನ್ನಡ ಪಂಡಿತಸಮೂಹವೊಂದು ಮಂಗಳೂರಲ್ಲಿ ಉದಯಿಸಿತೋ ಆ ಮುಳಿಯ ತಿಮ್ಮಪ್ಪಯ್ಯನವರು' ಎಂದು ಸೇಡಿಯಾಪು ಅವರು 'ನಾನು ಕಂಡ ವಿದ್ವತ್‌ಕ್ಲಬ್' ಎಂಬ ಲೇಖನದಲ್ಲಿ ಒಂದೆಡೆ ಬರೆದಿದ್ದಾರೆ.

**ಜಿ. ವೆಂ.:** ಅವರ ಹಿನ್ನೆಲೆ ಏನು ಎಂಬುದರ ವಿವರಗಳು ನನಗೆ ಗೊತ್ತಿಲ್ಲ. ಅವರ ಪುಸ್ತಕಗಳು, ರೀತಿ ನೀತಿ ನಮ್ಮ ನೆಲಕ್ಕೆ ತುಂಬ ಭದ್ರವಾದದ್ದು, ಕನ್ನಡ ನಾಡಿಗೆ ಹಿತಕಾರಿಯಾದದ್ದು ಎಂದು ಭಾವಿಸಿಕೊಂಡವನು ನಾನು. ಡಿ. ವಿ. ಗುಂಡಪ್ಪನವರು ಸಹ ಅವರ ಬಗ್ಗೆ ತುಂಬ ಪ್ರೀತಿಯಿಂದ ಮಾತಾಡಿದ್ದರು.

**ಪಾದೇಕಲ್ಲು:** ಅವರ 'ನಾಡೋಜ ಪಂಪ' ಪುಸ್ತಕ ಮುದ್ರಿತವಾಗಿ ಬಂದಾಗ ಈ ಕಡೆಯ ವಿದ್ವಾಂಸರ ಪ್ರತಿಕ್ರಿಯೆ ಏನಿತ್ತು? ಆಗ ಬಹಳಷ್ಟು ಮಂದಿ ಹಿರಿಯರು ಇದ್ದರು. ಬಿಎಂಶ್ರೀ ಇದ್ದರು, ಟಿ. ಎಸ್. ವೆಂಕಣ್ಣಯ್ಯನವರಿದ್ದರು, ಎ. ಆರ್. ಕೃಷ್ಣಶಾಸ್ತ್ರಿಗಳಿದ್ದರು, ತೀ. ನಂ. ಶ್ರೀ.ಯವರು ಇದ್ದರು.

**ಜಿ.ವೆಂ.:** ಎಲ್ಲರ ದೃಷ್ಟಿಯಲ್ಲಿ ಅದೊಂದು ಉತ್ಕೃಷ್ಟ ಗ್ರಂಥವೇ ಆಗಿತ್ತು. ಪಂಪನ ಕಾವ್ಯದಲ್ಲಿ ಚಾರಿತ್ರಿಕ ಅಂಶಗಳೆಷ್ಟಿವೆ ಎಂದು ಅದರ ಮೂಲ ಹಿಡಿದು, ಅವನ್ನು

ಪಾಠಮಾಡಿಸುತ್ತೇನೆ ಎಂದು ಹೊರಟವರು ಮುಳಿಯ ಒಬ್ಬರೆ. ಅಲ್ಲಿಯವರೆಗೆ ಆ ವಿಚಾರವಾಗಿ ಅಷ್ಟು ಗಾಢವಾದ ಅಭ್ಯಾಸ ಬೆಳೆದೇ ಇರಲಿಲ್ಲ. ಪಂಪನ ವಿಷಯದಲ್ಲಿ ಗಂಭೀರವಾಗಿ ಮಾತಾಡುವಾಗ ನಾವು ಈಗಲೂ ಕೂಡ ಆ ಪುಸ್ತಕವನ್ನು ಇಟ್ಟುಕೊಂಡೇ ಮಾತನಾಡಬೇಕು. ಅಂತಹ ಗ್ರಂಥ ಮತ್ತೆ ಮತ್ತೆ ಮುದ್ರಣ ಆಗೇ ಇಲ್ಲ. ಒಂದೇ ಸಲ ಪುನರ್ಮುದ್ರಣ ಆಗಿದ್ದು. ಆಶ್ಚರ್ಯ ಆಯಿತು. ಆಧಾರಭೂತವಾದ ಆ ಗ್ರಂಥ ಕನ್ನಡ ಸಾಹಿತ್ಯಕ್ಕೆ ಎಷ್ಟು ಸಲ ಪುನರ್ಮುದ್ರಿತವಾಗಿ ಬರಬೇಕು! ಆದರೆ ಬರಲೇ ಇಲ್ಲ. ಹೆಚ್ಚಿನ ಎಲ್ಲ ವಿದ್ವಾಂಸರ ಬಳಿ ಆ ಪುಸ್ತಕ ಇದೆ. ಹೀಗೆ ಇಲ್ಲಿಯವರಿಗೆ ಅತ್ತ ಕಡೆಯ ವಿದ್ವಾಂಸರ ಬಗೆಗೆ ದೊಡ್ಡ ಗೌರವ ಬಂದದ್ದು ಆವಾಗ.

ಇಲ್ಲಿಯ ಜನ 'ಎಂ.ಎ. ತರಗತಿಯಲ್ಲಿ ಮೊದಲು ಆ 'ನಾಡೋಜ ಪಂಪ' ಪುಸ್ತಕ ಓದಿಬಿಡಿ' ಎಂದು ಹೇಳುತ್ತಿದ್ದರು. ಹಾಗೆ ನಿಜವಾದ ನಿಷ್ಠೆಯಿಂದ ಪಂಪನ ಕೃತಿಗಳ ಪಾಠ ಮಾಡಿದವರು ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರು. ಅವರಂಥ ದೊಡ್ಡ ವಿದ್ವಾಂಸ ಆಗ ಯಾರೂ ಇರಲೇ ಇಲ್ಲ. ಶ್ರೀಕಂಠಯ್ಯನವರ ಅನಂತರ ಪಂಪನನ್ನು ಆಳವಾಗಿ ಅಧ್ಯಯನ ಮಾಡಿದವರು ನರಸಿಂಹಾಚಾರ್ ಅವರು. ಪಂಪನ ಕೃತಿಗಳಲ್ಲಿ ಮುಳುಗಿ ಎದ್ದವರು. ಅವರಿಂದ ನಮಗೆ ಮುಳಿಯ ಅವರ ಬಗ್ಗೆ ಬೇಕಾದಷ್ಟು ತಿಳಿಯಿತು.

ಬಳಿಕ ನಮಗೆ ಆಶ್ಚರ್ಯ ಆದ ವಿಷಯವೆಂದರೆ ದಕ್ಷಿಣ ಕನ್ನಡದಲ್ಲಿ ಒಳಗಿನ ಹಳ್ಳಿಯ ಮೂಲೆ ಮೂಲೆ ಪ್ರದೇಶಗಳಲ್ಲಿ ಎಂತಹ ದೊಡ್ಡ ದೊಡ್ಡ ಸಂಸ್ಕೃತ ವಿದ್ವಾಂಸರು ಇದ್ದಾರೆ ಎಂಬ ವಿವರ. ಉನ್ನತಮಟ್ಟದ ಹಲವರು ಆ ಕಡೆ ಇದ್ದಾರೆ ಎಂದು ಗೊತ್ತಾದದ್ದು ಆಗಲೇ. ಆ ಕಡೆಯ ವಿದ್ವಾಂಸರು ಯಕ್ಷಗಾನ ಕಲಾಸಕ್ತರು. ಅವರು ಯಕ್ಷಗಾನವನ್ನು ಜೀವನರೀತಿಯಾಗಿ ಕಟ್ಟಿಕೊಂಡು ಬಂದವರು. ನಮ್ಮ ಕಡೆಯಲ್ಲಿ ಬಯಲಾಟ ದೊಡ್ಡಾಟಕ್ಕೆ ವಿದ್ವಾಂಸರ ಸಂಪರ್ಕ ಇರಲೇ ಇಲ್ಲ. ಆದರೆ ಕರಾವಳಿಯಲ್ಲಿ ಯಕ್ಷಗಾನಕ್ಕೆ ಆ ರೀತಿಯ ಸಂಪರ್ಕ ಇತ್ತು. ಹಾಗಾಗಿ ದಕ್ಷಿಣ ಕನ್ನಡದ ಜನ ಎಲ್ಲೇ ಬಾಳಲಿ ಅವರು ವಿದ್ವತ್‌ಸಂಪಾದನೆ ಮಾಡಿಕೊಳ್ಳುತ್ತಿದ್ದರು ಎಂದು ಜನ ಆಡಿಕೊಳ್ಳುತ್ತಿದ್ದರು. ಆದರೆ ಅಂಥವರ ಪರಿಚಯ ಮಾಡಿಕೊಳ್ಳುವುದಕ್ಕೆ ವಿಶೇಷವಾದ ಹೊಕ್ಕು ಬಳಸು ಇರಲಿಲ್ಲ. ಆಗ ಕರ್ನಾಟಕದ ಏಕೀಕರಣ ಆಗಿರಲಿಲ್ಲ. ನಾಡಿನ ಭಾಗಗಳು ವಿವಿಧ ಆಡಳಿತ ವ್ಯವಸ್ಥೆಗಳೊಳಗೆ ಸಿಕ್ಕಿಕೊಂಡಿದ್ದುವು. ಮೈಸೂರು ಬೆಂಗಳೂರುಗಳು ಮೈಸೂರು ರಾಜರ ಆಡಳಿತದಲ್ಲಿದ್ದರೆ, ಕಾಸರಗೋಡು ಮಂಗಳೂರು ಉಡುಪಿ ಪ್ರದೇಶಗಳು ಮದ್ರಾಸ್ ಆಧಿಪತ್ಯದೊಳಗಿದ್ದುವು. ಈ ಮೂರು ಜಿಲ್ಲೆಗಳು ಆಗ ಒಂದೇ ಆಗಿದ್ದುದನ್ನು ನೆನಪಿಸಬೇಕು. ಏಕೀಕರಣದ ಅನಂತರವೇ ಈ ಹೊಕ್ಕು ಬಳಸು ಹೆಚ್ಚಾದದ್ದು. ಅದೂ ನಮಗೆ ಉಂಟಾದದ್ದು ವಿ. ಸೀತಾರಾಮಯ್ಯನವರ ಮೂಲಕ. ನಮಗೆ ಗೊತ್ತಿದ್ದ ಹಾಗೆ ವಿ. ಸೀತಾರಾಮಯ್ಯ-ನವರು ಧಾರವಾಡದ ಕಡೆಗೆ, ಉಡುಪಿ-ಮಂಗಳೂರು ಕಡೆಗೆ ಪ್ರಯಾಣ ಮಾಡುತ್ತಿದ್ದಷ್ಟು ಮಟ್ಟಿಗೆ ಇನ್ನು ಯಾರೂ ಮಾಡಿರಲಿಲ್ಲ; ಮಾಡುತ್ತಿರಲಿಲ್ಲ. ಅಂದಿನ

ಮಟ್ಟಿಗೆ ಹರಿದು ಹಂಚಾಗಿದ್ದ ಕರ್ನಾಟಕದ ಹೆಚ್ಚಿನೆಲ್ಲ ಭಾಗಗಳ ಸಂಪರ್ಕ ಅವರಿಗಿತ್ತು. ನಾವು ಅವರ ವಿದ್ಯಾರ್ಥಿಗಳಲ್ಲದಿದ್ದರೂ ನಮ್ಮನ್ನು ಅವರ ಸ್ವಂತ ವಿದ್ಯಾರ್ಥಿಗಳ ಹಾಗೆ ಕಂಡು ಬೆಳೆಸಿದವರು. ಅವರ ಮೂಲಕ ಕನ್ನಡ ನಾಡಿನ ಕರಾವಳಿಯನ್ನೂ ಆ ಪ್ರದೇಶದ ಹಿರಿಯರನ್ನೂ ನೋಡುವುದಕ್ಕೆ ಅವಕಾಶ ಬಂತು.

**ಪಾದೇಕಲ್ಲು:** ನೀವು ತಿಮ್ಮಪ್ಪಯ್ಯನವರನ್ನು ನೋಡಿದ್ದು ಮಾತಾಡಿದ್ದು ನೆನಪಿನಲ್ಲಿದೆಯೇ? ನಿಮಗೆ ಸಂಪರ್ಕವಿದ್ದ ಇತರ ವಿದ್ವಾಂಸರ ಕುರಿತು ಹೇಳುವಿರಾ?

**ಜಿ.ವೆಂ.** : ಮುಳಿಯ ತಿಮ್ಮಪ್ಪಯ್ಯನವರನ್ನು ನೋಡುವುದಕ್ಕೆ ನನಗೆ ಅವಕಾಶ ಆಗಲೇ ಇಲ್ಲ. ನನ್ನ ದುರದೃಷ್ಟ. ನಾನು ಅವರನ್ನು ನೇರವಾಗಿ ನೋಡಲೇ ಇಲ್ಲ. ಅವರ ಪುಸ್ತಕಗಳ ಮೂಲಕ ಮಾತ್ರ ಅವರನ್ನು ಕಂಡದ್ದು. ನಾನು ದಕ್ಷಿಣ ಕನ್ನಡಕ್ಕೆ ಪ್ರವೇಶ ಮಾಡುವುದಕ್ಕೆ ಮೊದಲು ಉಪನ್ಯಾಸಗಳಿಗೆ ಬಂದ ಜನ ಮುಳಿಯದವರ ಬಗ್ಗೆ ಹೇಳುತ್ತಿದ್ದರು.

ಇನ್ನು ಇತರ ಕೆಲವು ವಿದ್ವಾಂಸರ ಬಗೆಗೆ. ಮಡಿಕೇರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಸೇಡಿಯಾಪು ಕೃಷ್ಣ ಭಟ್ಟರು ಬಂದಿದ್ದರು. 'ಕನ್ನಡ ಛಂದಸ್ಸು' ಎಂಬ ವಿಷಯದಲ್ಲಿ ದೀರ್ಘ ಉಪನ್ಯಾಸವೊಂದನ್ನು ನೀಡಿದ್ದರು. ಅಕ್ಕರಗಳನ್ನು ಓದುವುದು ಹೇಗೆ ಎಂಬುದರ ಬಗ್ಗೆ ಮೊದಲಾಗಿ ತಿಳುವಳಿಕೆ ಬಂದದ್ದು ಸೇಡಿಯಾಪು ಅವರಿಂದ. ಅವು ಅಂಶ ಛಂದಸ್ಸಿನ ಪದ್ಯಗಳು. ನಮ್ಮ ಜನಕ್ಕೆ ಅವನ್ನು ಓದುವ ವಿಧಾನ ಗೊತ್ತಿರಲಿಲ್ಲ. ಅದು 1932ರಲ್ಲಿ ಡಿವಿಜಿಯವರ ಅಧ್ಯಕ್ಷತೆಯಲ್ಲಿ ನಡೆದ ಸಮ್ಮೇಳನ. ಸೇಡಿಯಾಪು ಅವರು ಬರೆದ ಉಪನ್ಯಾಸವನ್ನು ತೀ. ನಂ. ಶ್ರೀಕಂಠಯ್ಯನವರೂ ಅಧ್ಯಯನಕ್ಕಾಗಿ ಕೊಂಡುಹೋಗಿದ್ದರಂತೆ. ಹೊಸ ಸಂಶೋಧನೆಯಿಂದ ಕೂಡಿದ ಆ ಲೇಖನವನ್ನು ಲೇಖನವನ್ನು ಸೇಡಿಯಾಪು ಅವರು ಕೊಟ್ಟುಬಿಟ್ಟರು. ಹೀಗೆ ಯಾರು ಬಿಟ್ಟುಕೊಡುತ್ತಾರೆ ಹೇಳಿ. ಆಗ ತೀ. ನಂ. ಶ್ರೀಕಂಠಯ್ಯನವರು ಛಂದಸ್ಸಿನ ಬಗ್ಗೆ ಅಧ್ಯಯನ ಮಾಡುತ್ತಿದ್ದರು. ಅದರಿಂದ ಅವರು ಛಂದಸ್ಸಿನ ಬಗ್ಗೆ ಚೆನ್ನಾಗಿ ತಿಳಿದುಕೊಂಡರು. ನಮಗೆ ಅವರು ಬೋಧನೆ ಮಾಡಿದ್ದು ಆಮೇಲೆ.[1]

---

1. 1932ರಲ್ಲಿ ಸೇಡಿಯಾಪು ಕೃಷ್ಣ ಭಟ್ಟರು ಮಡಿಕೇರಿಯ ಸಾಹಿತ್ಯಸಮ್ಮೇಳನದಲ್ಲಿ ಓದಿದ ಪ್ರಬಂಧವನ್ನು ಪರಿಷ್ಕರಿಸಿ ಟಿಪ್ಪಣಿಗಳು, ಪರಿಶಿಷ್ಟಗಳು, ಅನುಬಂಧಗಳು ಇತ್ಯಾದಿಗಳನ್ನು ಸೇರಿಸಿ ಪರಿವರ್ಧಿಸಿ ಪುಸ್ತಕರೂಪದಲ್ಲಿ 1988ರಲ್ಲಿ ಪ್ರಕಟಿಸಿದರು. (ದೃಷ್ಟಿಹೀನರಾಗಿದ್ದ ಅವರಿಗೆ ಈ ಪುಸ್ತಕದ ಪರಿಷ್ಕರಣೆ ಟಿಪ್ಪಣಿಗಳ ಲೇಖನದಲ್ಲಿ ಸಹಾಯಕನಾಗಿ ಕೆಲಸ ಮಾಡುವ ಅವಕಾಶ ನನಗೆ ಲಭಿಸಿತ್ತು.) ಇದಕ್ಕೆ ಬರೆಯಲಾದ ಮುನ್ನುಡಿಯಲ್ಲಿ ಅವರು ಮಡಿಕೇರಿಯಲ್ಲಿ ಈ ಪ್ರಬಂಧವಾಚನದ ಸಂದರ್ಭದಲ್ಲಿ ನಡೆದ ಘಟನೆಗಳನ್ನು ನೆನಪಿಸಿಕೊಂಡಿದ್ದಾರೆ. ಆ ಮಾತುಗಳು ಹೀಗಿವೆ: 'ಆ ಸಮ್ಮೇಳನಕ್ಕೆ ಕೀ.ಶೇ. ಡಿ. ವಿ. ಗುಂಡಪ್ಪನವರು ಅಧ್ಯಕ್ಷರಾಗಿ ನಿಯುಕ್ತರಾಗಿದ್ದರು. ಸಮಾರಂಭಕ್ಕಿಂತ ಸ್ವಲ್ಪ ಮೊದಲೇ ಅವರು ತಾವು ತಂಗಿದ್ದಲ್ಲಿಗೆ ನನ್ನನ್ನು ಕರೆಯಿಸಿ ನನ್ನ ಪ್ರಬಂಧವನ್ನು ತಾವು ಪರಾಮರ್ಶಿಸಿದ್ದಾಗಿ ಹೇಳಿ ತಮ್ಮ ಮೆಚ್ಚುಗೆಯನ್ನು ನನಗೆ ಸೂಚಿಸಿದರು. ತದನಂತರ ನೆರೆದ ಸಭೆಯಲ್ಲಿ ನನ್ನ ಪ್ರಬಂಧವನ್ನು ಓದುವುದಕ್ಕೆ ಅವಕಾಶವನ್ನು ಕೊಟ್ಟರು.

ಕರಾವಳಿಯ ಕಡೆಯ ವಿದ್ವಾಂಸರನ್ನೂ ಕೆಲವರು ಹಿರಿಯರನ್ನೂ ನಾನು ನೆನಪು ಮಾಡಿಕೊಳ್ಳಬೇಕು. ಕಡೆಂಗೋಡ್ಲು ಶಂಕರ ಭಟ್ಟರು, ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು, ಸೇರಾಜೆ ಭೀಮ ಭಟ್ಟರು ನನಗೆ ಬಹಳ ಹತ್ತಿರದವರಾಗಿದ್ದರು. ಇವರನ್ನೆಲ್ಲ ನಾನು ಹತ್ತಿರದಿಂದ ನೋಡಿ ಬಲ್ಲೆ. ಕಾರ್ಕಳದ ಎಂ. ರಾಮಚಂದ್ರ, ನಂದಳಿಕೆ ಬಾಲಚಂದ್ರ ರಾವ್, ಹೆಬ್ರಿಯ ಅಂಬಾತನಯ ಮುದ್ರಾಡಿ, ಉಡುಪಿಯ ಶಿಕ್ಷಣ ಕಾಲೇಜಿನ ಡಾ. ಮಹಾಬಲೇಶ್ವರ ರಾವ್, ಎಂ.ಜಿ.ಎಂ. ಕಾಲೇಜಿನ ಉಪ್ಪಂಗಳ ರಾಮ ಭಟ್ಟ, ಭಾಷಾವಿದ್ವಾಂಸ ಡಾ. ಯು. ಪಿ. ಉಪಾಧ್ಯಾಯ, ಪುತ್ತೂರಿನ ಪೋಳಂತಕೋಡಿ ಈಶ್ವರ ಭಟ್ಟ, ಬಂಟ್ವಾಳದ ಪರ್ಯ ಲಕ್ಷ್ಮೀನಾರಾಯಣ ಆಳ್ವ – ಇವರೆಲ್ಲ ನನಗೆ ಪರಿಚಿತರೇ. ಉಡುಪಿಯ ಪ್ರೊ. ಕು. ಶಿ. ಹರಿದಾಸ ಭಟ್ಟರು ಮತ್ತು ಮಣಿಪಾಲದ ಡಾ. ಟಿ. ಎಂ. ಎ. ಪೈ ಅವರ ನಿಕಟಸಂಪರ್ಕವನ್ನು ನಾನು ಉಲ್ಲೇಖಿಸಲೇಬೇಕು.

ನಾನು ಮಣಿಪಾಲಕ್ಕೆ, ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜಿಗೆ ಬಂದದ್ದು ಪ್ರೊ. ಕು. ಶಿ. ಹರಿದಾಸ ಭಟ್ಟರ ಮೂಲಕ. ಅವರು ಆಗಿಂದಾಗ್ಗೆ ಮೈಸೂರಿಗೆ ಬಂದು ಹೋಗಿ ಮಾಡುತ್ತಿದ್ದರು. ಅವರ ಸಂಬಂಧಿಗಳು ಅಲ್ಲಿದ್ದರು. ಉಡುಪಿಯಲ್ಲಿ ಅವರು ಪ್ರಾಂಶುಪಾಲರಾಗಿದ್ದುದರಿಂದ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಆಹ್ವಾನ ನೀಡುತ್ತಾ ಇತ್ತು. ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಅಥವಾ ಶೈಕ್ಷಣಿಕ ಮಂಡಲಿ ಸಭೆಗಳಲ್ಲಿ ಅವರು ಭಾಗವಹಿಸುತ್ತಿದ್ದರು. ಆ ಸಂದರ್ಭದಲ್ಲಿ ಒಂದೆರಡು ಕಡೆ ನನ್ನನ್ನು ಕಂಡಾಗ ತುಂಬ ವಿಶ್ವಾಸವನ್ನು ವ್ಯಕ್ತಪಡಿಸಿದರು. ಒಮ್ಮೆ

---

.......ಪಿರಿಯಕ್ಕರದ ಲಕ್ಷಣನಿರೂಪಣೆ ಮಾಡಿ, ನಾನು ಕಂಡುಕೊಂಡ ಅದರ ಪಠನಕ್ರಮವನ್ನು ತಿಳಿಯಪಡಿಸುವುದಕ್ಕಾಗಿ ಪಂಪನ ಎರಡು ಪಿರಿಯಕ್ಕರಗಳನ್ನು ಓದಿ ತೋರಿಸಿದೆ. ಅಲ್ಲಿ ನೆರೆದಿದ್ದ ಮಹನೀಯರೆಲ್ಲರಿಗೂ ಆ ಪಠನಕ್ರಮವು ಸಮ್ಮತವಾದಂತೆ ಕಂಡುಬಂದಿತು. ..... ಅದೇ ದಿನ ರಾತ್ರಿ ಅಭ್ಯಾಗತವೃಂದವು ಸಮ್ಮೇಳನದ ಭೋಜನಶಾಲೆಯಲ್ಲಿ ನೆರೆದಿದ್ದಾಗ ಕೀ.ಶೇ. ತೀ. ನಂ. ಶ್ರೀಕಂಠಯ್ಯನವರು ನನ್ನ ಬಳಿಗೆ ಬಂದು ನನ್ನ ಆ ಪ್ರಬಂಧವನ್ನು ಬಹಳವಾಗಿ ಪ್ರಶಂಸಿಸಿ, ತಾವು ಆ ವರ್ಷದ ಎಂ.ಎ. ಪರೀಕ್ಷೆಗೆ ಕಟ್ಟಿದ್ದಾಗಿಯೂ ಪರೀಕ್ಷೆಯ ವಿಶೇಷ ವಿಷಯವಾಗಿ ಛಂದಸ್ಸನ್ನು ಆರಿಸಿಕೊಂಡಿರುವುದಾಗಿಯೂ ತಿಳಿಸಿ ಪ್ರಬಂಧದ ಹಸ್ತಪ್ರತಿಯನ್ನು ಅಭ್ಯಾಸಕ್ಕಾಗಿ ತಮಗೆ ಕೊಡಬೇಕೆಂದು ಕೇಳಿಕೊಂಡರು; ಮತ್ತು ಅದನ್ನು ಸಾಧ್ಯವಾದಷ್ಟು ಬೇಗನೆ ನನಗೆ ಹಿಂತಿರುಗಿಸುವೆನೆಂದು ಹೇಳಿದರು. ಆಗ ನಾನು 'ಲೇಖನವನ್ನು ಪರಿಷತ್ತಿನ ಕಾರ್ಯದರ್ಶಿಗಳಿಗೆ ಒಪ್ಪಿಸಿರುತ್ತೇನೆ; ನೀವು ಅದನ್ನು ಅವರೊಡನೆ ಕೇಳಬಹುದು; ಅವರು ಕೊಟ್ಟರೆ ಅವರಿಗೇ ಅದನ್ನು ಹಿಂತಿರುಗಿಸಿ. ನಾನೀಗ ಅವರನ್ನು ಕೇಳುವಂತಿಲ್ಲ, ಏಕೆಂದರೆ ಸಾಹಿತ್ಯಪರಿಷತ್ಪತ್ರಿಕೆಯ ಮುಂದಿನ ಸಂಚಿಕೆಯಲ್ಲಿಯೇ ಅದನ್ನು ಪ್ರಕಟಪಡಿಸುವುದಾಗಿ ಮಾನ್ಯರಾದ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪ--ನವರು ನನಗೆ ತಿಳಿಸಿರುತ್ತಾರೆ. ಒಂದು ವೇಳೆ ನಿಮಗೆ ಹಸ್ತಪ್ರತಿಯನ್ನು ಕೊಡದಿದ್ದ ಪಕ್ಷದಲ್ಲಿ ನಿಮ್ಮ ಪರೀಕ್ಷಾಕಾಲದೊಳಗೆ ಅದು ಪ್ರಕಟವಾಗಲೂ ಬಹುದು; ಆಗ ಅದನ್ನು ನೀವು ಓದಿಕೊಳ್ಳಬಹುದು' – ಎಂದು ಅವರಿಗೆ ಹೇಳಿದೆ. ಹೀಗೆ ಸಮ್ಮೇಳನಕಾಲದಲ್ಲಿ ನಡೆದ ಘಟನೆಗಳಿಂದ ನನ್ನ ಪ್ರಬಂಧವು ಹಲವರ ಮೆಚ್ಚುಗೆಗೆ ಪಾತ್ರವಾಯಿತೆಂಬುದು ನನಗೆ ಮನವರಿಕೆಯಾಯಿತು.' – ಕನ್ನಡ ಛಂದಸ್ಸು, 1988, ಪ್ರ: ಮಣಿಪಾಲ ಸಾಹಿತ್ಯ ಸಂಘ, ಮುನ್ನುಡಿ ಪುಟ 6–7. –ಸಂ.

ಅವರು ಮೈಸೂರಿಗೆ ಬಂದಾಗ ನಾನು ಯಾವುದೋ ಒಂದು ವಿಚಾರದ ಕುರಿತು ಮಹಾರಾಜ ಕಾಲೇಜಿನಲ್ಲಿ ಮಾತನಾಡುತ್ತಾ ಇದ್ದೆ. ಅದನ್ನು ಕಂಡು ಅವರು 'ನೀವು ನಮ್ಮ ಕಾಲೇಜಿನಲ್ಲಿ ಬಂದು ಮಾತನಾಡಬೇಕು' ಎಂದು ಹೇಳಿದರು. ಹೇಳಿದ್ದು ಮಾತ್ರವಲ್ಲ, ದಿನ ನಿಶ್ಚಯಿಸಿ, ಕಾರ್ಯಕ್ರಮ ನಿರ್ಣಯಿಸಿ ನನ್ನನ್ನು ಕರೆಸಿಕೊಂಡರು. ಅದು ಯಾವ ವರ್ಷ ಮತ್ತು ಸಭೆ ಎಂದು ನೆನಪಿಲ್ಲ; ನಾನು ಉಡುಪಿಯ ಎಂ. ಜಿ. ಎಂ. ಕಾಲೇಜಿನ ತರಗತಿಗಳಲ್ಲಿಯೂ ಉಪನ್ಯಾಸಮಾಡಿದ್ದೆ. ಐಚ್ಛಿಕ ಕನ್ನಡ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತಾಡಿದ್ದೆ. ನಿಮ್ಮ ಜನ ತುಂಬ ಪ್ರೀತಿಯಿಂದ ನನ್ನನ್ನು ಸ್ವಾಗತಿಸಿದ್ದರು; ಅಂದಿನ ವಿದ್ಯಾರ್ಥಿಗಳು ತುಂಬ ಆಸಕ್ತಿಯಿಂದ ಉಪನ್ಯಾಸವನ್ನು ಕೇಳಿದ್ದರು.

ಹರಿದಾಸ ಭಟ್ಟರು ಅನಂತರ ನನ್ನನ್ನು ಅನೇಕ ಸಲ ಕರೆಸಿದ್ದುಂಟು. ಆಮೇಲೆ ನಾನು ಕನ್ನಡ ನಿಘಂಟಿನ ಕೆಲಸಕ್ಕೆ ನಿಂತುಕೊಂಡಾಗ ಅಲ್ಲಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಆಶ್ರಯದಲ್ಲಿ ತುಳುನಿಘಂಟು ಯೋಜನೆ ಪ್ರಾರಂಭವಾಯಿತು. 1979–1980 ಇರಬೇಕು; ಆಗ ನಾನು ಕಾಲೇಜಿನಿಂದ ನಿವೃತ್ತನಾಗಿ ಕನ್ನಡ ನಿಘಂಟಿಗೆ ಆಚಾರ್ಯನಾಗಿ ಕುಳಿತಿದ್ದೆ.

ಹೀಗೆ ನಿಘಂಟುವಿನ ಸಂಪಾದಕತ್ವವನ್ನು ವಹಿಸುವಲ್ಲಿ ನನ್ನನ್ನು ಒತ್ತಾಯಿಸಿದ ಪ್ರೊ. ಎಂ. ಮರಿಯಪ್ಪ ಭಟ್ಟರನ್ನು ನೆನೆಯಬೇಕು. ಮದ್ರಾಸು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಅವರು ಗ್ರಂಥ ಸಂಪಾದನೆ ಮತ್ತು ನಿಘಂಟು ಕಾರ್ಯಗಳಲ್ಲಿ ನಿಪುಣರು. ಕಿಟ್ಟೆಲ್ ಕೋಶವನ್ನು ಸಂಪಾದಿಸಿ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿದುದರಿಂದ ಅವರಿಗೆ 'ಅಭಿನವ ಕಿಟ್ಟೆಲ್' ಎಂದೂ ಹೆಸರು ಬಂದಿದೆ. ಅವರು ಒಂದು ತುಳು–ಇಂಗ್ಲಿಷ್ ನಿಘಂಟನ್ನೂ ತಯಾರಿಸಿದ್ದರು.[2] ಅವರು ಸಿದ್ಧಪಡಿಸಿದ ಹವ್ಯಕ–ಇಂಗ್ಲಿಷ್ ನಿಘಂಟು ಪ್ರಾಯಶಃ ಅವರ ಮರಣಾನಂತರ ಪ್ರಕಟಗೊಂಡಿರ–ಬೇಕು. ಮರಿಯಪ್ಪ ಭಟ್ಟರು ನಿಮ್ಮ ಅತ್ತಕಡೆಯವರೇ, ದಕ್ಷಿಣಕನ್ನಡದವರೇ ಆದರೂ ಮದ್ರಾಸಿನ ವಿದ್ವಾಂಸರ ವಲಯದಲ್ಲಿಯೂ ಮೈಸೂರು ಬೆಂಗಳೂರುಗಳ ವಿದ್ವಾಂಸರ ವಲಯದಲ್ಲಿಯೂ ಅವರಿಗೆ ಹೆಚ್ಚಿನ ಗೌರವವಿತ್ತು. ಮದ್ರಾಸಿನಲ್ಲಿ ಅನೇಕ ವರ್ಷಗಳ ಕಾಲ ಕನ್ನಡಕ್ಕಾಗಿ ದುಡಿದ ಸರಳ ಸಜ್ಜನರಾದ ಅವರು ಎಲ್ಲರಿಂದಲೂ ಗೌರವವನ್ನು ಪಡೆದವರಾಗಿದ್ದರು. ಭಾಷಾವಿಜ್ಞಾನವೂ ಅವರಿಗೆ ಆಸಕ್ತಿಯ ಕ್ಷೇತ್ರವಾಗಿತ್ತು. ಕನ್ನಡ

---

2. ತುಳುವಿನ ಮೊದಲ ಎರಡು ನಿಘಂಟುಗಳನ್ನು ಸಿದ್ಧಪಡಿಸಿದವನು ಎ. ಮ್ಯಾನರ್ ಎಂಬ ಕ್ರೈಸ್ತಮಿಶನರಿ. 1886ರಲ್ಲಿ ಆತನ ತುಳು – ಇಂಗ್ಲಿಷ್ ನಿಘಂಟು ಮತ್ತು 1888ರಲ್ಲಿ ಇಂಗ್ಲಿಷ್ – ತುಳು ನಿಘಂಟು ಪ್ರಕಟಗೊಂಡಿದ್ದು ತುಳುಭಾಷೆಯಲ್ಲಿ ಸ್ಥಳೀಯರ ನಿಘಂಟುರಚನಾಸಕ್ತಿ ಬಹಳ ನಿಧಾನವಾಗಿ ಚಿಗುರಿದುದು ಕಂಡುಬರುತ್ತದೆ. ಪ್ರೊ. ಮರಿಯಪ್ಪ ಭಟ್ಟ ಮತ್ತು ಡಾ. ಎ. ಶಂಕರ ಕೆದಿಲಾಯ ಅವರು ಸಿದ್ಧಪಡಿಸಿದ ತುಳು – ಇಂಗ್ಲಿಷ್ ನಿಘಂಟು ಈ ಭಾಷೆಯ ಮೂರನೆಯ ಶಬ್ದಕೋಶ. ಇದು ಮದ್ರಾಸು ವಿಶ್ವವಿದ್ಯಾನಿಲಯದಿಂದ 1967ರಲ್ಲಿ ಪ್ರಕಟಗೊಂಡಿತು. ಇದು ಗಾತ್ರದಲ್ಲಿ ಮ್ಯಾನರನ ತುಳು–ಇಂಗ್ಲಿಷ್ ಕೋಶಕ್ಕಿಂತ ಕಿರಿದಾಗಿದೆ. –ಸಂ.

ನಿಘಂಟು ಪ್ರಾರಂಭಗೊಂಡ ಕಾಲದಲ್ಲಿ ಪ್ರೊ. ಟಿ. ಎಲ್. ನರಸಿಂಹಾಚಾರ್ಯರು ನಿಘಂಟು ಸಮಿತಿಯ ಅಧ್ಯಕ್ಷರೂ ಪ್ರಧಾನ ಸಂಪಾದಕರೂ ಆಗಿದ್ದರು. ಅವರ ಅನಂತರ ನಿಘಂಟು ಸಮಿತಿಯ ಅಧ್ಯಕ್ಷರನ್ನಾಗಿ ಮರಿಯಪ್ಪ ಭಟ್ಟರನ್ನು ಆಯ್ಕೆ ಮಾಡಲಾಯಿತು. ಅವರು ಕೆಲವು ಸಮಯ ಅಧ್ಯಕ್ಷರಾಗಿದ್ದರೂ ಅನಾರೋಗ್ಯದ ಕಾರಣದಿಂದ ಅನಂತರ ಆ ಸ್ಥಾನವನ್ನು ತ್ಯಜಿಸಿದರು. ನಿಘಂಟಿನ ಎರಡನೆಯ, ಮೂರನೆಯ ಸಂಪುಟಗಳು ಪ್ರಕಟಗೊಂಡಾಗ ಅವರು ಸಂಪಾದಕ ಸಮಿತಿಯ ಅಧ್ಯಕ್ಷರಾಗಿಯೂ ನಾನು ಪ್ರಧಾನ ಸಂಪಾದಕನಾಗಿಯೂ ಇದ್ದೆವು. ಆ ಸಮಯದಲ್ಲಿ ನಾನು ಸಂಪಾದಕ ಸಮಿತಿಯ ಉಪಾಧ್ಯಕ್ಷನಾಗಿಯೂ ಇದ್ದೆ. ಸಮಿತಿಯ ಸಭೆಗಳಲ್ಲಿ ಅಧ್ಯಕ್ಷರಾದ ಮರಿಯಪ್ಪ ಭಟ್ಟರು ಇಲ್ಲದಾಗ ನಾನು ಅಧ್ಯಕ್ಷತೆಯ ಹೊಣೆ ವಹಿಸ-ಬೇಕಾಗುತ್ತಿತ್ತು.

ಆದರೆ ಕೆಲವು ಕಾಲದ ಅನಂತರ ಅವರು ಆ ಸ್ಥಾನವನ್ನು ಬಿಡಲು ಉತ್ಸುಕರಾದುದಲ್ಲದೆ 'ನೀವು ಹಳೆಯ ಹುಲಿ, ನೀವೇ ನಿಘಂಟುರಚನೆಯ ನೇತೃತ್ವ-ವನ್ನು ವಹಿಸಬೇಕು' ಎಂದು ನನ್ನಲ್ಲಿ ಹೇಳಿ ನನ್ನನ್ನು ಒಪ್ಪಿಸಿದರು. ನಿಘಂಟಿನ ಪ್ರಾರಂಭಕಾಲದಿಂದಲೂ ಶಬ್ದಸಂಗ್ರಹವೇ ಮೊದಲಾದ ಬೇರೆ ಬೇರೆ ಹಂತದ ಕೆಲಸಗಳನ್ನು ನಾನೂ ನಿರ್ವಹಿಸಿದ್ದುದರಿಂದ ಈ ಕ್ಷೇತ್ರದಲ್ಲಿ ಹಲವು ವರ್ಷಗಳ ಅನುಭವ ನನಗಿದ್ದುದು ಹೌದು. ಆ ದೃಷ್ಟಿಯಿಂದಲೇ ಅವರು ನನ್ನನ್ನು 'ಹಳೆಯ ಹುಲಿ' ಎಂದುದಿರಬೇಕು. ಏನೇ ಇರಲಿ, ಅನಂತರ ಅವರ ಸ್ಥಾನದಲ್ಲಿ ನಾನಿದ್ದು ಸಂಪೂರ್ಣವಾಗಿ ನಿಘಂಟಿನ ಕೆಲಸಕ್ಕೆ ನನ್ನನ್ನು ತೊಡಗಿಸಿಕೊಂಡೆ. ಹೀಗೆ, ಕನ್ನಡ ನಿಘಂಟಿನ ಕೆಲಸ ಜೋರಾಗಿ ನಡೆಯುತ್ತಿದ್ದ ಆ ಕಾಲದಲ್ಲೇ ನಾನು ಈ ಹಿಂದೆ ಹೇಳಿದಂತೆ ಸುಮಾರು 1979-80ರಲ್ಲಿ ಉಡುಪಿಯಲ್ಲಿ ತುಳುನಿಘಂಟು ಯೋಜನೆ ತೊಡಗಿತು.

ಆ ಯೋಜನೆಯನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದು ನನಗೆ ಮನಸ್ಸಾಯಿತು. ಆಗ ನಾನು ಉಡುಪಿಗೆ ಬಂದು ತುಳುನಿಘಂಟು ಪ್ರಧಾನಸಂಪಾದಕರಾದ ಡಾ. ಯು. ಪಿ. ಉಪಾಧ್ಯಾಯರ ಜೊತೆ ಮಾತನಾಡಿ ಬಂದಿದ್ದೆ. ಉಪಾಧ್ಯಾಯರು ಭಾಷಾವಿಜ್ಞಾನದಲ್ಲಿ ವಿಶೇಷ ಆಸಕ್ತಿ ಇದ್ದವರು. ಅವರ ಮಾತೃಭಾಷೆ ತುಳು. ಕನ್ನಡ ಸಂಸ್ಕೃತಗಳಲ್ಲಿ ಅವರು ವಿದ್ವಾಂಸರು. ಹಿಂದಿ, ಮಲಯಾಳಂ ಮೊದಲಾದ ಇತರ ಭಾಷೆಗಳ ಪರಿಚಯವೂ ಇಂಗ್ಲಿಷ್ ಮತ್ತು ಇತರ ಪಾಶ್ಚಾತ್ಯ ಭಾಷೆಗಳ ಪರಿಚಯವೂ ಅವರಿಗಿತ್ತು. ನಿಘಂಟು ರಚನೆ ಮಾಡುವವರಿಗೆ ಬಹುಭಾಷಾಭಿಜ್ಞತೆ ಎಂಬುದು ಬಹಳ ಮುಖ್ಯವಾದ ಒಂದು ಅರ್ಹತೆ. ಡಾ. ಉಪಾಧ್ಯಾಯರು ಪತ್ನಿ ಸಹಿತರಾಗಿ ಈ ಯೋಜನೆಯಲ್ಲಿ ತಮ್ಮನ್ನು ತಾವು ಆಳವಾಗಿ ತೊಡಗಿಸಿಕೊಂಡಿದ್ದರು.

ಬಹುಶಃ ಆ ತುಳುನಿಘಂಟಿನ ಕೆಲಸಕ್ಕೆ ಹರಿದಾಸ ಭಟ್ಟರೇ ಮೂಲ ಎಂದು ಕಾಣುತ್ತದೆ. ಅವರು 'ನೀವು ಆಗಿಂದಾಗ ಬರಬೇಕು' ಎಂದು ಹೇಳಿದರು. ಆದರೆ ನನಗೆ ಅದಕ್ಕಾಗಿ ಅಧಿಕೃತವಾದ ಆಹ್ವಾನ ಬರಲಿಲ್ಲ. ಆದರೂ ನಾನು ನನ್ನ ಕೆಲಸ ಏನು ಎಂದು ತಿಳಿದುಕೊಂಡು ಅವರ ಪ್ರಕಾರವೇ ಸಂಪರ್ಕ ಬೆಳೆಸಿದೆ. ಅವರೂ

ಕೂಡ ತುಳುನಿಘಂಟನ್ನು ಆಕ್ಸ್‌ಫರ್ಡ್ ಯುನಿವರ್ಸಿಟಿ ನಿಘಂಟಿನ ಮಾದರಿಯಲ್ಲೇ ತಯಾರು ಮಾಡಿದರು. ನಾವೂ ಕನ್ನಡ ನಿಘಂಟನ್ನು ಹಾಗೇ ಮಾಡಿದ್ದಾಗಿತ್ತು. ತುಳುನಿಘಂಟಿನ ತಯಾರಿಯೆಂಬುದು ಭಾರಿಯಾದ ಕೆಲಸ ಆಯಿತು. ಅವರು ಕಷ್ಟಪಟ್ಟು ಮಾಡಿದ್ದರು. ಜವರೇ ಗೌಡರು ತುಳುನಿಘಂಟು ಸಲಹಾಸಮಿತಿಯ ಸದಸ್ಯರಾಗಿ ಇದ್ದರು. ಅವರು ಉಡುಪಿಗೆ ಪರಿಶೀಲನ ಸಭೆಗಳಿಗೆ ಬಂದು ಹೋಗಿ ಮಾಡುತ್ತಾ ಇದ್ದರು. ನಮ್ಮ ನಿಘಂಟು ಕಛೇರಿಗಳಲ್ಲಿ ಉಡುಪಿಯ ತುಳುನಿಘಂಟು ಸಿದ್ಧತೆಯಲ್ಲಿ ಏನಾಗುತ್ತಾ ಇದೆ ಎಂದು ಚರ್ಚೆ ಆಗುತ್ತಾ ಇತ್ತು. ಹಾಗಾಗಿ ಅದರ ವಿಚಾರ ಗೊತ್ತಾಗುತ್ತಿತ್ತು.[3]

**ಪಾದೇಕಲ್ಲು:** ತುಳುನಿಘಂಟು ಸಲಹಾಸಮಿತಿಯಲ್ಲಿ ದೇ. ಜವರೇಗೌಡರು, ಕಯ್ಯಾರ ಕಿಞ್ಞಣ್ಣ ರೈಗಳು, ಏರ್ಯ ಲಕ್ಷ್ಮೀನಾರಾಯಣ ಆಳ್ವರು, ವೆಂಕಟರಾಜ ಪುಣಿಂಚತ್ತಾಯರು ಮೊದಲಾದವರಿದ್ದರು. ಹಿರಿಯರಾದ ಸೇಡಿಯಾಪು ಅವರೂ ಇದ್ದರು.[4]

**ಜಿ.ವೆಂ.:** ಸೇಡಿಯಾಪು ಕೃಷ್ಣ ಭಟ್ಟರು ನಮಗೆ ಆದರ್ಶ ವ್ಯಕ್ತಿಯಾಗಿದ್ದರು. ಅವರ ಬಗ್ಗೆ ಅನೇಕ ಕಥೆಗಳನ್ನು ಕೇಳಿ ಬಲ್ಲೆ. ಸಂಸ್ಕೃತ ಕನ್ನಡಗಳಲ್ಲಿ ದೊಡ್ಡ ವಿದ್ವಾಂಸರು ಅವರು. ಯಾಸ್ಕನು ನಿರುಕ್ತ ಬರೆದ ಹಾಗೆ ಕನ್ನಡದ ಬಗ್ಗೆ ಬರೆದರು. ಅವರನ್ನು

---

3. ಪ್ರೊ. ದೇ. ಜವರೇಗೌಡರು ತುಳುವನ್ನು ಬಲ್ಲವರಲ್ಲ. ಆದರೂ ಕನ್ನಡದಲ್ಲಿ ತುಂಬ ಕೆಲಸ ಮಾಡಿದ ಅವರನ್ನು ನಿಘಂಟು ಸಲಹಾಸಮಿತಿಯಲ್ಲಿ ಹಿರಿಯ ಸದಸ್ಯರಾಗಿ ಪ್ರೊ. ಕು. ಶಿ. ಹರಿದಾಸ ಭಟ್ಟರು ಇರಿಸಿಕೊಂಡಿದ್ದರು. ಅವರಿಗೆ ಸಲಹಾಸಮಿತಿಯ ಎಲ್ಲ ಸಭೆಗಳಲ್ಲಿಯೂ ಭಾಗವಹಿಸಲು ಸಾಧ್ಯವಾಗದಿದ್ದರೂ ಭಾಗವಹಿಸಿದ ಸಭೆಗಳಲ್ಲಿ ಶಬ್ದಾರ್ಥ ವಿಶ್ಲೇಷಣೆಯ ಕುರಿತು ಉಪಯುಕ್ತವಾದ ವಿಮರ್ಶೆಯನ್ನು ಮಾಡುತ್ತಿದ್ದರು. ನಿಘಂಟುವಿನ ಸಹಾಯಕಸಂಪಾದಕನಾಗಿ ಒಂದಿಷ್ಟು ಸಮಯ ನಾನು ಕಾರ್ಯನಿರ್ವಹಿಸಿದ್ದು ಈ ಹಿರಿಯರು ಸಲಹಾಸಮಿತಿಯ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ವಿಧಾನವನ್ನು ಕಂಡವನಿರುತ್ತೇನೆ. ಪ್ರೊ. ಜವರೇಗೌಡರು 'ಅಡಿಮೆ' ಎಂಬ ಶಬ್ದದ ಕುರಿತು ವಿಶೇಷವಾಗಿ ಚರ್ಚಿಸಿದ ನೆನಪು ನನಗಿನ್ನೂ ಇದೆ. (ಅಡಿಮೆ, ನೋಡಿ ತುಳುನಿಘಂಟು ಸಂಪುಟ ೧, ಪುಟ 65) – ಸಂ.
4. ತುಳು ನಿಘಂಟು ಸಂಪಾದಕೀಯ ಸಲಹಾಮಂಡಳಿಯಲ್ಲಿ ಪ್ರೊ. ಕು. ಶಿ. ಹರಿದಾಸ ಭಟ್ಟರ ಅಧ್ಯಕ್ಷತೆಯಲ್ಲಿ ಶ್ರೀ ಸೇಡಿಯಾಪು ಕೃಷ್ಣ ಭಟ್ಟ, ಪ್ರೊ. ದೇ. ಜವರೇಗೌಡ, ಶ್ರೀ ಕಯ್ಯಾರ ಕಿಞ್ಞಣ್ಣ ರೈ, ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ, ಡಾ. ಬಿ. ಎ. ವಿವೇಕ ರೈ, ಪ್ರೊ. ಅಮೃತ ಸೋಮೇಶ್ವರ, ಡಾ. ಎ. ಶ್ರೀರಮಣ ಆಚಾರ್ಯ, ಡಾ. ರಾಮಕೃಷ್ಣ ಟಿ. ಶೆಟ್ಟಿ, ಶ್ರೀ ವೆಂಕಟರಾಜ ಪುಣಿಂಚತ್ತಾಯ ಮತ್ತು ಪ್ರಧಾನ ಸಂಪಾದಕರಾದ ಡಾ. ಯು. ಪಿ. ಉಪಾಧ್ಯಾಯ ಇವರು ಸದಸ್ಯರಾಗಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು ಸದಸ್ಯರಾಗಿದ್ದರೂ ಸಾಮಾನ್ಯವಾಗಿ ಸಮಿತಿಸಭೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. ತುಳುನಿಘಂಟು ಪ್ರಥಮಸಂಪುಟ ಪ್ರಕಟಗೊಳ್ಳುವ ಮೊದಲು ಪ್ರೊ. ಎಂ. ಮರಿಯಪ್ಪ ಭಟ್ಟ, ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಮತ್ತು ಡಾ. ಶ್ರೀನಿವಾಸ ಹಾವನೂರ ಇವರೂ ಸ್ವಲ್ಪ ಸಮಯ ಸಲಹಾಮಂಡಳಿಯ ಸದಸ್ಯರಾಗಿದ್ದರು. –ಸಂ.

ಕುರಿತು ಮಾತಾಡಲು ನನಗೆ ತುಂಬ ಉತ್ಸಾಹ ಇತ್ತು. ಅವರನ್ನು ಕಾಣಬೇಕು ಎಂದು ಪ್ರಯತ್ನವನ್ನೂ ಪಟ್ಟಿದ್ದೆ. ದೂರದಿಂದ ನೋಡಿದ್ದೆ.

ಸೇಡಿಯಾಪು ಅವರ ವಿಶಿಷ್ಟವ್ಯಕ್ತಿತ್ವದ ಬಗ್ಗೆ ಯಾಕೆ ಆಕರ್ಷಣೆ ಬಂತು ಅಂದರೆ ಹೆಚ್ಚು ಕಡಮೆ ಇದೇ ಸಮಯದಲ್ಲಿ ಅವರು 'ಭಾನುಮತಿಯ ನೆತ್ತ' ಅನ್ನುವ ಲೇಖನ ಬರೆದು ಪಂಪಭಾರತದ ಆ ಒಂದು ಪದ್ಯದಲ್ಲಿದ್ದ ಸಮಸ್ಯೆಗೆ ಉತ್ತರ ಕೊಟ್ಟಿದ್ದರಲ್ಲ. ಅಲ್ಲಿಂದ ಅವರ ಆಳವಾದ ವಿಮರ್ಶಪ್ರಜ್ಞೆ ನಮಗೆ ಆಶ್ಚರ್ಯ ಉಂಟುಮಾಡಿತು. ಬಹಳ ದಿನಗಳಿಂದ ನೆತ್ತದ ಸಮಸ್ಯೆ ವಿದ್ವಾಂಸರನ್ನು ಕಾಡುತ್ತಿತ್ತು. ವಿಭಿನ್ನ ಅಭಿಪ್ರಾಯಗಳು ಪ್ರಕಟಗೊಂಡಿದ್ದವು. ನಾನು ತಿಳಕೊಂಡದ್ದೇನೆಂದರೆ ಅದಕ್ಕೆ ನಿಖರವಾಗಿ ಉತ್ತರಕೊಟ್ಟು ಆ ಸಮಸ್ಯೆಯನ್ನು ಸರಿಯಾದ ರೀತಿಯಲ್ಲಿ ಪರಿಹಾರಮಾಡಿದವರು ಸೇಡಿಯಾಪು. ಅವರ ಮರಣಾನಂತರ ಅವರ ಹೆಸರಿನಲ್ಲಿ ಒಂದು ಪ್ರಶಸ್ತಿ ಇಟ್ಟಿದ್ದಾರೆ. ಅದೇ 'ಸೇಡಿಯಾಪು ಪ್ರಶಸ್ತಿ'. ಅದನ್ನು ನನಗೆ ಕೊಟ್ಟು ನನ್ನನ್ನು ಗೌರವಿಸಿದ್ದಲ್ಲದೆ ಒಂದು ಉಪನ್ಯಾಸಕ್ಕೂ ಏರ್ಪಾಟು ಮಾಡಿದ್ದರು.[5] ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ ಆ ಕಾರ್ಯಕ್ರಮ ಆಯಿತು. ಹೀಗೆ ಇನ್ನೂ ತುಂಬ ಹತ್ತಿರದಿಂದ ನನ್ನನ್ನು ನಿಮ್ಮ ಕಡೆಯವರು ಪ್ರೀತಿಸಿದ್ದಾರೆ. ನಾನು ಯಾವುದೇ ಕಾರ್ಯಕ್ರಮದ ಉದ್ದೇಶದಿಂದಲಾದರೂ ಆ ಊರಿಗೆ ಬಂದರೆ, ಸಾಮಾನ್ಯವಾಗಿ ಹೊರಗೆಲ್ಲೂ ಹೋಗದೆ ಮಣಿಪಾಲದ ಮನೆಯಲ್ಲೇ ಇರುತ್ತಿದ್ದ ಸೇಡಿಯಾಪು ಅವರನ್ನು ಕಾಣದೆ ಹೋದರೆ ನನ್ನ ಉಡುಪಿಯ ಪ್ರಯಾಣ ಪೂರ್ತಿ ಆಯಿತು ಎಂದು ತಿಳ್ಕೊಳ್ತಿರಲಿಲ್ಲ. ಜೀವಿತದ ಕೊನೆಯ ಹತ್ತು ವರ್ಷಗಳಲ್ಲಿ ತಮ್ಮ ಕಣ್ಣುಗಳ ಶಕ್ತಿಯನ್ನು ಕಡೆದುಕೊಂಡ ಅವರಿಗೆ ನೀವು ಲೇಖನ ವ್ಯವಸಾಯದಲ್ಲಿ ಲಿಪಿಕಾರನಾಗಿ ಸಹಾಯಕರಾಗಿದ್ದದ್ದಲ್ಲದೆ ಪಟ್ಟಶಿಷ್ಯರಾಗಿದ್ದಿರಿ. ನಿಮ್ಮ ಮೂಲಕ, ನಿಮ್ಮ ಜೊತೆಗೇ ಅವರ ಮನೆಗೆ ಹೋಗಿ ಅವರನ್ನು ನೋಡುವುದಿತ್ತು.

ಒಮ್ಮೆ ಅವರೊಂದಿಗೆ ಮಾತನಾಡಿದ ಸಂದರ್ಭ ಇನ್ನೂ ಚೆನ್ನಾಗಿಯೇ ನೆನಪಿದೆ. ಆ ವೇಳೆಗೆ ಕಣ್ಣು ಕಳೆದುಕೊಂಡಿದ್ದರಷ್ಟೆ. 1988ರಲ್ಲಿ 'ಕನ್ನಡ ಛಂದಸ್ಸು' ಪುಸ್ತಕ ಬಿಡುಗಡೆಗೆ ನನ್ನನ್ನು ಕರೆಸಿಕೊಂಡಿದ್ದರು. ಈ ಪುಸ್ತಕ ಅವರ ಮಡಿಕೇರಿ ಸಾಹಿತ್ಯ ಸಮ್ಮೇಳನದ ಪ್ರಬಂಧದ ಪರಿಷ್ಕೃತ ರೂಪ. ಅದರ ಪರಿಷ್ಕರಣದ ಸಂದರ್ಭದಲ್ಲಿ ಅವರಿಗೆ ಸಹಕರಿಸಿದವರು ನೀವೇ ಅಲ್ಲವೆ? ಐವತ್ತೈದು ವರ್ಷಗಳ ಅನಂತರ ಪುಸ್ತಕರೂಪದಲ್ಲಿ ಬಂದುದಾಗಿತ್ತು ಅದು. ಅದನ್ನು ಬಿಡುಗಡೆಗೊಳಿಸಿ ಮಾತಾಡುವ ಅವಕಾಶ ನನಗೆ ದೊರೆತಿತ್ತು. ಬ್ಯಾಂಕ್ ಮ್ಯಾನೇಜರರಾಗಿದ್ದ ಪೊಳಲಿ ಬಾಲಕೃಷ್ಣ ಶೆಟ್ಟಿಯವರು ನನ್ನನ್ನು ಕರೆಸಿಕೊಂಡಿದ್ದರು. ಮಣಿಪಾಲ ಸಾಹಿತ್ಯ ಸಂಘದಲ್ಲಿ ಕಾರ್ಯಕ್ರಮ ನಡೆಯಿತು. ಆಗ ಅವರನ್ನು ನೋಡುವುದಕ್ಕಾಗಿ ಅವರ

---

5. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರದಿಂದ ನೀಡಲಾಗುವ ಸೇಡಿಯಾಪು ಪ್ರಶಸ್ತಿಯನ್ನು 1999ರಲ್ಲಿ ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ ನೀಡಿ ಗೌರವಿಸಲಾಯಿತು. ಇದು ಕೇಂದ್ರದಿಂದ ನೀಡಲಾದ ಮೂರನೆಯ ಸೇಡಿಯಾಪು ಪ್ರಶಸ್ತಿ –ಸಂ.

ಮನೆಗೆ ನೀವೇ ಕರೆದುಕೊಂಡು ಹೋಗಿದ್ದಿರಿ. ಆಗ ನಾನು ಅವರಲ್ಲಿ 'ಉಡುಪಿಗೆ ಬಂದ ಮೇಲೆ ಕೃಷ್ಣನ ದೇವಸ್ಥಾನಕ್ಕೆ ಹೋದ ಹಾಗೆ ನಿಮ್ಮನ್ನು ನೋಡದೆ ಹೋಗುವುದಕ್ಕೆ ಇಷ್ಟಪಡುವುದಿಲ್ಲ. ನಿಮ್ಮನ್ನು ನೋಡಿದರೆ ದೇವಸ್ಥಾನ ನೋಡಿದ ಹಾಗೆ' ಎಂದು ಲೋಕಾಭಿರಾಮರೂಪದಲ್ಲಿ ಹೇಳಿದೆ. ಆಗ ಅವರು 'ನೀವು ಹೇಳಿದ ಮಾತು ನಿಜ ನೋಡಿ. ನೀವು ದೇವಸ್ಥಾನ ನೋಡುತ್ತೀರಿ. ಆದರೆ ದೇವಸ್ಥಾನ ನಿಮ್ಮನ್ನು ನೋಡುವುದಿಲ್ಲ; ಹಾಗೆ ನೀವು ನನ್ನನ್ನು ನೋಡುತ್ತೀರಿ. ಆದರೆ ನಾನು ನಿಮ್ಮನ್ನು ನೋಡಲಿಕ್ಕಾಗುವುದಿಲ್ಲ ನೋಡಿ' ಎಂದರು. ತಾವು ಕಣ್ಣು ಕಳೆದುಕೊಂಡ-ದ್ದನ್ನು ಬಹಳ ಸೂಕ್ಷ್ಮವಾಗಿ, ಆದರೆ ಬಹಳ ಮೊನಚಾಗಿ – ನಮಗೆ ಕಣ್ಣೀರು ಬರಬೇಕು ಹಾಗೆ – ಮಾತಾಡಿದರು. ಅಂತಹ ಅಂತರಂಗಸೂಕ್ಷ್ಮತೆಯುಳ್ಳ ಹಿರಿಯ ಮನುಷ್ಯರು. ಅವರ ಆಳವಾದ ವಿದ್ವತ್ತೆ, ಕವಿಪ್ರತಿಭೆ ನನ್ನನ್ನು ಆಕರ್ಷಣೆ ಮಾಡಿತ್ತು. ಈಗಲೂ ನಾನು ವಿದ್ವಾಂಸರನ್ನು ನೆನಪುಮಾಡಿಕೊಳ್ಳುವಾಗ ಸೇಡಿಯಾಪು ಅವರನ್ನು ನೆನಪಿಸಿಕೊಳ್ಳುತ್ತೇನೆ. ಅವರ ಹೆಸರಿನ ಪ್ರಶಸ್ತಿ ನನಗೆ ದೊರಕಿದ್ದು ನಿಜವಾಗಿ ನನಗೆ ಹೆಮ್ಮೆಯ ವಿಚಾರ.

**ಪಾದೇಕಲ್ಲು:** ತುಳುನಿಘಂಟು ವಿಷಯವನ್ನು ಹೇಳಿದಿರಿ. ಅದರ ಬಗ್ಗೆ ನಿಮ್ಮ ಅಭಿಪ್ರಾಯ ಏನು? ಆ ನಿಘಂಟು ರಚನೆ ಒಳ್ಳೆ ಶ್ರಮದಿಂದ ಆಗಿದೆ. ನಿಘಂಟು-ರಚನೆಯ ಶ್ರಮವನ್ನು ನಿಮ್ಮಷ್ಟು ತಿಳಿದವರು ಬೇರೆಯವರು ಕರ್ನಾಟಕದಲ್ಲಿರಲಿಕ್ಕಿಲ್ಲ.

**ಜಿ.ವೆಂ.:** ತುಳುನಿಘಂಟು ವಿಶಿಷ್ಟವಾದ ನಿಘಂಟು. ಅದು, ನಿಘಂಟು ಹೇಗೆ ತಯಾರಾಗಬೇಕೋ ಹಾಗಾಗಿದೆ; ಅದರ ಬಗ್ಗೆ ಸಂದೇಹವೇನೂ ಇಲ್ಲ. ಆದರೆ ಒಂದು ಅನುಮಾನ ಏನು ಬಂತು ಎಂದರೆ, ತುಳುನಿಘಂಟು ಕ್ಷೇತ್ರಕಾರ್ಯವನ್ನೇ ಆಧರಿಸಿ ಸಿದ್ಧಗೊಂಡುದಾದರೂ ತುಳುವಿನಲ್ಲಿ ಇರತಕ್ಕ ಎಲ್ಲ ಶಬ್ದಗಳನ್ನು ನಿಘಂಟ-ನಲ್ಲಿ ಸೇರಿಸಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಯಾಕೆಂದರೆ, ಆಧುನಿಕರಾದ ತುಳುವರು ಕನ್ನಡವನ್ನು ಚೆನ್ನಾಗಿ ಬಲ್ಲವರು. ಆ ಪರಿಸರದಲ್ಲಿ ಶಾಲೆಗಳ ಭಾಷೆ ಕನ್ನಡ. ಆದುದರಿಂದ ತುಳುವಿನ ಗ್ರಾಮೀಣ ಪ್ರದೇಶದ ಮಾತುಕತೆ ಇತ್ತೀಚೆಗೆ ತೀವ್ರವಾದ ಬದಲಾವಣೆಗೂ ಗುರಿಯಾಗಿರಬಹುದು. – ಬಹುಶಃ ಕನ್ನಡಕ್ಕಿಂತ ಹಳೆಯದೋ ಎನ್ನುವ ಭಾಷೆ ತುಳು – ಈಗ ಹೀಗಿರುವುದರಿಂದ ಹಿಂದಿನ ಕಾಲದ ಗ್ರಾಮೀಣ ಪ್ರದೇಶದ ತುಳುವಿನ ಎಲ್ಲ ಪದಗಳು ನಿಘಂಟನಲ್ಲಿ ಬಂದಿಲ್ಲದಿರುವ ಸಾಧ್ಯತೆಯಿದೆ. ಈ ವಿಷಯ ನನಗೆ ಒಂದೆರಡು ಕಡೆಗಳಲ್ಲಿ ಗಮನಕ್ಕೆ ಬಂತು. ನನಗೆ 'ಅಳಿಯ' ಪದ ವಿಶ್ಲೇಷಣೆ ಮಾಡಬೇಕಾಗಿ ಬಂತು. ತುಳುನಿಘಂಟನಲ್ಲಿ 'ಅಳಿಯ' ಎಂದೇ ಇಟ್ಟುಕೊಂಡಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ 'ಮರ್ಮಯೆ' ಎಂಬ ಪದ ಇದೆ ಅಂತ ಜನ ನನಗೆ ಪತ್ರ ಬರೆದು ಆ ಪದವನ್ನು ಬರೆದು ಕಳುಹಿಸಿದ್ದರು. ಆರು ಸಂಪುಟಗಳಲ್ಲಿ ಸಂಪನ್ನವಾದ ತುಳುನಿಘಂಟುವಿನಲ್ಲಿ ಸೇರದ ಪದಗಳನ್ನು ಕೂಡಿಸಿ ಒಂದು ಪೂರಕ ಸಂಪುಟವನ್ನು ಹೊರತರಬೇಕಾಗಿತ್ತು. ಆದರೆ ಈಗ ಆ ಯೋಜನೆಯನ್ನು ಮುಚ್ಚಿಬಿಟ್ಟಿದ್ದಾರೆ ಅನ್ನುತ್ತೆ.

**ಪಾದೇಕಲ್ಲು:** ತುಳುನಿಘಂಟು ಯೋಜನೆ ನಿಂತಿದೆ. ಅದು ಸರಕಾರದ ಅನುದಾನ ಪಡೆದು ಕಾಲಮಿತಿಯೊಳಗೆ ಪೂರೈಸಬೇಕಾಗಿದ್ದ ಯೋಜನೆಯಾಗಿತ್ತು. ಆದರೆ ಅದರ ಸಂಪಾದಕರಾದ ಡಾ. ಉಪಾಧ್ಯಾಯರ ಬಳಿ ಇನ್ನೂ ಒಂದು ಸಂಪುಟ ರಚನೆ ಮಾಡುವಷ್ಟು ಪದಗಳ ಸಂಗ್ರಹ ಇದೆ ಎಂದು ಹೇಳುತ್ತಾರೆ. ಆದರೆ ಆ ಮಾಹಿತಿಗಳನ್ನು ನಿಘಂಟುರೂಪಕ್ಕೆ ತರಲಾಗಿಲ್ಲ. ಡಾ. ಉಪಾಧ್ಯಾಯರು ಸಂಕ್ಷಿಪ್ತ ತುಳು-ಕನ್ನಡ ಶಬ್ದಕೋಶವೊಂದನ್ನು ಅನಂತರ ಸಿದ್ಧಪಡಿಸಿದ್ದು ಅದು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಿಂದ ಪ್ರಕಟಗೊಂಡಿದೆ.

**ಜಿ.ವೆಂ.:** ಯಾವುದೇ ನಿಘಂಟು ಆಗಲಿ, ಪರಿಷ್ಕೃತವಾಗುತ್ತಲೇ ಇರಬೇಕಾಗುತ್ತದೆ. ಹಾಗೆಯೇ ತುಳುನಿಘಂಟನ್ನಾದರೂ ಇನ್ನೂ ಪರಿಷ್ಕಾರ ಮಾಡಬೇಕಾಗಿದೆ. ಸಣ್ಣ ಸಮಿತಿ ಮಾಡಿ ಅದನ್ನು ಪೂರೈಸಿದರೆ ಪಕ್ಕಾ ನಿಘಂಟು ಸಿದ್ಧವಾಗುತ್ತದೆ. ಇಂಥ ಪ್ರಾದೇಶಿಕ ಭಾಷೆಯನ್ನು ಅಚ್ಚುಕಟ್ಟಾಗಿ ಹಿಡಿದಿಡುವುದಕ್ಕೆ ಆ ನಿಘಂಟು ಒಳ್ಳೆ ಕೆಲಸ ಮಾಡುತ್ತದೆ. ನಾನು ಮೆಚ್ಚಿಕೊಂಡೆ. ತುಳುನಿಘಂಟು ರಚನೆಯನ್ನು ಮೆಚ್ಚಿಕೊಂಡು ನನ್ನ ಪುಸ್ತಕವೊಂದರಲ್ಲಿ ಒಂದು ಲೇಖನವನ್ನೂ ಬರೆದಿದ್ದೇನೆ. ಈ ನಿಘಂಟು ಸಂಪಾದನೆಯ ಕಾರ್ಯದಲ್ಲಿ ಬಹುಭಾಷಾವಿದರಾದ ಉಪಾಧ್ಯಾಯ ದಂಪತಿಗಳು ಕಷ್ಟಪಟ್ಟು ಕೆಲಸ ಮಾಡಿದ್ದಾರೆ. ಎ. ವಿ. ನಾವರಡಂತಹ, ನಿಮ್ಮಂತಹ, ಪದ್ಮನಾಭ ಕೇಕುಣ್ಣಾಯರಂತಹ ಯುವಕರು ಆ ಯೋಜನೆಯಲ್ಲಿ ಕೆಲಸ ಮಾಡಿದ್ದೀರಷ್ಟೆ. ತುಳುವಿನಲ್ಲೂ ಹಲವು ರೀತಿಯ ನಿಘಂಟುರಚನೆಗೆ ಸಾಕಷ್ಟು ಅವಕಾಶಗಳಿವೆ. ಯುವ ವಿದ್ವಾಂಸರು ಅಂತಹ ಅವಕಾಶಗಳನ್ನು ಉಪಯೋಗಿಸಿಕೊಳ್ಳಬೇಕು. ಶ್ರಮಪಟ್ಟು-ಕೊಂಡು ಇಂತಹ ಕೆಲಸಕ್ಕೆ ಬೇಕಾಗುವ ತಜ್ಞತೆಯನ್ನು ಮೆಯ್ಗೂಡಿಸಿಕೊಳ್ಳಬೇಕು.

**ಪಾದೇಕಲ್ಲು :** ನಿಮ್ಮ ಮತ್ತು ಕಡೆಂಗೋಡ್ಲು ಅವರ ಸಂಬಂಧ-ವಿಶ್ವಾಸಗಳ ಬಗೆಗೆ ಸ್ವಲ್ಪ ವಿವರಿಸುವಿರಾ?

**ಜಿ.ವೆಂ.:** ಕಡೆಂಗೋಡ್ಲು ಶಂಕರ ಭಟ್ಟರು ಕವಿಗಳಲ್ಲದೆ ಪತ್ರಕರ್ತರೂ ಆಗಿದ್ದುದರಿಂದ ಅವರ ಚಟುವಟಿಕೆಗಳ ಬಗ್ಗೆ ವಾರ್ತಾಪತ್ರಗಳಲ್ಲಿ ಬರುತ್ತಾ ಇತ್ತು. ಮಕ್ಕಳ ಸಾಹಿತ್ಯದ ಕ್ಷೇತ್ರದಲ್ಲಿ ಕೆಲಸ ಮಾಡಿದ ಬೋಳಂತಕೋಡಿ ಶಂಕರಭಟ್ಟರನ್ನು ನೋಡಿ ಸಂತೋಷವಾಯಿತು. ಇಲ್ಲಿ ಕಡೆಂಗೋಡ್ಲು ಅವರ ನೆನಪು ಬಂದಾಗ ಇನ್ನೊಬ್ಬರು ಶಂಕರ ಭಟ್ಟರೂ ಸ್ಮರಣೆಗೆ ಬಂದರು.

ಕಡೆಂಗೋಡ್ಲು ಅವರು 'ನಲ್ಮೆ' ಓದಿದ ಮೇಲೆ ಅವರು ದೊಡ್ಡ ಕವಿ ಎಂದು ನಮ್ಮತ್ತ ಕಡೆಗೆ ಗೊತ್ತಾಯಿತು. ಅವರನ್ನು ಮಾತಾಡಿಸಬೇಕೆಂದು ಮನಸ್ಸಿತ್ತು. ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ಬೆಲೆ ಕಟ್ಟುವಾಗ ಆಗಿಂದಾಗ ಸೇರುತ್ತಾ ಇದ್ದುದುಂಟು. ಹಾಗೆ ನಮ್ಮೊಳಗೆ ಪ್ರೀತಿ ವಿಶ್ವಾಸಗಳು ಬೆಳೆದುವು. ಕಡೆಂಗೋಡ್ಲು ಶಂಕರ ಭಟ್ಟರನ್ನು ನಾನು ಆತ್ಮೀಯವಾಗಿ ಬಲ್ಲೆ. ಅವರ ಪುಸ್ತಕಗಳನ್ನು, ಕಾದಂಬರಿ, ಸಂಪಾದಕೀಯ ಲೇಖನಗಳನ್ನು ಓದಿ ಮೆಚ್ಚಿಕೊಂಡಿದ್ದೇನೆ. ಅವರು ತುಂಬ ಒಂದೆ ಇಲ್ಲುವ ಮನುಷ್ಯ: ತಮ್ಮನ್ನೆಂದೂ ತಾವಾಗಿಯೇ ಮುಂದೆ ತಳ್ಳಿಕೊಂಡವರಲ್ಲ. ಆದರೆ

ಅವರಲ್ಲಿ ಎಂಥ ಪ್ರತಿಭೆ ಇತ್ತು ಎಂಬುದು ನಮ್ಮ ಜನಕ್ಕೆ ಪರಿಚಯ ಆಗಿಲ್ಲ. ಅವರ ಬಗ್ಗೆ ಎಷ್ಟು ಪ್ರಚಾರ ಆಗಬೇಕೋ ಅದು ಇನ್ನೂ ಈ ಕಡೆ ಆಗಿಲ್ಲ. ಆದರೆ ದಕ್ಷಿಣ ಕನ್ನಡದಲ್ಲಿ ಅವರ ಬಗ್ಗೆ ಒಳ್ಳೆಯ ವಿಶ್ವಾಸ ಇದೆ ಎಂದು ನಂಗೊತ್ತು, ಅವರ ಶಿಷ್ಯರನ್ನೂ ಅಭಿಮಾನಿಗಳನ್ನು ನಾನು ಬಲ್ಲೆ. ಅವರಂತೂ ಅವರ ಬಗ್ಗೆ ತುಂಬ ವಿಶ್ವಾಸ ಇಟ್ಟುಕೊಂಡಿದ್ದಾರೆ. ಕನ್ನಡ ಅಧ್ಯಾಪಕರಾಗಿ ಮಾತ್ರವಲ್ಲ, ಪತ್ರಕರ್ತರಾಗಿ ಅವರು ಪ್ರಸಿದ್ಧರು. ಮಂಗಳೂರಿನಿಂದ ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ ಪತ್ರಿಕೆ 'ರಾಷ್ಟ್ರಬಂಧು'. ಅದು ವಾರಪತ್ರಿಕೆ. ತಿ. ತಾ. ಶರ್ಮರು ಪತ್ರಕರ್ತರಾಗಿ ಅನೇಕ ಹೊಸ ಪಾರಿಭಾಷಿಕ ಪದಗಳನ್ನು ಟಂಕಿಸಿದವರು. ಕಡೆಂಗೋಡ್ಲು ಅವರೂ ಹೀಗೆಯೇ. ಅವರ ಪತ್ರಿಕೆಯ ಬರವಣಿಗೆಯನ್ನು ಹೊಸ ಶಬ್ದಗಳ ದೃಷ್ಟಿಯಿಂದ ಸಮಗ್ರವಾಗಿ ಪರಿಶೀಲಿಸಬೇಕಾಗಿದೆ. ಅವರು ಜೀವಿಸಿದ್ದ ಕಾಲದಲ್ಲಿ ಈಗಿನಂತೆ ವಿವಿಧ ಮಟ್ಟದ ಪ್ರಶಸ್ತಿಗಳಿರಲಿಲ್ಲ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೇ ಅವರಿಗೆ ದೊರಕಿದ ದೊಡ್ಡ ಗೌರವ.

**ಪಾದೇಕಲ್ಲು:** ಕಾರವಾರದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ನೀವು ಅವರನ್ನು ಒತ್ತಾಯಿಸಿ ಅವರು ಅಧ್ಯಕ್ಷ ಪದವಿಯನ್ನು ಸ್ವೀಕಾರಮಾಡಿದರು. ನೀವು ಒಂದು ರೀತಿಯಲ್ಲಿ ಮುಷ್ಕರ ಮಾಡಿದ ಹಾಗೆ ಮಾಡಿದಿರಿ – ಎಂದು ಕೇಳಿ ಬಲ್ಲೆವು.

**ಜಿ. ವೆಂ.:** ಅದಕ್ಕೆ ಕಾರಣ ಉಂಟು. ಸಾಹಿತ್ಯ ಪರಿಷತ್ತಿನಲ್ಲಿ, ಅದರ ಹಿಂದಿನ ವರ್ಷ ತುಮಕೂರಿನಲ್ಲಿ ನಡೆದ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗಿತ್ತು ಅಂತ ನನಗೆ ಗೊತ್ತಿತ್ತು. ಆದರೆ ಯಾವುದೋ ಕಾರಣದಿಂದ ಒಂದು ಹಂತದ ಆಯ್ಕೆ ಆದ ಮೇಲೆಯೂ ಅದು ತಪ್ಪಿ ಹೋಯಿತು. ತಪ್ಪಿ ಹೋದದ್ದು ನನ್ನ ಮನಸ್ಸಿಗೆ ತುಂಬ ಬೇಜಾರನ್ನುಂಟುಮಾಡಿತು. ಅವರಿಗೆ ಸಹಜವಾಗಿ, ಯೋಗ್ಯತೆಗೆ ಮಾನ್ಯತೆಯಾಗಿ ಬರಬೇಕಾಗಿದ್ದದ್ದು ತಪ್ಪಿ ಹೋಯಿತಲ್ಲ ಎಂದು ಬೇಸರವಾಗಿತ್ತು. ಅನಂತರ ನಾನು ಪರಿಷತ್ತಿನ ಅಧ್ಯಕ್ಷನಾದಾಗ ಮೊದಲ ಬಾರಿ ನಡೆಯುವ ಸಮ್ಮೇಳನಕ್ಕೇ ಅವರನ್ನು ಅಧ್ಯಕ್ಷರನ್ನಾಗಿ ಮಾಡಬೇಕು, ಆ ಮೂಲಕ ಅವರನ್ನು ಗೌರವಿಸಬೇಕು, ಮತ್ತು ಹಿಂದಿನ ಬಾರಿ ಆದ ಪ್ರಮಾದವನ್ನು ಸರಿಪಡಿಸಬೇಕು ಎನ್ನುವ ಉದ್ದೇಶ ನನಗಿತ್ತು. ಹಠ ಹಿಡಿದು ಅದನ್ನು ಸಾಧಿಸುವುದಕ್ಕೆ ಪರಿಷತ್ತಿನಲ್ಲಿ ತೀರ್ಮಾನ ಮಾಡಿ ಅವರನ್ನೆ ಅಧ್ಯಕ್ಷತೆಗೆ ಆರಿಸುವುದು ಎಂದು ಯೋಚಿಸಿದ್ದೆ. ದಾಮೋದರ ಐತಾಳ್ ಅವರು ಕಾರವಾರದಿಂದ ಬಂದಿದ್ದರು, ಎಂ. ಬಿ. ಭಟ್ ಅಡ್ವೊಕೇಟ್ ಇದ್ದರು. ಅವರಿಬ್ಬರೂ ಬಂದು ಸಮ್ಮೇಳನವನ್ನು ಆ ವರ್ಷ ಕಾರವಾರದಲ್ಲಿ ಮಾಡಬೇಕು ಎಂದರು. ನಾನು ಒಪ್ಪಿಕೊಂಡೆ. ಆದರೆ ನಾನು ಮೊದಲು ನಿಶ್ಚಯಿಸಿದಂತೆ ಶಂಕರ ಭಟ್ಟರಿಗೆ ಅಧ್ಯಕ್ಷತೆಯ ಸ್ಥಾನವನ್ನೊಪ್ಪಿಸಬೇಕೆಂದು ಮಂಗಳೂರಿಗೆ ಹೋದೆ. ನಾನು ಅವರ ಮನೆಗೆ ಹೋಗಿ ಶಂಕರ ಭಟ್ಟರನ್ನು ಒಪ್ಪಿಸುವುದಕ್ಕೆ ಪ್ರಯತ್ನ ಮಾಡಿದರೆ ಅವರು ಬಡಪೆಟ್ಟಿಗೆ ಒಪ್ಪಲಿಲ್ಲ. 'ನಿಮ್ಮ ಪರಿಷತ್ತಿನ ಸಂಬಂಧ ಸಾಕು ವೆಂಕಟಸುಬ್ಬಯ್ಯ ಅವರೆ, ಬೇರೆ ನೀವು ಏನು ಬೇಕಾದರೂ ಹೇಳಿ

ಮಾಡುತ್ತೇನೆ' ಎಂದರು. ನನಗೆ ಬಹಳ ಹಿಂಸೆ ಆಯಿತು. ಅವರು ಹೇಳುತ್ತಾ ಇದ್ದದ್ದು ಎಷ್ಟು ಗಟ್ಟಿಯಾಗಿತ್ತು ಅಂದರೆ ಅವರು ಎಷ್ಟು ಮಾತ್ರಕ್ಕೂ ಜಗ್ಗಲ್ಲಿ ಅಷ್ಟು ನನ್ನದು ಗಟ್ಟಿಯಾಗಿತ್ತು. 'ನಾನು ಬರಿಕೈಯ್ಯಲ್ಲಿ ವಾಪಾಸು ಹೋಗಬೇಕು ಹಾಗಾದರೆ' ಎಂದೆ. 'ಆ ವಿಷಯ ಅಲ್ಲಿಗೆ ಆಗಿಹೋಯಿತು. ಇನ್ನು ಮುಂದಿನ ವಿಷಯ – ಈಗ ಊಟ ಮಾಡೋಣ' ಅಂತ ಹೇಳಿ ಊಟಕ್ಕೆ ಕೂರಿಸಿದರು. ಕೈಕಾಲು ತೊಳೆದು ಎಲೆಯ ಮುಂದೆ ಕುಳಿತೆವು. ಊಟಕ್ಕೆ ಕುಳಿತುಕೊಂಡು ಆಪೋಶನ ತೆಗೆದುಕೊಳ್ಳಬೇಕು ಅನ್ನುವಾಗ 'ತಗೊಳ್ಳೋಣ' ಅಂದರು. 'ನಾನು ಇದನ್ನು ತೆಗೆದುಕೊಳ್ಳಬೇಕಾದರೆ ನೀವು ಅಧ್ಯಕ್ಷರಾಗಿ ಒಪ್ಪಿಕೊಂಡು ಸಮ್ಮೇಳನಕ್ಕೆ ಬರಬೇಕು. ಇಲ್ಲದಿದ್ದರೆ ಇಲ್ಲಿಂದಲೇ ಹೊರಟು ಹೋಗುತ್ತೇನೆ' ಅಂದೆ. 'ಒಳ್ಳೆ ಬ್ರಾಹ್ಮಣ ಕಣಯ್ಯ ನೀನು' ಎಂದರು. 'ಇಕ್ಕಟ್ಟಿಗೆ ಸಿಕ್ಕಿಸುತ್ತೀರಲ್ಲ ನನ್ನನ್ನು. ಆಯಿತು, ಒಪ್ಪಿದೆ. ತಕೊಳ್ಳಿ, ಮೊದಲು ಊಟ ಮಾಡಿ' ಅಂದರು. – ಹೀಗೆ ಅವರು ಒಪ್ಪಿದ ಮೇಲೆ ಊಟ ಮಾಡಿದೆ. ಆಮೇಲೆ ಸಂತೋಷದಿಂದ ಮಿಕ್ಕ ಏರ್ಪಾಡು ಮಾಡಿದೆ.[6]

ಮಿಕ್ಕ ಇಬ್ಬರು ನನಗೆ ಎಷ್ಟು ಆತ್ಮೀಯರಾದರೋ ಅದಕ್ಕಿಂತ ಹೆಚ್ಚಾಗಿ ಆ ಸಮ್ಮೇಳನ ಸಂದರ್ಭದಲ್ಲಿ ಕಡೆಂಗೋಡ್ಲು ನಡೆದುಕೊಂಡ ರೀತಿ, ಅವರ ಮಾತು ನನಗೆ ಹೆಚ್ಚು ಇಷ್ಟವಾಯಿತು. ಆ ಸಮ್ಮೇಳನ ತುಂಬ ಅಚ್ಚುಕಟ್ಟಾಗಿ ನಡೆಯಿತು. ನನಗೆ ಇನ್ನೂ ನೆನಪಿದೆ – ಸಮ್ಮೇಳನದಲ್ಲಿ ಒಂದು ಸ್ವಾರಸ್ಯದ ವಿಷಯ ನಡೆಯಿತು. ಆ ಸಮ್ಮೇಳನದಲ್ಲಿ ಕೆ. ಎಸ್. ನಿಸಾರ್ ಅಹಮ್ಮದ್ ಅವರನ್ನು ಕರೆದು 'ಒಂದು ಪದ್ಯ ಓದು' ಎಂದು ಹೇಳಿದೆ. 'ಯಾವ ಪದ್ಯ ಓದಬೇಕು, ನೀವೇ ಹೇಳಿ ಸಾರ್' ಎಂದರು. 'ಕುರಿಗಳು ಸಾರ್ – ಓದು' ಎಂದು ಓದಿಸಿದೆ. ಅವರು ಆ ಪದ್ಯವನ್ನು ಓದಿದರು. ಸಮ್ಮೇಳನ ಪೂರೈಸುವುದರೊಳಗೆ, ಬೆಳಗಾಗುವುದರೊಳಗೆಂಬ ಹಾಗೆ ನಿಸಾರ್ ಅಹಮದ್ ಅವರು ಕನ್ನಡದ ದೊಡ್ಡ ಕವಿ ಆಗಿಬಿಟ್ಟಿದ್ದರು. ಹೋದಲ್ಲಿ ಬಂದಲ್ಲಿ ಜನ ಆ ಪದ್ಯವನ್ನು ನೆನಪಿಸಿಕೊಂಡು 'ಕುರಿಗಳ್ ಸಾರ್' ಎಂದು ಹೇಳತೊಡಗಿದರು. ಸಮ್ಮೇಳನ ಮುಗಿದ ಮೇಲೆ ನಮ್ಮ ಸಾಹಿತ್ಯಪ್ರಿಯರ ಗುಂಪನ್ನು ಗೋಕರ್ಣ ಮೊದಲಾದೆಡೆಗಳಿಗೆ ಕರೆದುಕೊಂಡು ಹೋಗಿ ಎಲ್ಲ ತೋರಿಸಿದೆ. ಬಸ್ ಮಾಡ್ಕೊಂಡು ಬಂದಿದ್ದೆ, ದಕ್ಷಿಣ ಕನ್ನಡದ ಮತ್ತು ಉತ್ತರ ಕನ್ನಡದ ರೀತಿ ನೀತಿಯ ಪರಿಚಯ ಮಾಡಿಸಿದೆ. ಅಂತೂ ತುಂಬ ಸೊಗಸಾದ ಸಮ್ಮೇಳನ ಆಯಿತು ಕಾರವಾರದಲ್ಲಿ.

---

6. ಕಾರವಾರದಲ್ಲಿ 1965ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕಡೆಂಗೋಡ್ಲು ಶಂಕರಭಟ್ಟರು ಅಧ್ಯಕ್ಷರಾಗಿದ್ದರು. ವಿಶೇಷವೇನೆಂದರೆ ಅದೇ ಸ್ಥಳದಲ್ಲಿ 1931ರಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಮುಳಿಯ ತಿಮ್ಮಪ್ಪಯ್ಯನವರು ಅಧ್ಯಕ್ಷರಾಗಿದ್ದರು. ಕಡೆಂಗೋಡ್ಲು ಅವರು ತಿಮ್ಮಪ್ಪಯ್ಯನವರ ಕಿರಿಯ ಬಂಧುಗಳು; ಒಂದು ರೀತಿಯಲ್ಲಿ ಅವರ ಶಿಷ್ಯರು. ಮಂಗಳೂರಿನಲ್ಲಿ ತಿಮ್ಮಪ್ಪಯ್ಯನವರ ಮನೆಯಲ್ಲಿಯೇ ಕಡೆಂಗೋಡ್ಲು ಅವರು ಹೈಸ್ಕೂಲ್ ವಿದ್ಯಾಭ್ಯಾಸ ಪೂರೈಸಿದರು. ಹೀಗೆ ಗುರುಶಿಷ್ಯರಿಬ್ಬರೂ ಬೇರೆ ಬೇರೆ ವರ್ಷಗಳಲ್ಲಿ ಒಂದೆಡೆಯಲ್ಲೇ ನಡೆದ ಸಮ್ಮೇಳನಗಳ ಅಧ್ಯಕ್ಷತೆಯ ಗೌರವವನ್ನು ಪಡೆದಿರುವುದು ವಿಶಿಷ್ಟವಾಗಿದೆ. –ಸಂ.

ಇದಾದ ಮೇಲೆ ನೆನಪಿಸಿಕೊಳ್ಳುವುದಾದರೆ, ಟಿ. ಎಂ. ಎ. ಪೈ ಮತ್ತು ವೈಕುಂಠ ಬಾಳಿಗಾ ಅವರಿಬ್ಬರ ಪರಿಚಯ ನನಗಿತ್ತು. ವೈಕುಂಠ ಬಾಳಿಗಾ ಅವರು ಮಂಗಳೂರಿನಲ್ಲಿ ವಕೀಲರಾಗಿ ಹೆಸರು ಮಾಡಿದ್ದರು. ಅವರಂತಹ ವ್ಯಕ್ತಿಗಳು ಶಾಸನಸಭೆಗಳಿಗೆ ನಿಜವಾಗಿ ಭೂಷಣಪ್ರಾಯರು. ರಾಜ್ಯದ ಕಾನೂನುಗಳನ್ನು ಮಂಜೂರು ಮಾಡುವ ಶಾಸನಸಭೆಯಲ್ಲಿ ವೈಕುಂಠ ಬಾಳಿಗಾ ಅವರು ಸ್ಪೀಕರ್ ಆಗಿದ್ದರು. ದೊಡ್ಡ ಮನುಷ್ಯ; ಗಂಭೀರವಾದ ಮನುಷ್ಯ. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯಲ್ಲಿದ್ದೆ. ನಮ್ಮ ಕಾರ್ಯಸಮಿತಿ ಮಂಗಳೂರಿಗೆ ಬಂದಾಗ ಅವರು ತಮ್ಮ ಮನೆಗೆ ಕರೆದುಕೊಂಡು ಹೋಗಿ ಉಪಚಾರ ಮಾಡಿ ಒಂದು ಗಂಟೆ ನಮ್ಮ ಜೊತೆ ಮಾತನಾಡಿದ್ದರು. ಕನ್ನಡ ನಾಡಿನ ಏಳಿಗೆಯ ಬಗ್ಗೆ ಒಬ್ಬ ರಾಜಕಾರಣಿಯಾಗಿದ್ದವರು ಏನೇನು ಯೋಜನೆಗಳನ್ನು ಇಟ್ಟುಕೊಂಡಿದ್ದರು, ಚಿಂತನೆಗಳನ್ನು ಮಾಡಿದ್ದರು ಅನ್ನುವುದನ್ನು ಅವರ ಮಾತಿನ ಮೂಲಕ ನಾನು ತಿಳಿದುಕೊಂಡೆ. ಅಷ್ಟು ದಿನ ಕನ್ನಡ ನಾಡು ಒಂದಾಗಿರಲಿಲ್ಲ ಅವರು ರಾಜಕಾರಣದ ಕ್ಷೇತ್ರಕ್ಕೆ ಬಂದ ಸಮಯದಲ್ಲಿ. ಏಕೀಕರಣದ ಸಮಯದಲ್ಲಿ ಅವರು ಮುಖ್ಯಸ್ಥರಾಗಿ ಏನೇನಾಗಬೇಕು ಕನ್ನಡಕ್ಕೆ ಎಂದು ಮೈಸೂರಿನ ಜನಕ್ಕೆ ಇಲ್ಲದಂತಹ ತಿಳಿವಳಿಕೆಗಳನ್ನು ಹೊಂದಿದ್ದರು. ಅವರ ವ್ಯಕ್ತಿತ್ವ ನನ್ನ ಕಣ್ಣ ಮುಂದೆ ಈಗಲೂ ನಿಲ್ಲುತ್ತಾ ಇದೆ. ಎತ್ತರವಾದ ಮನುಷ್ಯ ಅವರೆಂಬುದರಲ್ಲಿ ಸಂದೇಹವೇನೂ ಇಲ್ಲ. ಅಂತಹ ರಾಜಕಾರಣಿಗಳು ನಿಜವಾಗಿ ನಮ್ಮ ದೇಶಕ್ಕೆ ಇಂದು ಬೇಕು.

ಟಿ. ಎಂ. ಎ. ಪೈ ಅವರನ್ನು ಕಾಣಲು ಇದೇ ಸಂದರ್ಭದಲ್ಲಿ ಅವರ ಮಣಿಪಾಲದ ಮನೆಗೆ ಹೋಗಿದ್ದೆವು. ಅವರು ನಮ್ಮನ್ನು ಅವರ ಮನೆಯ ಟೆರೇಸಿಗೆ ಕರೆದುಕೊಂಡು ಹೋಗಿ ಮಣಿಪಾಲದ ಸುತ್ತ ಜಾಗ ತೋರಿಸಿ 'ಇದೆಲ್ಲ ನೋಡಿ-ದ್ದೀರಾ?' ಎಂದು ಕೇಳಿದರು. ನೋಡಿದರೆ ಸುತ್ತಮುತ್ತ ಎಲ್ಲೆಡೆಯೂ ಮುರಕಲ್ಲು (ಲ್ಯಾಟರೈಟ್) ತುಂಬಿದ ಬಂಜರು ಭೂಮಿ ಇತ್ತು, ಗಿಡಗಂಟೆ ಇರಲಿಲ್ಲ. ಏನೂ ಬೆಳೆದಿರಲಿಲ್ಲ. 'In another 10-15 years this is going to be a city in this place' ಎಂದರು. ನನಗೆ ಆಶ್ಚರ್ಯ ಆಯಿತು. ನಕ್ಕು ಬಿಟ್ಟು 'It is impossible' ಎಂದು ಹೇಳಿ ಹಿಂದಕ್ಕೆ ಬಂದುಬಿಟ್ಟೆ. 'ಒಂದು ನಗರ ಬರುತ್ತದೆ' ಎಂಬ ಅವರ ಮಾತನ್ನು ಕಲ್ಪನೆ ಮಾಡುವುದಕ್ಕೂ ಆಗ ಸಾಧ್ಯ ಇರಲಿಲ್ಲ. ಹತ್ತು ವರ್ಷ ಬಿಟ್ಟು ಹೋಗಿ ನೋಡಿದಾಗ ಅಲ್ಲಿ ಹಳ್ಳಗಳನ್ನು ತೆಗೆದು ಮಣ್ಣು ತುಂಬಿ ಗಿಡಗಳನ್ನು ಬೆಳೆಸಿ ನಗರ-ವನ್ನೇ ನಿರ್ಮಿಸಲಾಗಿತ್ತು. ಎಷ್ಟು ಬೇಗ ದೊಡ್ಡ ನಗರ ಮಾಡಿದರು ಎಂದರೆ ಆಶ್ಚರ್ಯ ಆಗುತ್ತದೆ ನನಗೆ. ಡೆಸರ್ಟನ್ನು ಕಾಡು ಮಾಡಿದ ಹಾಗೆ. ಆಮೇಲೆ ಅವರು 'ನಮ್ಮ ಉಡುಪಿಯ ಕಾಸು ಹೊರಗೆ ಹೋಗಬಾರದು. ನಮ್ಮಲ್ಲೇ ಇರಬೇಕು. ನಮ್ಮಿಂದ ಅವರಿಗೆ, ಅವರಿಂದ ನಮಗೆ ಹರಿದು ಎಲ್ಲೆಡೆಯೂ ಆರ್ಥಿಕ ಅಭಿವೃದ್ಧಿ ಆಗಬೇಕು. ಹಣದ ವ್ಯವಹಾರ ಹೀಗಿರಬೇಕು ವೆಂಕಟಸುಬ್ಬಯ್ಯನವರೆ' ಎಂದು ಭುಜದ ಮೇಲೆ ಕೈ ಹಾಕಿ ಹೇಳಿದ್ದರು. ಅದಕ್ಕನುಸಾರವಾಗಿಯೇ ಅವರು ಸಂಸ್ಥೆಗಳನ್ನು ಕಟ್ಟಿದರು. ಅವರು ನನಗಿಂತ ತುಂಬ ಹಿರಿಯರು. ಅವರ ವ್ಯವಹಾರ ಕೌಶಲ, ಆರ್ಥಿಕ ಚಿಂತನೆ,

ಸಾಮಾಜಿಕ ಚಿಂತನೆ ಮತ್ತು ಕರ್ತೃತ್ವಶಕ್ತಿಗೆ ಯಾರಾದರೂ ತಲೆದೂಗಲೇ ಬೇಕು. ದೇಶದ ಅಭಿವೃದ್ಧಿಯಲ್ಲಿ ಈಗಲೂ ಅವರಿಂದ ಪ್ರೇರಣೆ ಪಡೆಯಬೇಕಾಗಿದೆ.

ನಾನು ನನ್ನ ವಿದ್ಯಾರ್ಥಿಗಳನ್ನು ಕರೆದುಕೊಂಡು ಆಗಿಂದಾಗ ಉಡುಪಿ ಸುತ್ತಮುತ್ತ ಪ್ರವಾಸ ಮಾಡುತ್ತಿದ್ದೆ. ನಮ್ಮ ಮಕ್ಕಳಿಗೆ ದಕ್ಷಿಣ ಕನ್ನಡ ತೋರಿಸಬೇಕು ಎಂದು ಆ ಕಡೆಗೆ ಬರುತ್ತಿದ್ದೆ. ಒಂದು ಸಲ ಬಸ್ಸು ಮಾಡಿಕೊಂಡು 54 ಮಕ್ಕಳನ್ನು ಕರೆದುಕೊಂಡು ಬಂದಿದ್ದೆವು. ಮೂಡಬಿದರೆಗೆ ಬಂದಿದ್ದೆವು. ಅಲ್ಲಿಯ ಕಾಲೇಜಿನ ಪ್ರಾಂಶುಪಾಲರಾಗಿದ್ದವರು ತುಳುನಿಘಂಟು ಸಂಪಾದಕ ಡಾ. ಯು. ಪಿ. ಉಪಾಧ್ಯಾಯರ ಅಣ್ಣ ಪ್ರೊ. ಶ್ರೀನಿವಾಸ ಉಪಾಧ್ಯಾಯರು. ನಾವು ಬಂದದ್ದು ಯಾವುದೋ ಉದ್ದೇಶದಿಂದ. ಅವರು ನಮ್ಮನ್ನು ಬಿಡಲಿಲ್ಲ. ತಾವೇ ನಮಗೆಲ್ಲರಿಗೆ ಅವರ ಹೈಸ್ಕೂಲು ತೋರಿಸಿ ಅನಂತರ ಕಾಲೇಜಿಗೆ ಕರೆದುಕೊಂಡು ಹೋದರು. ನಮ್ಮ ಹುಡುಗರು ಕಾಲೇಜಿಗೆ ಬಂದಾಗ ಅಲ್ಲಿಯ ಹುಡುಗರು 'ನಿಮ್ಮ ಕಡೆಯ ಸಂಗೀತ ಹಾಡಿ' ಅಂದರು. ನಮ್ಮ ಹುಡುಗರು ಸೇರಿ ಒಂದು ಸಾಮೂಹಿಕ ಹಾಡು ಹಾಡಿದರು. ಅಲ್ಲಿಯವರು ಸಂತೋಷಪಟ್ಟರು. ಟಿ. ಎಂ. ಎ. ಪೈ ಅವರು ಕೂಡಾ ಅಂದು ಬಂದಿದ್ದರು ಆ ಸಭೆಗೆ. ನಾನು 'ಎಷ್ಟು ಚೆನ್ನಾಗಿದೆ ಪ್ರಾಕೃತಿಕ ಆವರಣ! ಎಲ್ಲಿಯಾದರೂ ಇಲ್ಲಿ ಉಪಾಧ್ಯಾಯರಾಗಿ ಕೆಲಸ ಕೊಟ್ಟರೆ ಇಲ್ಲಿಯೆ ಬಂದಿರುತ್ತೇನೆ' ಎಂದಿದ್ದೆ. 'ಉಪಾಧ್ಯಾಯರಾಗಿ ಯಾಕೆ, ಪ್ರಾಂಶುಪಾಲರಾಗಿ ಬನ್ನಿ. ಒಪ್ಕೊಂಡ್‌ಬಿಡಿ. ಇವತ್ತೇ ಕೆಲಸ ಕೊಡುತ್ತೇನೆ' ಎಂದರು. ನನಗೆ ಆಶ್ಚರ್ಯ ಆಯಿತು. ಆದರೆ, ಅವರು ಕರೆದರೂ ನಿಜವಾಗಿ ನಾನು ಅಲ್ಲಿಗೆ ಬರುವ ಸ್ಥಿತಿಯಲ್ಲಿ ಇರಲಿಲ್ಲ. ನನ್ನನ್ನು ಕಂಡರೆ ಇಲ್ಲಿ ನನ್ನ ಕಾಲೇಜಿನ ಆಡಳಿತ ಮಂಡಳಿಯವರಿಗೆ ಅವರ ಪುತ್ರರಿಗಿಂತ ಹೆಚ್ಚಿನ ವಿಶ್ವಾಸ ಇತ್ತು. ಆದುದರಿಂದ ಇಲ್ಲಿಂದ ಬಿಟ್ಟು ಅಲ್ಲಿಗೆ ಬರಲು ಆಗಲಿಲ್ಲ; ಆ ವಿಷಯ ಬೇರೆ. ಅಂತೂ ಟಿ. ಎಂ. ಎ. ಪೈಗಳು ಅಷ್ಟು ವಿಶ್ವಾಸದಿಂದ ಮಾತನಾಡಿದ್ದರು.

**ಪಾದೇಕಲ್ಲು**: ಪ್ರೊ. ಕು. ಶಿ. ಹರಿದಾಸ ಭಟ್ಟರಿಗೂ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು ಸಾಹಿತ್ಯ ಕಾರ್ಯಕ್ರಮ ಮಾಡುವುದಕ್ಕೆ ಟಿ. ಎಂ. ಎ. ಪೈಯವರೇ ಕಾರಣ.

**ಜಿ.ವೆಂ.**: ನನಗೆ ಗೊತ್ತಿದೆ. ಹರಿದಾಸ ಭಟ್ಟರು ಹೇಳುತ್ತಾ ಇದ್ದರು ಟಿ. ಎಂ. ಎ. ಪೈಯವರಂತಹ ಮಾದರಿ ಆಡಳಿತಗಾರರಿದ್ದರೆ ಏನು ಬೇಕಾದರೂ ಸಾಧನೆ ಮಾಡ-ಬಹುದು ಎಂಬುದಾಗಿ. ಭಟ್ಟರು ಅವರನ್ನು ನಂಬಿಕೊಂಡರು. ಪೈಗಳು ಭಟ್ಟರನ್ನು ವಿಶ್ವಾಸದಿಂದ ನಡೆಸಿಕೊಂಡರು. ಭಟ್ಟರು ಲೇಖಕರೂ ಶಿಕ್ಷಣತಜ್ಞರೂ ಅಲ್ಲದೆ ಒಳ್ಳೆಯ ಸೊಗಸಾದ ಆಡಳಿತಗಾರರಾಗಿದ್ದರು. ನನಗೆ ಬಹಳ ಪ್ರಿಯರು ಅವರು. ಎಂ.ಜಿ.ಎಂ. ಕಾಲೇಜಿನ ಪರಿಸರ ಸಾಂಸ್ಕೃತಿಕವಾಗಿ ಗುರುತಿಸಲ್ಪಟ್ಟದ್ದು ಹರಿದಾಸ ಭಟ್ಟರ ಚಟುವಟಿಕೆಗಳಿಂದ ಎಂಬುದನ್ನು ನಾನು ಬಲ್ಲೆ. ನಾಡಿನ ಎಲ್ಲೆಡೆಯ ಸಾಹಿತಿಗಳ ಸಂಪರ್ಕವಿದ್ದ ಅವರು ತಮ್ಮ ಜೊತೆಗಿದ್ದ ಹಲವರನ್ನು ಪ್ರೋತ್ಸಾಹಿಸಿ ಬೆಳೆಸಿದವರು. ನನ್ನೆದುರಿಗಿರುವ ನೀವು ಮೂವರೂ ಅವರ ನಿಕಟವರ್ತಿಗಳೇ ಆಗಿದ್ದವರೆಂಬುದು ನನಗೆ ಗೊತ್ತು.

**ಪಾದೇಕಲ್ಲು** : ನೀರ್ಪಾಜೆ ಭೀಮ ಭಟ್ಟರನ್ನು ನೆನಪು ಮಾಡಿಕೊಂಡಿರಿ. ನಮ್ಮೂರಿನಲ್ಲಿ ಅವರಿಗೆ ಸಾಹಿತಿ ಭೀಮ ಭಟ್ಟರೆಂದೇ ಹೆಸರಿತ್ತು. ಸಂಸ್ಕೃತದಲ್ಲಿ 'ಸಾಹಿತ್ಯಶಿರೋಮಣಿ' ಪದವಿ ಪಡೆದ ಅವರು ಒಳ್ಳೆಯ ವಾಗ್ಮಿ ಎಂಬ ಹೆಸರು ಗಳಿಸಿದ್ದರು. ಅವರ ಸಂಪರ್ಕ ನಿಮಗೆ ಹೇಗಾಯಿತು? ಅವರು ಸಂಸ್ಕೃತ ವಿದ್ವಾಂಸರು.

**ಜಿ.ವೆಂ.**: ನೀರ್ಪಾಜೆ ಭೀಮ ಭಟ್ಟರ ಸಂಬಂಧ, ಸಂಪರ್ಕ ಚೆನ್ನಾಗಿ ಇತ್ತು ನನಗೆ. ಅವರು ಎಲ್ಲಕ್ಕಿಂತ ಹೆಚ್ಚಾಗಿ ಕಲ್ಹಣನ ರಾಜತರಂಗಿಣಿಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದರು. ರಾಜತರಂಗಿಣಿ ಕಾಶ್ಮೀರ ಮಾತ್ರವೇ ಅಲ್ಲ, ಭಾರತದ ಇತಿಹಾಸದಲ್ಲೇ ಒಂದು ಮುಖ್ಯಗ್ರಂಥ. ಅದರ ಕನ್ನಡ ಅನುವಾದವೆಂಬುದು ಅದುವರೆಗೆ ಯಾರೂ ಮಾಡದ ಕೆಲಸವಾಗಿತ್ತು. ನೀರ್ಪಾಜೆಯವರು ಅನುವಾದಿಸಿ ಅದರ ಮೊದಲನೆ ಭಾಗವನ್ನು ಕಳುಹಿಸಿಕೊಟ್ಟರು. ನಾನು ಅನುವಾದವನ್ನು ನೋಡಿದೆ. ಬಹಳ ಚೆನ್ನಾಗಿತ್ತು. ಅವರಿಗೆ 'ನೀವು ಪೂರೈಸಿಬಿಡಿ' ಅಂದೆ. 'ಅಯ್ಯೋ ಅದನ್ನು ಎಲ್ಲಿ ಪೂರೈಸುವುದಕ್ಕಾಗುತ್ತದೆ? ಯಾರು ಓದುತ್ತಾರೆ?' ಅಂದರು. 'ಹಾಗೆ ಮಾಡಬೇಡಿ. ಅದು ಬಹಳ ಅವಶ್ಯವಾದ ಕೆಲಸ. ಇದುವರೆಗೆ ಯಾರೂ ಮಾಡಿಲ್ಲ. ಪುಸ್ತಕ ಪ್ರಕಟವಾದಲ್ಲಿ ಸಾಹಿತ್ಯ ಅಕಾಡೆಮಿ ಬಹುಮಾನ ಬರುತ್ತೆ' ಅಂದೆ. ಅವರಿಗೆ ಏನನ್ನಿಸಿತೋ. ಸಂಪೂರ್ಣ ಅನುವಾದ ಮಾಡಿ ಕಳುಹಿಸಿಕೊಟ್ಟರು. 'ಈಗ ಸರಿಯಾದ ಸಮಯ. ಸಾಹಿತ್ಯ ಅಕಾಡೆಮಿಗೆ ಕಾಗದ ಬರೆದು ಕಳುಹಿಸಿಬಿಡಿ' ಅಂದೆ. ಅವರು ಹಾಗೆ ಮಾಡಿದರು. ಬಹುಶಃ ಅದಕ್ಕೆ ಪ್ರಶಸ್ತಿ ಬಂತು. ಈ ರೀತಿ ನನಗೂ ನೀರ್ಪಾಜೆ ಭೀಮ ಭಟ್ಟರಿಗೂ ಸಾಮೀಪ್ಯ ಬಂತು. ಅವರು ಬೆಂಗಳೂರಿಗೆ ಬಂದಾಗ ನನ್ನ ಹತ್ತಿರ ಬರುತ್ತಿದ್ದರು, ಮಾತಾಡಿ ಹೋಗುತ್ತಿದ್ದರು. ಒಳ್ಳೆಯ ವಿದ್ವಾಂಸರು. ಅದಕ್ಕಿಂತ ಹೆಚ್ಚಾಗಿ ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರ ಊರು ಬಂಟ್ವಾಳ ತಾಲೂಕಿನ ಕನ್ಯಾನ. ಕನ್ಯಾನ ಭೀಮ ಭಟ್ಟರೆಂದೂ ಅವರನ್ನು ಗುರುತಿಸುತ್ತಿದ್ದರು. ಅವರ ಊರಿಗೆ ಹೋಗಿದ್ದಾಗ ಅಲ್ಲಿಯ ಜನ ಅವರನ್ನು ಎಷ್ಟು ಪ್ರೀತಿಯಿಂದ ಕಾಣುತ್ತಿದ್ದರು ಅನ್ನುವುದನ್ನು ಕಣ್ಣಾರೆ ಕಂಡಿದ್ದೆ. ಅವರ 60ನೆ ವರ್ಷದ ಹುಟ್ಟಿದ ಹಬ್ಬಕ್ಕೆ ನಾನೇ ಬರಬೇಕು ಎಂದು ಹಠ ಹಿಡಿದರು. ನಾನು ಹೋಗಿ ಸನ್ಮಾನ ಮಾಡಿ ಅವರ ಪ್ರೀತಿಯನ್ನು ಗಳಿಸಿ ಬಂದಿದ್ದೆ. ಆದರೆ ಅವರು ಮುಂದೆ ಬಹಳ ಬೇಗ ತೀರಿಕೊಂಡರು. ಅವರ ಮಗ ಉದಯಶಂಕರ ಮತ್ತು ಇತರ ಅಭಿಮಾನಿಗಳು ಅವರ ಹೆಸರಿನಲ್ಲಿ ಒಂದು ಪ್ರತಿಷ್ಠಾನ ಮಾಡಿ ಸಾಹಿತ್ಯ ಸೇವೆ – ಭಾಷಾ ಸೇವೆ ಮಾಡಿದ ಮಹನೀಯರಿಗೆ ಪ್ರತಿವರ್ಷ ಬಹುಮಾನ ಕೊಡುತ್ತಾ ಇದ್ದಾರೆ. ಅದರಲ್ಲಿ ನನ್ನನ್ನೂ ಸದಸ್ಯನನ್ನಾಗಿ ಮಾಡಿದ್ದಾರೆ. ಪ್ರತಿ ಸಲ ಕೇಳುತ್ತಾರೆ 'ಈ ಸಲ ಯಾರಿಗೆ ಪ್ರಶಸ್ತಿ ಕೊಡುವ?' ಎಂದು. ನನಗೆ ಗೊತ್ತಿದ್ದವರ ಹೆಸರು ಹೇಳುತ್ತೇನೆ. ಹೀಗೆ ಈ ಪ್ರೀತಿ ವಿಶ್ವಾಸ ಇನ್ನೂ ಮುಂದುವರಿದಿದೆ.

**ಪಾದೇಕಲ್ಲು:** ಅವರು ಸಂಸ್ಕೃತ ವಿದ್ವಾಂಸರು. ಕಾಸರಗೋಡು ತಾಲೂಕಿನ ನೀರ್ಚಾಲು ಎಂಬಲ್ಲಿ ಸಂಸ್ಕೃತ ಮಹಾವಿದ್ಯಾಲಯ ಇತ್ತು. ಅವರು ಅಲ್ಲಿ ಓದಿದವರು. ಆ

ಮಹಾಪಾಠಶಾಲೆಯಲ್ಲಿ ಬಹಳ ದೊಡ್ಡವರೆಂದು ಗುರುತಿಸಬಹುದಾದ ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರಿದ್ದರು. ಆದರೆ ಅವರೆಲ್ಲ ಬರೆದುದು ತೀರ ಕಡಮೆ. ಆದುದರಿಂದ ಕನ್ನಡ ವಿದ್ವಲ್ಲೋಕದಲ್ಲಿ ಅವರ ಉಲ್ಲೇಖಗಳೇ ಇಲ್ಲ.

**ಜಿ.ಪೆಂ.:** ನೀರ್ಚಾಲಿನ ಸಂಸ್ಕೃತ ಮಹಾಪಾಠಶಾಲೆ ಅನೇಕ ಸಂಸ್ಕೃತ – ಕನ್ನಡ ಪಂಡಿತರನ್ನು ಕನ್ನಡಕ್ಕೆ ನೀಡಿದೆ. ಕಾಸರಗೋಡಿನಲ್ಲಿ ಕನ್ನಡತನ ಉಳಿಯಲು ಆ ಸಂಸ್ಥೆಯೂ ಕಾರಣವೆಂದು ಬಲ್ಲೆ. ಆ ಸಂಸ್ಥೆಯ ಮುಖ್ಯಸ್ಥ ಖಂಡಿಗೆ ಶಾಮ ಭಟ್ಟರ ಪರಿಚಯ ನನಗೆ ಇತ್ತು. ಎಡನೀರು ಮಠದ ಕಾರ್ಯಕ್ರಮಕ್ಕೆ ಹೋದಲ್ಲಿ ಅವರನ್ನು ಕಂಡಿದ್ದೆ. ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಕಾಸರಗೋಡು ತಾಲೂಕು ಕೇರಳಕ್ಕೆ ಸೇರಿಸಲ್ಪಟ್ಟಿತಷ್ಟೆ. ಈ ಕಾಲದಲ್ಲಿ ಈ ನೀರ್ಚಾಲು ಕಾಲೇಜು ಮುಚ್ಚಿಬಿಟ್ಟು ಕನ್ನಡ ಹೈಸ್ಕೂಲು ಮಾತ್ರ ಉಳಿದುಕೊಂಡಿತೆಂದೂ ಕೇಳಿದ್ದೇನೆ. ಒಳ್ಳೆಯ ಕನ್ನಡದ ಜಾಗ ಅದು. ಕಾಸರಗೋಡು ನಮಗಿನ್ನೂ ಬಂದಿಲ್ಲ ಎಂಬ ವಿಷಯದಲ್ಲಿ ಬಹಳ ದುಃಖ ಇದೆ. ಆದರೆ ಅಲ್ಲಿಯ ಕನ್ನಡ ಜನ ಒಳ್ಳೆಯ ರೀತಿಯಲ್ಲಿ ಕನ್ನಡದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದು ತುಂಬ ಸಂತೋಷದ ವಿಷಯ.

**ಪಾದೇಕಲ್ಲು:** ರಾಷ್ಟ್ರಕವಿ ಗೋವಿಂದ ಪೈ ಅವರೊಡನೆ ನಿಮ್ಮ ಸಂಪರ್ಕ ಹೇಗಿತ್ತು? ಮೈಸೂರು ಬೆಂಗಳೂರು ಕಡೆಯಿಂದ ಬಂದವರು ಗೋವಿಂದ ಪೈಗಳನ್ನು ನೋಡದೆ ತಮ್ಮ ಕರಾವಳಿ ಪ್ರವಾಸ ಪೂರ್ಣಗೊಳ್ಳುವುದಿಲ್ಲವೆಂದು ಹೇಳುತ್ತಿದ್ದರೆಂದು ಕೇಳಿದ್ದೇನೆ.

**ಜಿ.ಪೆಂ.:** ಗೋವಿಂದ ಪೈಗಳನ್ನು ಕಣ್ಣಾರೆ ಕಾಣುವ ಭಾಗ್ಯ ದಕ್ಕಿಲ್ಲ ನನಗೆ. ಅವರ ಕಾವ್ಯವನ್ನು ತುಂಬ ಪ್ರೀತಿಯಿಂದ ಬೋಧೆ ಮಾಡಿದ್ದೇನೆ. ಗೊಲ್ಗೊಥಾದ ಬಗ್ಗೆ ನಾನು ಮಾಡಿದಷ್ಟು ಭಾಷಣ ಬೇರೆ ಯಾರೂ ಮಾಡಿರಲಿಕ್ಕಿಲ್ಲ. ಅದನ್ನು 'ಗ್ರೇಟ್ ಎಪಿಕ್' ಎಂದು ಕರೆಯಬಹುದು. ವೈಶಾಖಿಯನ್ನೂ ಗೊಲ್ಗೊಥಾವನ್ನೂ ಹೋಲಿಸಿ ಹಲವಾರು ಬಾರಿ ಭಾಷಣಮಾಡಿದ್ದೆ.

**ಪಾದೇಕಲ್ಲು:** ಪುತ್ತೂರಿನ ಕರ್ನಾಟಕ ಸಂಘ ಕರಾವಳಿಯ ಕನ್ನಡದ ಚಟುವಟಿಕೆಗಳಲ್ಲಿ ಮುಂದಿದ್ದ ಸಂಸ್ಥೆ. ಈ ಸಂಸ್ಥೆಯೊಡನೆ ಹತ್ತಿರದ ಸಂಪರ್ಕ ನಿಮಗಿತ್ತೆಂದು ಕೇಳಿದ್ದೇವೆ.

**ಜಿ.ಪೆಂ.:** 'ಕನ್ನಡವನ್ನು ಉಳಿಸಿ ಬೆಳೆಸಿದವರು' ಎಂದು ಒಂದು ಪುಸ್ತಕ ಮಾಡಿದೆ. ಕನ್ನಡದ ಹಿರಿಯರ ಕುರಿತು ಅದರಲ್ಲಿ ಲೇಖನಗಳಿವೆ. ಪುತ್ತೂರು ಕರ್ನಾಟಕ ಸಂಘದವರು ಅದನ್ನು ಪ್ರಕಟಿಸಿದರು. ಅದನ್ನು ಪ್ರಕಟಮಾಡಿದ ಮೇಲೆ ಬೋಳಂತಕೋಡಿಯವರು 'ಮುದ್ದಣನ ಬಗ್ಗೆ ಏನಾದರೂ ಮಾಡಿದ್ದರೆ ಕೊಡಿ. ಪ್ರಕಟಿಸುತ್ತೇವೆ' ಅಂದರು. ನಾನು 'ಮುದ್ದಣನ ಪದಪ್ರಯೋಗ ಕೋಶ' ಎಂದು ಒಂದು ನಿಘಂಟು ತಯಾರುಮಾಡಿದ್ದೆ. ಹಸ್ತಪ್ರತಿ ಸಿದ್ಧವಾಗಿತ್ತು. ತುಂಬಾ ಚೆನ್ನಾಗಿ ಅದನ್ನು ಪ್ರಕಟಮಾಡಿದರು. ಆಮೇಲೆ ಆ ಪ್ರಕಟನೆಯಿಂದ ಕರ್ನಾಟಕ ಸಂಘಕ್ಕೆ ಸ್ವಲ್ಪ ಸಂಪಾದನೆಯಾಯಿತು ಎಂದು ತಿಳಿಯಿತು. ಹೀಗೆ ನನ್ನ ಎರಡು ಪುಸ್ತಕಗಳನ್ನು

ದಕ್ಷಿಣ ಕನ್ನಡದಿಂದ ಪ್ರಕಟಮಾಡಿದ್ದಾರೆ. ಆ ಬಗೆಗೆ ನನಗೆ ಸಂತೋಷವಿದೆ. ಪುತ್ತೂರಿನ ಕರ್ನಾಟಕ ಸಂಘ ಶಿವರಾಮ ಕಾರಂತರ ಕಾಲದಿಂದಲೇ ಅಸ್ತಿತ್ವದಲ್ಲಿದ್ದರೂ ಪುಸ್ತಕಪ್ರಕಾಶನದ ಕೆಲಸ ಹೆಚ್ಚಾಗಿ ನಡೆದದ್ದು ಬೋಳಂತಕೋಡಿಯವರ ನೇತೃತ್ವದಲ್ಲೇ ಸರಿ. ಅವರ ಸಾಹಿತ್ಯ ಸೇವೆಯನ್ನು ಹೊಗಳಲೇ ಬೇಕು. ವೃತ್ತಿಯಲ್ಲಿ ವಕೀಲರಾಗಿದ್ದ ಅವರು ಜೀವನದ ಉತ್ತರಭಾಗವನ್ನು ಸಾಹಿತ್ಯಕ್ಕಾಗಿಯೇ ಮೀಸಲಿಟ್ಟರು. ಅವರ ಸಾಹಿತ್ಯಪ್ರೀತಿ ನಿಜವಾಗಿ ಮೆಚ್ಚತಕ್ಕದ್ದು.

ಆಮೇಲೆ ದಕ್ಷಿಣ ಕನ್ನಡದ ಅತಿ ಪ್ರಮುಖನಾದ ಕವಿ ಮುದ್ದಣನ ಕುರಿತು ಆದ ಕೆಲಸದ ವಿಷಯ. ಮುದ್ದಣನ ಹೆಸರು ಹೇಳದೆ ದಕ್ಷಿಣಕನ್ನಡ ಉಡುಪಿ ಜಿಲ್ಲೆಗಳ ವಿಷಯ ಪೂರ್ತಿಯಾಗಲಾರದು. ಮುದ್ದಣ ನನಗೂ ತುಂಬ ಪ್ರಿಯನಾದ ಕವಿ. ಅವನು ಹುಟ್ಟಿದ ನಂದಳಿಕೆಗೆ ನಾನು ಹೋಗಿದ್ದೆ. ನಂದಳಿಕೆ ಬಾಲಚಂದ್ರ ರಾಯರು ಮುದ್ದಣನ ಹೆಸರಿನಲ್ಲಿ ಮಿತ್ರಮಂಡಳಿ ನಡೆಸಿಕೊಂಡು ಬಹಳ ಕೆಲಸ ಮಾಡಿದ್ದಾರೆ. ಮುದ್ದಣನ ನಂದಳಿಕೆಗೆ ನನ್ನನ್ನು ನಂದಳಿಕೆ ಬಾಲಚಂದ್ರ ರಾವ್ ಕರೆದುಕೊಂಡು ಹೋಗಿದ್ದರು. ಕರ್ನಾಟಕದಾದ್ಯಂತ ಮುದ್ದಣನ ಕೃತಿಗಳು ಪಠ್ಯಗಳಾಗಿ ಜನಪ್ರಿಯವಾಗಿವೆ. ಮುದ್ದಣನ ಕುರಿತು 'ಮುದ್ದಣ ಭಂಡಾರ' ಎಂದು ಎರಡು ಸಂಪುಟ ಮಾಡಿ ಹಳಗನ್ನಡವನ್ನು ಹೊಸಗನ್ನಡಕ್ಕೆ ಅನುವಾದ ಮಾಡಿ ಸಂಪಾದಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಅವನ್ನು ಪ್ರಕಟಿಸಿದರು. ನನಗೆ ಆ ಸಂಪುಟಗಳ ಹೆಸರಿನಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂತು. ಅಕಾಡೆಮಿಯವರು ಉಡುಪಿಯಲ್ಲೇ ಪ್ರಶಸ್ತಿಪ್ರದಾನ ಸಮಾರಂಭ ನಡೆಸಿದರು. ಅದನ್ನು ಉಡುಪಿಯಲ್ಲೇ ಕೊಟ್ಟರು. ಈ ಪ್ರಶಸ್ತಿ ಗ್ರಂಥಸಂಪಾದನೆಗೆಂದು ಕೊಟ್ಟುದಾಗಿತ್ತು. ತ. ಸು. ಶಾಮರಾಯರ 'ಮೂರು ತಲೆಮಾರು' ಕೃತಿಗೂ ಆಗಲೇ ಪ್ರಶಸ್ತಿ ಬಂದಿತ್ತು. ಅದು ಬಹಳ ಒಳ್ಳೆಯ ಒಂದು ಪುಸ್ತಕ. ಕಾರ್ಯಕ್ರಮಕ್ಕೆ ಅವರೂ ಬಂದಿದ್ದರು. ಶಾಮರಾಯರೂ ನಾನೂ ತುಂಬ ಆತ್ಮೀಯರು. ನಮ್ಮೊಳಗೆ ಮಾತಿನಲ್ಲಿ ಏಕವಚನದ ಬಳಕೆಯೇ ಇತ್ತು. ಅವರೊಂದಿಗೆ ಈ ಪ್ರಶಸ್ತಿಯನ್ನು ಪಡೆದುದು ನನಗೆ ಇನ್ನೂ ಹೆಚ್ಚಿನ ಸಂತೋಷವನ್ನು ತಂದ ವಿಷಯವಾಗಿದೆ.

ಹೀಗೆ ದಕ್ಷಿಣ ಕನ್ನಡ ಮತ್ತು ಈಗಿನ ಉಡುಪಿ ಜಿಲ್ಲೆ ನನಗೆ ಪ್ರಿಯವಾದ ಜಾಗ.

ನಮ್ಮ ಶಿವರಾಮ ಕಾರಂತರು ಕನ್ನಡಕ್ಕೆ ಸಲ್ಲಿಸಿದ ಸೇವೆ ದೊಡ್ಡದು. ಕಾದಂಬರಿಕಾರರಾದ ಅವರಿಗೆ ಕಾದಂಬರಿಗಳಿಗೆ ಬರಬೇಕಾದ ಬಹುಮಾನ ಅವರ 'ಯಕ್ಷಗಾನ ಬಯಲಾಟ' ಪುಸ್ತಕಕ್ಕೆ ಹೋಯಿತು. ಮೈಸೂರಿನಲ್ಲಿ ಸಾಹಿತ್ಯ ಸಮ್ಮೇಳನ ಆದಾಗ ಅವರನ್ನು ಅಧ್ಯಕ್ಷರಾಗಿ ಕರೆಯಬೇಕು ಎಂದು ತೀರ್ಮಾನ ಆದಾಗ ಸಾಹಿತ್ಯ ಪರಿಷತ್ತಿನಲ್ಲಿ ನಾನಿದ್ದೆ; ಕಾರ್ಯದರ್ಶಿಯಾಗಿದ್ದೆ. ತುಂಬ ಸೊಗಸಾದ ಸಮ್ಮೇಳನ ಅದು. ಅದರಲ್ಲಿ ಕೆ. ವಿ. ಪುಟ್ಟಪ್ಪನವರು ಭಾಷಣ ಮಾಡಿದರು. ಆ ಸಮ್ಮೇಳನ ನನ್ನನ್ನು ಇನ್ನಷ್ಟು ದಕ್ಷಿಣ ಕನ್ನಡದ ಹತ್ತಿರ ತೆಗೆದುಕೊಂಡು ಹೋಯಿತು. ಆಮೇಲೆ ಹಲವು ಬಾರಿ ದಕ, ಉಡುಪಿ ಜಿಲ್ಲೆಗಳಿಗೆ ಬಂದಿದ್ದೇನೆ. ಡಿವಿಜಿ ಶತಮಾನೋತ್ಸವ

ಸಂದರ್ಭದಲ್ಲಿ ಉಡುಪಿಗೆ ಬಂದಿದ್ದೇನೆ. 1995ರಲ್ಲಿ ಹೆಬ್ರಿಯಲ್ಲಿ ಅಂಬಾತನಯ ಮುದ್ರಾಡಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಕಳ ತಾಲೂಕು ಸಾಹಿತ್ಯ ಸಮ್ಮೇಳನಕ್ಕೆ ಬಂದಿದ್ದೆ. ಪ್ರಾಯಶಃ ಅದೇ ವರ್ಷ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನ ಶ್ರೀಮತಿ ಪ್ರೇಮಾ ಭಟ್ಟರ ಅಧ್ಯಕ್ಷತೆಯಲ್ಲಿ ಉಡುಪಿಯಲ್ಲಿ ನಡೆಯಿತು. ನೀವೇ ಸ್ವಾಗತ ಸಮಿತಿ ಕಾರ್ಯದರ್ಶಿಗಳಾಗಿದ್ದಿರಿ. ಸಮಾರೋಪ ಭಾಷಣಕ್ಕೆ ನೀವು ಕರೆದಿದ್ದಿರಿ; ನಾನು ಬಂದಿದ್ದೆ. ಶಿವರಾಮ ಕಾರಂತರು ಈ ಸಮ್ಮೇಳನವನ್ನು ಉದ್ಘಾಟಿಸಿದ್ದರು. ಆಗ ಎರಡು ದಿನಗಳ ಕಾಲ ಉಡುಪಿಯಲ್ಲಿ ತಂಗಿ ಸಮ್ಮೇಳನದ ಕಾರ್ಯಕ್ರಮಗಳನ್ನು ವೀಕ್ಷಿಸಿದ್ದೆ. ಕಾರ್ಕಳಕ್ಕೆ ಉಪನ್ಯಾಸಕ್ಕಾಗಿ ಪ್ರೊ. ಎಂ. ರಾಮಚಂದ್ರರು ಕರೆದಾಗಲೂ ಬಂದಿದ್ದೆ.

ಏರ್ಯ ಲಕ್ಷ್ಮೀನಾರಾಯಣ ಆಳ್ವರ ಹೆಸರನ್ನೂ ಇಲ್ಲಿ ನೆನಪಿಸಿಕೊಳ್ಳಬಹುದು. ಅವರು ಒಳ್ಳೆಯ ಸಾಹಿತ್ಯಪ್ರೇಮಿ. ಸಹಕಾರಿ ಧುರೀಣರು. ಕನ್ನಡದ ಎಲ್ಲ ಸಾಹಿತಿಗಳ ಸಂಪರ್ಕ ಅವರಿಗಿದೆ. ನನ್ನನ್ನು ಬಹಳ ಪ್ರೀತಿ-ಗೌರವಗಳಿಂದ ಕಂಡಿದ್ದಾರೆ. ಬಂಟ್ವಾಳದಲ್ಲಿ ಸೇಡಿಯಾಪು ಸಂಸ್ಮರಣ ಕಾರ್ಯಕ್ರಮವೊಂದನ್ನು ಬಹಳ ದೊಡ್ಡ ಮಟ್ಟದಲ್ಲಿ ಸಂಘಟಿಸಿ ಗುರುಸೇವೆ ಮಾಡಿದ್ದರು. ಆ ಕಾರ್ಯಕ್ರಮಕ್ಕೆ ನನ್ನನ್ನೂ ಕರೆದಿದ್ದರು. ನಾನು ಆಳ್ವರ ಮನೆಗೂ ಹೋಗಿದ್ದೆ. ಒಳ್ಳೆಯ ಬಯಲು – ಕೃಷಿ ಪರಿಸರದಲ್ಲಿ ಅವರ ಭವ್ಯವಾದ ಮನೆಯಿದೆ. ಅವರ ಪುಸ್ತಕಪ್ರಿಯರು. ಮನೆತುಂಬ ಪುಸ್ತಕಗಳೆ. ಸಾಹಿತ್ಯದ ಅಧ್ಯಾಪಕರ ಮನೆಗಳಲ್ಲೂ ಕಾಣಲು ದೊರೆಯದಷ್ಟು ವಿಶಾಲವಾದ ಗ್ರಂಥಸಂಗ್ರಹ ಅವರಲ್ಲಿತ್ತು. ಒಂದು ಬಾರಿ ನನಗೆ 'ಐರಾವಣ' ಎಂಬ ಶಬ್ದದ ವಿವರಣೆ ಮಾಡಬೇಕಾಗಿ ಬಂತು. ಈ ಐರಾವಣನೆಂದರೆ ಐದು ತಲೆಯ ರಾವಣನಂತೆ. 'ಹನುಮದ್ವಿಜಯ' ಎಂಬ ಒಂದು ಗ್ರಂಥವಿದೆ. ಈ ಗ್ರಂಥದಲ್ಲಿ ಈ ವಿವರ ನನಗೆ ಸಿಕ್ಕಿತು. ಈ ಗ್ರಂಥವನ್ನು ನಾನು ಏರ್ಯ ಆಳ್ವರಿಂದ ಪಡೆದುಕೊಂಡು ವಿವರಗಳನ್ನು ತಿಳಿದುಕೊಂಡೆ. ಆಮೇಲೆ ಪುಸ್ತಕವನ್ನು ಹಿಂದಿರುಗಿಸಿದೆ. ಹೀಗೆ ತುಂಬ ಸುಸಂಸ್ಕೃತರಾದ ಸಾಹಿತ್ಯಪ್ರಿಯರ ಸಂಪರ್ಕ ನನಗೆ ಬೇರೆ ಬೇರೆ ಸಂದರ್ಭಗಳಲ್ಲಿ ಆದುದನ್ನು ಮರೆಯಲಾರೆ.

ನನ್ನ ಹೃದಯದಲ್ಲಿ ಮುದ್ದಣ ಹೇಗೆ ಆಳವಾಗಿ ನಿಂತಿದ್ದಾನೋ ಈಗಿನ ಹಲವರು ಲೇಖಕರೂ ಕೂಡ ಹಾಗೆ ಇದ್ದಾರೆ. ಹೀಗೆ ನಂದೂ ನಿಮ್ಮದೂ ತುಂಬ ಆತ್ಮೀಯವಾದ ಸಂಬಂಧ. ನೀವಂತೂ ಈಗಿನ ಬರಹಗಾರರಲ್ಲಿ ಸಾಕಷ್ಟು ಪ್ರಸಿದ್ಧರಾದವರು; ಪಾದೇಕಲ್ಲು ವಿಷ್ಣು ಭಟ್ಟರು. ನನಗೆ ತುಂಬ ಪ್ರಿಯರಾದವರು. ಅದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**ಪಾದೇಕಲ್ಲು:** ಏಕೀಕರಣದ ಸಂದರ್ಭದಲ್ಲಿ ದಕ್ಷಿಣ ಕನ್ನಡದ ಕೆಲವರು, ಕೆ. ಆರ್. ಕಾರಂತ, ಕೆ. ಬಿ. ಜಿನರಾಜ ಹೆಗ್ಡೆ ಮೊದಲಾದವರು ಬಹಳ ಕೆಲಸ ಮಾಡಿದ್ದರು. ಏಕೀಕರಣದ ಬಗ್ಗೆ ನೀವು ಲೇಖನಸಂಕಲನರೂಪವಾದ ಒಂದು ಪುಸ್ತಕ ಮಾಡಿದ್ದೀರಿ. ಆದುದರಿಂದ ಅವರ ಕುರಿತಾಗಿ ಏನಾದರೂ ನೆನಪುಗಳಿದ್ದಲ್ಲಿ ಹೇಳಿದರೆ ಸಂತೋಷ.

**ಜಿ.ವೆಂ.**: ನಾನು ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದಾಗ ಇವರೆಲ್ಲ ಸಂಪರ್ಕಕ್ಕೆ ಬರುತ್ತಿದ್ದರು. ಕಯ್ಯಾರ ಕಿಞ್ಞಣ್ಣ ರೈಯವರು ಸಹ ನನಗೆ ಗೊತ್ತಿರುವ ಆ ಕಡೆಯ ಹಿರಿಯ ಸಾಹಿತಿಗಳಲ್ಲೊಬ್ಬರು. ಕಾಸರಗೋಡಿನಲ್ಲಿದ್ದರೂ ಬೇಕಾದಷ್ಟು ಕನ್ನಡದ ಕೆಲಸ ಮಾಡಿದರು; ಒಳ್ಳೆಯ ಕವಿ. ಅವರ 'ಬೆಂಕಿ ಬಿದ್ದಿದೆ ಮನೆಗೆ' ಕವನ ಸೊಗಸಾಗಿತ್ತು. ಆಗಿನ ಕಾಲದಲ್ಲಿ ಎಲ್ಲರಿಗೂ ಒಂದೆ ಅಭಿಪ್ರಾಯ – ಕಾಸರಗೋಡು ಕರ್ನಾಟಕ್ಕೆ ಸೇರಬೇಕು – ಎಂದು. 'ನಾವು ಅಂಗಲಾಚಿ ಬೇಡಿಕೊಂಡದ್ದು ಗೋವಿಂದ ಪೈಗಳ ಜಾಗ, ನಾವು ಏನಾದರೂ ಮಾಡಲೇಬೇಕು' ಎಂದು ಎಲ್ಲರಿಗೂ ಉತ್ಸಾಹ ಹುಟ್ಟಿಸಿ ಪ್ರಚಾರ ಮಾಡಿದರು. ತಮ್ಮ ವೃತ್ತಿಯನ್ನು ಬಿಟ್ಟು ಬೇಕಾದರೆ ಹೋರಾಟ ಮಾಡುವುದಕ್ಕೆ ನಿಂತಿದ್ದ ಜನ ಆಗ ಇದ್ದರು. ಅದು ಕರ್ನಾಟಕಕ್ಕೇ ಸೇರಬೇಕೆಂದು ಮಹಾಜನ ವರದಿಯಲ್ಲಿ ಹೇಳಿದೆ. ಆದರೆ ಯಾಕೆ ತಪ್ಪಿ ಹೋಯಿತು? ಗೊತ್ತಿಲ್ಲ. ಕಾಸರಗೋಡಿನ ಕನ್ನಡ ಭಾಗ ಸಂಪೂರ್ಣವಾಗಿ ಕನ್ನಡನಾಡಿಗೆ ಬರಬೇಕು. ಇನ್ನು ಕೇರಳದವರು ಒಪ್ಪಿ ಅದನ್ನು ಪಡೆಯುವುದಕ್ಕೆ ಸಾಧ್ಯವಿದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಅವರು ಕಾಸರಗೋಡನ್ನು ಉಳಿಸಿಕೊಳ್ಳುವುದಕ್ಕೆ ಏನು ಮಾಡಬೇಕೋ ಎಲ್ಲವನ್ನೂ ಮಾಡುತ್ತಿದ್ದಾರೆ; ಮನೆ ಮಗಳಂತೆ ನೋಡಿಕೊಳ್ಳುತ್ತಿದ್ದಾರೆ. ವಿಚಿತ್ರವೆಂದರೆ ಈ ಕಡೆಯಲ್ಲಿ ನಮ್ಮವರು ಬೆಳಗಾಂ ಕಳೆದುಕೊಳ್ಳುವುದಕ್ಕೆ ಏನೇನು ಮಾಡಬೇಕೋ ಅದನ್ನೆಲ್ಲ ಮಾಡುತ್ತಾರೆ. ಈ ವಿಚಿತ್ರ ಪರಿಸ್ಥಿತಿಗೆ ಏನೆನ್ನಬೇಕು?

**ಪಾದೇಕಲ್ಲು** : ದಕ್ಷಿಣ ಕನ್ನಡದವರಿಗೆ ಅವರದೇ ಆದ ಕನ್ನಡ ಇದೆ. ಆ ಕನ್ನಡವನ್ನು ಅಪಹಾಸ್ಯ ಮಾಡಿದ ಹಾಗೆ ಸಿನಿಮಾಗಳಲ್ಲಿ ಅಥವಾ ಬೇರೆಡೆಗಳಲ್ಲಿ ಚಿತ್ರಿಸುತ್ತಾ ಇದ್ದಾರೆ. ಭಾಷಾವಿದರಾಗಿ ನಿಮ್ಮ ಪ್ರತಿಕ್ರಿಯೆ...

**ಜಿ.ವೆಂ.**: ಯಕ್ಷಗಾನಪ್ರಸಂಗಗಳ ಪ್ರಯೋಜನ ಮತ್ತು ಸಂಬಂಧ ಕರಾವಳಿಯ ಜನಕ್ಕೆ ಇರುವಷ್ಟು ನಮ್ಮಲ್ಲಿಲ್ಲ. ಯಕ್ಷಗಾನ ಪ್ರಯೋಗಗಳು ಎಷ್ಟು ಹೆಚ್ಚಾಗಿ ನಡೆಯುತ್ತವೆಯೋ ಅಷ್ಟು ಕೂಡ ಜನಸಾಮಾನ್ಯಕ್ಕೆ ಕನ್ನಡ ಭಾಷೆಯ ತಿಳುವಳಿಕೆ, ನಮ್ಮ ಪುರಾಣಗಳ ತಿಳುವಳಿಕೆ ಆಳವಾಗಿ ಬೇರೂರುತ್ತದೆ. ಅಲ್ಲಿಯ ಜನಕ್ಕೆ ನಮ್ಮ ಪುರಾಣದ ಯಾವ ಕತೆ ಹೇಳಿದರೂ ಗೊತ್ತಾಗುತ್ತದೆ. ಮೈಸೂರ ಜನಕ್ಕೆ ಗೊತ್ತಾಗುವುದಿಲ್ಲ. ಯಾಕೆಂದರೆ ಈ ರೀತಿಯ ಹಿನ್ನೆಲೆ ನಮ್ಮಲ್ಲಿ ಇಲ್ಲ. ಅಲ್ಲಿ ಮಾತನಾಡುವವರು ಕಾವ್ಯದ ರೀತಿಯಲ್ಲಿ ಕನ್ನಡವನ್ನು ಉಪಯೋಗಿಸುತ್ತಾರೆ. ಪ್ರಾಸಗಳನ್ನು ಆಡುಮಾತಿನಲ್ಲಿಯೂ ಬಳಸಿ ಮಾತನಾಡುವುದುಂಟು. ಒಂದು ಪ್ರಾಸಬದ್ಧವಾದ ವಾಕ್ಯ ಬಂದರೆ ಇನ್ನೊಂದು ಮಾತನ್ನು ನಿರ್ಮಾಣ ಮಾಡುತ್ತಾರೆ ಅವರು. ಇಲ್ಲಿಯ ಜನರಿಂದ ಅದು ಆಗುವುದಿಲ್ಲ. ಯಾಕೆಂದರೆ ಅವರು ಆ ರೀತಿಯ ಮಾತುಗಾರಿಕೆಯನ್ನು ಕೇಳಿಲ್ಲ. ನಮ್ಮ ಜನಕ್ಕೆ ಆ ಪ್ರವೃತ್ತಿ ಇಲ್ಲವೇ ಇಲ್ಲ. ಅದಲ್ಲದೆ ರಾತ್ರಿ ಹತ್ತು ಗಂಟೆಗೆ ಪ್ರಾರಂಭವಾದ ಯಕ್ಷಗಾನ ಪ್ರದರ್ಶನ ಬೆಳಗಿನ ವರೆಗೆ ಆಗುವ ಪ್ರಯೋಗ ಅಲ್ಲಿದೆ. ನಮ್ಮಲ್ಲಿ ಯಾವುದೇ ಕಾರ್ಯಕ್ರಮವನ್ನು ಎರಡು ಗಂಟೆ ನೋಡಿದರೆ ಸಾಕು. ಅದಕ್ಕಿಂತ ಹೆಚ್ಚು ಎಷ್ಟೇ ಸೌಭಾಗ್ಯಯುತವಾಗಿದ್ದರೂ ನಮ್ಮ ಜನ

ಗೋಡಬಾರದು. ಎರಡು ಗಂಟೆಗೆ ಕೊನೆ ಆಗಲೇಬೇಕು. ಒಂದೂವರೆ ಗಂಟೆಯೊಳಗೆ ಪೂರ್ತಿಯಾದರೆ ಇನ್ನೂ ಸಂತೋಷ. ಇಲ್ಲಿಗೆ ಯಕ್ಷಗಾನ ಬಂದರೆ ಆ ಇಡಿಯ ಪ್ರದರ್ಶನದ ಕಾಲಾವಧಿಯನ್ನು ಒಂದೂವರೆ ಗಂಟೆಗೆ ಇಳಿಸಿಬಿಡಬೇಕು. ಒಂದೂವರೆ ಗಂಟೆಯೊಳಗೆ ಅವರ ಭಾಷಾಪ್ರಯೋಗದ ವೈಭವವನ್ನು ಎಲ್ಲಿ ತಿಳಿಸುವುದಕ್ಕೆ ಆಗುತ್ತದೆ. ನಿಮಗೆ ತಿಳಿದಿರುವಂತೆ, ತಾಳಮದ್ದಳೆ ಯಕ್ಷಗಾನದ ಒಂದು ವಿಶಿಷ್ಟ ಕಲಾಪ್ರಕಾರ – ತಾಳಮದ್ದಳೆಯ ಮಾತಿನ ವಾಗ್ವಾದ ಎಷ್ಟು ಖುಷಿ ಕೊಡುತ್ತದೆ ಅಂದರೆ, ಅದನ್ನು ನೋಡಿದವರಿಗೆ–ಕೇಳಿದವರಿಗೇ ಗೊತ್ತು. ಅದು ಒಂದು ರೀತಿಯ ವಾಕ್ಯಾರ್ಥಗೋಷ್ಠಿಯೇ ಸರಿ. ಅಖಿಲಕರ್ನಾಟಕದಲ್ಲಿ ಇನ್ನೂ ತಾಳಮದ್ದಳೆಯ ಪೂರ್ಣಪರಿಚಯ ಆಗಿಲ್ಲ; ಆಗಬೇಕು. ಆದರೆ ಭಾಷಾದೃಷ್ಟಿಯಿಂದಲೂ ಸಾಹಿತ್ಯ ಸಂಸ್ಕೃತಿ ದೃಷ್ಟಿಯಿಂದಲೂ ತುಂಬ ಪ್ರಯೋಜನವಿದೆ.

ದೇರಾಜೆ ಸೀತಾರಾಮಯ್ಯ ಅಂತ ಒಬ್ಬರು ಒಳ್ಳೆಯ ಯಕ್ಷಗಾನಪಟು ಇದ್ದರು. ಅವರು ತಾಳಮದ್ದಳೆ ಅರ್ಥಧಾರಿಗಳು. ಒಳ್ಳೆಯ ಲೇಖಕರೂ ಆಗಿದ್ದರು. ಅವರಿಗೂ ನನಗೂ ಒಳ್ಳೆಯ ಸ್ನೇಹ ಇತ್ತು. ಒಮ್ಮೆ ನಾನು ಪುತ್ತೂರಿಗೆ ಒಂದು ಕಾರ್ಯಕ್ರಮಕ್ಕೆ ಹೋಗಿದ್ದೆ, ಅವರು ಅಲ್ಲಿಗೆ ಬಂದಿದ್ದರು. 'ವೆಂಕಟಸುಬ್ಬಯ್ಯನವರೆ, ಇವತ್ತು ನಮ್ಮ ಮನೆಗೆ ಊಟಕ್ಕೆ ಬರಬೇಕು' ಎಂದರು. 'ಆಗಬಹುದು' ಎಂದೆ. ಆಮೇಲೆ ಅವರ ಕಾರಿನಲ್ಲಿ ಕರೆದುಕೊಂಡು ಹೋದರು. ಪುತ್ತೂರಿಂದ ತುಂಬ ದೂರದ ಒಳನಾಡಿನಲ್ಲಿ ದೇರಾಜೆ ಅನ್ನುವ ಊರು. ಎಲ್ಲೆಲ್ಲೋ ಸುತ್ತಿಕೊಂಡು ಕರೆದುಕೊಂಡು ಹೋದರು. ರಾತ್ರಿ ಸುಮಾರು ಹತ್ತುಗಂಟೆಯ ಹೊತ್ತಿಗೆ ನನಗೋಸ್ಕರವಾಗಿಯೇ ತಾಳಮದ್ದಳೆ ಕಾರ್ಯಕ್ರಮದ ಏರ್ಪಾಟು ಮಾಡಿದ್ದರು. 'ಇದೇ ಭೋಜನ' ಎಂದು ಹೇಳಿ ಉಪಚರಿಸಿದರು. ಸೊಗಸಾದ 'ಸುಭದ್ರಾಕಲ್ಯಾಣ' ಎನ್ನುವ ಪ್ರಸಂಗ ನಡೆಯಿತು. ಪೂರ್ಣವಾಗಿ ಕೇಳಿದ ನಾನು ತುಂಬ ಸಂತೋಷಪಟ್ಟೆ. ನಿಜವಾಗಿ ನನಗೆ ಅದು ಹೊಸ ಅನುಭವವೇ ಆಗಿತ್ತು. ಯಾವ ಯಾವ ಕಲಾವಿದರು ಆ ದಿನ ಭಾಗವಹಿಸಿದ್ದರೆಂಬುದು ನನ್ನ ಸ್ಮರಣೆಯಲ್ಲಿಲ್ಲ. ಅಲ್ಲದೆ ಅಲ್ಲಿದ್ದವರೆಲ್ಲ ನನ್ನ ಪರಿಚಿತರೂ ಆಗಿರಲಿಲ್ಲ. ತಾಳಮದ್ದಳೆ ತುಂಬ ಚೆನ್ನಾಗಿತ್ತು. ಆದರೆ ರಾತ್ರಿ ತುಂಬ ತಡವಾಗಿತ್ತು. ಮಧ್ಯರಾತ್ರಿ ದಾಟಿ ಒಂದು ಗಂಟೆ ಆಗಿದ್ದಿರಬೇಕು. ಅದಾದ ಮೇಲೆ ಭೋಜನ ವ್ಯವಸ್ಥೆ ಇತ್ತು. ಅವರ ಮನೆಯೊಳಗೆ ಅದಕ್ಕೆ ಏರ್ಪಾಡು ಮಾಡಿದ್ದರು. ಇಂದೂ ಈ ಸಂದರ್ಭ ನನಗೆ ಸ್ಪಷ್ಟವಾಗಿ ನೆನಪಿದೆ. ಅವರು ಬರೆದ ಎರಡು ಪುಸ್ತಕಗಳು, ಮಹಾಭಾರತ ಮತ್ತು ರಾಮಾಯಣ – ಎರಡೂ ನನ್ನ ಹತ್ತಿರ ಇವೆ. ಬೆಂಗಳೂರಿಗೆ ಬಂದರೆ ಬಂದು ಮಾತಾಡಿಸಿ ಹೋಗುತ್ತಾ ಇರುತ್ತಿದ್ದರು. ಅವರ ಮಗ ಇಲ್ಲೇ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಾ ಇದ್ದರು. ದೇರಾಜೆಯವರಂತಹ ಹಲವರು ಮಾದರಿ ಕಲಾವಿದರು ಈಗಲೂ ಆ ಪರಿಸರದಲ್ಲಿ ಇದ್ದಾರೆಂದು ಬಲ್ಲೆ.

ಹೀಗೆ ಬೇರೆ ಬೇರೆ ಕಾರಣಗಳಿಂದ ನನಗೆ ಕರಾವಳಿ ಕರ್ನಾಟಕ ಪವಿತ್ರವಾಗಿದೆ. ಈ ನೆಲದ ಬಗ್ಗೆ, ಜನದ ಬಗ್ಗೆ ನಾನು ಅಲ್ಲಲ್ಲಿ ಮನದುಂಬಿ ಮಾತಾಡಿದ್ದೇನೆ. ಒಂದು ದೃಷ್ಟಿಯಿಂದ ನಾನು ದಕ್ಷಿಣ ಕನ್ನಡದ ಪ್ರಚಾರಕನಾಗಿದ್ದೇನೆ.

ಇಲ್ಲಿಯ ನಮ್ಮ ಪರಿಸರದ ಜನಗಳು 'ವೆಂಕಟಸುಬ್ಬಯ್ಯನವರು ಬಿಡಿ, ದಕ್ಷಿಣ ಕನ್ನಡ ಅಂದರೆ ಅವರಿಗೆ ಖುಷಿಯಾಗುತ್ತೆ' ಎನ್ನುತ್ತಾರೆ. ಅದೂ ನಿಜವಾಗಿ ಮನಸ್ಸಿಗೆ ಆನಂದವಾಗುವ ವಿಷಯವೇ. ಅಲ್ಲಿಯ ಜನ ಪ್ರೀತಿ ಅಭಿಮಾನಗಳಿಂದ ಇಲ್ಲಿ ಬಂದು ಮಾತಾಡಿದಾಗ ಆಗುವ ಖುಷಿ ಬೇರೆಯೇ.

ವಿದ್ವಾಂಸರನ್ನು ಕಂಡು ಗೌರವಿಸುವ ಗುಣ ಈಗಲೂ ಕರಾವಳಿಯ ಜನತೆಯಲ್ಲಿ ಚೆನ್ನಾಗಿದೆ. ವಿದ್ವಾಂಸರನ್ನು ಗೌರವಿಸಲಿಕ್ಕಾಗಿಯೇ ವಿವಿಧ ಪ್ರಶಸ್ತಿಗಳನ್ನು ಅಲ್ಲಿ ಸ್ಥಾಪನೆ ಮಾಡಿದ್ದಾರೆ. ಹಿರಿಯ ಕಾದಂಬರಿಕಾರರಾಗಿದ್ದ ಶಿವರಾಮ ಕಾರಂತರ ಹೆಸರಿನಲ್ಲಿ ಒಂದು ಪ್ರಶಸ್ತಿ ಇದೆ. ಮೂಡಬಿದ್ರೆಯಲ್ಲಿ ಅದನ್ನು ಸ್ಥಾಪನೆ ಮಾಡಿದ್ದಾರೆ. ಜಯಪ್ರಕಾಶ ಮಾವಿನಕುಳಿಯವರು ಅಲ್ಲಿ ಕಾರ್ಯಕರ್ತರು. ಈ ಪ್ರಶಸ್ತಿಯನ್ನು ನನಗೆ ಕೊಟ್ಟಿದ್ದಾರೆ. 'ನನಗೆ ಬರುವುದಕ್ಕಾಗುವುದಿಲ್ಲ' ಎಂದಾಗ 'ನಿಮಗೇ ಕೊಡಬೇಕು' ಎಂದು ಇಲ್ಲಿಗೇ ಬಂದು ಕೊಟ್ಟಿದ್ದಾರೆ. ಹಾಗೆ ದಕ್ಷಿಣ ಕನ್ನಡದ ಎರಡು ಪ್ರಸಿದ್ಧವಾದ ಪ್ರಶಸ್ತಿಗಳು ನನಗೆ ಬಂದಿವೆ. ನನ್ನ ಕಿರೀಟದಲ್ಲಿ ಎರಡು ಮುಖ್ಯ ಗರಿಗಳು ಶಿವರಾಮ ಕಾರಂತ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ. ಈ ಎರಡು ಪ್ರಶಸ್ತಿಗಳಿಗೆ ಕಾರಣಸ್ವರೂಪದಲ್ಲಿರುವ ಇಬ್ಬರು ಹಿರಿಯರನ್ನೂ ನಾನು ತುಂಬ ಗೌರವದಿಂದ ಕಂಡವನು. ಆದುದರಿಂದ ಈ ಎರಡು ಪ್ರಶಸ್ತಿಗಳ ಬಗೆಗೂ ನನಗೆ ಗೌರವ ಪ್ರೀತ್ಯಾದರಗಳಿವೆ.

**ಕೃಷ್ಣ ಭಟ್** : ಇತ್ತೀಚೆಗೆ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರದಿಂದ ಕೊಡಮಾಡುವ, ತಾಳ್ತಜೆ ಕೇಶವ ಭಟ್ಟರ ಹೆಸರಿನಲ್ಲಿರುವ 'ಕೇಶವ ಪ್ರಶಸ್ತಿ' ಕೊಟ್ಟ ಬಳಿಕ ನಿಮಗೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಗೌರವ ಬಂತು.

**ಜಿ.ವೆಂ.**: ಹೌದು, ಕೇಶವ ಪ್ರಶಸ್ತಿ ಬಂತು. ಅದೊಂದು ದಕ್ಷಿಣ ಕನ್ನಡದ ಪ್ರಶಸ್ತಿಯೇ. ಇಲ್ಲೇ ಬಂದು ಕೊಟ್ಟದ್ದು ನೀವು. ಟಿ. ಕೇಶವ ಭಟ್ಟರನ್ನು ನಾನು ತುಂಬ ಆತ್ಮೀಯವಾಗಿ ಬಲ್ಲೆ. ಅವರು ನಿಮ್ಮೂರವರಾದರೂ ಬೆಂಗಳೂರಿನಲ್ಲೇ ಇದ್ದವರು. ಈಗಿನ ಕನ್ನಡ ವಿದ್ವಾಂಸರಲ್ಲಿ ಛಂದಸ್ಸಿನ ಬಗ್ಗೆ ಆಳವಾಗಿ ತಿಳಿದುಕೊಂಡಿದ್ದವರು ಕೇಶವ ಭಟ್ಟರು. ನಮ್ಮಲ್ಲಿ ಛಂದಸ್ಸನ್ನು ಚೆನ್ನಾಗಿ ತಿಳಕೊಂಡವರು ಮತ್ತು ಆ ಬಗ್ಗೆ ತುಂಬ ಬರೆದವರು ವೆಂಕಟಾಚಲ ಶಾಸ್ತ್ರಿಗಳೇ. ಬಿ. ಎಂ. ಶ್ರೀಕಂಠಯ್ಯ ಅವರು ಛಂದಸ್ಸಿನ ಕ್ಷೇತ್ರದಲ್ಲಿ ಕೆಲಸ ಮಾಡಿದ್ದರು. ಆ ಬಳಿಕ ಶಾಸ್ತ್ರಿಗಳೇ ಆ ಕ್ಷೇತ್ರದಲ್ಲಿ ವಿಸ್ತಾರವಾಗಿ ಕೆಲಸ ಮಾಡಿದವರು. ಈಗಿನವರಲ್ಲಿ ಇನ್ನ್ಯಾರೂ ಅವರಷ್ಟು ಕೆಲಸ ಮಾಡಿಲ್ಲ. ಆದರೆ ಆ ಶಾಸ್ತ್ರದಲ್ಲಿ ಹೆಚ್ಚು ನುರಿತವರಾದರೂ ಟಿ. ಕೇಶವ ಭಟ್ಟರು ಆ ಬಗ್ಗೆ ಬರೆಯಲಿಲ್ಲ. ಆದರೆ ಒಂದು ಚಂಪೂಕಾವ್ಯವನ್ನೇ ಅವರು ಬರೆದುದುಂಟು. ಅವರು ಆಶುಕವಿಗಳು. ಯಾವುದೇ ಛಂದಸ್ಸಿನಲ್ಲಿ ಪದ್ಯರಚನೆ ಮಾಡುವ ಸಾಮರ್ಥ್ಯ ಅವರಲ್ಲಿತ್ತು. ಅವರ ಅಣ್ಣನ ಮಗ ತಾಳ್ತಜೆ ವಸಂತಕುಮಾರ್ ನನಗೆ ತುಂಬ ಚೆನ್ನಾಗಿ ಗೊತ್ತು. ಮುಂಬಯಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿ ಈಗ ಊರಿನಲ್ಲಿ ನೆಲಸಿದ್ದಾರೆ. ಅವರು ಪರ್ಯಾಯಪದಕೋಶದ ವಿಚಾರವಾಗಿ ನನ್ನೊಡನೆ



ತುಂಬಾ ವಿಚಾರವಿನಿಮಯ ಮಾಡಿದ್ದರು. ಇನ್ನಾದರೂ ಅವರು ಆ ಕೆಲಸವನ್ನು ಮಾಡಬಹುದು. ಕನ್ನಡದಲ್ಲಿ ಇನ್ನೂ ಹಲವಾರು ಬಗೆಯ ನಿಘಂಟುಗಳ ರಚನೆಗೆ ಅವಕಾಶಗಳಿವೆ. ಯುವವಿದ್ವಾಂಸರು ಮುಂದೆ ಬರಬೇಕು.

**ಎಸ್. ಟಿ. ಭಟ್** : ನಿಮ್ಮ ಜೊತೆಗೆ ಇಂಗ್ಲಿಷ್-ಕನ್ನಡ ನಿಘಂಟು ರಚನೆಯಲ್ಲಿ ಸಹಕಾರ ನೀಡಿದ ಪ್ರೊ. ಎಚ್. ಕೆ. ರಾಮಚಂದ್ರಮೂರ್ತಿಗಳು ನಮ್ಮ ಉಡುಪಿಯ ಎಂ.ಜಿ.ಎಂ. ಕಾಲೇಜಿನಲ್ಲಿ ಸ್ವಲ್ಪ ಕಾಲ ಇಂಗ್ಲಿಷ್ ಉಪನ್ಯಾಸಕರಾಗಿದ್ದರು.

**ಜಿ.ವೆಂ.**: ಹೆಚ್. ಕೆ. ರಾಮಚಂದ್ರ ನನ್ನ ವಿದ್ಯಾರ್ಥಿ. ಇಂಟರ್‌ಮೀಡಿಯೆಟ್‌ನಲ್ಲಿ ಸ್ಟೂಡೆಂಟ್ ಆಗಿದ್ದರು. ಆಮೇಲೆ ಉಪನ್ಯಾಸಕರಾಗಿ ಉಡುಪಿಗೆ ಹೋದರು. ಅಲ್ಲಿ ಅವರಿಗೆ ಹೆಚ್ಚಿನ ಅನುಕೂಲವಾಗಲಿಲ್ಲ. ಆಮೇಲೆ ನ್ಯಾಷನಲ್ ಕಾಲೇಜು ಸೇರಿಕೊಂಡರು. ತುಂಬ ಒಳ್ಳೆಯ ಗಮಕಿ ಅವರು. ಒಳ್ಳೆಯ ನಟ. ದೊಡ್ಡ ಪ್ರಮಾಣದ ನಿಘಂಟು ರಚಿತವಾಗುವಾಗ ವಿದ್ವಾಂಸರ ದೊಡ್ಡ ಸಮೂಹವೇ ಅದರಲ್ಲಿ ತೊಡಗಿಕೊಳ್ಳಬೇಕಾಗುತ್ತದೆ. ಸಣ್ಣ ಪ್ರಮಾಣದ ನಿಘಂಟಾದರೂ ಕೆಲಸವೇನೂ ಸಣ್ಣದಲ್ಲ. ಪ್ರೊ. ಶೇಷಗಿರಿ ರಾವ್, ರಾಮಚಂದ್ರಮೂರ್ತಿ, ರಾಜ್ಯಶ್ರೀ ಸತೀಶ್ – ಮೊದಲಾದವರು ನಿಘಂಟುರಚನೆಯಲ್ಲಿ ನನ್ನೊಂದಿಗೆ ಸಹಸಂಪಾದಕರಾಗಿ ದುಡಿದಿದ್ದಾರೆ. ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿ ಬಿಡಿ – ಅಲ್ಲಿ ಈ ಕ್ಷೇತ್ರದಲ್ಲಿ ಬಹಳ ವರ್ಷ ಕೆಲಸ ಮಾಡಿದ, ಸಹಕಾರ ನೀಡಿದ ಕಿರಿಯರಿದ್ದರು. ಅವರಲ್ಲಿ ಕೆಲವರು ಸ್ವತಂತ್ರವಾಗಿಯೂ ಕೆಲವು ನಿಘಂಟುಗಳನ್ನು ರಚಿಸಿದ್ದಾರೆ.

**ಪಾದೇಕಲ್ಲು** : ಡಿವಿಜಿಯವರ ಬಗ್ಗೆ ನಮ್ಮ ಕಡೆ ತುಂಬ ಉಪನ್ಯಾಸ ಮಾಡಿದ್ದೀರಿ. ಡಿವಿಜಿಯವರನ್ನು ನಮ್ಮ ಕಡೆಯ ಜನ ತುಂಬ ಗೌರವಿಸುತ್ತಾರೆ.

**ಜಿ.ವೆಂ.**: ಡಿವಿಜಿಯವರೆಂದರೆ ನಾನು ತುಂಬ ಗೌರವಿಸುವ ಹಿರಿಯರು. ಅವರಿಗೆ ನನ್ನ ಮೇಲೆ ಎಷ್ಟು ಪ್ರೀತಿಯೆಂದರೆ ನನ್ನನ್ನು ಹಿರಿ ಮಗನ ಹಾಗೆ ಕಂಡರು. ನಾಲ್ಕು ವರ್ಷ ಮೈಸೂರು ಮಹಾರಾಜ ಕಾಲೇಜಿನಲ್ಲಿ ಪಾಠ ಮಾಡಿದ್ದೆ. ಅಲ್ಲಿ ಎಂ. ಎ.ಗೆ ಪಾಠ ಮಾಡಿದ್ದೆ. ಅಲ್ಲಿ ಕೆಲಸ ಹೋಯಿತು. ಕೆಲಸ ಹುಡುಕಿಕೊಂಡು ಬೆಂಗಳೂರಿಗೆ ಬಂದು ಹೈಸ್ಕೂಲಿಗೆ ಮೇಸ್ಟ್ರಾಗಿ ಸೇರಿದೆ. ಆಮೇಲೆ ವಿದ್ಯಾಪಕ್ಷಪಾತಿಗಳು ನಾವೇ ಕೆಲವರು ಸೇರಿಕೊಂಡು ವಿಜಯಾ ಕಾಲೇಜು ಮಾಡಿದೆವು. ಅಲ್ಲಿ ಪ್ರಿನ್ಸ್‌ಪಾಲ್ ಆಗಿ ನಿವೃತ್ತನಾದೆ. ನಾನು ಈ ಊರಿಗೆ ಬಂದಾಗ ಕನ್ನಡ ಪಾಠ ಮಾಡುತ್ತಿದ್ದರೂ ಸೂಟ್ ಹಾಕಿಕೊಂಡು ಕನ್ನಡ ಪಾಠ ಮಾಡುತ್ತಿದ್ದೆ. ಟಿ. ಎಸ್. ರಾಮಚಂದ್ರರಾಯರು 'ಕನ್ನಡಕ್ಕೆ ಸೂಟ್ ಧಾರಣೆ' ಎಂದು ನನ್ನ ಬಗ್ಗೆ ಒಂದು ಲೇಖನ ಬರೆದರು. ಅದು ಆಮೇಲಿನ ವಿಷಯ. ಮೈಸೂರಿನ ಕೆಲಸ ಬಿಟ್ಟುಕೊಟ್ಟು ಬೆಂಗಳೂರಿಗೆ ಬಂದ ವಿಷಯವನ್ನು ಹೇಳುತ್ತಿದ್ದೆ. ಹಾಗೆ ಹೊಸಜೀವನ ನಡೆಸಲು ಈ ಊರಿಗೆ ಬಂದಾಗ ಡಿ. ವಿ. ಗುಂಡಪ್ಪನವರನ್ನು ನೋಡಿ ಆಶೀರ್ವಾದ ಪಡೆಯುವುದಕ್ಕೆ ಹೋದೆ. ಅವರು ನನ್ನ ವಿವರಗಳನ್ನೆಲ್ಲ ತಿಳಿದುಕೊಂಡರು. ಆಮೇಲೆ ನನಗೆ ಒಂದು ಸಣ್ಣ ಪರೀಕ್ಷೆ-

ಯನ್ನಿರಿಸಿದರು. ಇದು ಪರೀಕ್ಷೆಯೆಂದರೆ ಪರೀಕ್ಷೆ; ಪರೀಕ್ಷೆಯಲ್ಲವೆಂದರೆ ಪರೀಕ್ಷೆಯಿಲ್ಲ. ನಾನು ಎಂ. ಎ. ತರಗತಿಗಳಿಗೂ ಪಾಠ ಮಾಡಿದ್ದೇನೆಂದು ಹೇಳಿದೆನಷ್ಟೆ. ಉತ್ಪಲಮಾಲಾಛಂದಸ್ಸಿನಲ್ಲಿ ಒಂದು ಪದ್ಯ ಬರೆದು ತರುವಂತೆ ಡಿವಿಜಿಯವರು ನನ್ನಲ್ಲಿ ಹೇಳಿದರು. ನಾನು ಮೊದಲಿಗೆ ಒಂದಿಷ್ಟು ಗಲಿಬಿಲಿಹೊಂದಿದರೂ, ಛಂದಃಶಾಸ್ತ್ರವನ್ನು ಅಭ್ಯಾಸ ಮಾಡಿದವನಾದುದರಿಂದ ಹಿಂದೆ ಬಂದು ಅಳೆದೂ ಸುರಿದೂ ಪ್ರಯತ್ನಿಸಿ ಒಂದು ಉತ್ಪಲಮಾಲಾವೃತ್ತವನ್ನು ಬರೆದುಕೊಂಡು ಮರುದಿನ ಅವರಲ್ಲಿಗೆ ಹೋಗಿ ತೋರಿಸಿದೆ. ಅವರಿಗೆ ಸಂತೋಷವಾಯಿತು. ಅಂತೂ ಅವರ ಪರೀಕ್ಷೆಯಲ್ಲಿ ಉತ್ತೀರ್ಣನಾದೆ. 'ಹೋಗು, ಹೈಸ್ಕೂಲು ಸೇರಿಕೊ. ಒಳ್ಳೆಯ ರೀತಿಯಲ್ಲಿ ಪಾಠಮಾಡು' ಎಂದು ಆಶೀರ್ವದಿಸಿ ಕಳುಹಿಸಿದರು. ಅದಾದಮೇಲೆ ಈ ಊರು ಸೇರಿಕೊಂಡು ಕಾಲೇಜು ಕಟ್ಟಿ ಕಷ್ಟಪಟ್ಟದ್ದಾಯಿತು.

**ಪಾದೇಕಲ್ಲು** : ಡಿವಿಜಿಯವರ ಬಗ್ಗೆ ದಕ್ಷಿಣ ಕನ್ನಡ ಉಡುಪಿಯಲ್ಲಿ ಬೇರೆ ಬೇರೆಡೆಗಳಲ್ಲಿ ಉಪನ್ಯಾಸಗಳನ್ನು ಮಾಡಿದ್ದೀರಿ.

**ಜಿ. ವೆಂ.**: ಅಲ್ಲಿ ಮಾತ್ರ ಅಲ್ಲ, ಈ ಊರಿನಲ್ಲಿಯೂ ಅನೇಕ ಕಡೆ ವಾರ್ಷಿಕವಾಗಿ ಉಪನ್ಯಾಸ ಮಾಡುತ್ತಿದ್ದೇನೆ. ಡಿವಿಜಿ ಅವರ ಅಷ್ಟು ಪುಸ್ತಕಗಳಿವೆಯಲ್ಲ. ಒಂದೊಂದು ಕಡೆ ಒಂದೊಂದು ಗ್ರಂಥದ ಬಗ್ಗೆ, ಅವರ ಜೀವನದ ಬಗ್ಗೆ, ಅವರ ವ್ಯಕ್ತಿತ್ವದ ಬಗ್ಗೆ ಮಾತಾಡಿದ್ದೇನೆ. ಇನ್ನೂ ಮಾತಾಡಲು ಉತ್ಸಾಹಿತನಾಗಿಯೇ ಇದ್ದೇನೆ. ಅವರ ಬಗ್ಗೆ ಸಾಹಿತ್ಯ ಅಕಾಡೆಮಿಯವರು ಪುಸ್ತಕ ಬರೆದುಕೊಡಲು ಕೇಳಿದರು. 'ಡಿ. ವಿ. ಗುಂಡಪ್ಪ' ಎಂಬ ಪುಸ್ತಕವನ್ನು ಬರೆದುಕೊಟ್ಟಿದ್ದೇನೆ. ಅವರು ಅವರ ಜೀವನ ಚರಿತ್ರೆ. It is almost authority on his life. ಮತ್ತೆ ಈಗ ಪುನರ್ಮುದ್ರಿತವಾಗಿ ಬಂದಿದೆ ಆ ಪುಸ್ತಕ. ಜನ ಪ್ರೀತಿಯಿಂದ ಆ ಪುಸ್ತಕವನ್ನು ಸ್ವೀಕರಿಸಿದ್ದಾರೆ. ಡಿವಿಜಿಯವರು ಸ್ಥಾಪಿಸಿದ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಸಂಪರ್ಕವೂ ನನಗೆ ಚೆನ್ನಾಗಿದೆ.

**ಪಾದೇಕಲ್ಲು** : ಸರ್, ಈಗ ಕನ್ನಡಕ್ಕೆ ವಿಶೇಷ ಸ್ಥಾನಮಾನ ಬಂದಿದೆ. ಈ ಸಂದರ್ಭದಲ್ಲಿ ಅಖಿಲ ಕರ್ನಾಟಕ ಮಟ್ಟದಲ್ಲಿ ಕನ್ನಡ ಭಾಷಾದೃಷ್ಟಿಯಿಂದ ಏನೇನು ಕೆಲಸ ಆಗಬಹುದು, ಆಗಬೇಕಾದದ್ದೇನಿದೆ, ಅತ್ಯವಶ್ಯವಾಗಿ ಆಗಬೇಕಾದದ್ದೇನಿದೆ ಎಂಬುದರ ಬಗ್ಗೆ ಕೆಲವು ಮಾತು ಹೇಳುವಿರಾ?

**ಜಿ. ವೆಂ.** : ತುಂಬಾ ಪ್ರಮುಖವಾದ ಪ್ರಶ್ನೆ ಕೇಳಿದಿರಿ, ಪಾದೇಕಲ್ಲು ವಿಷ್ಣು ಭಟ್ಟರೆ. ನಾನು ಭಾಷಾಶಾಸ್ತ್ರವನ್ನು ಆಸಕ್ತಿಯಿಂದ ಓದಿಕೊಂಡವನು. ಇವತ್ತಿಗೂ ನಾನು ಅದರ ವಿದ್ಯಾರ್ಥಿಯೆ. ಆ ಬಗೆಗೆ ವ್ಯಾಸಂಗ ಮಾಡುತ್ತಾ ಇದ್ದೇನೆ. 'ಶಾಸ್ತ್ರೀಯಭಾಷೆ' ಅನ್ನುವುದೇ ಅಸಮರ್ಪಕವಾದ ಪದಪ್ರಯೋಗ. ಎಲ್ಲಾ ಭಾಷೆಗಳೂ ಶಾಸ್ತ್ರೀಯ ಭಾಷೆಗಳೇ. ಅಶಾಸ್ತ್ರೀಯವಾದ ಭಾಷೆ ಯಾವುದಿದೆ? ಎಲ್ಲ ಭಾಷೆಗಳೂ ಕ್ರಮಬದ್ಧ-ವಾದ ಭಾಷೆಗಳೇ ಆದುದರಿಂದ ಯಾವುದೊಂದೇ ಭಾಷೆಗೆ ಶಾಸ್ತ್ರೀಯವಾದ ಭಾಷೆ ಅನ್ನುವ ಪದಪ್ರಯೋಗ ತಪ್ಪು. 'ಕ್ಲಾಸಿಕಲ್ ಲಾಂಗ್ವೇಜ್' ಅನ್ನುವುದಕ್ಕೆ ಅನುವಾದ

ಮಾಡಬೇಕಾದರೆ 'ಪ್ರಾಚೀನ ಸಮೃದ್ಧಭಾಷೆ', 'ಅಭಿಜಾತಭಾಷೆ' ಎಂದು ಕರೆದು-ಕೊಳ್ಳಬೇಕು. ಅದು ಬಿಟ್ಟು 'ಶಾಸ್ತ್ರೀಯಭಾಷೆ' ಎಂದು ಹೇಳುವುದು ಸರಿಯಲ್ಲ. ಭಾರತದಲ್ಲಿ ಹೀಗೆ ಮೊದಲಿಗೆ ಕರೆದವರು ಕನ್ನಡದವರು ಅಲ್ಲ. ದೆಹಲಿಯಿಂದ ಕರ್ನಾಟಕ ಸರಕಾರಕ್ಕೆ ಹಿಂದಿಯಲ್ಲಿ ಒಂದು ಪತ್ರ ಬಂತು. ಅದರಲ್ಲಿದ್ದುದು 'ಕ್ಲಾಸಿಕಲ್ ಲ್ಯಾಂಗ್ವೇಜ್' ಬಗ್ಗೆ ತೀರ್ಮಾನ ಮಾಡುವುದಕ್ಕೆ ಸಂಬಂಧಿಸಿದ ವಿಷಯ. ಅದರಲ್ಲಿ 'ಕ್ಲಾಸಿಕಲ್ ಲ್ಯಾಂಗ್ವೇಜ್' ಅಂದರೆ ಏನೆಂದು ಗೊತ್ತಿಲ್ಲದ ಗುಮಾಸ್ತ 'ಶಾಸ್ತ್ರೀಯಭಾಷೆ' ಎಂದು ಅನುವಾದ ಮಾಡಿ ಪತ್ರ ಬರೆದಿದ್ದ. ಅದಕ್ಕೆ ಉತ್ತರ ಕೊಡುವುದಕ್ಕೆ ಕರ್ನಾಟಕ ಸರಕಾರದ ವತಿಯಿಂದ ಒಂದು ಸಣ್ಣ ಸಮಿತಿ ರಚನೆಮಾಡಿದರು. ಶ್ರೀಮತಿ ಉಷಾ ಗಣೇಶ್ ಅವರು ಆ ಸಮಿತಿಗೆ ಕಾರ್ಯದರ್ಶಿ ಆಗಿದ್ದರು. ನನ್ನನ್ನು ಆ ಸಮಿತಿಗೆ ಪ್ರಧಾನಸದಸ್ಯನನ್ನಾಗಿ ಮಾಡಿದರು. ನಾನು ಸಮಿತಿಯಲ್ಲಿ 'ಉಷಾ ಗಣೇಶ್ ಅವರೆ, ನೀವು ನಮ್ಮ ಕಾರ್ಯದರ್ಶಿ. ದಯವಿಟ್ಟು ಅವರಿಗೆ ಹೇಳಿ – ಶಾಸ್ತ್ರೀಯಭಾಷೆ ಅನ್ನುವ ಪದವೇ ತಪ್ಪು. ನಾವು ಬೇರೆ ಪದವನ್ನು ಮಾಡಿಕೊಡುವ. ಅವರು ಅದನ್ನು ಉಪಯೋಗ ಮಾಡಲಿ' ಎಂದು ಹೇಳಿದೆ. ಅದಕ್ಕೆ ಅವರು 'ವೆಂಕಟಸುಬ್ಬಯ್ಯ ಅವರೆ, ಅದು ಬೇರೆ ಪ್ರಶ್ನೆ. ಅವರು ಕೇಳಿದ ಪ್ರಶ್ನೆಗೆ ಉತ್ತರ ಕೊಡೋಣ. ಶಾಸ್ತ್ರೀಯಭಾಷೆ ಎಂದೇ ಮಾಡೋಣ' ಅಂದರು. 'ಹಾಗೆ ಮಾಡಬೇಡಿ. ಆ ಶಬ್ದವೇ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತದೆ. ನೀವು ಉತ್ತರ ಕೊಟ್ಟರೆ ಆ ಶಬ್ದಪ್ರಯೋಗವನ್ನು ಒಪ್ಪಿ-ಕೊಂಡ ಹಾಗಾಗುತ್ತದೆ' ಅಂದೆ. 'ಇಲ್ಲ ವೆಂಕಟಸುಬ್ಬಯ್ಯ ಅವರೆ, ಈ ಪತ್ರಕ್ಕೆ ಉತ್ತರ ಕೊಡಬೇಕಾದರೆ ಅದನ್ನೆ ಇಟ್ಟುಕೊಳ್ಳಬೇಕಾಗುತ್ತದೆ. ಅದನ್ನು ಬೇರೆ ಚರ್ಚೆ ಮಾಡೋಣ' ಅಂದರು. 'ತಪ್ಪಾಗುತ್ತದೆ' ಅಂದೆ. 'ಬಿಟ್ಟುಬಿಡಿ' ಅಂದರು. ನಾನು ಬಿಟ್ಟುಬಿಟ್ಟೆ. ಅವರು ಇಟ್ಟುಬಿಟ್ಟರು. ಅದು ಉಳಿದುಹೋಯಿತು. ಈಗ ಕೆಲವರು 'ಅಭಿಜಾತಭಾಷೆ' ಎಂದು ಬಳಸುತ್ತಾರೆ. ಆದರೆ 'ಶಾಸ್ತ್ರೀಯಭಾಷೆ' ಎಂಬುದು ಗಟ್ಟಿಯಾಗಿ ನಿಂತುಬಿಟ್ಟಿದೆ. ಬದಲಾಗಿಲ್ಲ. ಆ ಭಾಷೆ ನಿಘಂಟಿನ ಒಳಗೆ ಬಂದು ಬಿಡುತ್ತದೆ. ಒಮ್ಮೆ ಅಪಪ್ರಯೋಗಗಳು ರೂಢಿಗೆ ಬಂದರೆ ಅವನ್ನು ಸರಿಪಡಿಸುವುದು ಕಷ್ಟವಾಗುತ್ತದೆ. ಒಂದು ವೇಳೆ ತಿಳಿದವರು ಸರಿಪಡಿಸಿಕೊಂಡರೂ ಸಾಮಾನ್ಯಬಾಷೆ-ಯಲ್ಲಿ ಆ ಪ್ರಯೋಗವೇ ಉಳಿದುಬಿಡುತ್ತದೆ. ಕೊನೆಗೆ ನಿಘಂಟುಕಾರನೂ ಅದಕ್ಕೆ ಮಾನ್ಯತೆ ಕೊಡಬೇಕಾಗುತ್ತದೆ. ರೂಢಿ ಎಂಬುದಕ್ಕೆ ಬಲವಾದ ಸ್ಥಾನವಿದೆಯಲ್ಲ.

ಇದೀಗ ಹೇಳಿದ್ದು 'ಶಾಸ್ತ್ರೀಯಭಾಷೆ' ಎಂಬ ಶಬ್ದ ಪ್ರಯೋಗದ ಬಗೆಗೆ. ಇದೀಗ ಆ ವಿಶೇಷ ಸ್ಥಾನಮಾನ ಗಳಿಕೆ ಮತ್ತು ಅವರ ಪರಿಣಾಮ, ಅನುಕೂಲತೆ-ಗಳು ಮತ್ತು ಆ ಹಿನ್ನೆಲೆಯಲ್ಲಿ ಆಗಬೇಕಾದ ಕೆಲಸಗಳ ಬಗೆಗೆ ಹೇಳಬೇಕಾಗಿದೆ. ಈ ಸ್ಥಾನಮಾನ ಘೋಷಣೆಯಾದ ಮೇಲಿನ ಸ್ಥಿತಿ ಹೇಗಿದೆಯೆಂಬುದರ ಕುರಿತು ಚಿಂತಿಸಿದರೆ ಪರಿಸ್ಥಿತಿ ಬಹಳ ಅನುಕೂಲಕರವಾಗಿ ಏನೂ ಇಲ್ಲ. ಶಾಸ್ತ್ರೀಯ ಭಾಷೆಗೆ ಕೊಟ್ಟ ಅನುದಾನ ನಮಗೆ ಬಂದಿಲ್ಲ. ಹೆಸರು ಮಾತ್ರ ಬಂದಿದೆ. ತಮಿಳುನಾಡಿಗೆ ಹೆಸರೂ ಬಂದಿದೆ, ಅನುದಾನವೂ ಬಂದಿದೆ. ಒಂದು ವರ್ಷಕ್ಕೆ ೩೦ ಕೋಟಿ ರೂಪಾಯಿಗಳನ್ನು ಶಾಸ್ತ್ರೀಯಭಾಷೆಗಳ ಅಭಿವೃದ್ಧಿಕಾರ್ಯಗಳಿಗೆ ಕೊಡುತ್ತಾರೆ. ೩೦

ಕೋಟಿಯಲ್ಲಿ ೧೫ ಕೋಟಿ ಸಂಸ್ಕೃತಕ್ಕೆ ಹೋಗುತ್ತದೆ. ಇನ್ನು ೧೫ ಕೋಟಿ ಇರುತ್ತದೆ. ಕೇಂದ್ರ ಸರಕಾರದ ಅನುದಾನದ ಆ ದುಡ್ಡು ನಮಗೆ ಬಂದಿಲ್ಲ. ಬಂದರೆ ಮಾಡಬೇಕಾದ ಕೆಲಸ ತುಂಬ ಇದೆ. ಮೊದಲನೆ ಕೆಲಸವೆಂದರೆ ಭಾಷಾ ಸರ್ವೇಕ್ಷಣೆ ಆಗಬೇಕು. ನನ್ನ ಸಂಪಾದಕತ್ವದ ಬೃಹತ್ ಕನ್ನಡ ನಿಘಂಟು ಸಿದ್ಧವಾಗಿಯೇ ಇದೆ. ಆದರೆ ಭಾಷಾಶಾಸ್ತ್ರ – ನಿಘಂಟುಶಾಸ್ತ್ರಗಳ ಹಿನ್ನೆಲೆಯಿಂದ ನಾನು ಹೇಳುವು-ದೇನೆಂದರೆ, ಅದು ಸಾಲದು; ಆ ನಿಘಂಟು ನಿಜವಾಗಿಯೂ ಸಾಲದು. ಇನ್ನೂ ಅದಕ್ಕೆ ಸೇರಬೇಕಾದದ್ದು ಬಹಳಷ್ಟು ಇದೆ. ಅದಕ್ಕೋಸ್ಕರವಾಗಿ ಭಾಷಾಸರ್ವೇಕ್ಷಣೆ ಕ್ರಮಬದ್ಧವಾಗಿ, ವಿಸ್ತೃತವಾಗಿ ಆಗಬೇಕು. ಕನ್ನಡನಾಡಿನ ಎಲ್ಲ ಕಡೆಗಳಲ್ಲಿ ಭಾಷೆ-ಯನ್ನು ಹೇಗೆ ಉಪಯೋಗ ಮಾಡುತ್ತಾರೆ ಅನ್ನುವುದನ್ನು ಇಲ್ಲಿ ಬರೆಯಬೇಕಾದ ಅಗತ್ಯ ಇದೆ. ಗ್ರಿಯರ್‌ಸನ್ ಎನ್ನುವವನು ಭಾರತದಲ್ಲಿ ಬಹಳ ಹಿಂದೆ ಒಂದು ಭಾಷಾ ಸರ್ವೇಕ್ಷಣೆ ಮಾಡಿದ್ದ. ಅದೇ ಪ್ರಾರಂಭದ್ದು ಮತ್ತು ಕೊನೆಯದ್ದು. ಈ ರೀತಿಯಲ್ಲಿ ನಿಘಂಟು ಮಾಡಬೇಕಾದರೆ ನಿಜವಾಗಿ ಮೊದಲನೆಯ ಕೆಲಸವೆಂದರೆ ಭಾಷಾಸರ್ವೇಕ್ಷಣೆ ಮಾಡಬೇಕು. ಆದರೆ ನಾವು ಇದನ್ನು ಮಾಡದೆಯೇ ಬಹಳ ದೊಡ್ಡ ನಿಘಂಟು ಮಾಡಿದ್ದೇವೆ.

ಇವತ್ತಿಗೂ ಬೀದರ್ ನಗರದಲ್ಲಿ ಅವರು ಉಪಯೋಗ ಮಾಡುವ ಬಾಷೆ-ಯೊಳಗೆ ಬೇಕಾದಷ್ಟು ಬೇರೆ ಬೇರೆ ಭಾಷೆಗಳ ಎರವಲು ಶಬ್ದಗಳಿವೆ. ನಿಘಂಟಿನಲ್ಲಿ ನಮೂದಾಗದ ಎಷ್ಟೋ ಪದಪ್ರಯೋಗಗಳಿವೆ. ಕೊಳ್ಳೆಗಾಲದ ಕಡೆ ಚಾಮರಾಜ-ನಗರದ ಕಡೆ ಈಗಲೂ ಕೂಡ ನಿಘಂಟುಗಳಲ್ಲಾಗಲಿ, ಸಾಹಿತ್ಯಕೃತಿಗಳಲ್ಲಾಗಲಿ ನಮೂದಾಗದ ಬೇರೆ ಬೇರೆ ಮಾತುಗಳಿವೆ. ಆದುದರಿಂದ ಉಡುಪಿಯಲ್ಲಿ ಆಡತಕ್ಕ ಮಾತು, ಧಾರವಾಡದ ಕಡೆ ಆಡತಕ್ಕ ಮಾತು, ಬಿಜಾಪುರ, ಕೋಲಾರ, ಬೆಳಗಾವಿ ಕಡೆ ಆಡತಕ್ಕ ಮಾತು – ಇವುಗಳಲ್ಲಿ ಭೇದ ಏನಿದೆಯೋ, ಇತರ ಭಾಷೆಯಿಂದ ಏನು ಬಂದು ಸೇರಿಕೊಂಡಿದೆಯೋ ಇವೆಲ್ಲವನ್ನೂ ಅಚ್ಚುಕಟ್ಟಾಗಿ ದಾಖಲು ಮಾಡಬೇಕಾದರೆ ಸರ್ವೇ ಕೆಲಸ ಆಗಬೇಕು. ಅದೇನೂ ಬಹಳ ಸುಲಭವಾಗಿ ಮಾಡಿ ಮುಗಿಸಬಹುದಾದ ಕೆಲಸವಲ್ಲ. ತುಂಬ ಜನ ಬೇಕು ಅದಕ್ಕೆ. ಆಯಾ ಕಡೆ ಜನ ಹುಡುಕಿ ಈ ಕೆಲಸವನ್ನು ಮಾಡಬೇಕು. ಪ್ರಶ್ನಾವಳಿ (ಕ್ವೆಶ್ಚನೇರ್) ತಯಾರು ಮಾಡಬೇಕು. ನಮ್ಮ ಸಾಹಿತ್ಯ ಪರಿಷತ್ತಿನ ನಿಘಂಟು ಕಛೇರಿ ಸಕ್ರಿಯವಾಗಿ ಇದ್ದರೆ ಇದನ್ನೆಲ್ಲ ವ್ಯವಸ್ಥಿತವಾಗಿ ಮಾಡಬಹುದಿತ್ತು. ಆದರೆ, ಆ ಕಛೇರಿಗೆ ಬೀಗ ಹಾಕಿ ಸೀಲ್ ಮಾಡಿ ಎಂದೆಂದಿಗೂ ತೆಗೆಯಬಾರದು ಎಂದು ಮುಚ್ಚಿಬಿಟ್ಟಿದ್ದಾರೆ! ಎಂತಹ ಒಳ್ಳೆಯ ಕಛೇರಿ ತಯಾರು ಮಾಡಿದ್ದೆ; ಎಷ್ಟು ಹುಡುಗರನ್ನು ಈ ಕ್ಷೇತ್ರದಲ್ಲಿ ತಯಾರು ಮಾಡಿದ್ದೆ! ಆಕ್ಸ್‌ಫರ್ಡ್ ಯುನಿವರ್ಸಿಟಿಯಲ್ಲಿ ದೊಡ್ಡ ಪ್ರಮಾಣದ ಆಕ್ಸ್‌ಫರ್ಡ್ ನಿಘಂಟನ್ನು ಮಿಡಲ್ಟನ್ ಮರ್ರೆ ಆರಂಭ ಮಾಡಿದಾಗ, ೧೫೦ ವರ್ಷಗಳ ಹಿಂದೆ, ಏನು ಕಾಗದ ಪತ್ರಗಳು ಇದ್ದವೋ ಅವನ್ನೆಲ್ಲ ದಾಖಲೆಗಳಾಗಿ ಇಟ್ಟುಕೊಂಡು ದೊಡ್ಡ ಪ್ರೆಸ್ಸನ್ನೂ ಇಟ್ಟುಕೊಂಡು ೧೫೦ ವರ್ಷದ ಎಲ್ಲ ದಾಖಲೆಗಳನ್ನೂ ವಸ್ತುಗಳನ್ನೂ ಕಾಪಾಡಿಕೊಂಡು ಬಂದಿದ್ದಾರೆ. ನಮ್ಮಲ್ಲಿ ೬೦ ವರ್ಷ ಕಷ್ಟಪಟ್ಟು ತಯಾರು ಮಾಡಿದ

ಕಛೇರಿ ಮುಚ್ಚಿಬಿಟ್ಟು ಪಾರಿದ ಕಡೆಗೆ ಹೋಗುತ್ತಿದ್ದೇವೆ. ಆ ಕಚೇರಿಯ ಮುಚ್ಚಿದ ಬಾಗಿಲು ತೆಗೆಸಿ ಮುಂದುವರಿಸುವುದಕ್ಕೆ ಸಹಾಯ ಬರುತ್ತದೆ ಈ ಹಣ ಬಂದರೆ. ಆದರೆ ಹಣ ಬರುವುದಕ್ಕೇ ಅವಕಾಶ ಇಲ್ಲದಂತಾಗಿದೆ.

ಇನ್ನು, ದಕ್ಷಿಣ ಕನ್ನಡದ ಜನ ವ್ಯಾಕರಣಬದ್ಧವಾಗಿ ಮಾತನಾಡುತ್ತಾರೆ ಎಂದು ಹೇಳಿಕೊಳ್ಳುವುದುಂಟು. ವ್ಯಾಕರಣ ಇರುವುದು ದಕ್ಷಿಣ ಕನ್ನಡಕ್ಕೆ ಮಾತ್ರ ಅಲ್ಲ. ಎಲ್ಲರಿಗೂ, ಎಲ್ಲ ಭಾಷೆಗಳಿಗೂ ಬೇಕೇ ಬೇಕಾದ ವಿಚಾರ ಅದು. ಭಾಷೆ ವ್ಯಾಕರಣಬದ್ಧವಾಗಿ ಇಲ್ಲದಿದ್ದರೆ ಅದಕ್ಕೆ ಸಂವಹನಶಕ್ತಿಯೇ ಬರಲಾರದು. ಕನ್ನಡ ನಾಡಿನಲ್ಲಿ ಕನ್ನಡಿಗರು ಕನ್ನಡವನ್ನು ಬೇರೆ ಬೇರೆ ರೀತಿಯಲ್ಲಿ ಮಾತಾಡುತ್ತಾರೆಂಬುದು ಸರಿಯೇ – ಎಲ್ಲ ಭಾಷೆಗಳಲ್ಲೂ ಹೀಗೆ ವಿವಿಧ ಉಪಭಾಷಾವಲಯಗಳಿರುತ್ತವೆ. ಯೋಚಿಸಿದರೆ ದಕ್ಷಿಣ ಕನ್ನಡದವರ ಮಾತಿಗೂ ನಮ್ಮ ಕಡೆಯದಕ್ಕೂ ಅಷ್ಟೊಂದು ವ್ಯತ್ಯಾಸ ಇಲ್ಲ. ಧಾರವಾಡಕ್ಕೂ ನಮಗೂ ಆಡುಮಾತಿನಲ್ಲಿ ವ್ಯತ್ಯಾಸ ತುಂಬಾ ಇದೆ. ಆ ಕಡೆಯಲ್ಲಿ ಕನ್ನಡದೊಂದಿಗೆ ಮರಾಠಿಭಾಷೆ ಬಳಕೆ ಮಾಡುತ್ತಾರೆ. ದಕ್ಷಿಣ ಕನ್ನಡದವರು ತಮ್ಮ ಮಾತಿನೊಳಗೆ ತುಳು ಶಬ್ದ ಬಳಸಿದರೂ ಅದು ದ್ರಾವಿಡ ಭಾಷೆಯೇ ಆಯಿತು. ಆ ರೀತಿಯ ಬಳಕೆಯಲ್ಲಿ ನಮ್ಮ ಭಾಷೆಯ ಹಳೆ ಶಬ್ದಗಳು ಉಳಿದಿವೆ ಎಂದು ಗೊತ್ತಾಗುತ್ತದೆ. ಹೀಗೆ ಧಾರವಾಡ, ಬೀದರ್, ಗುಲ್ಬರ್ಗ, ರಾಯ-ಚೂರು, ಚಾಮರಾಜನಗರ, ಮಂಗಳೂರು, ಉಡುಪಿ – ಇಲ್ಲಿ ಇರುವ ಶಬ್ದಗಳನ್ನು ಸರ್ವೇಕ್ಷಣ ಮಾಡಿ ಕೂಡಿಹಾಕಬೇಕಾದ ಅಗತ್ಯ ಇದೆ. ವಿಶೇಷ ಸ್ಥಾನಮಾನದ ಆಧಾರದ ಅನುದಾನ ಬಂದರೆ ಮೊದಲು ಈ ಸರ್ವೇಕ್ಷಣ ಯೋಜನೆಯನ್ನು ಅನುಷ್ಠಾನಕ್ಕಾಗಿ ಕೈಗೆ ತೆಗೆದುಕೊಳ್ಳಬೇಕು. ವರ್ಷಕ್ಕೆ ಎರಡು ಕೋಟಿ ಕೊಟ್ಟರೂ ಈ ಯೋಜನೆಗೆ ಸಾಕಾಗುವುದಿಲ್ಲ. ಹಾಗೆ ಪ್ರಯತ್ನಪಟ್ಟು ಸರ್ವೇ ಕ್ಷಣೆ ಮಾಡಿದರೆ ಕನ್ನಡ ಭಾಷೆಯ ಚರಿತ್ರೆಯನ್ನು ಬರೆಯುವುದಕ್ಕೆ ಅಧಿಕಾರಯುತವಾದ ವಸ್ತುಸಂಗ್ರಹ ಸಿಗುತ್ತದೆ; ವಿಷಯಸಂಗ್ರಹ ಸಿಗುತ್ತದೆ. ಅದನ್ನು ಮಾಡಬೇಕು.

ಆಮೇಲೆ ಯಾವ ಯಾವ ಕಡೆಯಿಂದ ಯಾವ ಯಾವ ಶಬ್ದಗಳು ಬಂದಿವೆ ಎನ್ನುವ ನಿಘಂಟನ್ನು ಸಿದ್ಧಮಾಡಬೇಕು. ಭಾವೈಕ್ಯವನ್ನು ಭಾಷೈಕ್ಯದ ಮೂಲಕ ಮಾಡಿ-ಕೊಳ್ಳಬಹುದು. ಮೊದಲನೆಯ ಹಣವನ್ನು ಇದಕ್ಕೆ ಉಪಯೋಗ ಮಾಡಬೇಕು. ಈ ಕೆಲಸದಲ್ಲಿ ಉತ್ಸಾಹವುಳ್ಳ ಬಹಳ ಜನ ಇಲ್ಲ. ನಾನೇನೋ ತರಬೇತಿ ನೀಡಿ ಅಂತಹವರನ್ನು ಇನ್ನೂ ತಯಾರು ಮಾಡುವುದಕ್ಕೆ ಸಿದ್ಧ. ಆದರೆ ನನಗೂ ವಯಸ್ಸಾಗುತ್ತಾ ಬಂತು. ಎಲ್ಲಿಯ ತನಕ ಮಾಡಬಹುದು? ಭಾಷಾವಿಷಯಗಳಲ್ಲಿ ಕೆಲಸ ಮಾಡಬಲ್ಲ ಉತ್ಸಾಹಿಗಳು ಮುಂದೆ ಬರಬೇಕಾಗಿದೆ. ವೈಯಕ್ತಿಕವಾಗಿ ಕೆಲಸ ಮಾಡುವವರು ಬೇಕಾದಂತೆಯೇ ತಂಡಗಳಲ್ಲಿ ಸೇರಿಕೊಂಡು ಕೆಲಸ ಮಾಡಬಲ್ಲವರೂ ಬೇಕಾಗಿದೆ.

**ಚಾದೇಕಲ್ಲು:** ನಮ್ಮ ಭಾಷೆಗೆ ಸದಾಕಾಲ ನಿಘಂಟು ತಯಾರುಮಾಡುವ ತಜ್ಞರ ತಂಡ ಮತ್ತು ನಿಘಂಟು ಕಛೇರಿ ಖಾಯಂ ಇರಬೇಕು ಎಂಬ ಅಭಿಪ್ರಾಯವನ್ನು ನೀವು

ಒಂದೊಮ್ಮೆ ಹೇಳಿದ್ದಿರಿ. ತುಳು ನಿಘಂಟು ಯೋಜನೆ ನಡೆದ ಉಡುಪಿ ಅಂತಹ ಕೇಂದ್ರವಾಗಬಹುದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೀರಿ.

**ಜಿ.ವೆಂ.:** ಖಂಡಿತವಾಗಿಯೂ. ಒಂದು ಖಾಯಂ ಸಮಿತಿ 'ನಿಘಂಟು ಸಮಿತಿ' ಎಂಬ ಹೆಸರಿನಲ್ಲಿ ನಮ್ಮ ಭಾಷೆಗೆ ಇರಲೇಬೇಕು. ಅಂತಹ ತಜ್ಞರ ಸಮಿತಿಯನ್ನು ತಯಾರು ಮಾಡಿ ಅದಕ್ಕೆ ಶಾಶ್ವತವಾದ ಅಧಿಕಾರಯುತವಾದ ಅಸ್ತಿತ್ವವನ್ನು ಕೊಟ್ಟು ಸರಕಾರ ಕಚೇರಿ ತೆರೆಸಿ ಸತತವಾಗಿ ಭಾಷೆಯ ಕೆಲಸ ಮಾಡುವಂತೆ ಮಾಡಬೇಕು. ನಮ್ಮ ನಾಡಿನಲ್ಲಿ ನಮ್ಮ ಭಾಷೆಗೆ ಒಂದು ನಿಘಂಟು ಕಚೇರಿ ಶಾಶ್ವತವಾಗಿ ಇರಲೇಬೇಕು. ಎಲ್ಲ ಬಾಷೆಗಳಿಗೂ ಇಂತಹ ವ್ಯವಸ್ಥೆ ಬೇಕು. ನಿಘಂಟು ಸಿದ್ಧಪಡಿಸುವ ಕೆಲಸವೆಂಬುದು ಮಾಡಿ ಮುಗಿಯುವುದೇ ಇಲ್ಲ. ಭಾಷೆಯಲ್ಲಿ ಹಳೆಯ ಶಬ್ದಗಳು ಮರೆಯಾಗಿ ಹೋಗುತ್ತಾ ಇರುತ್ತವೆ. ಹೊಸ ಶಬ್ದಗಳು ಬಳಕೆಗೆ ಬರುತ್ತಾ ಇರುತ್ತವೆ. ಇರುವ ನಿಘಂಟುಗಳನ್ನು ಪರಿಷ್ಕರಿಸುತ್ತಲೇ ಇರಬೇಕಾಗುತ್ತದೆ. ಹೊಸ ಆವಶ್ಯಕತೆ-ಗಳಿಗೆ ತಕ್ಕಂತೆ ಹೊಸ ನಿಘಂಟುಗಳು ರಚಿತವಾಗುತ್ತಲೇ ಇರಬೇಕಾಗುತ್ತದೆ.

ತುಳುನಿಘಂಟು ಸಂಪುಟವೊಂದರ ಬಿಡುಗಡೆಯ ಸಮಯದಲ್ಲಿ ಒಂದು ವಾರದ ನಿಘಂಟುರಚನಾಕಮ್ಮಟ ಉಡುಪಿಯಲ್ಲಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರವಲ್ಲಿ ನಡೆಯಿತು. ಪ್ರಾಯಶಃ 1988ರಲ್ಲಿರಬೇಕು. ದ್ರಾವಿಡ-ಭಾಷೆಗಳ ನಿಘಂಟು ತಜ್ಞರೆಲ್ಲ ಸೇರಿದ್ದರು. ನಿಘಂಟುಕಾರರ ಸಂಘದ ಸಭೆಯೂ ನಡೆಯಿತು. ಡಾ. ಬಿ. ಸಿ. ಬಾಲಕೃಷ್ಣನ್ ಮಲಯಾಳಂ ಲೆಕ್ಸಿಕನ್ ಸಂಪಾದಕರು ಬಂದಿದ್ದರು. ಆ ಸಭೆಯಲ್ಲಿ ಉಡುಪಿಯಲ್ಲೇ ಇಂತಹ ದ್ರಾವಿಡಭಾಷಾ ನಿಘಂಟು ಕೇಂದ್ರ ಆಗಬೇಕೆಂಬ ಸೂಚನೆಯನ್ನು ನಾನೇ ನೀಡಿದ್ದೆ. ಅಲ್ಲಿ ಸೇರಿದ ಎಲ್ಲ ನಿಘಂಟುಕಾರರೂ ಅಂದು ಇದನ್ನು ಅನುಮೋದಿಸಿದ್ದರು. ಆಗ ತಾನೇ ಪ್ರಾಯೋಗಿಕ-ವಾಗಿ ದೊಡ್ಡಮಟ್ಟದ ನಿಘಂಟು ತಯಾರಿಕೆಯ ಅನುಭವಸ್ಥರು ಅಲ್ಲಿದ್ದರು. ಒಂದು ವೇಳೆ ಅಂತಹ ನಿಘಂಟು ಕೇಂದ್ರವನ್ನು ಸರಕಾರ ಅಲ್ಲಿ ತೆರೆದಿದ್ದಲ್ಲಿ ತುಳು ನಿಘಂಟಿನಲ್ಲಿ ಕಾರ್ಯನಿರ್ವಹಿಸಿದ ಎಲ್ಲ ಯುವಕರು ಅಲ್ಲಿ ಸಂಶೋಧನೆ- ನಿಘಂಟು ರಚನೆಗಳನ್ನು ಮುಂದುವರಿಸಿಕೊಂಡು ಹೋಗಬಹುದಿತ್ತು. ಆದರೆ ಅದಾಗಲಿಲ್ಲ. ಒಂದು ರೀತಿಯಲ್ಲಿ ನಮ್ಮ ಭಾಷಾಸಂಶೋಧನಕ್ಷೇತ್ರದಲ್ಲಿ ನಿಘಂಟು ರಚನೆಯ ಕ್ಷೇತ್ರವೆಂಬುದು ಅವಗಣಿತವಾದ ಕ್ಷೇತ್ರವೆಂದೇ ಹೇಳಬಹುದು.

**ಪಾದೇಕಲ್ಲು** : ಸಂಸ್ಕೃತ ಕನ್ನಡಕ್ಕೆ ಬೇಡವೇ ಬೇಡೆನ್ನುವ ಹೊಸ ವಾದವನ್ನು ಕೆಲವರು ಭಾಷಾವಿಜ್ಞಾನಿಗಳು ಹೇಳುತ್ತಿದ್ದಾರೆ, 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಹೊಸ ಘೋಷಣೆಯೂ ಬಂದಿದೆ. ಹಿರಿಯ ಭಾಷಾವಿಜ್ಞಾನಿ ಶಂಕರ ಭಟ್ ಹೋಗಿ ತಾವಾಗಿಯೇ ಶಂಕರ ಬಟ್ ಆಗಿದ್ದಾರೆ. ಈ ವಿಷಯದಲ್ಲಿ ನಿಮ್ಮ ಚಿಂತನೆ ಏನು?

**ಜಿ.ವೆಂ.:** ಆಡಳಿತ ಮಾಡಬೇಕಾದರೆ ಹೊಸ ಪದಗಳನ್ನು ನಿರ್ಮಾಣ ಮಾಡುವುದಕ್ಕೆ ಸಂಸ್ಕೃತದಿಂದ ಆಗುವ ಸಹಾಯ ಇನ್ಯಾವ ಭಾಷೆಯಿಂದಲೂ ಆಗುವುದಿಲ್ಲ. ಇತರ ಭಾಷೆಗಳಿಂದ ನೇರವಾಗಿ ಪದ ತೆಗೆದುಕೊಂಡು ಬಿಡುತ್ತೇವೆ. ಅವು ಎರವಲು

ಪದಗಳು: ಬಾರೋವ್ಡ್ ವರ್ಡ್ಸ್. ಅವನ್ನು ಹಿಂದಿರುಗಿಸಬೇಕೆಂದಿಲ್ಲ. ಆದರೆ ಹೊಸ ಶಬ್ದನಿರ್ಮಾಣ ಮಾಡಬೇಕು ಎಂದಾಗ ಅದು ಸುಲಲಿತವಾಗಿ ಸಂಸ್ಕೃತದಿಂದ ಆಗುತ್ತದೆ. ಆದುದರಿಂದ ಸಂಸ್ಕೃತ ಕನ್ನಡಕ್ಕೆ ಬೇಕೇಬೇಕು. ಕನ್ನಡವು ಸಂಸ್ಕೃತದ ಹಿನ್ನೆಲೆಯಿಂದಲೇ ಬೆಳೆದುದು. ಕನ್ನಡ ಮತ್ತು ಇತರ ದೇಶೀಯ ಭಾಷೆಗಳಿಗೆ ಪ್ರೇರಣೆಯನ್ನು ಕೊಡುವ ಶಕ್ತಿ ಸಂಸ್ಕೃತಕ್ಕೆ ಇನ್ನೂ ಇದೆ. ಈ ರೀತಿಯಲ್ಲಿ ಸಂಸ್ಕೃತವು ಇಂದೂ ಜೀವಂತವಾಗಿರುವುದು ದೇಶೀಯ ಭಾಷೆಗಳಲ್ಲಿ ಎಂದರೆ ತಪ್ಪಾಗಲಾರದು.

ಸಂಸ್ಕೃತವು ಕನ್ನಡಕ್ಕೆ ಬೇಡವೇ ಬೇಡ ಎಂಬ ಹೊಸ ವಾದವೊಂದು ಇತ್ತೀಚೆಗೆ ಬಲವಾಗಿದೆ. ಪ್ರಸಿದ್ಧ ಭಾಷಾವಿಜ್ಞಾನಿಗಳೆಂದು ಹೆಸರು ಪಡೆದ ಡಾ. ಡಿ. ಎನ್. ಶಂಕರ ಭಟ್ಟರೂ ಅದನ್ನು ಪ್ರತಿಪಾದಿಸುತ್ತಿದ್ದಾರೆ. ಅವರ ಅಭಿಪ್ರಾಯಗಳು ಮತ್ತು ಅವುಗಳಿಗೆ ಉತ್ತರ ರೂಪವಾಗಿ ವಿದ್ವಾಂಸರು ಬರೆದ ಲೇಖನಗಳು ಇತ್ತೀಚೆಗೆ 'ದೇಶಕಾಲ' ಎಂಬ ಪತ್ರಿಕೆಯಲ್ಲಿ ಬಂದಿವೆ. ಶಂಕರ ಭಟ್ಟರ ಅಭಿಪ್ರಾಯಗಳನ್ನು ಸಾಕಷ್ಟು ಪ್ರಬಲವಾಗಿ ಹಲವರು ವಿದ್ವಾಂಸರು ನಿರಾಕರಿಸಿದ್ದಾರೆ. ಇರಲಿ. ಸಂಸ್ಕೃತ ಬೇಡವೆಂಬ ವಾದವಲ್ಲಿ ಅಡಗಿರುವ ಒಂದು ವಿಷಯವೆಂದರೆ ಕನ್ನಡಕ್ಕೆ ಸಂಸ್ಕೃತದಿಂದ ಒದಗಿಬಂದ ಅನುಕೂಲಗಳನ್ನು ಕಿತ್ತುಹಾಕುವುದು. ಅವುಗಳಲ್ಲಿ ಮೊದಲನೆಯದು ಉಚ್ಚಾರಣೆಗೆ ಕಷ್ಟವೆಂಬ ನೆಪವನ್ನು ಮುಂದಿರಿಸಿ ಕನ್ನಡದಲ್ಲಿ ರೂಢಿಯಲ್ಲಿರುವ ಮಹಾಪ್ರಾಣಗಳನ್ನು ತೆಗೆದುಬಿಡುವುದು. ಎರಡನೆಯದಾಗಿ ತದ್ಭವಗಳನ್ನು ಬಳಸು-ವುದು. ಮೂರನೆಯದಾಗಿ 'ಋ' ಎಂಬ ಸ್ವರಾಕ್ಷರವನ್ನು ಬಿಟ್ಟುಬಿಡುವುದು. ನಾಲ್ಕನೆಯದಾಗಿ ಕನ್ನಡಕ್ಕೆ ಹೊಸ ಪಾರಿಭಾಷಿಕ ಪದಗಳನ್ನು ನಿರ್ಮಿಸಿಕೊಳ್ಳುವುದು – ಆಗ, ಸಂಸ್ಕೃತದ ಬಳಕೆಯಾಗದಂತೆ ನೋಡಿಕೊಳ್ಳುವುದು.

ಇವುಗಳನ್ನು ಈಗ ವಿಮರ್ಶಿಸಬಹುದು. ರೂಢಿಯಲ್ಲಿರುವ ಮಹಾಪ್ರಾಣ-ಗಳನ್ನೂ ಋಕಾರವನ್ನೂ ಬಿಟ್ಟುಬಿಟ್ಟರೆ ಈಗ ಕನ್ನಡವು ಬಳಸಿಕೊಳ್ಳುತ್ತಿರುವ ಅನುಕೂಲಗಳನ್ನು ಬಿಟ್ಟುಬಿಟ್ಟಂತಾಗುವುದಲ್ಲದೆ ಬೇರೇನಲ್ಲ. ಆಗ ಭಾಷೆಯನ್ನು ಬಳಸುವವರಲ್ಲಿ ಈಗ ಇರುವುದಕ್ಕಿಂತ ಹೆಚ್ಚಿನ ಗೊಂದಲವುಂಟಾಗುವುದಲ್ಲದೆ ಭಾಷೆಗೆ ಒಂದು ನಿರ್ದಿಷ್ಟವಾದ ಪ್ರಾತಿನಿಧಿಕರೂಪವೇ ಇಲ್ಲದಾಗುವುದು. ಡಿ. ಎನ್. ಶಂಕರ ಭಟ್ಟರು 'ಶಂಕರ ಬಟ್' ಎಂದು ತಮ್ಮ ಹೆಸರನ್ನೂ 'ಬಾಶಾ ಪ್ರಕಾಶನ' ಎಂದು ತಮ್ಮ ಪುಸ್ತಕಪ್ರಕಾಶನ ವ್ಯವಸ್ಥೆಯನ್ನೂ ವಿಕಾರಮಾಡಿಕೊಂಡುದಲ್ಲದೆ ಕೃಷ್ಣನನ್ನು ಕ್ರುಶ್ಣ-ನಾಗಿಯೂ ಕೃತಿಯನ್ನು ಕ್ರುತಿಯಾಗಿಯೂ ಸಂಸ್ಕೃತವನ್ನು ಸಂಸ್ಕ್ರುತವಾಗಿಯೂ ಬದಲಾಯಿಸಿದ್ದಾರೆ. ಹೀಗೆ ಮಾಡುತ್ತಾ ಹೋದರೆ ಭಾಷಾವ್ಯವಸ್ಥೆಯೆಂಬುದೇ ಕೆಟ್ಟು ಹೋಗಬಹುದು. ಇನ್ನು ತದ್ಭವಗಳನ್ನೇ ಬಳಸುವ ವಿಷಯದಲ್ಲಿ ಹಿಂದೆ ಆಂಡಯ್ಯ-ನೆಂಬ ಕವಿ ಒಂದು ಪ್ರಯೋಗ ಮಾಡಿದ ಮೇಲೆ ಹೊಸಕಾಲದಲ್ಲಿ ಕೊಳಂಬೆ ಪುಟ್ಟಣ್ಣ ಗೌಡರೇ ಮತ್ತೊಮ್ಮೆ ಅಚ್ಚಗನ್ನಡದಲ್ಲಿ ಬರೆದವರು. ಆದರೆ ಆ ಅಚ್ಚಗನ್ನಡ ರೂಢಿಗೆ ಬರಲಿಲ್ಲ; ಬರಲಾರದು. ಶಂಕರ ಭಟ್ಟರು ತಮ್ಮ ವಾದಕ್ಕೆ ಅನುಗುಣವಾಗಿ 'ಹೊಸಬರಹ' ಎಂಬ ಪದ್ಧತಿಯನ್ನು ಅನುಸರಿಸತೊಡಗಿದ್ದಾರೆ. ಆ ವಾದಕ್ಕೆ ಅನುಗುಣವಾದ ಒಂದು ನಿಘಂಟನ್ನೂ ರಚಿಸಿದ್ದಾರೆ. 'ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ

ಪದಗಳು' ಎಂದು ಅದರ ಹೆಸರು. ಅದರಲ್ಲಿ ಈಗಿನ ಕನ್ನಡದಲ್ಲಿಲ್ಲದ, ಹಳಗನ್ನಡ-ದಲ್ಲಿರುವ ಅನೇಕ ಪದಗಳನ್ನು ಇಂಗ್ಲಿಷ್ ಪದಗಳಿಗೆ ಅರ್ಥವಾಗಿ ನೀಡಿದ್ದಾರೆ. ಉದಾಹರಣೆಗೆ ಮೊಕ್ಕಳ, ಎಯ್ದೆ, ಅಳುಂಬ, ಉರೆ, ಪೊಳಲು, ಸೋನು, ಓಜೆ, ಪೊಲ, ಪುಡುಕುನೀರು ಇತ್ಯಾದಿ. ಇವು ಹಳಗನ್ನಡದಲ್ಲಿ ಬಳಕೆಯಲ್ಲಿದ್ದುದು ಹೌದು. ಆದರೆ ಪುನಃ ಬಳಕೆಗೆ ಬರಬಲ್ಲುವೇ?

ಇನ್ನು translate = ನುಡಿಮಾರು; transliterate = ಬರಿಗೆಮಾರು; mountaineer = ಮಲೆಯೇರುಗ, ಮಲೆಬಾಳುಗ; phenomenon = ಆಗುಹ; passport = ಪಾರೋಲೆ; patient = ಕುತ್ತಿಗ, secretary = ಒತ್ತಾಳು, ನೆರವಿಗ; investigator = ಅರಸಿಗ; female = ಹೆಟ್ಟುಗೆ; intimation = ಹೇಳಿವು ಇತ್ಯಾದಿ ಪದಗಳು ಕನ್ನಡದ ಹಿನ್ನೆಲೆಯಿಂದಲೇ ರಚಿತವಾದುವಾದರೂ ಬಳಕೆಗೆ ಬರಬಲ್ಲುವೆ? ಈಗಾಗಲೇ ಬಳಕೆಯಲ್ಲಿರುವ ರೋಗಿಯನ್ನು ತೆಗೆದು ಕುತ್ತಿಗ ಮಾಡಬಹುದೇ? ವಿದ್ಯಮಾನವನ್ನು ಬಿಟ್ಟು ಆಗುಹವನ್ನು ಹಿಡಿಯಬಹುದೇ? ಈಗಾಗಲೇ ಇರುವ ಕಾರ್ಯದರ್ಶಿಯನ್ನು ಓಡಿಸಿ ಒತ್ತಾಳು, ನೆರವಿಗರನ್ನು ತರಬಹುದೇ? ಅನುವಾದಿಸು-ವುದನ್ನು ಬಿಟ್ಟು ನುಡಿಮಾರು ಮಾಡಬಹುದೇ? ಲಿಪ್ಯಂತರಕರಣ ಬಿಟ್ಟುಕೊಟ್ಟು ಬರಿಗೆಮಾರು ಮಾಡಬಹುದೇ?

ಅದನ್ನೂ ಬಿಡೋಣ. ಅವರ ಪುಸ್ತಕಗಳಲ್ಲಿ ಬಳಸಿದ ಹೊಸ ಪರಿಭಾಷೆಗಳು-ವ್ಯಾಕರಣಕ್ಕೇ ಸಂಬಂಧಿಸಿದ ಪರಿಭಾಷೆಗಳನ್ನು ಗಮನಿಸೋಣ. ಉದಾಹರಣೆಗೆ phrase = ಪದಕಂತೆ, prefix = ಮುನ್ನೊಟ್ಟು, suffix = ಹಿನ್ನೊಟ್ಟು, syntax = ಸೊಲ್ಲರಿಮೆ, syllable = ಉಲಿಕಂತೆ; sentence = ಸೊಲ್ಲು, singular = ಒರೆಣಿಕೆ, plural = ಹಲವೆಣಿಕೆ, gender = ಗುರ್ತ (ಗಂಡುಗುರ್ತ, ಹೆಣ್ಣುಗುರ್ತ), ಹೆಸರು (= ನಾಮಪದ), ಪರಿಚೆಪದ (= ಗುಣಪದ), ಎಸಕಪದ (= ಕ್ರಿಯಾಪದ), ಒಟ್ಟು (= ಪ್ರತ್ಯಯ) – ಈ ಪದಗಳು ಈಗಾಗಲೇ ರೂಢಿಯಲ್ಲಿರುವ ಪರಿಭಾಷೆಗಳನ್ನು ಹೊರದೂಡಬಲ್ಲವೇ? ಇಂತಹ ಹಲವು ವಿಷಯಗಳು ಇಲ್ಲಿ ವಿಚಾರಕ್ಕೆ ಬರುತ್ತವೆ.

ಇನ್ನು ಕನ್ನಡಕ್ಕೆ ಕನ್ನಡಕ್ಕೇ ವ್ಯಾಕರಣ ಬೇಕೆಂಬ ವಿಚಾರ. ಈಗಿರುವ ವ್ಯಾಕರಣ ಕೃತಿಗಳಾವುವೂ ಕನ್ನಡದವು ಅಲ್ಲವೆ? ಅಲ್ಲವೆಂದು ನಾನಂತೂ ಹೇಳಲಾರೆ. ಕನ್ನಡಕ್ಕೆ ಹೊಸ ವ್ಯಾಕರಣರಚನೆ ಆಗಬೇಕೆಂದು ನಾನೂ ಹೇಳುತ್ತೇನೆ. ಅದು ಬದಲಾದ ಕೆಲವು ಪ್ರಯೋಗವಿಷಯಗಳ ಕುರಿತು. ಉದಾಹರಣೆಗೆ, ಕುವೆಂಪುರವರು, ಹೆಗಡೆರವರು, ಕ್ಲಿಂಟನ್‌ರವರು, ತೇನ್ಸ್‌ಸಿಂಗ್‌ರವರು – ಇತ್ಯಾದಿಯಾಗಿ ಅನೇಕರು ಬಳಸುತ್ತಾರೆ. ಇಲ್ಲೆಲ್ಲೆ 'ಅವರು' ಎಂಬುದೇ ಶುದ್ಧವಾದ, ಸರಿಯಾದ ಪ್ರಯೊಗ. ಈ ಶುದ್ಧಪ್ರಯೋಗವನ್ನು ಉಳಿಸಿಕೊಳ್ಳಲು ಸಾಧ್ಯವಾಗದೇ ಹೋಗಿ ಮುಂದೆ ಆ 'ರವರು' ಪ್ರಯೋಗವೇ ಉಳಿದುಕೊಂಡಲ್ಲಿ ನಮ್ಮ ವ್ಯಾಕರಣಗ್ರಂಥಗಳಲ್ಲಿ 'ರವರು' ಎಂಬ ಬಹುವಚನ ರೂಪವನ್ನು ಮಾನ್ಯಮಾಡಿ ಸೇರಿಸಿಕೊಳ್ಳಬೇಕಾಗುತ್ತದೆ. ಹೀಗೆಯೇ ಅರಿಸಮಾಸ, ಎರವಲು ಪದಗಳನ್ನು ಸೇರಿಸಿ ಮಾಡುವ ಸಮಾಸಗಳ ಬಗೆಗೂ

ಯೋಚಿಸಬೇಕಾಗಿದೆ. ಕನ್ನಡನಾಡಿನ ಹಲವೆಡೆಗಳಲ್ಲಿ ಇತ್ತೀಚೆಗೆ ಬಳಸುತ್ತಿರುವ 'ಏನಕ್ಕೆ' ಎಂಬ ರೂಪವನ್ನೂ ಹೀಗೆಯೇ ಗಮನಿಸಬೇಕಾಗುತ್ತದೆ. ಹೀಗೆ ಹೊಸ ವ್ಯಾಕರಣ ರೂಪುಗೊಳ್ಳಬೇಕಷ್ಟೆ ಹೊರತು ಇರುವ ವ್ಯವಸ್ಥೆಯನ್ನು ಕೆಡಿಸಿ 'ಕನ್ನಡದ್ದೇ' ಎಂಬ ಹೆಸರಿನಲ್ಲಿ ವಿಚಿತ್ರಪ್ರಯೋಗಗಳನ್ನು ಮಾಡಿದರೆ ಅದು ರೂಢಿಗೆ ಬರಲಾರದು. ಮಾತ್ರವಲ್ಲ. ಭಾಷೆಯೊಳಗೆ ವ್ಯವಸ್ಥೆಯೇ ಇಲ್ಲದ ಗೊಂದಲದ ಪರಿಸ್ಥಿತಿ ಉಂಟಾದೀತು. ಇಂತಹ ಉಪಕ್ರಮಗಳನ್ನು ತೊಡಗುವಾಗ ತುಂಬ ಚಿಂತನೆ ಮಾಡಬೇಕೆಂಬುದೇ ನನ್ನ ಅಭಿಪ್ರಾಯ.

**ಕೃಷ್ಣ ಭಟ್**: ಮತ್ತೊಂದು ವಿಷಯ ನೀವು ಹೇಳಿದ್ದು ವೈಕುಂತ ಬಾಳಿಗರ ಬಗ್ಗೆ. ಮೈಸೂರಿನವರು ಯೋಚನೆ ಮಾಡುವುದಕ್ಕೆ ಭಿನ್ನವಾಗಿ ಕನ್ನಡಕ್ಕೆ ಏನು ಆಗಬೇಕೆಂದು ಅವರು ಹೇಳಿದ್ದರು ಎಂದಿರಿ. ಸ್ವಲ್ಪ ವಿವರಣೆ ಹೇಳಬಹುದೇ?

ಜಿ.ವೆಂ.: ಮೈಸೂರು ಸಂಸ್ಥಾನ ಇದ್ದಾಗ ಮೈಸೂರಿನ ಆಡಳಿತ ಎಷ್ಟು ಚೆನ್ನಾಗಿತ್ತೆಂದರೆ ಮಹಾತ್ಮಾ ಗಾಂಧಿಯವರೆ ಇದನ್ನು 'ರಾಮರಾಜ್ಯ' ಎಂದು ಕರೆದರು. ಹಾಳಾದ ಭ್ರಷ್ಟಾಚಾರ. ಲಂಚ ಸ್ವಲ್ಪವೂ ಇರಲಿಲ್ಲ. ಪುರಸಭೆಗೆ ಏನಾದರೂ ಕೊಡಬೇಕಾದ ತೆರಿಗೆ ಇದ್ದರೆ ಕ್ಲಾರ್ಕ್ ಮನೆಗೆ ಬಂದು ಹೇಳುತ್ತಿದ್ದ. 'ಹತ್ತು ರೂಪಾಯಿ ಬಾಕಿ ಇದೆ ಸಾರ್' ಎಂಬುದಾಗಿ. 'ಆಯಿತಪ್ಪ, ತಗೋ' ಅಂದರೆ ತಗೊಂಡು ಹೋಗಿ ರಸೀದಿ ತಕೊಂಡು ಬಂದು ಮನೆಗೆ ಕೊಟ್ಟು ಹೋಗುತ್ತಿದ್ದ. ಕಛೇರಿಗಳಿಗೂ ಮನೆಗೂ ಆತ್ಮೀಯಸಂಬಂಧ ಇತ್ತು. ಲಂಚ ಇರಲೇ ಇಲ್ಲ. ಡಿ. ವಿ. ಗುಂಡಪ್ಪನವರು ಏಕೀಕರಣವನ್ನು ಮೊದಲು ಒಪ್ಪಿಕೊಂಡರು. ಆದರೆ ಆಮೇಲೆ ಸ್ವಲ್ಪ ಭಿನ್ನವಾಗಿ ಯೋಚಿಸಿದರು. ಮೈಸೂರು ಸಂಸ್ಥಾನಕ್ಕೆ ಹೊಸದಾಗಿ ಸೇರುವ ಜಾಗ ದೊಡ್ಡದಾಗಿರುತ್ತೆ. ಬಾಕಿ ಪ್ರದೇಶಗಳಲ್ಲಿ ಆಡಳಿತದ ಭ್ರಷ್ಟಾಚಾರ ಹೆಚ್ಚಿತ್ತು. ಆ ಪ್ರದೇಶಗಳೆಲ್ಲಾ ಸೇರಿಕೊಂಡರೆ ಇಲ್ಲಿಯ ಸೌಭಾಗ್ಯ ಹಾಳಾಗಿ ಹೋಗುತ್ತದೆ ಎಂದು ಅವರಿಗೆ ಹೆದರಿಕೆ ಆಯಿತು. ಆಗ ಆ ಪ್ರದೇಶಗಳೆಲ್ಲ ಮೈಸೂರಿನೊಂದಿಗೆ ಏಕೀಕರಣ ಹೊಂದುವುದು ಬೇಡ ಎಂದು ಹಠ ಹಿಡಿಯುವುದಕ್ಕೆ ಸುರುಮಾಡಿದರು.

ಮದ್ರಾಸು ಆಧಿಪತ್ಯದ ಒಳಗೆ ಸೇರಿದವರು ಅಂದಿನ ದಕ್ಷಿಣಕನ್ನಡ ಜಿಲ್ಲೆಯವರು. ಮದ್ರಾಸಿಗೆ ಬಹಳ ದೂರವಾಗಿ ಇದ್ದರೂ ಆ ಆಧಿಪತ್ಯದಡಿಯಲ್ಲಿ ಸಾಕಷ್ಟು ಒಳ್ಳೆಯ ಸ್ಥಿತಿಯಲ್ಲಿಯೇ ಆ ಪ್ರದೇಶವಿತ್ತು. ಅಲ್ಲಿಯ ಜನ ನೇರವಾಗಿ ಬ್ರಿಟಿಷ್ ಆಡಳಿತೆಯಲ್ಲಿದ್ದರು. ಸ್ಥಳೀಯ ಅರಸರ ಆಡಳಿತ ಆ ಪ್ರದೇಶದಲ್ಲಿ ತಪ್ಪಿಹೋಗಿ ಬಹಳ ದಿನಗಳಾಗಿದ್ದವು. ಟಿಪ್ಪು ಸುಲ್ತಾನನ ಮರಣದೊಡನೆ ಸ್ಥಳೀಯ ರಾಜರ ಆಡಳಿತ ಅಲ್ಲಿ ಕೊನೆಗೊಂಡಿತ್ತು. ಅಲ್ಲಿಯ ಜನ ಶ್ರಮಜೀವಿಗಳು. ಬುದ್ಧಿವಂತರು. ಕಷ್ಟಪಟ್ಟು ವಿದ್ಯೆ ಕಲಿತು ಮೇಲೆ ಬಂದವರು. ಅವರಿಗೆ 'ಕನ್ನಡಿಗರೆಲ್ಲ ಒಟ್ಟಾಗಿರೋಣ' ಎಂಬ ಅಭಿಪ್ರಾಯ ಸಹಜವಾಗಿಯೇ ಇತ್ತು. ಇಲ್ಲಿ ಡಿವಿಜಿ ಹೀಗೆ ಅಭಿಪ್ರಾಯಪಟ್ಟರೆ ಅಲ್ಲಿ ಬಾಳಿಗಾ ಅವರು 'ಹಾಗಾಗಬಾರದು. ಏಕೀಕರಣ ಆಗಲೇಬೇಕು. ಕಷ್ಟವೋ ಸುಖವೋ ಒಟ್ಟಿಗಿರೋಣ, ಬೇರೆ ಬೇರೆ ಬೇಡ' ಎಂದು ಒತ್ತಾಯಮಾಡಿದರು. ಅದೇ

ಆಯಿತು. ಆದರೆ ಡಿವಿಜಿಯವರ ಹೆದರಿಕೆ ಇತ್ತಲ್ಲ – ಅದು ನಿಜವಾಯಿತು. ಹಳೆ ಮೈಸೂರಿನವರೂ ಲಂಚ ತಕ್ಕೊಳ್ಳುವುದರಲ್ಲಿ ನಿಸ್ಸೀಮರಾದರು. ಒಟ್ಟು ವ್ಯವಸ್ಥೆ ಭ್ರಷ್ಟವಾಯಿತು. ಹೀಗಾಗಬಾರದಿತ್ತು.

ಮೈಸೂರು ಬೆಂಗಳೂರು ರಸ್ತೆ ಹಾಳಾಯಿತು. ಆದರೆ ಇಲ್ಲಿಂದ ಗುಲ್ಬರ್ಗಾ ರಸ್ತೆ ಚೆನ್ನಾಗಾಯಿತು. ಅಂದರೆ ಹೈದರಾಬಾದ್ ಕರ್ನಾಟಕದಲ್ಲಿ ಹಿಂದೆ ಅಭಿವೃದ್ಧಿ ಎನ್ನುವುದು ಏನೇನೂ ಇರಲಿಲ್ಲ. ನಮ್ಮವರು ಮಾಡಿದ್ದು ಸರಿಯೇ. ಆದರೆ ಈ ಕಡೆ ಬಿಟ್ಟುಬಿಟ್ಟರು. ಹಿಂದೆ ಇದಕ್ಕಿಂತ ಒಳ್ಳೆಯದಾಗಿತ್ತು. ಒಟ್ಟಿನಲ್ಲಿ ಏನಾಯಿತು? ಅಲ್ಲಿಂದ ಕೆಲವು ಕೆಟ್ಟದು ಇಲ್ಲಿಗೆ ಬಂತು. ಇಲ್ಲಿಯ ಕೆಲವು ಒಳ್ಳೆಯದು ಅಲ್ಲಿಗೆ ಹೋಯಿತು. ಸರಕಾರದಲ್ಲಿ ಏನು ವ್ಯತ್ಯಾಸ ಆಯಿತು ಅಂದರೆ, ಹೈದರಾಬಾದಲ್ಲಿ ಇಲ್ಲಿಗಿಂತ ಹೆಚ್ಚಿನ ಸಂಬಳ ಇತ್ತು. ಏಕೀಕರಣದ ಅನಂತರ ಅಲ್ಲಿ ಅಸಿಸ್ಟೆಂಟ್ ಮಾಸ್ತ್ರಾಗಿದ್ದವರು ಸಂಬಳದ ಪ್ರಕಾರ ಹೆಡ್‌ಮಾಸ್ತ್ರಾಗಿಬಿಟ್ಟರು. ಆದರೆ ಇಲ್ಲಿ ಇತ್ತಕಡೆಯವರು ವೇತನ ಕಡಿಮೆಯಾದುದರಿಂದ ಆ ಆಧಾರದಲ್ಲಿ ಅಸಿಸ್ಟೆಂಟ್ ಮಾಸ್ತ್ರಾಗಿಯೇ ಉಳಿದರು. ಆ ಸಮಯದಲ್ಲಿ ಹೈದರಾಬಾದ್ ವೇತನಶ್ರೇಣಿ ಬರಬೇಕೆಂದು ಒಂದು ಚಳುವಳಿಯೇ ಆಯಿತು. ಹೀಗೆ ಏಕೀಕರಣದಿಂದ ಕೆಲವು ಅನ್ಯಾಯವೂ ಆಯಿತು. ಆದರೆ ಕನ್ನಡದವರು ಒಟ್ಟಿಗೆ ಇರಬೇಕು ಅನ್ನುವ ಆಸೆ ಇತ್ತಲ್ಲ – ಅದು ಈಡೇರಿತು. ಏನೇ ಇರಲಿ, ಒಂದು ಭಾಷೆಯನ್ನಾಡುವ ಜನ ಒಂದು ಆಡಳಿತದಲ್ಲಿ ಒಟ್ಟಿಗೆ ಇರಬೇಕೆಂಬ ಅಭಿಪ್ರಾಯಕ್ಕೆ ನಾವು ಬೆಲೆ ಕೊಡಲೇಬೇಕು. ಉಳಿದ ಅವ್ಯವಸ್ಥೆಗಳನ್ನು ಅನಂತರ ಸರಿಪಡಿಸಿಕೊಳ್ಳಬೇಕು. ಏನೇ ಆದರೂ ಅಖಿಲಕರ್ನಾಟಕದ ಜನ ಈಗ ಭಾಷೆಯ ಬಗೆಗಾಗಲಿ, ಸಂಸ್ಕೃತಿಯ ಬಗೆಗಾಗಲಿ ಎಲ್ಲರೂ ಒಮ್ಮತದಿಂದ ಮಾತನಾಡುವ ಸ್ಥಿತಿ ಬಂದಿದೆ. ಆದರೆ, ನಮ್ಮಲ್ಲಿ ಒಡಕು ಇದೆ. ನಮ್ಮನ್ನು ಒಡೆದು ನಾಶಮಾಡುತ್ತಾ ಇರುವುದು ರಾಜಕಾರಣಿಗಳೇ ಹೊರತು, ಸಾಹಿತಿ – ಕಲೆಗಾರರಲ್ಲ. ರಾಜಕಾರಣಿಗಳು ಸ್ವಾರ್ಥವನ್ನು ಕಾಪಾಡಿಕೊಳ್ಳುತ್ತಿದ್ದಾರೆ. ಯಾವ ರಾಜಕೀಯ ಪಕ್ಷ ಆದರೇನು ಎಲ್ಲವೂ ಒಂದೇ ಎಂಬಂತಾಗಿದೆ. ಹಲವಾರು ವರ್ಷಗಳ ಕಾಲ ಆಡಳಿತ ಮಾಡಿದವರಿಗೆ ಭ್ರಷ್ಟಾಚಾರವನ್ನು ಕಲೆಗಾರಿಕೆಯಿಂದ ಮಾಡುವ ಅನುಭವ ಇದೆ. ಆ ಅನುಭವವಿಲ್ಲದೆ ನೇರವಾಗಿ ಮಾಡುವುದಕ್ಕೆ ಹೋದವರು ಸಿಕ್ಕಿಹಾಕಿಕೊಂಡರು. ಒಟ್ಟಿನಲ್ಲಿ ನಾವು, ಪ್ರಜೆಗಳು, ಕಷ್ಟದಲ್ಲಿದ್ದೇವೆ. ಕರ್ನಾಟಕದಲ್ಲಿರುವಷ್ಟು ಭ್ರಷ್ಟಾಚಾರ ಇನ್ನೆಲ್ಲೂ ಇಲ್ಲ ಅನ್ನುವ ಹೆಸರು ಬಂದು ಅಂಟಿಕೊಂಡುಬಿಟ್ಟಿತು ಕನ್ನಡ ದೇಶಕ್ಕೆ. ಏನು ಮಾಡೋಣ! ಆದರೆ ಏಕೀಕರಣದ ಪರಿಣಾಮ ಹೀಗೆಂದು ಒಟ್ಟಾರೆಯಾಗಿ ಹೇಳುವಂತೆಯೂ ಇಲ್ಲ. ಏಕೀಕರಣವನ್ನು ಉದ್ದೇಶಿಸಿದ ಹಿರಿಯರು ಇಂತಹ ಸ್ಥಿತಿಯನ್ನು ಬಯಸಿರಲೂ ಇಲ್ಲ.

**ಎನ್. ಟಿ. ಭಟ್ :** ಮನೆಮಾತೇ ಶಿಕ್ಷಣದ ಮಾಧ್ಯಮ ಆಗಬೇಕು ಅನ್ನುವುದು ಎಷ್ಟು ಪ್ರಾಯೋಗಿಕ?

**ಜಿ.ವೆಂ.:** ಮಾಧ್ಯಮ ಆಗದೆ ಬೇರೆ ದಾರಿ ಇಲ್ಲ. ಒಟ್ಟು ದೇಶದಲ್ಲಿ ಗ್ರಾಮೀಣಪ್ರದೇಶ ಹೆಚ್ಚಾಗಿ ಇದೆ. ಗ್ರಾಮೀಣಪ್ರದೇಶದಲ್ಲಿ ಬೇರೆ ಭಾಷೆಯನ್ನು ಮಾಧ್ಯಮ ಮಾಡಿ–

ಕೊಂಡರೆ ಅಷ್ಟೇನೂ ಪ್ರಯೋಜನ ಆಗುವುದಿಲ್ಲ. ಆದುದರಿಂದ ಸ್ಥಳೀಯಭಾಷೆಯೇ ಸಾಮಾನ್ಯವಾಗಿ ಶಿಕ್ಷಣಮಾಧ್ಯಮವಾಗಿರಬೇಕೆಂದು ಶಿಕ್ಷಣತಜ್ಞರು ಹೇಳುವುದು.

**ಎಸ್. ಟಿ. ಭಟ್:** ನಮ್ಮಲ್ಲಿ ತುಳುಭಾಷೆ ಇದೆ. ಹಾಗೆ ಮಾಡಿದರೆ ತುಳುವನ್ನೇ ಶಿಕ್ಷಣಮಾಧ್ಯಮ ಮಾಡಬೇಕಾಗುತ್ತದೆ.

**ಜಿ.ವೆಂ.:** ಎಲ್ಲರೂ ತುಳುಭಾಷೆಯನ್ನು ಮಾತಾಡುತ್ತಾರಾದರೆ ಹಾಗೆ ಮಾಡುವುದು ಒಳ್ಳೆಯದು. ಆದರೆ ತುಳುವನ್ನು ಮಾಧ್ಯಮವಾಗಿ ಉಪಯೋಗಿಸುವಷ್ಟು ಬೆಳೆದಿಲ್ಲ ಆ ಭಾಷೆ. ನಮ್ಮಲ್ಲಿ ಕನ್ನಡವೂ ಇದೆ, ತುಳುವೂ ಇದೆ. ಆದರೆ ಶಾಲೆಗಳಲ್ಲಿ ಮಕ್ಕಳಿಗೆ ಕನ್ನಡ ಮಾಧ್ಯಮವೆ ಬಳಕೆಯಲ್ಲಿದೆ – ಮಾತೃಭಾಷೆ ಆಗಲಿ ಬಿಡಲಿ, ಅದು ಮುಖ್ಯವಲ್ಲ. ಆದರೆ ಬೆಂಗಳೂರಿನಲ್ಲಿ ಇರತಕ್ಕ ಜನಕ್ಕೆ ಉದ್ಯೋಗನಿರತರಾಗಿರುವವರಿಗೆ ಇಂಗ್ಲಿಷ್ ಬೇಕೇ ಬೇಕು. ಹಾಗಾಗಿ ಅವರು 'ನಮಗೆ ಇಂಗ್ಲಿಷ್ ಮಾಧ್ಯಮವೇ ಬೇಕು' ಎಂದು ಒತ್ತಾಯಮಾಡುತ್ತಾರೆ. ಮಧ್ಯಮವರ್ಗದ ಜನ, ನಾಗರಿಕ ಜನ ಹೀಗೆ ಕೇಳುತ್ತಿದ್ದಾರೆ. ಅದಕ್ಕೆ ಒಂದು ಉಪಾಯ ಇದೆ. ಕನ್ನಡವನ್ನು ಕಡ್ಡಾಯವಾಗಿ ಮಾತೃಭಾಷೆಯಾಗಿ ಕಲಿಯುವ ಹಾಗೆ ಮಾಡಿಬಿಡಿ. ಆಮೇಲೆ ಶಿಕ್ಷಣಮಾಧ್ಯಮದ ವಿಚಾರ: ಕನ್ನಡ ಬೇಕಾದರೆ ಕನ್ನಡ ಮಾಧ್ಯಮ ಇಟ್ಟುಕೊಳ್ಳಿ, ಇಂಗ್ಲಿಷ್ ಬೇಕಾದರೆ ಇಂಗ್ಲಿಷ್ ಮಾಧ್ಯಮ ಇಟ್ಟುಕೊಳ್ಳಿ. ಕನ್ನಡವನ್ನು ಪ್ರಥಮಭಾಷೆಯಾಗಿ ಚೆನ್ನಾಗಿ ಕಲಿಸಿ. ಮಾಧ್ಯಮ ನಿಮಗೆ ಯಾವುದು ಬೇಕಾದರೂ ತೆಗೆದುಕೊಳ್ಳಿ. ನಗರಪ್ರದೇಶದಲ್ಲಿ 'ಇಂಗ್ಲಿಷ್ ಮೀಡಿಯಮ್' ಇರುತ್ತದೆ. ಗ್ರಾಮೀಣ ಪ್ರದೇಶದಲ್ಲಿ 'ಕನ್ನಡ ಮಾಧ್ಯಮ' ಇರುತ್ತದೆ. ಮುಖ್ಯ ವಿಷಯ ಇದು – ಕನ್ನಡ ಕಲಿಯಲೇಬೇಕು ಎಂದು ಕಡ್ಡಾಯ ಮಾಡಿ. ಉಳಿದಂತೆ ಶಿಕ್ಷಣ ಮಾಧ್ಯಮದ ಕುರಿತಾದ ನಿರ್ಧಾರ ತೆಗೆದುಕೊಳ್ಳುವುದಕ್ಕೆ ತಂದೆ ತಾಯಿಗಳಿಗೆ ಬಿಡಿ. ಬರುತ್ತಾ ಬರುತ್ತಾ ತಾನೇ ಸರಿಯಾಗಿ ಹೋಗುತ್ತದೆ. ನನಗೆ ಹೊಳೆದ ಉಪಾಯ ಇದು. ಇದು ಪ್ರಾಯೋಗಿಕವಾದುದು, ಅನುಷ್ಠಾನಯೋಗ್ಯವಾದುದು – ಎಂದು ನನ್ನ ಅಭಿಪ್ರಾಯ.

**ಪಾದೇಕಲ್ಲು:** ಕನ್ನಡ ಭಾಷಾಭ್ಯಾಸದ ಈಗಿನ ಸ್ಥಿತಿ ಹೇಗಿದೆಯೆಂದು ನಿಮ್ಮ ಅಭಿಪ್ರಾಯ?

**ಜಿ.ವೆಂ.:** ಶಿಕ್ಷಣಕ್ಷೇತ್ರದಲ್ಲಿ ಬೇಕಾದಷ್ಟು ಬದಲಾವಣೆ ಆಗಬೇಕು. ಈಗಿನ ಪರಿಸ್ಥಿತಿ ಹೇಗಿದೆಯೆಂದರೆ – ಕನ್ನಡ ದೇಶದಲ್ಲಿ ಕನ್ನಡ ಪಾಠ ಮಾಡುವ ಅಧ್ಯಾಪಕರಿಲ್ಲ. ಎಂತಹ ಅನ್ಯಾಯ ಆಗಿದೆ ಅಂದರೆ ಕನ್ನಡ ಎಂ. ಎ. ಪಾಸು ಮಾಡಿದವನು ಕಾಲೇಜಿನಲ್ಲಿ ಕನ್ನಡ ಪಾಠ ಮಾಡಬಹುದು ಎಂದು ಹೇಳುತ್ತಾರೆ. ಕನ್ನಡ ಎಂ. ಎ. ಹೇಗೆ ತಯಾರಾಗುತ್ತದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಬರಿಯ ಜಾನಪದ ವಿಷಯಗಳನ್ನು ಪಾಸು ಮಾಡಿಯೂ ಎಂ. ಎ. ತಕೊಂಡು ಬಿಡುತ್ತಾನೆ. ಅವನನ್ನು ಹೈಸ್ಕೂಲು ಕಾಲೇಜು ಅಧ್ಯಾಪಕನನ್ನಾಗಿ ಮಾಡುತ್ತಾರೆ. ಅವನಿಗೆ ವ್ಯಾಕರಣ ಗೊತ್ತಿರುವುದಿಲ್ಲ; ವರ್ಣಮಾಲೆ ಗೊತ್ತಿರುವುದಿಲ್ಲ. ಅವನು ಬೇಕಾದರೆ ಜಾನಪದ

ಹೇಳಿಕೊಡುತ್ತಾನೆ. ಕನ್ನಡ ಕಲಿಸುವವರು ಯಾರು? ಆದುದರಿಂದ ಭಾಷಾಸಾಹಿತ್ಯ ಶಿಕ್ಷಣಕ್ಷೇತ್ರಕ್ಕೆ ಯಾರನ್ನು ನೇಮಕ ಮಾಡಬೇಕೆಂದಾಗ ಕೇವಲ ಜಾನಪದ ಎಂ. ಎ. ಯನ್ನು ಬಿಡಬೇಕು. 'ನೀವು ವ್ಯಾಕರಣ ಓದಿದೀರೋ?' ಎಂದು ತಿಳಿದು ಗೊತ್ತುಮಾಡಿ ನೇಮಕ ಮಾಡಬೇಕು. ಇತ್ತೀಚೆಗೆ ಜಾನಪದ ವಿದ್ವಾಂಸರೇ ಹೆಚ್ಚಾಗು- ತ್ತಿದ್ದಾರೆ. ಆದರೆ ಅವರಿಗೆ ಜಾನಪದ ಎಂ.ಎ. ಎಂದೇ ಪದವಿ ಕೊಡಬೇಕು. ಎಂ.ಎ. ಇನ್ ಜಾನಪದ, ಕನ್ನಡ ಎಂ.ಎ. ಎಂದಲ್ಲ. ಕನ್ನಡ ಎಂ.ಎ. ಎಂದಾದರೆ ಕನ್ನಡದ ಶಾಸ್ತ್ರೀಯವಿಷಯಗಳನ್ನೂ ಕಾವ್ಯಗಳನ್ನೂ ಸರಿಯಾಗಿ ಓದಬೇಕು. ಜಾನಪದವನ್ನೂ ಹೆಚ್ಚುವರಿಯಾಗಿ ತಿಳಿದಿರಲಿ. ಅದನ್ನೂ ಓದಲಿ. ಆದರೆ ಕನ್ನಡ ಎಂ.ಎ. ಆದವನಿಗೆ ಭಾಷಾಸಾಹಿತ್ಯಜ್ಞಾನ ಉತ್ತಮ ಮಟ್ಟದ್ದಾಗಿರಬೇಕು. ವಿಶ್ವವಿದ್ಯಾನಿಲಯಗಳಲ್ಲಿ ಪಾಠ ಪಟ್ಟಿ ಸಿದ್ಧಪಡಿಸುವವರು ಇತ್ತ ಕಡೆಗೆ ಸರಿಯಾಗಿ ಗಮನ ಕೊಡಬೇಕು. ಆದರೆ ಇಂತಹ ಕಟ್ಟುನಿಟ್ಟಿನ ಸುಧಾರಣೆಗೆ ಯಾರೂ ಒಪ್ಪುವುದಿಲ್ಲ. ಹೈಸ್ಕೂಲಿಗೆ ಪಾಠ ಮಾಡಬೇಕಾದರೆ, ಅಪ್ಪರ್ ಸೆಕೆಂಡರಿ ಪಾಸು ಮಾಡಿ ಅನಂತರ ಪಂಡಿತ ಪರೀಕ್ಷೆ- ಯಲ್ಲಿ ಪಾಸು ಮಾಡಿದವರು ಕನ್ನಡ ಮೇಸ್ಟ್ರಾಗಿ ಬರುತ್ತಿದ್ದರು. ಹಿಂದೆ ವಿಶಿಷ್ಟವಾಗಿ ಕನ್ನಡ ಬೋಧನೆ ಮಾಡುವ ಅಧ್ಯಾಪಕರ ತಂಡ ಇತ್ತು. ಭಾಷಾಬೋಧನೆ ಮಾಡುವು- ದನ್ನೇ ಅವರು ವಿಶಿಷ್ಟವಾಗಿ ಕಲಿತಿದ್ದರು. ವ್ಯಾಕರಣ, ಛಂದಸ್ಸು, ಅಲಂಕಾರಶಾಸ್ತ್ರಗಳಲ್ಲಿ ನಿಪುಣರಾಗಿದ್ದುದಲ್ಲದೆ ಆಶುಕವಿತ್ವ ಮಾಡುತ್ತಾ ಇದ್ದರು ಕನ್ನಡ ಮೇಸ್ಟ್ರು. ಅಂಥವ- ರಿಂದ ಕನ್ನಡ ಕಲಿತವರು ನಾವು. ಅಂತಹ ಶಾಸ್ತ್ರವಿಷಯಗಳ ಬಗ್ಗೆ ಅವಜ್ಞೆ ಸಲ್ಲದು. ಪರಂಪರೆಯ ಶಾಸ್ತ್ರವಿಷಯಗಳೂ ಆಧುನಿಕ ವಿಚಾರಗಳೂ ಒಂದಕ್ಕೊಂದು ವಿರೋಧಿ ಎಂದೇಕೆ ತಿಳಿಯಬೇಕು? ಅವು ಪರಸ್ಪರ ಪೂರಕವೆಂದು ಪರಿಗಣಿಸೋಣ. ಆ ಹಿನ್ನೆಲೆಯಲ್ಲಿಯೇ ನಮ್ಮ ಚಿಂತನೆಯನ್ನು ವಿಸ್ತರಿಸೋಣ. ಆದುದರಿಂದ ಆಧುನಿಕತೆ- ಯನ್ನು ಅರ್ಥಮಾಡುವ ಪಂಡಿತ ಪರಂಪರೆ ನಮಗೆ ಬೇಕು. ಪ್ರಾಯಶಃ ಈಗ ಪಂಡಿತ ಪರೀಕ್ಷೆಯೇ ಇಲ್ಲವಾಗಿದೆ.

**ಪಾದೇಕಲ್ಲು** : ಮದ್ರಾಸ್ ವಿಭಾಗದಲ್ಲಿ ವಿದ್ವಾನ್ ಪರೀಕ್ಷೆ ಇತ್ತು. ಸಂಸ್ಕೃತವನ್ನೂ ಕನ್ನಡವನ್ನೂ ಕಲಿತು ಪಂಡಿತರಾಗುತ್ತಿದ್ದರು.

**ಜಿ.ವೆಂ.**: ಹೌದು. ಸೇಡಿಯಾಪು, ಶಂಕರ ಭಟ್ಟರು ಆ ರೀತಿ ಕಲಿತು ಬಂದಿದ್ದವರು. ಅಂತಹ ಮೇಸ್ಟ್ರುಗಳು ಎಲ್ಲಿದ್ದಾರೆ ಈಗ? ಈಗ ನಮಗೆ ಇಂಗ್ಲಿಷ್ ಪಾಠ ಮಾಡುವು- ದಕ್ಕೆ ೬೦೦೦ ಜನ ಇಂಗ್ಲಿಷ್ ಮೇಸ್ಟ್ರು ಬೇಕಾಗಿದೆ. ಸರಿಯಾಗಿ ಇಂಗ್ಲಿಷ್ ಕಲಿಸಲಿಕ್ಕಾ- ದರೂ ಎಲ್ಲಿದ್ದಾರೆ ಮೇಸ್ಟ್ರುಗಳು? ಆದುದರಿಂದ ಈ ಸಮಸ್ಯೆ ಕೇವಲ ಕನ್ನಡದ್ದಲ್ಲ. ಭಾಷಾವಿಷಯ - ಶಾಸ್ತ್ರವಿಷಯಗಳ ಬಗ್ಗೆ ನಮ್ಮ ಜನತೆಯ ಧೋರಣೆ ಅಥವಾ ದೃಷ್ಟಿಕೋನದ ಪ್ರಶ್ನೆ ಇಲ್ಲಿ ಬರುತ್ತದೆ.

**ಪಾದೇಕಲ್ಲು**: ಸರ್, ನೀವು ಕೆಲವು ಪಠ್ಯಪುಸ್ತಕಗಳನ್ನು ತಯಾರು ಮಾಡಿದ್ದೀರಿ. ಕನ್ನಡ ಪಠ್ಯಪುಸ್ತಕಗಳಲ್ಲಿ ಇತ್ತೀಚೆಗೆ ಹಳಗನ್ನಡ, ನಡುಗನ್ನಡ ಕಡಮೆ ಸಾಕು ಎಂದು ಹೇಳಿ ೧೦-೧೫ ಪದ್ಯಗಳಿಗೆ ಸೀಮಿತ ಮಾಡುತ್ತಾ ಇದ್ದಾರೆ. ಹಳಗನ್ನಡ, ನಡುಗನ್ನಡಗಳ

ಬದಲು ಹೊಸಗನ್ನಡ ಭಾಗಗಳನ್ನು ಮಾತ್ರ ಇರಿಸಿದಲ್ಲಿ ಭಾಷಾಜ್ಞಾನ, ಸಾಹಿತ್ಯಜ್ಞಾನ ಮತ್ತು ವ್ಯುತ್ಪತ್ತಿ ಉಂಟಾಗುವುದು ಹೇಗೆ? ಪಠ್ಯಪುಸ್ತಕಗಳನ್ನು ಹೇಗೆ ರಚಿಸಬೇಕು?

**ಜಿ.ವೆಂ:** ನನ್ನ ದೃಷ್ಟಿಯಲ್ಲಿ ಪಠ್ಯಪುಸ್ತಕವನ್ನು ಬರೆಸುವುದು ತಪ್ಪು. ಪಠ್ಯಪುಸ್ತಕವಾಗಲು ಯೋಗ್ಯ ಪುಸ್ತಕಗಳು ನಮ್ಮಲ್ಲಿ ಬೇಕಾದಷ್ಟು ಇವೆ. ಅವುಗಳಿಂದ ಆಯ್ದು ಭಾಗ ಆರಿಸುವುದು ಬಿಟ್ಟು ಪಠ್ಯಪುಸ್ತಕ ಬರೆಯುವುದು ಅಥವಾ ಬರೆಸುವುದು ತಪ್ಪು. ಪಠ್ಯ ಪುಸ್ತಕ ಬರೆಯಲಿಕ್ಕಾಗಿಯೇ ಇರುವ ಸಮಿತಿಯನ್ನು ರದ್ದುಮಾಡಬೇಕು. ಸಿದ್ಧವಾಗಿರುವ ಪಠ್ಯವನ್ನು ಆರಿಸಬೇಕು. ಅನುಭವಿ ಲೇಖಕರ ಭಾಷೆ ಚೆನ್ನಾಗಿರುತ್ತದೆ. ಅದನ್ನು ಪಠ್ಯಪುಸ್ತಕವನ್ನಾಗಿ ಬಳಸಬೇಕು. ಇವತ್ತು ಪಠ್ಯಪುಸ್ತಕದ ಉದ್ದೇಶದಿಂದಲೇ ಬರೆದರೆ ಅದರಲ್ಲಿ ಸತ್ತ್ವ ತುಂಬಿರುವುದಿಲ್ಲ. ಈ ರೀತಿ ಪಠ್ಯಪುಸ್ತಕ ಬರೆಯುವ ಕ್ರಮ ಕಾಲೇಜಿಗೂ ಬಂದಿದೆ. ಇದು ಖಂಡಿತಾ ತಪ್ಪು. 'ಇಂಗ್ಲಿಷ್ ಟೆಕ್ಸ್ಟ್‌ಬುಕ್‌ಗೆ ಇಂಡಿಯನ್ ಇಂಗ್ಲೀಷ್ ಮಾತ್ರ ಸಾಕು' ಎಂಬ ವಾದ ಇದೆ. ಅದೂ ತಪ್ಪು. ಆದುದರಿಂದ ಪಠ್ಯಪುಸ್ತಕ ಬರೆಸುವುದು ಒಂದು ದುರಾಲೋಚನೆ. 'ನಲಿ ಕಲಿ' ಎಂದು ಹೊಸ ವಿದ್ಯಾಭ್ಯಾಸ ವಿಧಾನ ಇದೆ. ಇಷ್ಟು ದಪ್ಪದ ಪ್ರೊಸೀಜರ್ ಮಾಡಿದ್ದಾರೆ. ಅದಕ್ಕೆ ಯಾರೋ ಒಬ್ಬ 'ಫಾರ್‌ವರ್ಡ್' ಬರೆದಿದ್ದಾನೆ. ಅದನ್ನು ಇನ್ನೊಬ್ಬ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಮೊದಲನೆಯವನ ಇಂಗ್ಲಿಷ್ ಸರಿಯಿಲ್ಲ. ಅದನ್ನು ಅನುವಾದ ಮಾಡಿದ್ದೂ ಕನ್ನಡ ಅಲ್ಲ. ಆ ಪುಸ್ತಕವನ್ನು 'ನಲಿ ಕಲಿ' ಪದ್ಧತಿಯನ್ನು ತಿಳಿದುಕೊಳ್ಳಲಿಕ್ಕಾಗಿ ಹಂಚಿದ್ದಾರೆ. ನಾನೂ ಇನ್ನೊಬ್ಬರು ಡೈರೆಕ್ಟರ್ ದೋಹಿದೇಕರ್ ಸೇರಿ ಆಂದೋಲನ ಮಾಡಿ 'ನಲಿ ಕಲಿ ಕಿತ್ತು ಹಾಕಬೇಕು. ಇದರಿಂದ ಪ್ರಯೋಜನ ಇಲ್ಲ. ಎಲ್ಲ ಕೆಟ್ಟು ಹೋಗುತ್ತದೆ' ಎಂದು ಹೇಳಿದೆವು. ಆದರೆ ಸರ್ಕಾರ ಕೇಳಲಿಲ್ಲ. ಗಟ್ಟಿಮುಟ್ಟಾಗಿ ಮಾಡ್ತಾ ಇದ್ದಾರೆ. ದುಡ್ಡು ಇಟ್ಟುಕೊಂಡು ಕೊಟ್ಟುಕೊಂಡು ಮಾಡ್ತಾ ಇದ್ದಾರೆ. ಇದರಿಂದಾಗಿ ಶಿಕ್ಷಣವ್ಯವಸ್ಥೆ ಕೆಟ್ಟುಹೋಗುತ್ತದೆ. ಇನ್ನಷ್ಟು ದುಡ್ಡು ಹಾಳಾಗುತ್ತದೆ. ಎಳೆಯ ಮಕ್ಕಳನ್ನೂ ಹಾಳುಮಾಡಿದಂತಾಗುತ್ತದೆ. ಒಂದಲ್ಲ, ಹಲವು ತಲೆಮಾರುಗಳ ಮಕ್ಕಳು ಹಾಳಾಗುತ್ತಾರೆ. ಆದುದರಿಂದ ಪಠ್ಯಪುಸ್ತಕರಚನೆ ಮತ್ತು ಶಿಕ್ಷಣವಿಧಾನಗಳ ಸ್ವರೂಪನಿರ್ಮಾಣದಲ್ಲಿ ಬಹಳ ಜಾಗರೂಕತೆ ಬೇಕು. ಬಹಳ ದೂರದೃಷ್ಟಿ ಬೇಕು. ಮಕ್ಕಳಲ್ಲಿ ನಮ್ಮ ಭಾಷೆಯ ಹಿಂದಿನ ರೂಪಗಳಾದ ಹಳಗನ್ನಡ ನಡುಗನ್ನಡಗಳ ಕುರಿತಾಗಿ ಪ್ರೀತಿ ಉಂಟಾಗಬೇಕಾದರೆ ಅವು ಪಠ್ಯಪುಸ್ತಕಗಳಲ್ಲಿ ಸೇರಿರಬೇಕು. ಅವುಗಳ ಕುರಿತು ಪ್ರೀತಿ ಬರುವಂತೆ ಪಾಠಮಾಡಬೇಕು. ಮೊದಲನೆಯದಾಗಿ ಪಾಠಮಾಡುವವರಿಗೆ ಈ ಸಾಹಿತ್ಯದ ಕುರಿತು ಪ್ರೀತಿಯಿರಬೇಕು. ಹಳೆಯ ಸಾಹಿತ್ಯದ ಕುರಿತು ಪ್ರೀತಿಗೌರವಗಳಿಲ್ಲದ ಅಧ್ಯಾಪಕ ವಿದ್ಯಾರ್ಥಿಗಳಲ್ಲಿ ಹೇಗೆ ಪ್ರೀತಿ ಹುಟ್ಟಿಸಬಲ್ಲ?

**ಪಾದೇಕಲ್ಲು:** ಈಗಾಗಲೇ ನೀವು ಹಲವು ರೀತಿಯ ನಿಘಂಟುಗಳನ್ನು ಸಿದ್ಧಪಡಿಸಿ, ಆ ಕ್ಷೇತ್ರದಲ್ಲಿ ದೊಡ್ಡ ಸಾಧನೆಯನ್ನೇ ಮಾಡಿದ್ದೀರಿ. ಈಗ ಸಿದ್ಧವಾಗಿರುವ ನಿಘಂಟು ಕೂಡಾ ಅಪೂರ್ಣವೇ ಎಂದು ನೀವೇ ವಿಮರ್ಶೆಯನ್ನೂ ಮಾಡುತ್ತಿದ್ದೀರಿ. ಇನ್ನೇನು

ನಿಘಂಟು ಯೋಜನೆ ಮಾಡಿಕೊಂಡಿದ್ದೀರಿ?

**ಜಿ.ವೆಂ.:** ಅಂಥದ್ದೇನಿಲ್ಲ. ಇನ್ನೂ ಹೊಸ ಯೋಜನೆಗಳನ್ನು ಹೊಸದಾಗಿ ತೊಡಗಿ ಪೂರೈಸುವುದು ನನಗೆ ಕಷ್ಟಸಾಧ್ಯವೆಂಬುದರಿಂದ ಹೊಸ ಯೋಜನೆಗಳನ್ನು ಪ್ರಾರಂಭಿಸಿಲ್ಲ. ಆಗಬೇಕಾದ ಕೆಲಸಗಳು ಬಹಳ ಇವೆ. ಯುವಕರು ಮುಂದೆ ಬರಲಿ. ಅವರಿಗೆ ಅವಕಾಶಗಳು ಇವೆ. ಸಾಕಷ್ಟು ಬುದ್ಧಿವಂತರೂ ಉತ್ಸಾಹಿಗಳೂ ಇದ್ದಾರೆ. ಶ್ರಮಕ್ಕೆ ನಮ್ಮ ಜನ ಸಿದ್ಧವಾಗಬೇಕು ಅಷ್ಟೆ.

**ಎನ್. ಟಿ. ಭಟ್** : ನಿಘಂಟು ಪದದ ವ್ಯುತ್ಪತ್ತಿ, ಎಟಿಮಾಲಜಿ ಹೇಗೆ?

**ಜಿ.ವೆಂ.:** ನಿಘಂಟು ಅನ್ನುವುದು ಸಂಸ್ಕೃತ ಪದ. 'ನಿಘಂಟಯತಿ ಇತಿ ನಿಘಂಟುಃ' – 'ನಿರ್ಧಾರ ಮಾಡುತ್ತದೆ– ಆದುದರಿಂದ ಅದು ನಿಘಂಟು'. ಅದು ಶಬ್ದಾರ್ಥವನ್ನು ನಿರ್ಧಾರಮಾಡುತ್ತದೆ. ಕನ್ನಡದಲ್ಲಿ ಮಾತು ಅರ್ಥ ಎಂದು ಹೇಳಬಹುದಷ್ಟೇ. ಇಂತಹ ಶಾಸ್ತ್ರೀಯವಾದ ಪದ ಕನ್ನಡದಲ್ಲಿ ಇಲ್ಲವೇ ಇಲ್ಲ. ಹಳಗನ್ನಡದಲ್ಲಿ ಅಥವಾ ಹೊಸಗನ್ನಡದಲ್ಲಿ ದ್ರಾವಿಡ ಭಾಷೆಗಳಲ್ಲಿ ೯೯೯ರ ತನಕ ಲೆಕ್ಕಾಚಾರದ ಸಂಖ್ಯೆಗಳಿವೆ. ಅವರಿಗೆ ಸಾವಿರದ ಅನಂತರ ಲೆಕ್ಕಾಚಾರ ಇಲ್ಲ. ಸಾವಿರಕ್ಕೆ ಸ್ವತಂತ್ರವಾದ ದೇಶೀಯ ಶಬ್ದ ಇಲ್ಲ. ಸಹಸ್ರದ ತದ್ಭವ ಸಾವಿರ. ೯೯೯ಕ್ಕೆ ಒಂದು ಸೇರಿಸಬೇಕು. ಈಗಲೂ ಹಳ್ಳಿಯಲ್ಲಿ ಒಂದರಿಂದ ೨೦ರ ವರೆಗೆ ಮಾತ್ರ ಲೆಕ್ಕ ಮಾಡುತ್ತಾರೆ. ಆಮೇಲೆ ಒಂದು ಇಪ್ಪತ್ತು, ಎರಡು ಇಪ್ಪತ್ತು – ಹೀಗೆ ಹೇಳುತ್ತಾರೆ. ಅದೇ ಪದ್ಧತಿ ಹಿಂದೆ ಇತ್ತೋ ಏನೋ.

**ಎನ್. ಟಿ. ಭಟ್** : ಮಾಡರ್ನ್ ಟೆಕ್ನಾಲಜಿಯಲ್ಲಿ ಸೈನ್ಸ್ ಪುಸ್ತಕಗಳನ್ನು ಅನುವಾದ ಮಾಡುವಾಗ ಮೂಲಶಬ್ದಗಳನ್ನು ಹಾಗೇ ಇಟ್ಟುಕೊಳ್ಳಬೇಕೋ ಅಥವಾ ಹೊಸ ಶಬ್ದಗಳನ್ನು ಸೃಷ್ಟಿಮಾಡಬೇಕೋ. ಬೇರೆ ಬೇರೆ ಜನ ಬೇರೆ ಶಬ್ದಗಳನ್ನು ಬಳಸಿದರೆ ಆ ವಿಭಿನ್ನ ಪುಸ್ತಕಗಳು ಸಮಾನವಾಗಿ ಪ್ರಯೋಜನಕ್ಕೆ ಬರುವುದಿಲ್ಲವಲ್ಲ.

**ಜಿ.ವೆಂ.:** ನೀವು ಎತ್ತಿದ ವಿಷಯ ಪಾರಿಭಾಷಿಕ ವಿಷಯಗಳಿಗೆ ಸಂಬಂಧಿಸಿದ್ದು. ಅದರಲ್ಲಿಯೂ ವಿಜ್ಞಾನ ವಿಷಯಗಳ ಪಾರಿಭಾಷಿಕ ಪದಗಳ ಅನುವಾದದ ಕುರಿತು. ಅದಕ್ಕೆ ಪರಿಹಾರ ಇದೆ. ಈಗ ಉದಾಹರಣೆಗೆ 'ಆಕ್ಸಿಜನ್' ಅನ್ನುವುದಕ್ಕೆ 'ಆಮ್ಲಜನಕ' ಎಂದು ನಾವು ಕರೆದರೆ ಧಾರವಾಡದ ಕಡೆಯವರು 'ಪ್ರಾಣವಾಯು' ಎಂದು ಕರೆಯುತ್ತಾರೆ. ಹಾಗಾಗಿ, ತಮಗೆ ತೋಚಿದಂತೆ ವಿವಿಧ ಪಾರಿಭಾಷಿಕಪದಗಳನ್ನು ಸೃಷ್ಟಿಸಿ ಗೊಂದಲ ಹುಟ್ಟಿಸುವುದು ತಪ್ಪಾಗುತ್ತದೆ. ಬಹಳ ಸುಲಭವಾದ ಮಾರ್ಗ ಎಂದರೆ ಯಾವುದು ಹೊಸ ಪಾರಿಭಾಷಿಕಪದವೋ ಅದನ್ನು ಯಾವುದೇ ಸಂಕೋಚ–ವಿಲ್ಲದೆ ನೇರವಾಗಿ ತೆಗೆದುಕೊಳ್ಳುವುದು. ಆಗ ಅದು ಅರ್ಥವಾಗುವುದಿಲ್ಲವೆಂಬ ಗಲಾಟೆಯೇ ಇಲ್ಲ. ಅದಕ್ಕೆ ಕನ್ನಡದ ಉ ಪ್ರತ್ಯಯ ಸೇರಿದರೆ ಆಯಿತು – ಯಾವ ಶಬ್ದ ಬೇಕಾದರೂ ಕನ್ನಡವಾಗಿಬಿಡುತ್ತದೆ. ಕಂಪ್ಯೂಟರು, ಮೌಸು, ಸ್ಲೇಟು, ಕೋರ್ಟು ಹೀಗೆ. ಈ ಶಬ್ದಗಳನ್ನು ಆಯಾ ವಿಶಿಷ್ಟ ಕ್ಷೇತ್ರದವರು ಮಾತ್ರ ಉಪಯೋಗಿಸುತ್ತಾರೆ.

ಆವರಿಗೆ ಗೊತ್ತಿರುತ್ತದೆ. ಆ ಕ್ಷೇತ್ರದ ಬೇರೆ ಬೇರೆ ಶಬ್ದಗಳಾಗಿ ಉಳಿದುಕೊಂಡು ಬಿಡುತ್ತವೆ. ಅನುವಾದ ಮಾಡಲೇಬೇಕೆಂದಿದ್ದರೆ ಮಾಡಿ. ಆದರೆ ಮೂಲಪದವನ್ನು ಆವರಣದೊಳಗಡೆ ಹಾಕಿ. ಅಂತೂ ಒಟ್ಟೊಟ್ಟಿಗೆ ಹಾಕಬೇಕು. ಆ ಪದ ಎಲ್ಲಿಂದ ಬಂತು ಎಂದು ಸ್ಪಷ್ಟವಾಗಿ ಗೊತ್ತಾಗುವಂತಿರಬೇಕು. ಅನುವಾದಗಳ ಉಪಯೋಗ-ದಲ್ಲಾದರೂ ಎಲ್ಲ ಬರಹಗಾರರಲ್ಲಿ ಏಕರೂಪತೆ ಇದ್ದರೆ ಒಳ್ಳೆಯದೇ. ಆದರೆ ಹೀಗೆ ಎರವಲು ತೆಗೆದುಕೊಳ್ಳುವುದು ಸರಳವಾದ ಮತ್ತು ಸುಲಭವಾದ ಮಾರ್ಗ. ಇದು ನಮ್ಮ ಪರಂಪರೆ ಅನುಸರಿಸಿಕೊಂಡು ಬಂದ ಮಾರ್ಗ.

**ಪಾದೇಕಲ್ಲು :** ಕನ್ನಡದಲ್ಲಿ 'ಎರವಲು ಪದಕೋಶ' ನೀವು ಮಾಡಿದಿರಿ.

**ಜಿ.ವೆಂ.:** ಹೌದು, ಬೇರೆ ಭಾಷೆಗಳಿಂದ ಬಂದ ೫೦೦೦ದಷ್ಟು ಪದಗಳನ್ನು ಸೇರಿಸಿ ಒಂದು ನಿಘಂಟುರಚನೆ ಮಾಡಿದ್ದೇನೆ. ಭಾಷೆಯೊಳಗೆ ಬೇರೆ ಭಾಷೆಯ ಪದಗಳು ನುಸುಳುತ್ತಲೇ ಇರುವುದರಿಂದ ಈ ಕೋಶವೂ ಪರಿಷ್ಕೃತವಾಗುತ್ತಲೇ ಇರಬೇಕು. 'ನೋಡಿ, ಮುಂದೆ ಇಂಥಾದ್ದನ್ನು ಸೇರಿಸಿಕೊಂಡು ಹೋಗಿ' ಅಂತ ಒಂದು ಕೋಶವನ್ನು ಸಿದ್ಧಮಾಡಿಕೊಟ್ಟಿದ್ದೇನೆ. ಉಪಯೋಗ ಮಾಡಿದರೆ ಮಾಡಲಿ, ಬಿಟ್ಟರೆ ಬಿಡಲಿ. ಭಾಷೆ ಬೆಳೆಯುವುದೇ ಹೀಗೆ. ಮನುಷ್ಯರಿಗೆ ಪರಸ್ಪರ ಸಂಪರ್ಕವಿಲ್ಲದೆ ಜೀವನ ಸಾಧ್ಯವಿಲ್ಲ. ಹಾಗೆಯೇ ಭಾಷೆಗಳೂ ಪರಸ್ಪರ ಸಂಪರ್ಕದಿಂದ ಪುಷ್ಟವಾಗಿ ಬೆಳೆಯುತ್ತವೆ. ಯಾವುದೋ ಮೂಲದ ಶಬ್ದಗಳು ಯಾವುದೋ ಭಾಷೆಯಲ್ಲಿ ಜೀವಿಸುತ್ತವೆ; ರೂಪಾಂತರ ಹೊಂದುತ್ತವೆ. ಹಾಗೆಯೇ ಅನಂತರ ಆ ಭಾಷೆಯ ಸೊತ್ತುಗಳೇ ಆಗುತ್ತವೆ.

**ಪಾದೇಕಲ್ಲು :** ಬೇರೆ ಭಾಷೆಗಳಲ್ಲಿ ಸಮಕಾಲೀನ ಭಾಷೆಗೆ ಒಂದು ಬೇರೆಯೇ ನಿಘಂಟು ಸಿದ್ಧಪಡಿಸುವ ಪದ್ಧತಿ ಇದೆ. 'ಕರೆಂಟ್ ಇಂಗ್ಲಿಷ್' ಎಂಬ ಹೆಸರಿನಲ್ಲಿ ನಿಘಂಟು ಬಂದಿದೆ. ಹತ್ತು ವರ್ಷಕ್ಕೊಮ್ಮೆ ಇಂತಹ ಕೋಶವನ್ನು ಸಮಕಾಲೀನಗೊಳಿಸಿ ಬದಲಾವಣೆ ಮಾಡುವುದು ಇತ್ಯಾದಿಗಳು ಬಂದಿವೆ. ಆದರೆ ಕನ್ನಡದಲ್ಲಿ ಒಂದು ನಿಘಂಟು ತಯಾರಾಗಿರುವುದೇ ತುಂಬ ಕಷ್ಟದಲ್ಲಿ. ಈಗ ಸಮಕಾಲೀನ ಭಾಷೆಗೆ ನಿಘಂಟು ತಯಾರು ಮಾಡುವುದಿದ್ದರೆ ಹೇಗೆ?

**ಜಿ.ವೆಂ.:** ಇಂಗ್ಲಿಷನ್ನು ಅನುಸರಿಸಿಕೊಂಡು ಅದೇ ವಿಧಾನದಿಂದ ನಾವು ನಿಘಂಟು-ಗಳನ್ನು ತಯಾರಿಸಬೇಕೆಂದೇನೂ ಇಲ್ಲ. ನಮ್ಮ ಆವಶ್ಯಕತೆಗಳೂ ಇಂಗ್ಲಿಷಿನ ಆವಶ್ಯಕತೆಗಳೂ ಬೇರೆಬೇರೆಯೇ ಎನ್ನಬಹುದು. ಇಂಗ್ಲಿಷಿಗೆ ಪ್ರಪಂಚದ ನಾನಾ ಭಾಷೆಗಳ ಸಂಪರ್ಕವಾಗಿ ಅಲ್ಲಿಯ ಶಬ್ದಭಂಡಾರ ಮತ್ತು ಅಭಿವ್ಯಕ್ತಿರೂಪಗಳಲ್ಲಿ ತುಂಬ ಬದಲಾವಣೆಗಳಾಗಿವೆ; ಆಗುತ್ತಿವೆ. ಆದುದರಿಂದ ಅಲ್ಲಿ ನಿಘಂಟುಗಳನ್ನು ಸಮಕಾಲೀನಗೊಳಿಸುವ ಆವಶ್ಯಕತೆ ಹೆಚ್ಚು. ಅಲ್ಲದೆ ಉದ್ಯೋಗಗಳು, ವೃತ್ತಿಗಳು ವೈವಿಧ್ಯಪೂರ್ಣವಾದಾಗ ಹೊಸಹೊಸ ಶಬ್ದಗಳು ವ್ಯಾಪಕವಾಗಿ ಬಳಕೆಗೊಳ್ಳುತ್ತವೆ. ಮತ್ತು ಹೊಸಹೊಸ ಶಬ್ದಗಳು ಸೃಷ್ಟಿಸಲ್ಪಡುತ್ತವೆ. ಅಂತಹ ಸಂದರ್ಭದಲ್ಲಿ ಹಳೆಯ

ನಿಘಂಟುಗಳಲ್ಲಿ ಅವು ದೊರಕಲಾರವು. ಆಗ ನಿಘಂಟುಗಳನ್ನು ಸಮಕಾಲೀನ-ಗೊಳಿಸಿಕೊಳ್ಳಬೇಕಾಗುತ್ತವೆ. ವಿಶ್ವದಾದ್ಯಂತ ಬಳಕೆಯಲ್ಲಿರುವ ಇಂಗ್ಲಿಷಿಗೆ ಆಗಾಗ ನಿಘಂಟುಗಳನ್ನು ಸಮಕಾಲೀನಗೊಳಿಸುವ ಆವಶ್ಯಕತೆ ಬೀಳುತ್ತದೆ. ಅದೇ ಮಾದರಿ ಕನ್ನಡಕ್ಕೆ ಪ್ರಸ್ತುತವಾಗದು. ಆದರೆ ಬೇರೆ ಬೇರೆ ಜನಸಮೂಹವನ್ನು ಉದ್ದೇಶ-ದಲ್ಲಿರಿಸಿಕೊಂಡು ವಿಭಿನ್ನರೀತಿಗಳಲ್ಲಿ ರಚಿತವಾಗುವ ನಿಘಂಟುಗಳು ಕನ್ನಡಕ್ಕೆ ಅವಶ್ಯವೆನ್ನಬಹುದು. ಉದಾಹರಣೆಗೆ ಚಿಕ್ಕಮಕ್ಕಳ ನಿಘಂಟು, ಚಿತ್ರಸಹಿತ ನಿಘಂಟು, ಚಿತ್ರಾಧಾರಿತ ನಿಘಂಟು. ವೈಜ್ಞಾನಿಕ ನಿಘಂಟು, ವಿವಿಧ ಶಾಸ್ತ್ರಸಂಬಂಧಿ ನಿಘಂಟು-ಗಳು, ಅನುವಾದೋಪಯೋಗಿ ನಿಘಂಟುಗಳು ಇತ್ಯಾದಿ. ಭಾಷಾ ಸರ್ವೇಕ್ಷಣೆಯ ಬಗ್ಗೆ ಈಗಾಗಲೇ ನಾನು ಹೇಳಿದ್ದೇನೆ. ಆ ಆಧಾರದಿಂದ ಒಂದು ಸಮಗ್ರ ನಿಘಂಟು ಆಗಬೇಕಿದೆ. ಅದು ಈಗ ಸಿದ್ಧವಾಗಿರುವ ನಿಘಂಟಿಗಿಂತ ಗಾತ್ರದಲ್ಲಿ ತುಂಬ ದೊಡ್ಡದಾಗಬಹುದು.

ಈಗ ನಾವು ತಯಾರು ಮಾಡಿದ ನಿಘಂಟು ಸಂಪುಟಗಳು ಪೂರ್ತಿಯಾಗಿ ಮುಗಿದು ಒಂದು ಪ್ರತಿಯೂ ಸಿಗ್ತಾ ಇರಲಿಲ್ಲ. ಮುದ್ರಣ ಮಾಡಿ ಅದಕ್ಕೆ ಸೇರಿಸಬೇಕಾದದ್ದು ಬಹಳ ಇದೆ. ಹೊಸ ಮುದ್ರಣ ಮಾಡುವಾಗ ನನ್ನ ಪ್ರತಿ ತೆಗೆದುಕೊಂಡು ಹೋಗಿ, ಅದರಲ್ಲಿ ಏನೇನು ತಿದ್ದುಪಡಿ ಮಾಡಿದ್ದೇನೋ ಅದನ್ನು ಸೇರಿಸಿಕೊಳ್ಳಿ ಎಂದೆ. ಯಾರೂ ಬರಲಿಲ್ಲ. ಆದರೆ ಇದ್ದಕ್ಕಿದ್ದ ಹಾಗೆ ಇದೀಗ ಮುದ್ರಣ ಮಾಡಿದ್ದಾರೆ. ಸೇರಿಸಬೇಕಾದ ತಿದ್ದುಪಾಟುಗಳು ಎಂದು ಪ್ರತ್ಯೇಕವಾಗಿ ಒಂದು ಸಣ್ಣ ಸಂಪುಟ ಮಾಡಿದರೆ ಮುಂದೆ ಅದನ್ನು ಸೇರಿಸಿಕೊಳ್ಳಬಹುದು. ಆದರೆ ಯಾರಿಗೂ ಆ ಕಡೆ ಗಮನವೇ ಇಲ್ಲ.

**ಕೃಷ್ಣ ಭಟ್:** ಅದು ಹಾಗೆ. ಕಿಟ್ಟೆಲ್ ಡಿಕ್ಷನರಿಯನ್ನು ಪುನಃ ಸಂಪಾದಿಸಿ ಮುದ್ರಣ ಮಾಡುವಾಗ ಗೋವಿಂದ ಪೈಗಳ ಪ್ರತಿಯನ್ನು ನೋಡಬೇಕಿತ್ತು. ಅವರು ಅದರಲ್ಲಿ ಪ್ರತಿಯೊಂದು ಶಬ್ದವನ್ನು ನೋಡಿದ್ದಾರೆ, ತಿದ್ದಿದ್ದಾರೆ. ಎಷ್ಟು ಕಷ್ಟಪಟ್ಟಿದ್ದಾರೆ! ಅವರು ಡಿಕ್ಷನರಿಯನ್ನು ಬೇಕಾದಾಗ ಸಹಾಯಕ್ಕಾಗಿ ಪರಾಮರ್ಶೆ ಮಾಡುತ್ತಿದ್ದುದಲ್ಲ; ಅದನ್ನೇ ಇಟ್ಟುಕೊಂಡು ಮೊದಲಿಂದ ಕೊನೆಯವರೆಗೆ ಓದುತ್ತಿದ್ದರು.

**ಜಿ.ವೆಂ.:** ನಾನು ನೋಡಿದ್ದೇನೆ ಅದನ್ನು. ಅವರ ಪುಸ್ತಕದಿಂದ ಹತ್ತು ಪುಟಗಳನ್ನು ಕ್ಸೆರಾಕ್ಸ್ ಮಾಡಿಟ್ಟುಕೊಂಡಿದ್ದೇನೆ. ಒಬ್ಬ ಭಾಷಾವಿದ್ವಾಂಸ ನಿಘಂಟನ್ನು ಹೇಗೆ ಅಧ್ಯಯನಮಾಡುತ್ತಾನೆ ಅನ್ನುವುದಕ್ಕೆ ಇರುವ ಒಂದು ಒಳ್ಳೆಯ ಉದಾಹರಣೆ ಗೋವಿಂದ ಪೈಯವರು. ಆ ವಿಷಯದ ಬಗ್ಗೆಯೇ ಬರೆದು ಈ ಪುಸ್ತಕದ ಕೆಲವು ಪುಟಗಳನ್ನು ಉದಾಹರಣೆಯಾಗಿ ಕೊಟ್ಟು ಪುಸ್ತಕ ಹೊರತರಬಹುದು. ಹಾವನೂರು ಅವರು ಇಂತಹ ಕೆಲಸಗಳಲ್ಲಿ ಆಸಕ್ತರಿದ್ದರು. ಅವರು ಇದ್ದಿದ್ದರೆ ಮಾಡುತ್ತಿದ್ದರು. ಉಡುಪಿಯಲ್ಲೇ ಒಮ್ಮೆ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ ನಿಘಂಟುರಚನಾಕಮ್ಮಟ ನಡೆಯಿತಷ್ಟೆ – ನಾನೂ ವೆಂಕಟಾಚಲಶಾಸ್ತ್ರಿಗಳೂ ಭಾಗವಹಿಸಿದ್ದೆವು. ಸ್ಪಷ್ಟವಾಗಿ ನೆನಪಿದೆ. ಆ ಕಮ್ಮಟದಲ್ಲಿ ಗೋವಿಂದ ಪೈಗಳ ಈ

ನೈಘಂಟಿಕತತ್ವಗಳನ್ನು ನಿಮ್ಮ ಗೋವಿಂದ ಪೈ ಗ್ರಂಥಭಂಡಾರದಿಂದ ತಂದು ಇದಿರೇ ಇರಿಸಿಕೊಂಡು ಉದಾಹರಣೆ ಕೊಟ್ಟು ಒಂದು ಗಂಟೆ ವಿವರಣೆ ಕೊಟ್ಟಿದ್ದೆ.

ಪಾದೇಕಲ್ಲು : ಆಗ 'ಲೆಕ್ಸಿಕೋಗ್ರಾಫರ್ಸ್ ಅಸೋಸಿಯೇಶನ್' ಇತ್ತಲ್ಲ. ಉಡುಪಿಯಲ್ಲಿ ತುಳು ನಿಘಂಟು ಬಿಡುಗಡೆಯ ಸಂದರ್ಭದಲ್ಲಿ ಅದರ ಸಮ್ಮೇಳನ ಸಭೆ ಮಾಡಿ ಅದರ ಕೇಂದ್ರ ಒಂದು ಬೇಕು. ಉಡುಪಿಯಲ್ಲಿ ಇರಬೇಕು ಎಂದಿದ್ದಿರಿ. ಈಗ ಆ ಸಂಸ್ಥೆಯ ಸ್ಥಿತಿ ಹೇಗಿದೆ? ನಿಮ್ಮ ಸಂಪರ್ಕ ಹೇಗಿದೆ?

ಜಿ.ವೆಂ.: ಲೆಕ್ಸಿಕೋಗ್ರಫಿ ಸೆಂಟರ್ ಬೇಕು. ನಿಘಂಟು ಕಛೇರಿ ಬೇಕು. ಉಡುಪಿ ಸರಿಯಾದ ಜಾಗ. ಕರ್ನಾಟಕ ನಿಘಂಟು ಕೇಂದ್ರ ಎಂದು ಮಾಡಬೇಕಾದರೆ ಉಡುಪಿಯೇ ಸರಿಯಾದ ಜಾಗ ಎಂದು ಹೇಳಿದ್ದೇನೆ. ಆದರೆ ನಿವೃತ್ತಿ ಆದಮೇಲೆ ನನಗೂ ಆ ಅಸೋಸಿಯೇಶನಿಗೂ ಸಂಬಂಧ ತಪ್ಪಿಹೋಯಿತು. ನಾನು ಒಂದೆ ನಿಘಂಟು ಶಿಬಿರಗಳನ್ನು ಮಾಡಿ ಬೇಕಾದಷ್ಟು ಜನರಿಗೆ ಪಾಠ ಮಾಡಿದ್ದೇನೆ. ನಿಘಂಟು ಅಂದರೇನು, ಮಾಡುವುದು ಹೇಗೆ ಎಂದು ಹೇಳಿದ್ದೇನೆ. ಹಾಗೆ ಅನುಭವ ಪಡೆದವರೆಲ್ಲ ಬೇರೆ ಬೇರೆಡೆಗಳಲ್ಲಿ ಚದುರಿದ್ದಾರೆ, ಆದರೆ ಇದ್ದಾರೆ ಜನ. ಆದರೆ ಹುಡುಕಿ ಮಾಡಬೇಕಷ್ಟೆ. ಕರ್ನಾಟಕದೊಳಗೇ ಈ ಕ್ಷೇತ್ರದಲ್ಲಿ ಆಸಕ್ತರು ಬೇರೆ ಬೇರೆ ರೀತಿಯ ನಿಘಂಟುಗಳನ್ನು ರಚಿಸುತ್ತಲೇ ಇದ್ದಾರೆ. ಅವರೆಲ್ಲ ಒಟ್ಟು ಸೇರಿ ಕರ್ನಾಟಕದ ಮಟ್ಟಿಗೆ ನಿಘಂಟುಕಾರರ ಸಂಸ್ಥೆ ಮಾಡಿಕೊಂಡು ವಿಚಾರ ವಿನಿಮಯ ಮಾಡಿಕೊಂಡರೆ ಹೆಚ್ಚಿನ ಅನುಕೂಲವಿದೆ.

ಇಲ್ಲಿ ಇನ್ನೊಂದು ವಿಷಯವನ್ನು ಹೇಳಬೇಕಿದೆ. ಭಾರತೀಯ ಭಾಷಾವಲಯ-ದಲ್ಲಿ ಬಹಳ ಮುಖ್ಯವಾದ ವಿಷಯವಿದು. ಭಾರತೀಯ ಭಾಷೆಗಳೊಳಗೆ ದ್ವಿಭಾಷಾ ಮತ್ತು ತ್ರಿಭಾಷಾ ನಿಘಂಟುಗಳು ಬರುವುದು ನಮ್ಮ ದೇಶದ ತ್ರಿಭಾಷಾ ಸೂತ್ರದ ದೃಷ್ಟಿಯಿಂದಲೂ ಅತ್ಯವಶ್ಯವಾಗಿದೆ. ವಾಸ್ತವವಾಗಿ ಇದಕ್ಕೆ ಸಂಬಂಧಿಸಿದಂತೆ ವಿಸ್ತೃತವಾದ ಯೋಜನೆಯನ್ನು ನಾನು ಹಾಕಿಕೊಂಡಿದ್ದೆ. ಎಂಟು ಸಂಪುಟಗಳಲ್ಲಿ ಪೂರ್ಣವಾಗುವ ಕನ್ನಡ ನಿಘಂಟಿನ ಕೆಲಸ ಕೊನೆಗೊಂಡಾಗ ಆ ಕೊನೆಯ ಸಂಪುಟದ ಬಿಡುಗಡೆಯ ಕಾರ್ಯಕ್ರಮವನ್ನು ರಾಷ್ಟ್ರೀಯಮಟ್ಟದಲ್ಲಿ ಏರ್ಪಡಿಸ-ಬೇಕೆಂದೂ ಕನ್ನಡ ನಿಘಂಟುಯೋಜನೆಯು ದೇಶದ ಬಹುದೊಡ್ಡ ನಿಘಂಟು-ಯೋಜನೆಗಳೊಳಗೆ ಒಂದಾದ ಕಾರಣ ಆ ಕಾರ್ಯಕ್ರಮಕ್ಕೆ ದೇಶದ ರಾಷ್ಟ್ರಪತಿ-ಗಳನ್ನಾಗಲಿ ಪ್ರಧಾನಿಯನ್ನಾಗಲಿ ಕರೆಸಿ ಅದಕ್ಕೆ ರಾಷ್ಟ್ರಮಟ್ಟದ ಮಾನ್ಯತೆ ಮತ್ತು ಪ್ರಚಾರ ದೊರಕುವಂತೆ ಮಾಡಬೇಕೆಂದೂ ಅದೇ ಸಂದರ್ಭದಲ್ಲಿ ಭಾರತದ ಎಲ್ಲ ಭಾಷೆಗಳ ನಿಘಂಟುಕಾರರ ಒಂದು ಮಹಾಸಮ್ಮೇಳನವನ್ನು ನಡೆಸಬೇಕೆಂದೂ ಸಂಕಲ್ಪಿಸಿದ್ದೆ. ಈ ಸಮ್ಮೇಳನದಲ್ಲಿ ಭಾರತೀಯ ಸಂದರ್ಭದಲ್ಲಿ ತ್ರಿಭಾಷಾನಿಘಂಟುಗಳ ಮಹತ್ತ್ವವನ್ನು ತಿಳಿಯಹೇಳಿ ಭಾರತದ ಎಲ್ಲ ಭಾಷೆಗಳಲ್ಲೂ ತ್ರಿಭಾಷಾನಿಘಂಟುಗಳು ರಚಿತವಾಗುವಂತೆ ಯೋಜನೆಗಳನ್ನು ರೂಪಿಸಲು ರಾಷ್ಟ್ರಪ್ರಮುಖರ ಮುಂದೆ ಪ್ರಸ್ತಾವನೆ ಮಾಡಬೇಕೆಂದು ಯೋಚಿಸಿದ್ದೆ. ಆ ರೀತಿಯ ನಿಘಂಟುಯೋಜನೆಗಳಿಗೆ

ಕೇಂದ್ರ - ರಾಜ್ಯ ಸರಕಾರಗಳ ಅನುದಾನ ದೊರಕಿದಲ್ಲಿ ಕನ್ನಡ ನಿಘಂಟು ಕಚೇರಿಯನ್ನು ಖಾಯಂ ನೆಲೆಯಲ್ಲಿ ಮುಂದುವರಿಸಬಹುದಿತ್ತು. ಮತ್ತು ದೇಶದ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಭಾಷೆಗಳ ನಿಘಂಟುಗಳು ಸಿದ್ಧಗೊಳ್ಳುತ್ತಿದ್ದುವು. ಆ ಮೂಲಕ ಅಖಿಲಭಾರತ ಮಟ್ಟದಲ್ಲಿ ಭಾಷಾಭಿವೃದ್ಧಿ ಮತ್ತು ಭಾಷಾಬಾಂಧವ್ಯ ಸಾಧಿತವಾಗುತ್ತಿತ್ತು.

ತ್ರಿಭಾಷಾನಿಘಂಟುಗಳನ್ನು ರಚಿಸುವಾಗ ಕೆಲವು ವಿಷಯಗಳನ್ನು ಗಮನಿಸಬೇಕು. ಸ್ಥಳೀಯಭಾಷೆಗಳನ್ನು ಮುಖ್ಯವಾಗಿರಿಸಿಕೊಂಡು ಮೊದಲ ಹಂತದ ತ್ರಿಭಾಷಾನಿಘಂಟುಗಳು ರಚಿತವಾಗಬೇಕು. ಉದಾಹರಣೆಗೆ ಕನ್ನಡ-ಹಿಂದಿ-ಇಂಗ್ಲಿಷ್/ ತೆಲುಗು-ಹಿಂದಿ-ಇಂಗ್ಲಿಷ್/ಮಲಯಾಳಂ-ಹಿಂದಿ-ಇಂಗ್ಲಿಷ್ - ಈ ರೀತಿಯಲ್ಲಿ. ಅನಂತರದ ಹಂತದಲ್ಲಿ ದೇಶೀಯ ಭಾಷೆಗಳೊಳಗೆ ದ್ವಿಭಾಷಾ ಮತ್ತು ತ್ರಿಭಾಷಾ ನಿಘಂಟುಗಳು ರಚಿತವಾಗಬೇಕು. ಹೀಗೆ ಭಾರತದಲ್ಲಿ ವಿಪುಲವಾಗಿ ನಿಘಂಟುರಚನೆಗೆ ಅವಕಾಶವಿದೆ. ಈ ಕಾರ್ಯ ಭಾಷಾಭಿವೃದ್ಧಿ ಮತ್ತು ಭಾವೈಕ್ಯದ ದೃಷ್ಟಿಯಿಂದ ಆಗಲೇಬೇಕಾದ ಕೆಲಸವಾಗಿದೆ. ಆದರೆ, ಕಾರಣಾಂತರಗಳಿಂದ ಈ ಯೋಜನೆಗಳನ್ನು ಈಡೇರಿಸಿಕೊಳ್ಳಲಾಗಲಿಲ್ಲ. ನಾನು ಹಿಂದೆಯೇ ಹೇಳಿದಂತೆ ಸಾಹಿತ್ಯಪರಿಷತ್ತಿನ ನಿಘಂಟು ಕಚೇರಿಗೂ ಬೀಗಮುದ್ರೆ ಬೀಳುವಂತಾಯಿತು. ಇಂತಹ ಯೋಜನೆಗಳಲ್ಲಿ ನಾವು ಬಹಳ ದೂರದೃಷ್ಟಿಯಿಂದ ಕೆಲಸಗಳನ್ನು ಮಾಡಬೇಕು. ಆಧುನಿಕ ತಂತ್ರಜ್ಞಾನದಿಂದಾಗಿ ಈಗ ಎಷ್ಟೋ ಕೆಲಸಗಳು ಸುಲಭವಾಗಿವೆ.; ಹಿಂದಿನ ಕಾಲಕ್ಕಿಂತ ವೇಗವಾಗಿ ಕೆಲಸಗಳನ್ನು ಸಾಧಿಸಬಹುದಾಗಿದೆ. ಈಗಂತೂ ಕಂಪ್ಯೂಟರಿನ ಯುಗ.....

**ಎನ್. ಟಿ. ಭಟ್:** ಕಂಪ್ಯೂಟರಿನ ಬಳಕೆ ನಿಘಂಟಿನಲ್ಲಿ ಹೇಗೆ ಮಾಡಬಹುದು?

**ಜಿ.ವೆಂ.:** ಬೇಕಾದಷ್ಟು ಮಾಡಬಹುದು. ನಾನು ಒಂದು ಇಂಗ್ಲಿಷ್ ಕನ್ನಡ ನಿಘಂಟು ವಿಶಿಷ್ಟವಾಗಿ ತಯಾರು ಮಾಡಿದ್ದೇನೆ. ಒಂದು ಇಂಗ್ಲಿಷ್ ಪದದ ಈಡಿಯಮ್ಸ್ ಸಹ ಜೊತೆಗೆ ಕೊಟ್ಟಿದ್ದೇನೆ. ಅನುವಾದಕರಿಗೆ ಅನುಕೂಲವಾಗುವಂತೆ ಮಾಡಿದ್ದೇನೆ. ಅದನ್ನು ಇಂಟರ್‌ನೆಟ್‌ನಲ್ಲಿ ಹಾಕಿದ್ದಾರೆ ಅಮೇರಿಕದಲ್ಲಿ. ಅದನ್ನು ದಿನವೊಂದಕ್ಕೆ ಎಷ್ಟು ಜನ ನೋಡುತ್ತಾರೆ ಅನ್ನುವ ಮಾಹಿತಿ ಕೂಡ ಸಿಗುತ್ತದೆ. ಅದನ್ನು ಬ್ರೈಲ್ ಲಿಪಿಯಲ್ಲಿಯೂ ಮಾಡಿದ್ದಾರೆ. ಒಂದು ಬ್ರೈಲ್ ಕ್ಲಾಸಿನಲ್ಲಿ ಶಿಬಿರದಲ್ಲಿ ಒಬ್ಬ ಕುರುಡ ಹುಡುಗ ಬ್ರೈಲ್ ಲಿಪಿಯಲ್ಲಿ 'ಸೈಂಟಿಫಿಕ್ = ವೈಜ್ಞಾನಿಕವಾಗಿ' ಎಂದು ಓದಿದಾಗ ನನಗೆ ತುಂಬ ತೃಪ್ತಿಯಾಯಿತು. ಮುಂದಿನ ದಿನಗಳಲ್ಲಿ ಸಂಪುಟಗಟ್ಟಲೆಯ ನಿಘಂಟು-ಗಳು ಮುದ್ರಿತವಾಗದೆ ಕೇವಲ ಅಡಕಮುದ್ರಿಕೆಗಳಲ್ಲಿ ದೊರಕುವ ದಿನಗಳು ಬರ-ಬಹುದು. ಆಗ ನಿಘಂಟು ಸಂಪುಟಗಳನ್ನಿರಿಸಿಕೊಳ್ಳಲು ಕಪಾಟುಗಳು ಬೇಕಾಗಲಾರವು. ಒಂದು ಪುಟ್ಟ ಕಂಪ್ಯೂಟರು ಸಾಕು. ಕಂಪ್ಯೂಟರು ಅಷ್ಟು ಪರಿಣಾಮಕಾರಿ.

**ಪಾದೇಕಲ್ಲು:** ಕುಮಾರವ್ಯಾಸನ ಬಗ್ಗೆ ಒಂದು ನಿಘಂಟನ್ನು ತಯಾರು ಮಾಡಬೇಕೆಂದಿದ್ದೀರಿ. ಗದಗ ಆ ಕಡೆ ಸರ್ವೇ ಮಾಡಿ ಮಾಡಬೇಕು. ಎಂದಿದ್ದೀರಿ.

ಜಿ.ವೆಂ: ಕುಮಾರವ್ಯಾಸನ ಬಗ್ಗೆ ಈಗಾಗಲೇ ಒಂದೆರಡು ಕೋಶಗಳು ಬಂದಿವೆ. ಎನ್ಕೆ ಮಾಡಿದ್ದಾರೆ. ಶ.ಕು. ಶಾಮರಾವ್ ಮಾಡಿದ್ದಾರೆ. ಆದರೆ ಇನ್ನೂ ವಿಸ್ತೃತವಾಗಿ ಮಾಡುವ ಅವಕಾಶಗಳಿವೆ. ಗದುಗುಭಾರತದಲ್ಲಿ ಉತ್ತರ ಕರ್ನಾಟಕದ ಭಾಷೆಯಿದೆ. ಮರಾಠಿಯಿಂದ ಬಂದ ಪದಗಳಿವೆ. ಆ ಕೃತಿಯ ಎಲ್ಲ ಪದಗಳಿಗೆ ಇನ್ನೂ ಸರಿಯಾದ ಅರ್ಥನಿರೂಪಣೆ ಆಗಿಲ್ಲ. ಅದಕ್ಕಾಗಿ ಗದುಗಿನ ಪರಿಸರದ ಭಾಷೆಯ ಸರ್ವೇಕ್ಷಣೆ ಅವಶ್ಯ. ಅಲ್ಲಿ ಇನ್ನೂ ಆ ಪದಗಳು ಜೀವಂತವಾಗಿರಬಹುದು. ಆದರೆ ಒಂದಿಷ್ಟು ಪರಿವರ್ತಿತವಾಗಿರಬಹುದು. ಅದನ್ನೆಲ್ಲ ಸಮೀಕ್ಷೆ ಮಾಡಿ ನಿಘಂಟು ರಚನೆ ಆಗಬೇಕು. ಕುಮಾರವ್ಯಾಸ ಎಂದೇನು? ಎಲ್ಲ ಕವಿಗಳ ಬಗೆಗೂ ನಿಘಂಟು ಮಾಡುವ ಅವಕಾಶಗಳಿವೆ. ಮುದ್ದಣನ ಪದಪ್ರಯೋಗಗಳ ಬಗ್ಗೆ ನಾನೇ ಮಾಡಿದೆ. ಗೋವಿಂದ ಪೈಗಳ ಪ್ರಯೋಗಗಳ ಬಗ್ಗೆ ಎ. ವಿ. ನಾವಡರು ಮಾಡಿದರು. ಹೊಸಗನ್ನಡ ಕವಿಗಳ ಬಗೆಗೂ ಇಂತಹ ಕೆಲಸ ಮಾಡಬಹುದು. ಡಿವಿಜಿ ಅವರು ಎಷ್ಟೋ ಪದಗಳನ್ನು ಹೊಸದಾಗಿ ಬಳಸಿದ್ದಾರೆ. ಸೇಡಿಯಾಪು ಅವರು ಶಾಸ್ತ್ರನಿರೂಪಣೆಯಲ್ಲಿ ಎಷ್ಟೋ ಹೊಸ ಶಬ್ದಗಳನ್ನು ಸೃಷ್ಟಿಮಾಡಿದ್ದಾರೆ. ಅವುಗಳ ವಿವರಣೆ ವಿಶ್ಲೇಷಣೆ ಅವಶ್ಯವಿದೆ. ಕುವೆಂಪು ಅವರ ಕೃತಿಗಳಲ್ಲಿ ಬಳಸಲಾದ ಭಾಷಾಪ್ರಯೋಗವನ್ನಿರಿಸಿಕೊಂಡು ಕೋಶ ಮಾಡಬಹುದಾಗಿದೆ. ಹಾಗೆಯೇ ಉತ್ತರ ಕರ್ನಾಟಕದ ಲೇಖಕರ ಕೃತಿಗಳನ್ನಿರಿಸಿಕೊಂಡು ನಿಘಂಟುರಚನೆ ಮಾಡಬಹುದಾಗಿದೆ. ಹೀಗೆ ನಿಘಂಟುಗಳು ಬರುತ್ತಲೇ ಇರಬೇಕು. ಕನ್ನಡದಲ್ಲಿ ನಮ್ಮ ದೇಶಭಾಷೆ-ಗಳೊಳಗಿನ ದ್ವಿಭಾಷಾನಿಘಂಟುಗಳೇ ಬೇಕಷ್ಟು ಬಂದಿಲ್ಲ. ನೆರೆಯ ಭಾಷೆಗಳಾದ ಕನ್ನಡ ತಮಿಳು, ಕನ್ನಡ ಮಲಯಾಳ – ಈ ನಿಘಂಟುಗಳೇ ಸರಿಯಾಗಿ ಬಂದಂತಿಲ್ಲ. ಈ ರೀತಿಯ ಕೆಲಸಗಳಿಂದ ಭಾಷಾಬಾಂಧವ್ಯ ಹೆಚ್ಚಾಗುತ್ತದೆ. ಪರಸ್ಪರರ ಅರಿವು ಹೆಚ್ಚಾಗುತ್ತದೆ. ಯಾವುದೇ ಭಾಷಾಸೇವೆಯಿಂದ ಅರಿವು ಹೆಚ್ಚಾಗಬೇಕು; ಮನುಷ್ಯಸಂಬಂಧ ಒಳ್ಳೆಯದಾಗಬೇಕು; ಜೀವನ ಅರ್ಥಪೂರ್ಣವಾಗಬೇಕು.

**ಪಾದೇಕಲ್ಲು** : ಸರ್, ಇಷ್ಟು ಹೊತ್ತು ನಿಮ್ಮ ದಣಿಸಿದ್ದೇವೆ. ನೀವು ಬೇರೆ ಬೇರೆ ಮಾಹಿತಿಗಳನ್ನು ಮತ್ತು ಪ್ರೇರಣಾದಾಯಕವಾದ ವಿಷಯಗಳನ್ನು ಹೇಳಿದ್ದೀರಿ. ವಂದನೆಗಳು.

ಜಿ.ವೆಂ.: ಅಂತೂ ನನ್ನನ್ನು ಜಾಲಾಡಿಬಿಟ್ಟಿರಿ. ಹಲವಾರು ವಿಷಯಗಳನ್ನು ನಾನು ನೆನಪಿಸಿಕೊಳ್ಳುವಂತೆ ಮತ್ತು ಆ ವಿಷಯಗಳ ಕುರಿತು ಮಾತಾಡುವಂತೆ ಮಾಡಿದಿರಿ. ನಿಮ್ಮ ಜೊತೆಗೆ ಈ ಸಂದರ್ಶನದ ನೆಪದಲ್ಲಿ ಒಂದಷ್ಟು ಹೊತ್ತು ಕಳೆದದ್ದು ತುಂಬ ಸಂತೋಷವಾಯಿತು. ನಿಮಗೆ ನಾನು ಕೃತಜ್ಞ, ನಿಮಗೆಲ್ಲರಿಗೂ ಒಳ್ಳೆಯದಾಗಲಿ.



# ನಿಘಂಟಿಗ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರೊಂದಿಗೆ ಸಂದರ್ಶನ

ಪ್ರೊ. ಎ. ವಿ. ನಾವಡ

ಪ್ರೊ. ಗಂಜಾಂ ವೆಂಕಟಸುಬ್ಬಯ್ಯನವರು ಸಾಹಿತ್ಯಲೋಕದಲ್ಲಿ, ಆಪ್ತರ ಬಳಗದಲ್ಲಿ ಜಿ.ವಿ. ಎಂದೇ ಪರಿಚಿತರು. ಆಚಾರ್ಯ ತೀನಂಶ್ರೀ, ಪ್ರೊ. ಎ. ಆರ್. ಕೃ., ಪ್ರೊ. ಟಿ. ಎಸ್. ವೆಂಕಣ್ಣಯ್ಯ, ಪ್ರೊ. ಡಿ. ಎಲ್. ಎನ್. ಸರಣಿಯಲ್ಲಿ ಹೆಸರಿಸ-ಬೇಕಾದವರೂ ಪ್ರೊ. ಜಿ. ವೆಂಕಟಸುಬ್ಬಯ್ಯನವರು. ಹಳಗನ್ನಡ, ಹೊಸಗನ್ನಡ ಸಾಹಿತ್ಯಾಧ್ಯಯನಕಾರರಾಗಿ, ಭಾಷಾಂತರ ಪರಿಣತರಾಗಿ ಎಲ್ಲಕ್ಕಿಂತ ಮೇಲಾಗಿ ಕನ್ನಡ ನಿಘಂಟುಕ್ಷೇತ್ರದಲ್ಲಿ ಎಂದಿಗೂ ಮಾಸದ ಚರಣಚಿಹ್ನೆಯನ್ನು ಮೂಡಿಸಿದವರು. ನಿಘಂಟುಶಾಸ್ತ್ರ ಹಾಗೂ ನಿಘಂಟುರಚನಾಶಾಸ್ತ್ರ ಎರಡರಲ್ಲೂ ಕೈ ನುರಿಯಿಸಿ-ಕೊಂಡವರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಪರಿಷತ್ತನ್ನು ಬೆಂಗಳೂರಿನಿಂದ ನಾಡಿನ ಮೂಲೆಗೂ ವಿಸ್ತರಿಸಲು ಪ್ರಯತ್ನಿಸಿದವರು. ಸಾಹಿತ್ಯ ಸಮ್ಮೇಳನದ ಸ್ವರೂಪಕ್ಕೆ ಹೊಸ ಆಯಾಮ ನೀಡಿದವರು. ಕನ್ನಡ ಪ್ರಾಧ್ಯಾಪಕರಾಗಿ, ಕಾಲೇಜಿನ ಪ್ರಾಚಾರ್ಯ-ರಾಗಿ, ಕನ್ನಡ ಕಟ್ಟುವ ಕೆಲಸ ಮಾಡಿದವರು. ಸರಳ ಸಜ್ಜನಿಕೆಯ ಸಾಕಾರಮೂರ್ತಿ ಪ್ರೊ. ಜಿ.ವಿ.ಯವರು ಇಂದಿಗೂ ಕನ್ನಡದ ಬಗೆಗೆ ಚಿಂತಿಸುತ್ತಿರುವುದು ಕನ್ನಡದ ಭಾಗ್ಯ. ಅವರೊಂದಿಗೆ ನಡೆಸಿದ ಸಂದರ್ಶನದ ಆಯ್ದ ಭಾಗ ಇಲ್ಲಿದೆ.

**ನಾವಡ:** ತಾವು ನಿಘಂಟುಕಾರರಾಗಿ, ಭಾಷಾವಿದ್ವಾಂಸರಾಗಿ, ಹಳಗನ್ನಡ ನಡುಗನ್ನಡ ಗ್ರಂಥಸಂಪಾದನಕಾರರಾಗಿ, ಕನ್ನಡ ಪಂಡಿತಪರಂಪರೆಯ ಮುನ್ನಡೆಕಾರರಾಗಿ ಗುರುತಿಸಲ್ಪಡುತ್ತಿದ್ದೀರಿ. ತಮ್ಮ ವ್ಯಕ್ತಿತ್ವ ಈ ಬಗೆಯಲ್ಲಿ ರೂಪುಗೊಳ್ಳಲು ಯಾವ ಪರಿಸರ, ವ್ಯಕ್ತಿಗಳು ಕಾರಣರಾದರು ?

**ಜಿ.ವೆಂ :** ನಾವಡರೆ, ನಿಮ್ಮ ಪ್ರಶ್ನೆಗೆ ಉತ್ತರಿಸುವ ಸಂದರ್ಭದಲ್ಲಿ ನನ್ನ ಮನಸ್ಸು ನನ್ನ ಪೂರ್ವಜನರನ್ನು, ನನ್ನ ಬಾಲ್ಯದ ಆ ದಿನಗಳನ್ನು ಸ್ಮರಣೆಗೆ ತಂದುಕೊಳ್ಳುತ್ತದೆ. ನನ್ನ ಹುಟ್ಟೂರು ಗಂಜಾಂ. ಅದು ಶ್ರೀರಂಗಪಟ್ಟಣದ ಒಂದು ಭಾಗ. ಕೋಟೆಯ ಪ್ರದೇಶ. ಊರಿನ ವ್ಯಾಪಾರ ವ್ಯವಹಾರ ಎಲ್ಲಾ ಆ ಪ್ರದೇಶದಲ್ಲೇ ನಡೆಯುತ್ತಿತ್ತು. ನನ್ನ ಬಾಲ್ಯ ಕಳೆದದ್ದು ಇಲ್ಲೇ. ಆದರೆ ನಮ್ಮ ಹಿರಿಯರು ಇಲ್ಲಿಗೆ ಆಗಂತುಕರು. ನಮ್ಮ ಮನೆತನ

ಈ ಊರಿಗೆ ಬಂದದ್ದು ವಿಚಿತ್ರವಾದ ಸನ್ನಿವೇಶದಲ್ಲಿ. ನಮ್ಮ ಹಿರಿಯರು ವಾಸವಾಗಿದ್ದ ಊರು ತಮಿಳುನಾಡಿನ ಮುದುಗುಮುದೂರು ಅಂತ ಊರು. ಸುಮಾರು 1880–90ರ ವೇಳೆ ಧಾತು ಈಶ್ವರ ಕ್ಷಾಮ ಬಂತು. ಎರಡು ವರ್ಷ ಮಳೆಯಿಲ್ಲದೆ ಊರಲ್ಲಿ ಬರಗಾಲ ಬಂದಿತು. ಆ ಊರಲ್ಲಿ ಬದುಕುವುದೇ ಅಸಹನೀಯವಾಯಿತು. ನಮ್ಮ ತಾತ ಆ ಊರು ಬಿಟ್ಟು ಕಾವೇರಿ ನದಿಯನ್ನು ದಾಟಿ ಶ್ರೀರಂಗಪಟ್ಟಣಕ್ಕೆ ಬಂದು ನೆಲಸಿದರು. ಕಾವೇರಿ ನದಿ ದಂಡೆಯುದ್ದಕ್ಕೂ ಆ ಕಾಲದಲ್ಲಿ ಗುಜರಾತಿನ ಗೋಸಾಯಿಗಳು ಸೋಪಾನ ಕಟ್ಟಿಕೊಂಡು ಅದರ ಹಿಂದೆ ತೋಟ ತುಡಿಕೆ ಹೊಲಗದ್ದೆ ಮಾಡಿಕೊಂಡು ಬಂದ ಆದಾಯದಲ್ಲಿ ತಮ್ಮ ಜೀವನಕ್ಕೆ ಬೇಕಾಗುವಷ್ಟು ಇಟ್ಟುಕೊಂಡು ಉಳಿದುದನ್ನು ಊರ ದೇವಸ್ಥಾನದ ಪೂಜೆ ಪುನಸ್ಕಾರಗಳಿಗೆ ಕೊಡುತ್ತಿದ್ದರು. ಗೋಸಾಯಿ ಎಂದರೆ ಗೋಸ್ವಾಮಿ. ಅವರು ಯಾರನ್ನಾದರೂ ಬ್ರಾಹ್ಮಣರನ್ನು ಕರೆದು ಪೂಜೆಗೆ ಗೊತ್ತು ಮಾಡುತ್ತಿದ್ದರು. ಹಾಗೆ ನಮ್ಮ ತಾತ ಚಿಕ್ಕಗೋಸಾಯಿ ಘಟ್ಟದ ಸದಾಶಿವ ದೇವಸ್ಥಾನದಲ್ಲಿ ಅರ್ಚಕರಾಗಿ ನಿಯುಕ್ತರಾದರು. ಆಗ ತೀರಾ ಬಡತನ ಅವರಿಗೆ. ಅಲ್ಲಿ ನಮ್ಮ ತಾತ ಇದ್ದ ಚಿಕ್ಕ ಮನೆಯ ಫೋಟೋವನ್ನು ಈಗಲೂ ಇಟ್ಟುಕೊಂಡಿದ್ದೇನೆ. ಅಲ್ಲಿ ನಮ್ಮ ಮನೆಯೊಳಗೆ ಆಗ ಲೋಹದ ಪಾತ್ರಗಳಿರಲಿಲ್ಲ. ಕಲ್ಲಿಂದ ಮಾಡಿದ ಕಲ್ಮರಿಗೆಗಳು, ನೀರು ತುಂಬಲು ಮಣ್ಣಿನ ದೊಡ್ಡ ಮಡಕೆಗಳು ಇವಿಷ್ಟು ಮಾತ್ರ ನನಗೆ ಜ್ಞಾಪಕದಲ್ಲಿರೋದು. ನಮ್ಮ ತಾತನದು ಸಂತೃಪ್ತ ಸುಸಂಸ್ಕೃತ ಜೀವ. ದೇವರ ಪೂಜೆ, ಪೌರೋಹಿತ್ಯಗಳಿಂದ ಬಂದ ಅಲ್ಪ ಆದಾಯದಲ್ಲಿ ಸಂತೃಪ್ತ ಜೀವನ ನಡೆಸುತಿದ್ರು. ಸಂಸ್ಕೃತವನ್ನು ಆಳವಾಗಿ ಓದಿಕೊಂಡಿದ್ರು. ಮನೆ ಮಾತು ಕನ್ನಡ. ಮನೆಯೊಳಗೆ ನಮ್ಮ ತಂದೆ ಮತ್ತು ಚಿಕ್ಕಪ್ಪ ಇದ್ದರು. ಈ ಪರಿಸರದಿಂದ ನಮ್ಮ ತಂದೆ ಹೇಗೆ ಮುಂದೆ ಬಂದ್ರು ಅನ್ನೋದೆ ಆಶ್ಚರ್ಯದ ಸಂಗತಿ. ಅವರು ಅಲ್ಲಿಂದ ಮೈಸೂರಿಗೆ ಹೋದರು. ಪ್ರಾಥಮಿಕ, ಹೈಸ್ಕೂಲ್, ಅಪ್ಪರ್ ಸೆಕೆಂಡರಿ, ಪಂಡಿತ ಪರೀಕ್ಷೆ ಎಲ್ಲಾ ಪಾಸು ಮಾಡಿಕೊಂಡರು. ಸಂಸ್ಕೃತ–ಕನ್ನಡಗಳೆರಡಲ್ಲೂ ಅಖಂಡ ವಿದ್ವತ್ತನ್ನು ಗಳಿಸಿಕೊಂಡರು. ಅವರ ಹೆಸರು ಜಿ. ತಿಮ್ಮಣ್ಣಯ್ಯ ಅಂತ. ಅಲ್ಲಿ ಅವರ ಜೊತೆಗಾರರು ಧಾರವಾಡದ ಮಹಾದೇವ ಪ್ರಭಾಕರ ಪೂಜಾರ ಅನ್ನುವವರು. ಅವರಿಂದಾಗಿ ನನ್ನ ತಂದೆಯವರು ವಿದ್ವತ್ತಿನಲ್ಲಿ ಮುಂದುವರಿಯುವುದು ಸಾಧ್ಯ-ವಾಯಿತು. ಪಂಡಿತ ಪರೀಕ್ಷೆಯಲ್ಲೋ, ತರಗತಿಯ ಸ್ಪರ್ಧೆಯಲ್ಲೋ ನನ್ನ ತಂದೆಯವರಿಗೆ ಬಹುಮಾನರೂಪದಲ್ಲಿ ಬಂದ ರಾಜಶೇಖರ ವಿಳಾಸ ಪುಸ್ತಕ ಇಂದಿಗೂ ನನ್ನಲ್ಲಿದೆ. ಮುಂದೆ ನನ್ನ ತಂದೆಯವರು ವೇದಾಧ್ಯಯನಸಂಪನ್ನರಾದರು. ಕನ್ನಡ ಸಂಸ್ಕೃತಗಳೆರಡರಲ್ಲೂ ಪ್ರಕಾಂಡ ಪಂಡಿತರಾದರು. ಶ್ರೀ ವಿರೂಪಾಕ್ಷ ಶಾಸ್ತ್ರಿಗಳು ಅಂತ ವೇದಾಂತಪಂಡಿತರು ಸಂಸ್ಕೃತ ಕಾಲೇಜಿನಲ್ಲಿ ಮೇಷ್ಟ್ರಾಗಿದ್ದರು. ಅವರ ಹತ್ತಿರ ನಮ್ಮ ತಂದೆಯವರು ವೇದಾಧ್ಯಯನ ಮಾಡಿದ್ದರು. (ಅವರು ಆ ಮೇಲೆ ಕೂಡ್ಲಿ ಸ್ವಾಮಿಗಳಾಗಿ ಸಂನ್ಯಾಸಸ್ವೀಕಾರ ಮಾಡಿದರು) ನಮ್ಮ ತಂದೆಯವರು ಅರಮನೆಯ ವಿದ್ವಾಂಸರೂ ಆಗಿದ್ದರು. ತಮ್ಮ ಸ್ವಂತ ವೆಚ್ಚದಿಂದ 'ಪುರಾಣ ಕಥಾವಳಿ' ಎಂಬ ಮಾಸಪತ್ರಿಕೆಯನ್ನು ನಡೆಸಿ ಅದರಲ್ಲಿ ಶಿವಪುರಾಣ, ವಿಷ್ಣುಪುರಾಣ,

ಪದ್ಮಪುರಾಣ, ಭವಿಷ್ಯಪುರಾಣಗಳನ್ನು ಅನುವಾದ ಮಾಡಿ ಪ್ರಕಟಿಸಿದರು. 'ರಘುವೀರ ಚರಿತೆ' ಎನ್ನುವ ಸ್ವತಂತ್ರನಾಟಕವನ್ನು ರಚಿಸಿದ್ದರು. ಸಂಸ್ಕೃತದ 'ಮಾಲತೀಮಾಧವ' ನಾಟಕವನ್ನು ಅನುವಾದ ಮಾಡಿದ್ದರು. ಮೈಸೂರಿನ ಶಿಕ್ಷಕರ ಕಾಲೇಜಿನಲ್ಲಿ ಸೀನಿಯರ್ ಕನ್ನಡ ಪಂಡಿತರಾಗಿ ನಿವೃತ್ತರಾದರು. ನಾನು ಮನೆಯೊಳಗೆ ತಂದೆಯವರ ಈ ಪ್ರಭಾವಲಯದೊಳಗೆ ಬೆಳೆದು ಬಂದೆ.

**ನಾವಡ :** ಎಳವೆಯಲ್ಲಿ ಸಂಸ್ಕೃತಾಭ್ಯಾಸ ಮಾಡಿದ್ರಾ? ಬಾಲ್ಯದ ಅನುಭವಗಳು?

**ಜಿ. ವೆಂ :** ಮನೆಯೊಳಗೆ ತಂದೆಯವರಿಂದ ಅಮರಕೋಶ ಹೇಳಿಸಿಕೊಂಡಿದ್ದೆ. ಒಮ್ಮೊಮ್ಮೆ ತಾತನೂ ಹೇಳಿ ಕೊಡ್ತಾ ಇದ್ರು. ವೇದ ಪಾಠನೂ ನಡೀತಿತ್ತು. ನನ್ನ ಹನ್ನೊಂದನೆಯ ವಯಸ್ಸಿಗಾಗಲೇ ರುದ್ರಾಧ್ಯಾಯ ಕಂಠಪಾಠವಾಗಿತ್ತು. ಹಿರಿಯ ಅರ್ಚಕರ ಜತೆ ದೇವಸ್ಥಾನಗಳಲ್ಲಿ ಪೂಜೆಗೂ ಹೋಗುತ್ತಿದ್ದೆ. ಅದಕ್ಕಿಂತ ಹೆಚ್ಚಾಗಿ ನಮ್ಮ ಮನೆಯ ಪಕ್ಕದ ಕಾವೇರಿ ಹೊಳೆಯಲ್ಲಿ ಈಸಾಡಿಕೊಂಡು, ನೀರಾಟವಾಡಿ-ಕೊಂಡು ಪಡೆದ ಅನುಭವೇ ಹೆಚ್ಚು. ಅಕ್ಕಪಕ್ಕದ ತೋಟಗಳಿಗೆ ಹೋಗಿ ದೇವರಿಗಾಗಿ ಅಲ್ಲಿ ಗಿಳಿ ಕಚ್ಚಿದ ಪೇರಳೆ, ಮಾವಿನ ಹಣ್ಣುಗಳನ್ನು ನದಿಯಲ್ಲಿ ತೊಳೆದು ಬುಟ್ಟಿಯಲ್ಲಿ ಹಾಕ್ಕೊಂಡು ಮನೆಗೆ ಬರುತ್ತಿದ್ದೆ. ಹೀಗೆ ಕಾವೇರಿ ನದಿಯಲ್ಲೇ ನನಗೆ ಏನೇನು ತಿಳುವಳಿಕೆ ಬರಬೇಕೋ ಅದೆಲ್ಲಾ ಬಂದಿದೆ.

**ನಾವಡ:** ನಿಮ್ಮ ಆರಂಭಿಕ ಶಿಕ್ಷಣ ಹಾಗೂ ಅಂದಿನ ಸ್ಥಿತಿಗತಿಗಳ ವಿವರ ತಿಳಿಸುತ್ತೀರಾ?

**ಜಿ.ಎಂ.:** ನನ್ನ ಪ್ರಾಥಮಿಕ ಶಿಕ್ಷಣ ಒಂದು ವಿಚಿತ್ರಸನ್ನಿವೇಶದಲ್ಲಿ ನಡೆಯಿತು. ಇದರಿಂದ ನನಗೆ ತೊಂದರೆ ಅಂತಲೋ ಅನುಕೂಲವೆಂತಲೋ ನೀವೇ ತೀರ್ಮಾನ ಮಾಡಬೇಕು. ನಾನು ಓದುತ್ತಾ ಇದ್ದಾಗ ನನ್ನ ತಂದೆಯವರಿಗೆ ಅಲ್ಲಿ ಇಲ್ಲಿಗೆ ವರ್ಗಾವಣೆ ಆಗುತ್ತಲೇ ಇತ್ತು. ನಾನು ಲೋವರ್ ಸೆಕೆಂಡರಿ ತರಗತಿಯಲ್ಲಿ ಓದುತ್ತಿದ್ದಾಗ, ನಮ್ಮ ತಂದೆಯವರು ಬನ್ನೂರು ಎಂಬಲ್ಲಿ ಪ್ರಾಥಮಿಕ ಶಾಲೆಗೆ ಮುಖ್ಯಾಧ್ಯಾಪಕರಾಗಿದ್ದರು. ಆ ಕಾಲದಲ್ಲಿ ಆ ಊರಲ್ಲಿ ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆಗೆ ಕೂಡಬಹುದಾಗಿತ್ತು. ಅಂದ್ರೆ ಇಂಗ್ಲಿಷ್ ಓದದೇ ಮಿಕ್ಕ ವಿಷಯಗಳನ್ನು ತೆಗೆದುಕೊಂಡು ಲೋವರ್ ಸೆಕೆಂಡರಿ ಪಾಸು ಮಾಡಬಹುದಿತ್ತು. ನಾನು ಆ ಪರೀಕ್ಷೆ ಪಾಸು ಮಾಡಿದೆ. ಅಲ್ಲಿಂದ ನನ್ನ ತಂದೆಗೆ ಮಧುಗಿರಿ ಹೈಸ್ಕೂಲಿಗೆ ವರ್ಗ ಆಯಿತು. ಹೈಸ್ಕೂಲಿಗೆ ಸೇರಬೇಕಾದ್ರೆ ನನಗೆ ಇಂಗ್ಲಿಷ್ ಬರುತ್ತಿರಲಿಲ್ಲ. ಆಗ ನಾನು ಒಂದು ವರ್ಷ ಕಾಲ ಬರೀ ಇಂಗ್ಲಿಷನ್ನೇ ಮನೆಯಲ್ಲಿ ಕುಳಿತು ಕಲಿತು ಪರೀಕ್ಷೆ ಬರೆದು ಪಾಸು ಮಾಡಿಕೊಂಡೆ. ಓ. ನಾಗೇಶ್ವರರಾವ್ ಎಂಬ ಇಂಗ್ಲಿಷ್ ಮೇಷ್ಟ್ರು ಮಿಡ್ಲ್ ಸ್ಕೂಲ್ ಹೆಡ್ಮಾಸ್ಟರ್ ನನಗೆ ಪಾಠ ಹೇಳಿಕೊಟ್ಟರು. ಅವರು ತುಂಬಾ ಒಳ್ಳೆಯ ಮನುಷ್ಯ. ಒಂದು ವರ್ಷ ಹಾಳು ಮಾಡಿಕೊಂಡೆಯಲ್ಲೋ ಅಂತ್ಹೇಳಿ ಇಂಗ್ಲಿಷ್ ಹೇಳಿಕೊಟ್ಟರು. ರೆನ್ ಎಂಡ್ ಮಾರ್ಟಿನ್ ಗ್ರಾಮರನ್ನು ಇಡೀ ಒಂದು ವರ್ಷ

ಒಂದನ್ನು ಬಿಡದ ಭಾಗವನ್ನೇ ಓದಿದ ಹಾಗೆ ಓದಬೇಕೆಂದು ಹೇಳಿದರು. ಅಲ್ಲಿರುವ ಪ್ರತಿಯೊಂದು ಎಕ್ಸರ್‌ಸೈಜನ್ನೂ ನನ್ನ ಕೈಲಿ ಮಾಡಿಸಿದರು. ಅದರಿಂದ ನನಗೆ ಒಂದು ವರ್ಷದಲ್ಲಿ ಇಂಗ್ಲಿಷ್ ಭಾಷೆಯನ್ನು ಓದೋದಕ್ಕೆ ಅರ್ಥ ಮಾಡಿಕೊಳ್ಳೋದಕ್ಕೆ ಮಾತಾಡಲಿಕ್ಕೆ ಸಾಧ್ಯವಾಯಿತು. ಮುಂದೆ ಅಲ್ಲೇ ಹೈಸ್ಕೂಲಿಗೆ ಸೇರಿದೆ. ತುಂಬಾ ಒಳ್ಳೆಯ ಇಂಗ್ಲಿಷ್ ಮೇಷ್ಟ್ರು ಸಿಕ್ಕರು. ರಾಜೀವಲೋಚನ ಅಂತ ಅವರ ಹೆಸರು. ಮುಂದೆ ಡೆಪ್ಯುಟಿ ಡೈರೆಕ್ಟರ್ ಆದ್ರು. ಮುಂದೆ ಮಾಧವರಾವ್ ಅಂತ ಒಬ್ರು ಇಂಗ್ಲಿಷ್ ಮೇಷ್ಟ್ರು ಬಂದ್ರು. ಅವರು ನಮ್ಮ ಹೈಸ್ಕೂಲಿಗೆ ಬಂದು ನಿವೃತ್ತರಾದರು. ಅವರು ಅನೇಕ ಇಂಗ್ಲಿಷ್ ಕವಿತೆಗಳನ್ನು ಪರಿಚಯಿಸಿದರು. ಷೇಕ್ಸ್‌ಪಿಯರನ 'ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ಪಾಠ ಹೇಳಿದರು. ಅವರೇನು ಮಾಡಿದರು ಅಂದ್ರೆ ಮಾರ್ಟಿನ್ ಅರ್ಥರ್ ಎನ್ನುವ ಸ್ಕಾಟ್ ನಾವೆಲ್ ನಮಗೆ ಇಂಗ್ಲಿಷ್ ಪಠ್ಯವಾಗಿತ್ತು. ೭೦೦ ಪುಟಗಳಲ್ಲಿ ಸಣ್ಣ ಅಕ್ಷರದಲ್ಲಿ ಮುದ್ರಿತವಾಗಿತ್ತು ಅದು. ಆ ಮೇಷ್ಟ್ರು ಅದನ್ನು ನನ್ನ ಕೈಗಿತ್ತು 'ಇದನ್ನು ಪೂರ್ತಿಯಾಗಿ ಓದಿ ಅರ್ಥವಾಗದ ಪದಗಳಿಗೆ ಪೆನ್ಸಿಲ್‌ನಿಂದ ಅಡಿಗೆರೆ ಹಾಕು; ಪುಸ್ತಕದಲ್ಲಿ ಬರೆದು ಡಿಕ್ಷನರಿ ನೋಡಿ ಅರ್ಥ ಬರ್ಕೊಂಡು ಬರ್ಬೇಕು' ಅಂದರು. ಹೀಗೆ ನನ್ನಿಂದ ಅಭ್ಯಾಸ ಮಾಡಿಸಿದರು. ಇದರಿಂದ ಎಷ್ಟು ಸಹಾಯ ಆಯಿತು! ಈ ಮೂಲಕ ನನಗೆ ಇಂಗ್ಲಿಷ್ ಕೈಗೆ ಬರುವುದಕ್ಕೆ ಅನುಕೂಲವಾಯಿತು. ಹೈಸ್ಕೂಲಿನಲ್ಲಿ ನಮ್ಮ ತಂದೆಯೇ ನನಗೆ ಕನ್ನಡ ಮೇಷ್ಟ್ರು. ಕನ್ನಡ–ಸಂಸ್ಕೃತ ಎರಡನ್ನೂ ಹೇಳಿಕೊಟ್ಟರು. ನಾನು ಹೈಸ್ಕೂಲಲ್ಲಿ ಇದ್ದಾಗಲೇ ಜೈಮಿನಿಭಾರತವನ್ನು ಓದಿ ಅರ್ಥೈಸಿಕೊಳ್ಳುವಷ್ಟಾಗಿದ್ದೆ. ನಾನು ಆಗಲೇ 'ಸಿಂಧು' ಅಂತ ಕನ್ನಡ ಪದ್ಯವನ್ನು ಬರೆದಿದ್ದೆ – ಆಧುನಿಕಶೈಲಿಯಲ್ಲಿ 1929ರ ಇಸವಿ ಅದು.

ಸಾವಡ : ನಿಮ್ಮ ಕಾಲೇಜು ವಿದ್ಯಾಭ್ಯಾಸದ ನೆನಪುಗಳನ್ನು ಸ್ವಲ್ಪ ಹೇಳುತ್ತೀರಾ ?

ಜಿ.ಎಂ. : ನನ್ನ ಹೈಸ್ಕೂಲ್ ಶಿಕ್ಷಣ ಮುಗಿಯುವಷ್ಟರಲ್ಲಿ ನಮ್ಮ ತಂದೆಯವರಿಗೆ ಮೈಸೂರಿನ ಮಹಾರಾಣಿ ಟ್ರೈನಿಂಗ್ ಕಾಲೇಜಿಗೆ ಸೀನಿಯರ್ ಕನ್ನಡ ಪಂಡಿತರಾಗಿ ವರ್ಗ ಆಯ್ತು. ಅದು ಅವರು ರಿಟೈರ್ ಆಗುವ ವರ್ಷ. ತಿಂಗಳಿಗೆ ಅರುವತ್ತೈದು ರುಪಾಯಿ ಸಂಬಳ. ನಾವೆಲ್ಲ ಆಗ ಮೈಸೂರಿಗೆ ಬಂದು ಬಿಟ್ಟೆವು. ಇದರಿಂದ ಕಾಲೇಜು ಅಭ್ಯಾಸ ಮುಂದುವರಿಸುವುದಕ್ಕೆ ಅನುಕೂಲ ಆಯಿತು. ಅವರಿಗೆ ವರ್ಗ ಆಗದಿದ್ರೆ ನಾನೆಲ್ಲಿರುತ್ತಿದ್ದೆನೋ ಏನೊ? ನಾನು ಮೈಸೂರಿನ ಯುವರಾಜ ಇಂಟರ್ ಮೀಡಿಯೇಟ್ ಕಾಲೇಜು ಸೇರಿಕೊಂಡೆ. ಮೊದಲ ವರ್ಷದ ಪರೀಕ್ಷೆಯಲ್ಲಿ ಪಾಸು ಆಯಿತು. ಆಗಿನ ಕಾಲದಲ್ಲಿ ಇಂಟರ್ ಮೀಡಿಯೇಟ್‌ನ ಮೊದಲ ವರ್ಷ ಪಾಸು ಮಾಡೋದು ಬಹಳ ಕಷ್ಟವಾಗಿತ್ತು. ಇಂಟರ್ ಮೀಡಿಯೆಟ್‌ನ ಮೊದಲ ವರ್ಷ ಪಾಸು ಮಾಡಿಕೊಂಡ ಅಂದರೆ ಆತ ಮಹಾವಿದ್ವಾಂಸ ಅಂತ ಅರ್ಥ. ಆಗ ಆರ್ಟ್ಸ್‌ನಲ್ಲಿ ೧೨ ಪರ್ಸೆಂಟ್, ಸಾಯನ್ಸ್‌ನಲ್ಲಿ ೧೦ ಪರ್ಸೆಂಟ್ ಪಾಸು ಆಗುತ್ತಿದ್ದರು. ಆರ್ಟ್ಸ್‌ನಲ್ಲಿ ಫಸ್ಟ್‌ಕ್ಲಾಸ್ ಇರ್ತಾ ಇರ್ಲಿಲ್ಲ. ಸಯನ್ಸ್‌ನಲ್ಲಿ ಒಂದೋ ಎರಡೋ ಬರ್ತಿದ್ದವು. ಹಾಗೆ ಜರಡಿಯಾಡಿ ಪಾಸು ಮಾಡುತ್ತಿದ್ದರು. ದೇವರ ದಯದಿಂದ ನಾನು ಮೊದಲ

ಸಲವೇ ಪಾಸು ಮಾಡಿಕೊಂಡು ಬಿಟ್ಟೆ. ಕನ್ನಡ ಆನರ್ಸ್ ತರಗತಿಗೆ ಸೇರಿದೆ. ಅದಕ್ಕೆ ಕಾರಣವೆಂದರೆ ಇಂಟರ್ ಮೀಡಿಯೆಟ್‌ನಲ್ಲಿ ನನಗೆ ಕನ್ನಡ ಮೇಷ್ಟ್ರಾಗಿದ್ದವರು ಪುಟ್ಟಪ್ಪನವರು. ಅವರು 'ಹರಿಶ್ಚಂದ್ರ ಕಾವ್ಯಸಂಗ್ರಹ'ವನ್ನು ಪಾಠ ಹೇಳಿದರು. ಕಾವ್ಯವನ್ನು ತುಂಬಾ ಚೆನ್ನಾಗಿ ಓದುತ್ತಿದ್ದರು. ಪುಟ್ಟಪ್ಪನವರು ಕಾವ್ಯ ಓದಿದಂತೆ ಇನ್ಯಾರು ಕಾವ್ಯ ಓದಿದ್ದನ್ನೂ ನಾನು ಕೇಳಿಯೇ ಇರಲಿಲ್ಲ. ಕಾವ್ಯ ಓದುವುದನ್ನು ನಾನು ಅವರಿಂದ ಕಲಿತುಕೊಂಡೆ. ಜೊತೆಗೆ ಚೆನ್ನಾಗಿ ಪಾಠ ಹೇಳ್ತಿದ್ರು. ತಿಳಿವಳಿಕೆ ನೀಡ್ತಿದ್ರು. ಪ್ರಥಮ ಪರೀಕ್ಷೆಯಲ್ಲಿ ನನಗೆ ೬೨ ನಂಬರ್ ಕೊಟ್ಟು ಪ್ರಥಮ ಸ್ಥಾನ ಕೊಟ್ರು. ಯಾಕೆಂದ್ರೆ ಒಂದು ಪ್ರಶ್ನೆಗೆ ಉತ್ತರ ಬರೆಯುತ್ತಾ ನಾನು ಹನ್ನೆರಡು ಷಟ್ಪದಿ ಪದ್ಯಗಳನ್ನು ಬರೆದಿದ್ದೆ. ಆಗ ಪುಟ್ಟಪ್ಪನವರು 'ಈ ಪದ್ಯಗಳನ್ನು ಬಾಯಿಪಾಠ ಮಾಡಿದಿರೋ, ಕಾಪಿ ಮಾಡಿದಿರೋ' ಅಂತ ಕೇಳಿದ್ರು. ನಾನು ನಕ್ಕೆ. ಅವರಿಗೆ ನಾ ಹೇಳಿದೆ. 'ಸಾರ್ ಇನ್ನೂ ಪದ್ಯ ಹೇಳೆಂದರೆ ಹೇಳ್ತೀನಿ' ಅಂತ. ಆಗಲೇ ನನಗೆ ಹರಿಶ್ಚಂದ್ರ ಕಾವ್ಯದ ಬಹುಭಾಗ ಬಾಯಿಗೆ ಬರುತ್ತಿತ್ತು. ಈಗಲೂ ಹರಿಶ್ಚಂದ್ರ ಕಾವ್ಯದ ಮೇಲೆ ಉಪನ್ಯಾಸ ಮಾಡಬೇಕಾದ್ರೆ ನನಗೆ ಕಾವ್ಯ ಪುಸ್ತಕ ಬೇಕಾಗೋದಿಲ್ಲ. ಪದ್ಯಗಳೆಲ್ಲವೂ ಬಾಯಿಗೆ ಬರುತ್ತವೆ.

**ನಾವಡ :** 1931–32ರ ಕಾಲಕ್ಕಾಗಲೇ ಕುವೆಂಪು ಅವರಲ್ಲಿ ಪ್ರೌಢವಾದ ವೈಚಾರಿಕ ನಿಲುವು ಇದ್ದಿತ್ತೇ? ವಿದ್ಯಾರ್ಥಿಯಾಗಿದ್ದ ನೀವು ಅದನ್ನು ಗುರುತಿಸಿದ್ದಿರಾ?

**ಜಿ. ವೆಂ. :** ಹೌದು, ಆ ಕಾಲಕ್ಕಾಗಲೇ ಅವರಲ್ಲಿ – ಅವರ ಬರಹಗಳಲ್ಲಿ ಪ್ರೌಢವಾದ ವೈಚಾರಿಕತೆ ಕಾಣಿಸಿಕೊಂಡಿತ್ತು. ಒಂದು ಸಂದರ್ಭ ನೆನಪಾಗುತ್ತದೆ. ಮಹಾರಾಜಾ ಕಾಲೇಜಿನಲ್ಲಿ ಪ್ರತಿವರ್ಷ ಕುವೆಂಪು ಅವರ ಕವನವಾಚನ ಕಾರ್ಯಕ್ರಮ ವಾಚನ-ಉಪನ್ಯಾಸ ಕೇಳೋಕೆ ಊರಿನವರೆಲ್ಲಾ ಬರ್ತಿದ್ರು. ಅವರ ಸ್ವಂತ ಕವನಗಳನ್ನು ಅವರ ಬಾಯಿಯಿಂದಲೇ ಕೇಳೋದು ಒಂದು ಅಪೂರ್ವ ಅನುಭವ. ಅವರ ಪ್ರಸಿದ್ಧ ಕವನ 'ನೂರು ದೇವರನೆಲ್ಲ ನೂಕಾಚೆ ದೂರ, ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ' ಎನ್ನುವ ಕವನವನ್ನು ವಾಚಿಸಿದ್ದನ್ನು ಕೇಳಿದ್ದೆ. ಭಾರತವನ್ನು ಕುರಿತಂತೆ. ರಾಷ್ಟ್ರೀಯತಾಭಾವನೆಯನ್ನ ಪ್ರಚೋದಿಸುವ ಕವನಗಳನ್ನು ಬರೆದಾಗ ಪೋಲಿಸರು ಅವರನ್ನು ಕರೆದುಕೊಂಡು ಪಿರಿಯಾಪಟ್ಟಣದ ಕಾಡಲ್ಲಿ ಬಿಟ್ಟು ಬಂದುದುಂಟಂತೆ. ಹೀಗೆ ಕುವೆಂಪು ಅವರು ಒಂದು ಅರ್ಥದಲ್ಲಿ ಸ್ವಾತಂತ್ರ್ಯ ಹೋರಾಟಗಾರರೂ ಹೌದು. ಸಾಹಿತ್ಯದ ಮೂಲಕ ಸಾಮಾಜಿಕ-ರಾಜಕೀಯ ಜಾಗೃತಿಯನ್ನು ಮಾಡಿದ್ರು. ನಾನು ಆನರ್ಸ್‌ಗೆ ಸೇರಿದ ಹೊತ್ತಿಗೆ ಅವರು 'ಶ್ರೀ ರಾಮಾಯಣ ದರ್ಶನಂ' ಕಾವ್ಯವನ್ನು ಬರೀತಿದ್ರು. ನಾನು ಓದಿ ಮೇಷ್ಟ್ರಾದ ಮೇಲೆ ಗೆಳೆಯ ಕೆ. ನರಸಿಂಹ ಮೂರ್ತಿ ಜತೆ ಅನೇಕ ಬಾರಿ ರಾಮಾಯಣವನ್ನು ಅವರ ಕೈಲಿ ಓದಿಸಿ ಕೇಳಬೇಕೂಂತ ಅವರ ಮನೆಗೆ ಹೋಗುತ್ತಿದ್ವಿ. ಆವಾಗ ಅವರು ಒಂದು-ಎರಡು ಅಧ್ಯಾಯ ಓದಿ ಹೇಳಿ. ಇದು ಇಲ್ಲಿಗೆ ನಿಂತು ಹೋಗಿತ್ತು ಅದು ಯಾಕೆ ಬರ್ಲಿಲ್ಲ ಎಂದು ಅದರ ಕತೆಯೆಲ್ಲಾ ಹೇಳ್ತಿದ್ರು. ಹೀಗೆ ಕುವೆಂಪು ಅವರನ್ನು

ಸಮೀಪದಿಂದ ಕಾಣುವ ಕೇಳುವ ಅವಕಾಶ ದೊರೆಯಿತು. ಒಟ್ಟಿನಲ್ಲಿ ನಾನು ಕನ್ನಡಕ್ಕೆ ಬರಲು ಕುವೆಂಪು ಅವರ ತರಗತಿಯೇ ಕಾರಣ ಎನ್ನಬಹುದು.

ನಾವಡ: ಕಾಲೇಜು ದಿನಗಳ ಇತರ ಅಧ್ಯಾಪಕರು, ಒಡನಾಡಿಗಳು ಈ ಕುರಿತು ಸ್ವಲ್ಪ ನೆನಪು ಮಾಡಿಕೊಳ್ತೀರಾ?

ಜಿ. ವೆಂ : ನನಗೆ ಪಾಠ ಹೇಳಿದ ಒಬ್ಬೊಬ್ಬರನ್ನು ನೆನಪು ಮಾಡಿಕೊಳ್ತೀನೆ. ಆನರ್ಸ್‌ನಲ್ಲಿದ್ದಾಗ ಪಾಠ ಹೇಳಿದವರು ಇಂಗ್ಲಿಷ್ ಮೇಷ್ಟ್ರು ಪ್ರೊ. ಜೆ. ಸಿ. ರಾಲೊ ಅವರು. ಬಹಳ ಶಿಸ್ತುಗಾರ ಅವರು. ಇನ್ನೊಬ್ಬ ಇಂಗ್ಲಿಷ್ ಮೇಷ್ಟ್ರು ಅಂತ ಅಂದ್ರೆ ವಿ.ಎಸ್. ತ್ಯಾಗರಾಜನ್. ತರ್ಕವನ್ನು ಎಂ. ಎ. ವೆಂಕಟರಾಮ್ ಬೋಧಿಸುತ್ತಿದ್ದರು. ರೋಮನ್-ಗ್ರೀಕ್ ಹಿಸ್ಟರಿಯನ್ನು ಎನ್. ಕಸ್ತೂರಿ, ಎಂ. ಎಚ್. ಕೃಷ್ಣ ಅವರು ಪಾಠ ಹೇಳುತ್ತಿದ್ದುದು ನೆನಪಾಗುತ್ತದೆ. ಆನರ್ಸ್‌ಗೆ ಬಂದಾಗ ಕನ್ನಡಕ್ಕೆ ಟಿ. ಎಸ್. ವೆಂಕಣ್ಣಯ್ಯ, ಡಿ. ಎಲ್. ಎನ್. ತೀನಂಶ್ರೀ ಇಂತಹ ಹಿರಿಯರ ಪಾಠ ಕೇಳುವ ಸದವಕಾಶ ದೊರೆಯಿತು. ಒಬ್ಬೊಬ್ಬರದೂ ಅವರವರ ಕ್ಷೇತ್ರದಲ್ಲಿ ದೈತ್ಯಪ್ರತಿಭೆ. ಕನ್ನಡ ಭಾಷೆ-ಸಾಹಿತ್ಯವನ್ನು ವಿಶ್ವವಿದ್ಯಾಲಯದಲ್ಲಿ ಬೋಧನೆ ಮಾಡುತ್ತಿದ್ದ ಅವರಿಗೆ ಅವರ ಪಾಂಡಿತ್ಯವೇ ಆಕರ. ಇಂದಿನಂತೆ ಪುಸ್ತಕಗಳು ದೊರೆಯುತ್ತಿದ್ದಿಲ್ಲ. ಕನ್ನಡ ಅಧ್ಯಾಪಕರ, ವಿದ್ಯಾರ್ಥಿಗಳ ಬಗ್ಗೆ ತಾತ್ಸಾರ, ಅವಜ್ಞೆ ತುಂಬಿದ್ದ ಕಾಲ. ಯಾವುದಕ್ಕೂ ಆಗದವರು ಕನ್ನಡದವರು ಎಂಬ ಉಪೇಕ್ಷೆ ಬೇರೆ. ಇಂತಹ ಪ್ರತಿಕೂಲವಾತಾವರಣದಲ್ಲೂ ಪಂಡಿತ ಕೆಲಸ ಮಾಡಿ ಕನ್ನಡದ ಬಗ್ಗೆ ಜನ ಕಣ್ತೆರೆದು ನೋಡುವಂತೆ ಮಾಡಿದವರು ವಿಶ್ವವಿದ್ಯಾಲಯದಿಂದ ಹೊರಗಿದ್ದ ಆರ್. ನರಸಿಂಹಾಚಾರ್ಯರು. ವಿಶ್ವವಿದ್ಯಾಲಯದ ವಲಯದೊಳಗೆ ಶ್ರೀ ಹಾಗೂ ಅವರ ಶಿಷ್ಯವರ್ಗದವರು ಹೊಸ ವಾತಾವರಣ ಸೃಷ್ಟಿಮಾಡಿದರು. ನಾವೆಲ್ಲ ಇದರಿಂದ ಗಾಳಿ ಬೆಳಕು ಪಡೆದವರು. ನಾವು ತರಗತಿಯಲ್ಲಿ ಮೂರು ಜನ. ನಾನು, ಪ್ರೊ. ಎಸ್. ವಿ. ಪರಮೇಶ್ವರ ಭಟ್ಟ ಹಾಗೂ ಪ್ರೊ. ಎಚ್. ಎಂ. ಶಂಕರನಾರಾಯಣ ರಾವ್. ನಾವು ಯಾವಾಗ್ಲೂ ಜತೆಯಾಗೇ ಇರ್ತಿದ್ವಿ. ನಮ್ಮನ್ನು ಎಲ್ಲರೂ 'Three Muscatiers' ಅಂತ ಹಾಸ್ಯ ಮಾಡುತ್ತಿದ್ದರು. ವಿನೋದಕೂಟವೊಂದರಲ್ಲಿ ನನಗೆ Minister for the Upliftment of an unkonwn language ಅಂತ ಪಟ್ಟಕಟ್ಟಿದರು. ಕನ್ನಡದ ಬಗೆಗೆ ಆ ಕಾಲದಲ್ಲಿದ್ದ ದೃಷ್ಟಿಧೋರಣೆಗೆ ಇದು ಕನ್ನಡಿ ಹಿಡಿದಂತಿತ್ತು. ನಾವು ಓದುತ್ತಿದ್ದಾಗ ಮಹಾರಾಜ ಕಾಲೇಜಿನ ವಾತಾವರಣ ಪೂರ್ತಿ ಇಂಗ್ಲಿಷ್ ಇತ್ತು. ಬಿ. ಎಂ. ಶ್ರೀಯವರು ಕನ್ನಡವನ್ನು ಇಂಗ್ಲೀಷ್‌ನಲ್ಲೇ ಪಾಠ ಹೇಳೋರು. ಪಂಪನ ಕಾವ್ಯ ಪಾಠ ಹೇಳುತ್ತಾ ಅಲ್ಲೆಲ್ಲಾದರೂ ಒಳ್ಳೆಯ Phrase, idiom ಬಂದಾಗ 'it is something like in Shakespeare' ಎಂದು ಹೇಳುತ್ತಾ, ಷೇಕ್ಸ್‌ಪಿಯರನ ಕಾವ್ಯವೈಭವವನ್ನು ಪರಿಚಯಿಸುತ್ತಿದ್ದರು. ಆಗ ಅವರ ಕನ್ನಡ, ಇಂಗ್ಲಿಷ್ ಪಾಂಡಿತ್ಯ ಎರಡೂ ಕೇಳಿ ನಾವು ಬೆರಗಾಗುತ್ತಿದ್ದೆವು. ನನಗೆ 'To think in English' ಎನ್ನುವುದನ್ನು ಹೇಳಿಕೊಟ್ಟವರು ಶ್ರೀಯವರು. ಇದರಿಂದ ನನ್ನ ಕನ್ನಡದ ತಿಳಿವಳಿಕೆಗೆ ಹೊಸ ಆಯಾಮ ಬಂತು.

ನನ್ನ ವಿದ್ಯಾರ್ಥಿ ದೆಸೆಯಲ್ಲಿ ನಾನೆಂದೂ 'ಪುಸ್ತಕದ ಹುಳು' ಆಗಿರಲಿಲ್ಲ. ನನಗೆ ಮಹಾರಾಜ ಕಾಲೇಜಿನ ಯೂನಿಯನ್ ತುಂಬ ಪ್ರಿಯವಾದ ಸ್ಥಳವಾಗಿತ್ತು. ಅಲ್ಲಿ ನಡೆಯುತ್ತಿದ್ದ ಚರ್ಚಾಕೂಟಗಳಲ್ಲಿ, ಸಭೆ ಸಮಾರಂಭಗಳಲ್ಲಿ ನನ್ನನ್ನೂ ತೊಡಗಿಸಿಕೊಳ್ಳುತ್ತಿದ್ದೆ. ಅಲ್ಲಿನ ಒಳಾಂಗಣ ಆಟಗಳು ನನಗೆ ತುಂಬ ಪ್ರಿಯವಾಗಿದ್ದವು. ಚರ್ಚಾಕೂಟದಲ್ಲಿ ನಾನು ಹಾಗೂ ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರು ಮುಂದಾಗಿದ್ದೆವು. ಆಟಗಳಲ್ಲಿ ನಾನೇ ಮುಂದು. ಮೂರು ವರ್ಷಗಳ ಕಾಲ 'ಇಂಡೋರ್ ಗೇಮ್ಸ್'ನಲ್ಲಿ ನಾನು ಛಾಂಪಿಯನ್ ಆಗಿದ್ದೆ. ಇದರಿಂದ ಪಾಠದಲ್ಲಿ ಹಿಂದೆ ಬೀಳದಂತೆ ಅಧ್ಯಾಪಕರು ಎಚ್ಚರಿಸುತ್ತಿದ್ದುದುಂಟು.

ಕನ್ನಡ ಎಂ. ಎ. ಅಧ್ಯಯನಸಂದರ್ಭದಲ್ಲಿ ನಮಗೆ ಎಂಟು ಜನ ಮೇಷ್ಟ್ರು. ಪರಮೇಶ್ವರ ಭಟ್ಟ ಬಂದ ಮೇಲೆ ನಾವು ಮೂರು ಜನರಾದೆವು. ನಾವು ದಿನನಿತ್ಯವೂ ಚಾಮುಂಡಿ ಬೆಟ್ಟಕ್ಕೆ ನಡಕೊಂಡೇ ಹೋಗಿಬರುವುದಿತ್ತು. ದಿನವೂ ಕುಳಿತು ಆಯಾ ದಿನದ ಪಾಠಗಳ ಕುರಿತು ಚರ್ಚೆ ಮಾಡ್ತಿದ್ದೆವು. ನಾವು ಮೂವರಲ್ಲಿ ನಮ್ಮಿಬ್ಬರಿಗಿಲ್ಲದ ಒಂದು ಸೌಕರ್ಯ ಪರಮೇಶ್ವರ ಭಟ್ಟರಿಗಿತ್ತು. ಯಾಕೆಂದರೆ ಅವರ ತಂದೆ ಯಕ್ಷಗಾನದಲ್ಲಿ ಪಾತ್ರಧಾರಿಗಳೂ ಅರ್ಥಧಾರಿಗಳೂ ಆಗಿದ್ದರಂತೆ. ಹಾಗಾಗಿ ಅವರಿಗೆ ಛಂದಸ್ಸು ಹತೋಟಿಗೆ ಬಂದಿತ್ತು. ಅವರು ಮಾತಾಡಿದ್ರೆ ಅದು ಪದ್ಯದಲ್ಲೇ ಇರೋದು. ನನಗೆ ಆ ಶಕ್ತಿ ಇರಲಿಲ್ಲ. ನಾಲ್ವಡಿ ಕೃಷ್ಣರಾಜ ಒಡೆಯರ ವರ್ಧಂತಿ ಸಂದರ್ಭದಲ್ಲಿ, ಪರಮೇಶ್ವರ ಭಟ್ಟರು 'ವರ್ಧಂತಿ ಶತಕ' ಅಂತ ಒಂದು ಶತಕಕಾವ್ಯ ಬರೆದರು. ಅದನ್ನು ನಾನೇ ಪ್ರತಿ ಮಾಡಿಕೊಟ್ಟೆ. ಮಹಾರಾಜರಿಗೆ ಅದನ್ನು ಕಳುಹಿಸಿಕೊಟ್ಟರು. ಅದಕ್ಕೆ ಅವರಿಗೆ ೫೦ ರೂಪಾಯಿ ಬಹುಮಾನ ಬಂತು. ಅದನ್ನು ನಾವು ಮೂರು ಜನ ಸೇರೆ ಸಲಬ್ರೇಟ್ ಮಾಡಿದ್ದು ಇಂದಿಗೂ ನೆನಪಿದೆ.

ನಮ್ಮ ಗುರುಗಳಲ್ಲಿ ವೆಂಕಣ್ಣಯ್ಯನವರು ಬಹಳ ಉದಾರಿಗಳು, ದಾನಿಗಳು, ಶಿಷ್ಯವತ್ಸಲರು. ವರ್ಷಕ್ಕೊಮ್ಮೆ ಕರೆದು ನಮಗೆಲ್ಲ ಬಟ್ಟೆ ಕೊಡೋರು. ವೆಂಕಣ್ಣಯ್ಯ-ನವರಿಗೆ ಬರುತ್ತಿದ್ದ ಸಂಬಳ ಅವರ ಮನೆ ಚಟ್ನಗೆ ಸಾಲದು. ಅಷ್ಟು ದಾನಿ ಅವರು. ಬಂದೋರಿಗೆಲ್ಲ ಊಟ, ಉಪಚಾರ, ನಿರಂತರವಾಗಿ ನಡೀತಿತ್ತು. ನಾವು ಎಂ. ಎ. ಕೊನೆ ವರ್ಷಕ್ಕೆ ಬರುವಷ್ಟು ಹೊತ್ತಿಗೆ ವೆಂಕಣ್ಣಯ್ಯನವರು ಸುಸ್ತಾಗಿ ಹೋಗಿದ್ದರು. ಎಂ. ಎ. ಮುಗಿಸುವಷ್ಟರಲ್ಲಿ ತೀರಿಕೊಂಡು ಬಿಟ್ರು. ನಮಗೆ ಎಂ.ಎ ವೈವಾಕ್ಕೆ ಬಂದವರು. ಬಿ.ಎಂ. ಶ್ರೀಯವರು, ಟಿ. ಎಸ್. ವೆಂಕಣ್ಣಯ್ಯನವರು ಹಾಗೂ ಬೆನಗಲ್ ರಾಮರಾಯರು. ಮೂರು ಜನ ಪ್ರಶ್ನೆ ಕೇಳಿದರು. 'ಸಹೃದಯ ಸಂವಾದ ಭಾಗಿಗಳಾಗುತ್ತೇವೆ, ನಾವು ಕಾವ್ಯವನ್ನು ಓದಿದ ಮೇಲೆ ಹೃದಯಸಂವಾದ ಭಾಗಿಗಳಾಗಬೇಕು' ಎಂದು ನಾನು ಉತ್ತರಪತ್ರಿಕೆಯಲ್ಲಿ ಬರೆದಿದ್ದೆ. ಟಿ. ಎಸ್. ವೆಂಕಟಣ್ಣಯ್ಯನವರು ಈ 'ಪದ'ವನ್ನು ಹಿಡಿದುಕೊಂಡರು. 'ಹೃದಯಸಂವಾದಭಾಗಿ' ಎಂದರೇನು ಅಂತ ಕೇಳಿದರು. ನಾನು ಅದಕ್ಕೆ ಇಂಗ್ಲಿಷ್‌ನಿಂದ ಕೋಟ್ ಮಾಡಿ ಉತ್ತರಿಸಿದೆ. A Sympthetic understanding of a Poet ಅನ್ನುತ್ತಾರಲ್ಲ, ಅದನ್ನು ಇಂಗ್ಲಿಷಿನಲ್ಲೇ ವಿವರಿಸಿದೆ. ಅದನ್ನು ಕೇಳಿ ಅವರಿಗೆ ಖುಷಿಯಾಯ್ತು. 'ಗುಡ್' ಅಂದ್ರು.

ಆ ಮೇಲೆ ನಾವು ಮೂರು ಜನರನ್ನೂ ಕರೆದು ಮುದುಕರಾದ್ದೂ ಕನ್ನಡವನ್ನು ನಿಮ್ಮ ಕೈಲಿ ಇಟ್ಟಿದ್ದೇವೆ. ಕನ್ನಡದ ಕೆಲಸವೆಂದರೆ ತನು, ಮನ ಧನಗಳನ್ನು ದಾನ ಮಾಡಿ ಮರೆಯದೆ ಕೆಲಸ ಮಾಡಬೇಕು; ಅದು ನೀವು ನಮಗೆ ನೀಡುವ 'ಗುರುದಕ್ಷಿಣೆ' ಎಂದರು. ಇದನ್ನು ಶಂಕರನಾರಾಯಣರಾವ್ ನನ್ನ ಕುರಿತು ಬರೆದ ಲೇಖನ-ವೊಂದರಲ್ಲಿ ದಾಖಲಿಸಿದ್ದಾರೆ. ನಮಗೆ ಅದನ್ನು ಕೇಳಿ ರೋಮಾಂಚನವಾಯಿತು. ಎಂ. ಎ.ಯಲ್ಲಿ ಬಂಗಾರದ ಪದಕದೊಂದಿಗೆ ಹೊರಬಂದ ನಾನು 'ಮೇಷ್ಟ್ರಾಗಬೇಕು' ಎಂದು ನಿರ್ಧಾರಮಾಡಿದೆ.

ಆಗ ಇಂಡಿಯಾದಲ್ಲಿ ಎರಡು ಟ್ರೈನಿಂಗ್ ಕಾಲೇಜುಗಳಿದ್ದುವು. ಒಂದು ಮೈಸೂರಲ್ಲಿ, ಇನ್ನೊಂದು ಮದರಾಸಿನಲ್ಲಿ. ಮೈಸೂರಲ್ಲಿ ಒಟ್ಟು ನಲವತ್ತು ಸೀಟುಗಳಿದ್ದುವು. ಉದ್ಯೋಗದಲ್ಲಿದ್ದವರಿಗೆ ಇಪ್ಪತ್ತು, ಉಳಿದ ಇಪ್ಪತ್ತು ಇಂಡಿಯಾದ ಎಲ್ಲಾ ಭಾಗದ ವಿದ್ಯಾರ್ಥಿಗಳಿಗೆ ಮೀಸಲಾಗಿತ್ತು. ನಾನು ಎಂ. ಎಯಲ್ಲಿ ಗೋಲ್ಡ್ ಮೆಡಲ್ ಪಡೆದು ಪಾಸಾದ ಫಲವಾಗಿ ಪ್ರೊ. ಸಿದ್ಧಲಿಂಗಯ್ಯ ಅವರು ನನಗೆ ಅಲ್ಲಿ ಓದುವುದಕ್ಕೆ ಅವಕಾಶ ಮಾಡಿಕೊಟ್ಟರು. ನಾನು ಫೀಸು ಕೊಟ್ಟು ಓದುವ ಸ್ಥಿತಿಯಲ್ಲಿರಲಿಲ್ಲ. ನನಗೆ ಫ್ರೀ ಸೀಟು ಕೊಡಿಸಿದರು. ಹೀಗೆ ಓದಿ ಅಲ್ಲಿ ಬಿ. ಟಿ ಮುಗಿಸಿದೆ. ಕೂಡಲೇ ಮಂಡ್ಯದ ಪ್ರೌಢಶಾಲೆಯೊಂದರಲ್ಲಿ ಮೇಷ್ಟ್ರಾಗಿ ಸೇರಿಕೊಂಡೆ. ಅಲ್ಲಿನ ಕರ್ನಾಟಕಸಂಘದ ಕಾರ್ಯದರ್ಶಿಯಾದೆ. ಅಂದಿನ ಕನ್ನಡದ ಅನೇಕ ಹಿರಿಯ ವಿದ್ವಾಂಸರನ್ನು ಕರೆಸಿ ಉಪನ್ಯಾಸ ಮಾಡಿಸಿದೆ.

ಅಷ್ಟರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕ ಹುದ್ದೆ ದೊರೆಯಿತು. ಆದರೆ ಅದು ತಾತ್ಕಾಲಿಕ. ಆ ಹೊತ್ತಿಗೆ ಬೆಂಗಳೂರಿನಲ್ಲಿ Oxford Abridged English Dictionaryಯನ್ನು ಆಧರಿಸಿ English - Kannada Dictionary ತಯಾರಾಗುತ್ತಿತ್ತು. ಡಿ. ವಿ ಗುಂಡಪ್ಪ, ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ. ಆರ್. ಶ್ರೀನಿವಾಸ ಮೂರ್ತಿ, ಕೆ. ವಿ. ರಾಘವಾಚಾರ್, ಎಲ್. ಗುಂಡಪ್ಪ, ಎಂ. ವಿ. ಸೀತಾರಾಮಯ್ಯ ಇವರ ನೇತೃತ್ವದಲ್ಲಿ ಆ ನಿಘಂಟು ರಚನೆಯಾಗುತ್ತಿತ್ತು. ಕೆ. ವಿ. ರಾಘವಾಚಾರ್, ಎಲ್. ಗುಂಡಪ್ಪ, ಎಂ. ವಿ. ಸೀತಾರಾಮಯ್ಯ ಇವರನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ತೆಕ್ಕೊಂಡು ಅಲ್ಲಿಂದ ನಿಘಂಟು ಕೆಲಸಕ್ಕೆ ಕಳುಹಿಸಿದ್ದರು. ನಾನು ನಾಲ್ಕು ವರ್ಷ ಮಹಾರಾಜಾ ಕಾಲೇಜಿನಲ್ಲಿ ಕೆಲಸ ಮಾಡಿದೆ. ಅಷ್ಟರಲ್ಲಿ ನಿಘಂಟು ಕೆಲಸ ಮುಗಿಯಿತು. ಕೆ. ವಿ. ರಾಘವಾಚಾರ್ ಮರಳಿ ಬಂದರು. ನನ್ನ ಕೆಲಸ ಹೋಯಿತು.

ಆ ಸಮಯದಲ್ಲಿ ಬಿ. ಎಂ. ಶ್ರೀಕಂಠಯ್ಯ ಮುಂತಾದವರು ಸೇರಿಕೊಂಡು ಬೆಂಗಳೂರಿನಲ್ಲಿ ಒಂದು ಹೊಸ ಹೈಸ್ಕೂಲ್ ಆರಂಭಿಸಿದರು. ಅದರ ಹೆಸರು ಬೆಂಗಳೂರು ಹೈಸ್ಕೂಲ್ ಅಂತ. ನಾನು ಅರ್ಜಿ ಹಾಕಿದೆ. ನನ್ನಲ್ಲಿ ಬಿ. ಎಂ. ಶ್ರೀಕಂಠಯ್ಯ, ಜೆ. ಸಿ. ರಾಲೋ ಹಾಗೂ ಎಂ. ವಿ. ಗೋಪಾಲಸ್ವಾಮಿ ಇವರ ಶಿಫಾರಸು ಪತ್ರಗಳಿದ್ದುವು. ಸಿ. ಆರ್. ನಾರಾಯಣರಾವ್ ಅಂತ ರಿಟಾಯರ್ಡ್ ಪ್ರಿನ್ಸಿಪಾಲ್ ಅಲ್ಲಿನ ಹೆಡ್ಮಾಸ್ಟರ್, ಅವರನ್ನು ಹೋಗಿ ಕಂಡೆ. ನನ್ನ ಹೆಸರು

ಕೇಳಿಸಿಕೊಂಡು ಕೈಸಾಲೆಯಲ್ಲಿ ಕುರ್ಚಿ ಹಾಕಿ ಕುಳ್ಳಿರಿಸಿಕೊಂಡು ಅದು ಇದು ಅಂತ ಒಂದು ಗಂಟೆ ಮಾತಾಡಿದರು. ಇವರೇನೋ ಮಾತಾಡ್ತಾರೆ ಅಂದ್ಕೊಂಡಿದ್ದೆ. 'ಸರ್, ನಿಮ್ಮ ಒಂದು ಗಂಟೆ ಸಮಯ ಹಾಳು ಮಾಡಿದೆ' ಎಂದು ಹೇಳುತ್ತಾ ಎದ್ದು ನಿಂತೆ. ಆಗ ಅವರು 'ನಿನ್ನ ಬಗ್ಗೆ ಎಲ್ಲಾ ಕೇಳಿದ್ದೀನಿ. ನಮ್ಮ ಹೈಸ್ಕೂಲಿಗೆ ನಾಳೆಯೇ ಬಂದು ಸೇರು' ಅಂದ್ರು. ಹಾಗೆ ಹೈಸ್ಕೂಲ್ ಮೇಷ್ಟ್ರಾಗಿ ಸೇರಿಕೊಂಡೆ (1943).

ಮುಂದೆ ವಿಜಯಾ ಕಾಲೇಜು ಆರಂಭ ಮಾಡಿದೆ. ನನ್ನ ಗೆಳೆಯರ ಬೆಂಬಲಿಗರೊಂದಿಗೆ ಅಲ್ಲಿ ಬಹಳ ಕಾಲ ಅಧ್ಯಾಪಕನಾಗಿ ಸೇವೆ ಸಲ್ಲಿಸಿದೆ. ವಿಜಯಾ ಸಂಜೆ ಕಾಲೇಜಿನ ಪ್ರಾಚಾರ್ಯನಾದೆ. ಸುತ್ತಲಿನ ಕಾಲೇಜಿನ ಕನ್ನಡ ಅಧ್ಯಾಪಕರನ್ನು ಕನ್ನಡದ ಕೆಲಸಕ್ಕೆ ಪ್ರೋತ್ಸಾಹಿಸುತ್ತಿದ್ದೆ. ಪ್ರೊ. ಅ. ರಾ ಮಿತ್ರ, ಪ್ರೊ. ಎಂ. ಎಚ್. ಕೃಷ್ಣಯ್ಯ, ಪ್ರೊ. ಕೆ. ವಿ. ರಾಜಗೋಪಾಲ್, ಪ್ರೊ. ಕಮಲಾ ಹಂಪನಾ ಮುಂತಾದ ಈಗಿನ ಹಿರಿಯರೆಲ್ಲ ನನ್ನ ಬೆಂಬಲಕ್ಕಿದ್ದರು.

**ನಾವಡ** : ಕನ್ನಡ ಸಾಹಿತ್ಯ ಪರಿಷತ್ತಿಗೂ ನಿಮಗೂ ಸುದೀರ್ಘಕಾಲದ ನಂಟು. ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಪರಿಷತ್ತಿನ ಕಾರ್ಯವಿಧಾನದಲ್ಲಿ, ಧ್ಯೇಯ ಧೋರಣೆಗಳಲ್ಲಿ ಹೊಸತನವನ್ನು ತಂದು ಜೋಡಿಸಿದವರು. ಆ ಬಗೆಗೆ....

**ಜಿ.ವೆಂ.**: ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯನಾಗಿ, ಗೌರವ ಕಾರ್ಯದರ್ಶಿಯಾಗಿ, ಅಧ್ಯಕ್ಷನಾಗಿ, ನಿಘಂಟು ಸಮಿತಿಯ ಸದಸ್ಯನಾಗಿ, ಕನ್ನಡ-ಕನ್ನಡ ಕೋಶದ ಪ್ರಧಾನಸಂಪಾದಕನಾಗಿ ಇದ್ದೆ. ನಾನು ಅಧ್ಯಕ್ಷನಾಗಿದ್ದಾಗ ಪರಿಷತ್ತಿನ ಆರ್ಥಿಕಸ್ಥಿತಿ ಏನೇನೂ ಚೆನ್ನಾಗಿರಲಿಲ್ಲ. ನಲವತ್ತೇಳು ಸಾವಿರ ರೂಪಾಯಿ ಸಾಲವಿತ್ತು. ಅದನ್ನು ತೀರಿಸುವುದು ನನ್ನ ಹೊಣೆಗಾರಿಕೆಯಾಗಿತ್ತು. ನನ್ನ ಬೆಂಬಲಕ್ಕೆ ಸಾಹಿತಿಗಳ ದಂಡೇ ಇತ್ತು. ಸಾಹಿತಿ ನಿರಂಜನರು ಪರಿಷತ್ತಿನ ಗೌರವ ಕಾರ್ಯದರ್ಶಿಯಾದುದು ಅನು-ಕೂಲವೇ ಆಯಿತು. ಮೊದಮೊದಲಿಗೆ ಪರಿಷತ್ತಿನ ಸಿಬ್ಬಂದಿಗಳಿಗೆ ಸಂಬಳ ಕೊಡುವುದೂ ಕಷ್ಟವಾಯಿತು. ಹೊರಗಿಂದ ಸಾಲ ತಂದು ವಿತರಿಸಿದ ಪ್ರಸಂಗ ಉಂಟು. ಆಗ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳು. ಎಸ್. ಆರ್. ಕಂಠಿಯವರು ಶಿಕ್ಷಣಸಚಿವರು. ರಾಮಕೃಷ್ಣ ಹೆಗಡೆಯವರು ಹಣಕಾಸು ಸಚಿವರು. ಪರಿಷತ್ತಿನ ದುಃಸ್ಥಿತಿಯನ್ನು ಅರಿತ ಸಚಿವಸಂಪುಟ, ಅದರಲ್ಲೂ ವಿಶೇಷವಾಗಿ ರಾಮಕೃಷ್ಣ ಹೆಗಡೆಯವರು, ಆ ವರೆಗೆ ಕೊಡುತ್ತಿದ್ದ ಮೂರು ಸಾವಿರ ಆರ್ಥಿಕ ಅನುದಾನವನ್ನು ಇಪ್ಪತ್ತೈದು ಸಾವಿರಕ್ಕೆ ಏರಿಸಿದರು. ಇದರಿಂದ ಪರಿಷತ್ತಿಗೆ ಮರುಜೀವ ಬಂದಂತಾ-ಯಿತು. ಚಾಮರಾಜಪೇಟೆಯ ಆವರಣದ ಒಳಗಿಂದ ಬೆಂಗಳೂರಿನ ವಿವಿಧ ಬಡಾವಣೆಗಳಿಗೆ ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿದೆ. ಹಳೆಯ ಸಾಲವನ್ನು ತೀರಿಸಿ ಪರಿಷತ್ತನ್ನು ಋಣಮುಕ್ತವಾಗಿಸಿದೆ. ಪರಿಷತ್ತಿಗೆ ಹೊಸ ಅಂಗ-ರಚನೆಯನ್ನು ರೂಪಿಸಿ ಸರ್ವಸದಸ್ಯರ ಸಭೆಯಲ್ಲಿ ಒಪ್ಪಿಗೆಯನ್ನು ಪಡೆದೆ. ಈ ಮೂಲಕ ಪರಿಷತ್ತಿಗೆ ಎಲ್ಲ ಜಿಲ್ಲೆಗಳ ಪ್ರತಿನಿಧಿಗಳು ಬರುವಂತಾಗಿ ಅಖಿಲಕರ್ನಾಟಕ ವ್ಯಾಪ್ತಿ ದೊರೆತಂತಾಯಿತು.

**ನಾವಡ** : ನಿಮಗೂ ನಿಘಂಟಿಗೂ ಸಂಬಂಧ ಬೆಳೆದದ್ದು ಹೇಗೆ? ನಿಘಂಟಿನ ಕುರಿತಾದ ನಿಮ್ಮ ಆಸಕ್ತಿಗೆ ಕನ್ನಡ ಸಾಹಿತ್ಯ ಪರಿಷತ್ತು ಹೇಗೆ ಸಹಕರಿಸಿತು?

**ಜಿ. ವೆಂ** : ನಾನು ಓದುತ್ತಿರುವಾಗ ನಿಘಂಟುಕಾರನಾಗಬೇಕೆಂಬ ಕನಸು ಕಂಡವನಲ್ಲ. ಹಳಗನ್ನಡ, ನಡುಗನ್ನಡ, ಕಾವ್ಯಗಳ ಹುಚ್ಚು ಹಿಡಿಸಿಕೊಂಡಿದ್ದೆ. ಹಾಗೆ ಹೇಳೋದಾದ್ರೆ ಕನ್ನಡ ಪ್ರಪಂಚದಲ್ಲಿ ಆಧುನಿಕ ನಿಘಂಟಿನ ಬಗೆಗೆ ಕುತೂಹಲ ಎದ್ದದ್ದು ಬಹಳ ತಡವಾಗಿ. 1943ರ ಪರಿಷತ್ತಿನ ನಿಯಮಾವಳಿಯಲ್ಲಿ ನಿಘಂಟು ತರಬೇಕೆಂದು ದಾಖಲೆಯಾಗಿದೆ. ಆದರೆ ಅದರ ಯೋಜನೆ ಕಾರ್ಯಗತವಾದದ್ದು 1943ರ ಬಳ್ಳಾರಿ ಸಾಹಿತ್ಯ ಸಮ್ಮೇಳನದಲ್ಲಿ ಪಾಸಾದ ಠರಾವಿನ ಮೂಲಕ. ಆಗ ಪರಿಷತ್ತಿನ ಅಧ್ಯಕ್ಷರು ಡಿ. ವಿ. ಗುಂಡಪ್ಪನವರು. ಪ್ರೊ. ಎ. ಆರ್. ಕೃಷ್ಣ ಶಾಸ್ತ್ರಿಗಳನ್ನು ಅಧ್ಯಕ್ಷರಾಗಿ ಮಾಡಿ ಬಿ. ಎಂ. ಶ್ರೀ., ಡಿ. ಎಲ್. ಎನ್., ಕೆ. ವಿ. ರಾಘವಾಚಾರ್ ಅವರನ್ನು ಸದಸ್ಯರನ್ನಾಗಿಟ್ಟುಕೊಂಡು ನಿಘಂಟುರಚನಾ ಸಮಿತಿಯನ್ನು ರೂಪಿಸಲಾಯಿತು. ಸುಮಾರು ೭೦-೮೦ ಜನರ ಕೈಯಲ್ಲಿ ಪಟ್ಟಿಕೆಗಳನ್ನು ಬರೆಯಿಸಿದರು. ಪ್ರಮುಖ ಗ್ರಂಥಗಳಿಂದ ಮುಖ್ಯವಾದ ಪದಗಳನ್ನೂ ವಾಕ್ಯಗಳನ್ನೂ ತೆಗೆದು ಪಟ್ಟಿಕೆಗಳನ್ನು ಬರೆಯಿಸಲಾಯಿತು. 1943-54ರ ಕಾಲಾವಧಿ ಇದು. ಸುಮಾರು ೧೫ ಲಕ್ಷ ಪಟ್ಟಿಕೆಗಳು ಸಿದ್ಧವಾದುವು. ನಾನೂ ಈ ಕೆಲಸದಲ್ಲಿ ಭಾಗಿಯಾಗಿದ್ದೆ. ನನ್ನ ಜೊತೆಗೆ ಜಿ. ವರದರಾಜ ರಾವ್, ಎಚ್. ಎಂ. ಶಂಕರನಾರಾಯಣ ರಾವ್, ದೇಜಗೌ, ಆರ್. ಎಸ್. ರಾಮರಾವ್, ಕೆ. ಎಂ. ಕೃಷ್ಣ ರಾವ್ ಇದ್ದಿದ್ದರು. ನಮ್ಮನ್ನೆಲ್ಲ ಒಪ್ಪೊತ್ತಿನ ಕೆಲಸಗಾರರೆಂದು ಪರಿಗಣಿಸಿ ತಿಂಗಳಿಗೆ ೨೦ ರೂಪಾಯಿ ಕೊಡುತ್ತಿದ್ದರು. ನಾವು ಬೆಳಗ್ಗೆ ೮ಕ್ಕೆ ಬಂದು ೯:೩೦ ರವರೆಗೆ ಪರಿಷತ್ತಿನಲ್ಲಿ ಕುಳಿತು ಈ ಕೆಲಸ ಮಾಡಿದೆವು. ಈ ಕೆಲಸದಲ್ಲಿ ಮುಂದೆ ಬದಲಾವಣೆ ಆಯಿತು. ಒಂದೊಂದು ಪುಸ್ತಕದ ಎಲ್ಲಾ ಪದಗಳನ್ನು ಬರೆದುಕೊಡಬೇಕೆಂದು ತೀರ್ಮಾನವಾಯಿತು. ನಾನು ಬಸವಣ್ಣನವರ ವಚನಗಳಿಗೆ ಪಟ್ಟಿಕೆ ಬರೆದುಕೊಟ್ಟ ನೆನಪು ನನಗಿದೆ.

**ನಾವಡ** : ಪಟ್ಟಿಕೆಯೊಳಗೆ ನೀವು ಏನೇನನ್ನು ಬರೆಯಬೇಕಾಗಿತ್ತು? ಅರ್ಥ ನಿರ್ಣಯ ಹೇಗೆ?

**ಜಿ. ವೆಂ.**: ಮುಖ್ಯ ನಮೂದು, ಅದರ ವ್ಯಾಕರಣವಿಶೇಷ, ಅದರ ಪ್ರಯೋಗ, ಅರ್ಥನಿರ್ಣಯ ಮಾಡಿ ಬರೆಯಬೇಕು. ಅರ್ಥ ತಿಳಿಯದೆ ಹೋದಾಗ ಪ್ರಶ್ನಾರ್ಥಕ ಚಿಹ್ನೆ ಹಾಕಬೇಕಿತ್ತು. ಶಬ್ದಗಳ ಅರ್ಥಗಳಲ್ಲಿ ಕಾಲಾನುಕ್ರಮದಲ್ಲಿ ಆಗುವ ವ್ಯತ್ಯಾಸ-ಗಳನ್ನು ಇಂತಹ ದೃಷ್ಟಾಂತಗಳಿಂದಲೇ ನಿರ್ಣಯಿಸಬೇಕು. ಶಬ್ದಗಳ ಮೂಲ, ವ್ಯುತ್ಪತ್ತಿ, ಜ್ಞಾತಿಶಬ್ದಗಳನ್ನು ಹುಡುಕಿ ಬರೆಯುವ ಕೆಲಸ ಮಾಡಬೇಕಾಗಿತ್ತು. ಹೀಗೆ ಮಾಡುವಾಗ ಗ್ರಂಥಪಾಠದಲ್ಲಿರುವ ತಪ್ಪುಗಳನ್ನು ತಿದ್ದುವ ಪಾಠಸಂಪಾದನೆಯ ಕೆಲಸವನ್ನು ನಾವು ಮಾಡಬೇಕಿತ್ತು. ತಿಂಗಳು, ತಿಂಗಳು ಸೇರುತ್ತಿದ್ದ ಪಂಡಿತ ಸಭೆಯಲ್ಲಿ ನಾವು ಬರೆದ ಪಟ್ಟಿಕೆಗಳು ಚರ್ಚೆಗೆ ಬರುತ್ತಿದ್ದುವು. ಅವರು ನಮ್ಮ

ಕೆಲಸವನ್ನು ಕೂಲಂಕಷವಾಗಿ ಪರಿಶೀಲಿಸುತ್ತಿದ್ದರು. ಹೀಗೆ ೧೯೪೩–೫೪ರ ಕಾಲಾವಧಿಯಲ್ಲಿ ಸುಮಾರು ೧೫ ಲಕ್ಷ ಪಟ್ಟಿಕೆಗಳು ಸಿದ್ಧವಾದುವು. ಇದು ಕನ್ನಡ ವಿದ್ವತ್ ಲೋಕದ ದೊಡ್ಡ ಆಸ್ತಿ.

ನಿಘಂಟು ನಿರ್ಮಾಣ ಕಲೆಯ ಬಗೆಗೆ ನನಗೆ ವಿವರವಾಗಿ ತಿಳಿಯ-ಹೇಳಿದವರು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು. ನನಗೆ ಸಂಸ್ಕೃತ ವೈದಿಕ ನಿಘಂಟು ಮತ್ತು ಯಾಸ್ಕರ ನಿರುಕ್ತವನ್ನು ಪಾಠ ಹೇಳಿ ಧೈರ್ಯ ತುಂಬಿದವರು ಪ್ರೊ. ಎ. ಆರ್. ಕೃಷ್ಣ ಶಾಸ್ತ್ರಿಗಳು. ಈ ನಿಘಂಟು ರಚನೆಯ ಸಂದರ್ಭದಲ್ಲಿ ನನಗೆ ಪ್ರೊ. ಡಿ. ಎಲ್. ನರಸಿಂಹಾಚಾರ್ಯ, ಡಾ. ಎ. ಎನ್. ಉಪಾಧ್ಯೆ ಮುಂತಾದವರ ಮಾರ್ಗದರ್ಶನ ದೊರೆತಿದೆ.

1973–92ರ ಕಾಲಾವಧಿಯಲ್ಲಿ ಕನ್ನಡ–ಕನ್ನಡ ನಿಘಂಟಿನ ೨ ರಿಂದ ೭ನೇ ಸಂಪುಟಗಳನ್ನು ನಾನು ಪ್ರಧಾನಸಂಪಾದಕನಾಗಿ ಹೊರತಂದೆ. ಒಂದೊಂದು ಸಂಪುಟದಲ್ಲೂ ಡೆಮಿ ಚತುರ್ಥಾಕಾರದ ಸಾವಿರಕ್ಕೂ ಹೆಚ್ಚು ಪುಟಗಳಿವೆ. ಇದೀಗ ಕನ್ನಡ–ಕನ್ನಡ ನಿಘಂಟು ಎಂಟು ಸಂಪುಟಗಳಲ್ಲಿ ಸಂಪನ್ನಗೊಂಡಿದೆ. ಪ್ರಕಟವಾಗಿ ಓದುಗರ ಕೈಸೇರಿದೆ. ಹೀಗೆಂದ ಮಾತ್ರಕ್ಕೆ ಕನ್ನಡ–ಕನ್ನಡ ನಿಘಂಟಿನ ರಚನೆಯ ಕೆಲಸಕ್ಕೆ ಮುಕ್ತಾಯವೆಂಬುದಿಲ್ಲ. ಕನ್ನಡದ ಅವಶ್ಯಕತೆಗಳಿಗನುಸರಿಸಿ ಭಿನ್ನ ಭಿನ್ನ ಮಾದರಿಯ ನಿಘಂಟುಗಳು ರೂಪುಗೊಳ್ಳುತ್ತಲೇ ಹೋಗಬೇಕು. ಬಹುಶಃ ಮುಂದಿನ ಕಾಲಘಟ್ಟದಲ್ಲಿ ನಿಘಂಟು ಇಂದಿನಂತೆ ಪುಸ್ತಕರೂಪದಲ್ಲಿರದೆ ಗಣಕೀಕರಣಗೊಂಡು ವಿದ್ಯುನ್ಮಾನ ಮಾಧ್ಯಮದಲ್ಲಿ ಓದುಗರಿಗೆ ಬೇಕೆಂದಾಗ ಸಿಗುವ ಸ್ಥಿತಿಯಲ್ಲಿರಬಹುದು.

**ನಾವಡ** : ಚಲನಶೀಲ ಭಾಷೆಯೊಂದಿಗೆ ಕೋಶಕಾರನ ವ್ಯಕ್ತಿತ್ವ ಬೆಳೆದರೆ ಮಾತ್ರ ಅವನ ಕೋಶದ ಮೌಲ್ಯ ಹೆಚ್ಚುತ್ತದೆ ಎಂದು ನಾನು ತಿಳಿದಿದ್ದೇನೆ. ತಮ್ಮ ಅಭಿಪ್ರಾಯ?

**ಜಿ. ವೆಂ.** : ನಿಮ್ಮ ಮಾತನ್ನು ನಾನು ಒಪ್ಪುತ್ತೇನೆ. ಭಾಷೆಯ ಮೇಲೆ ಸಮಕಾಲದ ಸಾಮಾಜಿಕ, ವೈಜ್ಞಾನಿಕ, ರಾಜಕೀಯ, ಒತ್ತಡಗಳು ಬಿದ್ದೇ ಬೀಳುತ್ತವೆ. ಇದರ ಫಲವಾಗಿ ಭಾಷೆಯ ಸ್ವರೂಪದಲ್ಲಿ ಬದಲಾವಣೆ ಅನಿವಾರ್ಯ. ಇಂತಹ ಸಂದರ್ಭದಲ್ಲಿ ಕೆಲವೊಮ್ಮೆ ನಿರ್ದಿಷ್ಟ ಭಾಷೆಯೊಂದರ ಸ್ವರೂಪ–ಜಾಯಮಾನಕ್ಕೆ ಮೀರಿ ಅದು ಬೆಳೆಯುವುದುಂಟು. ಆಗ ಕೋಶಕಾರ ಅವುಗಳನ್ನೆಲ್ಲ ದಾಖಲಿಸಿ-ಕೊಂಡು ಅಂಥ ಬದಲಾವಣೆಯ ಸಾಮಾಜಿಕ ಸನ್ನಿವೇಶಗಳನ್ನು ವಿವರಿಸಬೇಕಾಗು-ತ್ತದೆ. ಭಾಷೆ ಬೆಳೆಯಬೇಕಾದರೆ ಸ್ವೀಕರಣ ಭಾಷೆಯಾಗಬೇಕು. ಹೊರಗಿನ ಪದಗಳನ್ನು ಅರಗಿಸಿಕೊಳ್ಳುವ ಸಂದರ್ಭದಲ್ಲಿ ಭಾಷಾಂತರ ಮಾಡಿಕೊಳ್ಳಬೇಕಾಗಿಲ್ಲ. ವೈಜ್ಞಾನಿಕ/ತಾಂತ್ರಿಕ ಪದಕೋಶಗಳನ್ನು ನೇರವಾಗಿ ಸ್ವೀಕರಿಸಬೇಕು. ಆಗ ಭಾಷೆ ಶ್ರೀಮಂತವಾಗುತ್ತದೆ. ಜೀವಂತವಾಗುತ್ತದೆ.

**ನಾವಡ** : ಇತ್ತೀಚೆಗೆ ವಿದ್ಯುನ್ಮಾನ ಮಾಧ್ಯಮಗಳು ಪತ್ರಿಕಾ ಮಾಧ್ಯಮಗಳು ದಿನ ದಿನವೂ ಹೊಸ ಹೊಸ ಪದಗಳನ್ನು ಚಲಾವಣೆಗೆ ತರುತ್ತಿವೆ. ಹೊಸ ಆಲೋಚನೆಗಳು

ಹೊಸ ಪದಗಳ ರೂಪದಲ್ಲಿ ಬಳಕೆಗೆ ಬರುತ್ತಿರುವುದು ತಪ್ಪಲ್ಲ. ಆದರೆ ಭಾಷಾ-ಮರ್ಯಾದೆಯನ್ನು ಮೀರಿ. ಭಾಷೆಯ ಜಾಯಮಾನಕ್ಕೆ ಒಗ್ಗದ ರೂಪದಲ್ಲಿ ಬರುತ್ತಿವೆ. ಅನುವಾದಿತವನ್ನು ನೇರವಾಗಿ ಮಾಧ್ಯಮಗಳ ವಕ್ತಾರರು ಬಳಸಿಕೊಳ್ಳುತ್ತಿದ್ದಾರೆ. ಇದು ಸಲ್ಲದೆಂದು ಅಭಿಪ್ರಾಯಪಡುವವರಿದ್ದಾರೆ. ನೀವು ಏನೆನ್ನುತ್ತೀರಿ?

**ಜಿ. ವೆಂ :** ವರ್ತಮಾನದ ಭಾಷಾವಿಕಾಸದಲ್ಲಿ ಮಾಧ್ಯಮದವರ ಪಾತ್ರ ದೊಡ್ಡದು. ಭಾಷೆಯ ಸಂವಹನ ಮಾನಕವನ್ನು ಹೆಚ್ಚಿಸಿದವರು ಅವರು ಎನ್ನುವುದು ಖಚಿತ. ಹಾಗೆಂದು ಆಯಾ ಭಾಷಾಗುಣಧರ್ಮವನ್ನು ಮೀರಿ ಅಪಶಬ್ದಗಳ ನಿರ್ಮಾಣ ಸಲ್ಲದೆಂದು ನನ್ನ ಅಭಿಪ್ರಾಯ. ವಿದ್ಯಾವಂತ ಮಾಧ್ಯಮದವರು ತಪ್ಪೆಸಗಿದರೆ ಅದು ಜನಸಾಮಾನ್ಯರ ಕೈಗೆ ತಲುಪಿ ಭಾಷಾಸ್ವರೂಪ ಕೆಡುವ ಸಾಧ್ಯತೆ ಇದೆ. ಅಂದರೆ ಸಮೂಹಮಾಧ್ಯಮದ ಭಾಷಾನಿಯಮಗಳಿಗೆ ಸಂಬಂಧಪಟ್ಟಂತೆ ಒಂದು ಸ್ವಯಂ ಗುಣನಿಯಂತ್ರಣವ್ಯವಸ್ಥೆ ಇರಬೇಕು. ಅಂದ ಮಾತ್ರಕ್ಕೆ ಭಾಷೆಯಲ್ಲಿ ಆಯಾ ಕಾಲದ ತುರ್ತಿಗನುಸರಿಸಿ ಹೊಸ ಪದಗಳು ಟಂಕಣೆಗೊಳ್ಳಬಾರದೆಂದಲ್ಲ. ನಮ್ಮ ನದಿ ಪಾತ್ರದೊಳಗೆ ಅನ್ಯಭಾಷಾ ಪ್ರವಾಹ ಹರಿದರೆ ತಪ್ಪಲ್ಲ. ಆದರೆ ನಮ್ಮ ನೀರಿನೊಂದಿಗೆ ಬೆರೆಯಬೇಕೇ ಹೊರತು ನಮ್ಮ ನೀರನ್ನು ಕೆಡಿಸಿ ರಾಡಿ ಮಾಡಬಾರದು ಅಷ್ಟೆ.

**ನಾವಡ :** ಕನ್ನಡದಲ್ಲಿ ಇಂದು ನಿಘಂಟು ಎಂದರೆ ಜಿ.ವಿ., ಜಿ.ವಿ. ಎಂದರೆ ನಿಘಂಟು ಎಂಬ ಹೇಳಿಕೆ ಕೇಳಿಸುತ್ತಿದೆ ಈ ದಿಸೆಯಲ್ಲಿ ತಮ್ಮ 'ದಾರಿಸಾಗು' ಬಗ್ಗೆ ತುಸು ವಿವರಿಸುತ್ತೀರಾ?

**ಜಿ. ವೆಂ :** ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ-ಕನ್ನಡ' ಸರಣಿಯಲ್ಲಿ ಏಳನೆಯ ಸಂಪುಟದ ಮುದ್ರಣ ಆಗುವ ತನಕ ಶ್ರಮವಹಿಸಿ ರೂಪಿಸಿದ ಬಗ್ಗೆ ನಿಮಗೆ ಗೊತ್ತೇ ಇದೆ. ಎಂಟನೆಯ ಸಂಪುಟದ ಬಹುಭಾಗ ರೂಪಿಸಿ ಹೊರಬಂದೆ. ನಿಘಂಟು ರಚನಾಶಾಸ್ತ್ರಕ್ಕೆ ಸಂಬಂಧಿಸಿದಂತೆ 'ನಿಘಂಟುಶಾಸ್ತ್ರ ಪರಿಚಯ' (ಕರ್ನಾಟಕ ವಿ.ವಿ. ಧಾರವಾಡ 1990), ಕನ್ನಡ ನಿಘಂಟು ಪರಿವಾರ (ಕನ್ನಡ ಪುಸ್ತಕ ಪ್ರಾಧಿಕಾರ 2003) ಎರಡು ಪುಸ್ತಕಗಳನ್ನು ಪ್ರಕಟಿಸಿದ್ದೇನೆ. ಐಬಿಎಚ್. ಪ್ರಕಾಶನಕ್ಕಾಗಿ ಕನ್ನಡ-ಕನ್ನಡ ಇಂಗ್ಲಿಷ್ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತಿಗಾಗಿ 'ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು', ಮುದ್ದಣ ಪದಪ್ರಯೋಗ ಕೋಶ, ಪ್ರಿಸಮ್ ಪ್ರಕಾಶನದವರಿಗಾಗಿ ಸಿದ್ಧಪಡಿಸಿದ ಇಂಗ್ಲಿಷ್-ಕನ್ನಡ ನಿಘಂಟು, ಪತ್ರಿಕಾ ಅಕಾಡೆಮಿಗಾಗಿ ರೂಪಿಸಿದ ಪತ್ರಿಕಾಪದಕೋಶ, ನವಕರ್ನಾಟಕ ಪ್ರಕಾಶನದವರಿಗೆ ರಚಿಸಿಕೊಟ್ಟ 'ಎರವಲು ಪದಕೋಶ' ಹಾಗೂ 'ಇಗೋ ಕನ್ನಡ' (ಎರಡು ಸಂಪುಟ) ನನ್ನ ಮುಖ್ಯ ಕೆಲಸ ಎಂದು ನಾನು ಅಂದುಕೊಂಡಿದ್ದೇನೆ.

**ನಾವಡ :** ತಾವು, ವಾರ ವಾರವೂ ಪ್ರಜಾವಾಣಿ ಓದುಗರಿಗಾಗಿ ರೂಪಿಸುತ್ತಲೇ ಇರುವ 'ಇಗೋ ಕನ್ನಡ' ಮಾದರಿಯ ಸಾಮಾಜಿಕ ನಿಘಂಟು ಭಾರತೀಯ ಭಾಷಾವಲಯದಲ್ಲೇ ಅತ್ಯಪೂರ್ವ ಪ್ರಯತ್ನ ಎನ್ನಲಾಗುತ್ತಿದೆ. ಇದರ ರಚನೆಯ

ಓನ್ನೆಲೆ ಹಾಗೂ ಅದು ನಮ್ಮ ಸಾಮಾಜಿಕರ ಭಾಷಾಮಾನಸಲೋಕದಲ್ಲಿ ಓರಣಗೊಳಗಾದ ಬಗೆಯನ್ನು ಹೇಳುತ್ತೀರಾ ?

**ಜಿ. ವೆಂ.:** 'ಇಗೋ ಕನ್ನಡ' ಕನ್ನಡ ಪತ್ರಿಕೆಯೊಂದರಲ್ಲಿ ಅಂಕಣವಾಗಿ ಆರಂಭಗೊಂಡಾಗ ಓದುಗರು ಇಷ್ಟೊಂದು ಆಸಕ್ತಿಯಿಂದ 'ಕೇಳುಗ'ರಾಗುತ್ತಾರೆ ಎಂದು ನಾನು ಭಾವಿಸಲಿಲ್ಲ. ನನ್ನ ಮಿತ್ರರು, ಶಿಷ್ಯರು, ನನ್ನೊಡನೆ ಕನ್ನಡದ ಪದ-ಪ್ರಯೋಗಗಳ ಬಗೆಗೆ ವಿಚಾರವಿನಿಮಯ ಮಾಡಲು ಬರುತ್ತಿದ್ದರು. ಪದಗಳ ವ್ಯುತ್ಪತ್ತಿ ಹಾಗೂ ಪ್ರಸರಣದ ಬಗೆಗೆ ಹೆಚ್ಚಿನ ಸಂದೇಹಗಳಿರುತ್ತಿದ್ದವು. ಅವರು ಅನೇಕ ಬಾರಿ ಜನಪ್ರಿಯ ವ್ಯುತ್ಪತ್ತಿಗಳನ್ನು ಹೇಳಿದಾಗ ನಾನು ಪ್ರತಿಯಾಗಿ ವೈಜ್ಞಾನಿಕ ವ್ಯಾಖ್ಯಾನಗಳನ್ನು ನೀಡುತ್ತಿದ್ದೆ. ಆ ಸಂದರ್ಭದಲ್ಲಿ 'ಪ್ರಜಾವಾಣಿ'ಯ ಹಿಂದಿನ ಸಂಪಾದಕರಾದ ನನ್ನ ವಿದ್ಯಾರ್ಥಿ ರಾಮಣ್ಣನವರು ಈ ಬಗ್ಗೆ ಒಂದು ಅಂಕಣ ಬರೆದುಕೊಡುವಂತೆ ಹೇಳಿದರು. ಹಾಗೆ ಆರಂಭಿಸಿದ ಈ ಅಂಕಣ ತುಂಬ ಜನಪ್ರಿಯವಾಗಿ ನಾಲ್ಕಾರು ವರ್ಷಗಳಿಂದ ನಡೆದು ಬರುತ್ತಿದೆ. ಪ್ರತಿವಾರ ಸುಮಾರು ನೂರು ಪತ್ರಗಳು ಬರುತ್ತವೆ. ಅವುಗಳಲ್ಲಿ ಮುಖ್ಯವಾದುವನ್ನು ಆಯ್ದು ಉತ್ತರಿಸುತ್ತೇನೆ. ಮೊದಮೊದಲು ವಿದ್ಯಾರ್ಥಿಗಳು ಭಾಗವಹಿಸುತ್ತಿದ್ದರೆ ಈಚೆಗೆ ಅನೇಕ ವಿದ್ವಾಂಸರೂ ಪ್ರಶ್ನೆಗಳನ್ನು ಕಳುಹಿಸಿಕೊಡುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ ಎಂದು ನಾನು ಭಾವಿಸಿದ್ದೇನೆ. ಈ ಅಂಕಣದಲ್ಲಿ ಬಂದ ಕೆಲವು ಭಾಗಗಳನ್ನು ಆಯ್ದು ನವಕರ್ನಾಟಕ ಪ್ರಕಾಶನದವರು ಎರಡು ಸಂಪುಟಗಳಲ್ಲಿ 'ಇಗೋ ಕನ್ನಡ' ಸಾಮಾಜಿಕ ನಿಘಂಟು ಹೊರತಂದಿದ್ದಾರೆ. ಮೂರನೆಯ ಸಂಪುಟ ಸಿದ್ಧವಾಗಿದೆ.

**ನಾವಡ :** ಜಾಗತೀಕರಣದ ಈ ಸಂದರ್ಭದಲ್ಲಿ ಭಾಷಾಲೋಕದ ಹಿರಿಯಣ್ಣ ಇಂಗ್ಲಿಷ್‌ನ ಎದುರು ದೇಶೀಯಭಾಷೆಯಾದ ಕನ್ನಡ ಕುಸಿತಗೊಳ್ಳುವ ಸಾಧ್ಯತೆ ಇದೆಯೇ? ಕನ್ನಡವನ್ನು ಗಟ್ಟಿಗೊಳಿಸುವ ದಾರಿ ಏನು?

**ಜಿ.ವೆಂ :** ನೀವು ಅಂದಂತೆ ಇಂಗ್ಲಿಷ್ ಆಕ್ರಮಣಕಾರಿ ಭಾಷೆ ಎನ್ನುವುದು ಸತ್ಯ. ಜಗತ್ತಿನಾದ್ಯಂತ ಭಾಷೆಗಳಿಂದ ತನ್ನ ಚೀಲವನ್ನು ತುಂಬಿಕೊಳ್ಳುತ್ತಾ, ಶ್ರೀಮಂತ-ಗೊಳ್ಳುತ್ತಾ ಈ ಭಾಷೆ ಬೆಳೆದಿದೆ. ಇಂಗ್ಲಿಷ್ ಆಕ್ಸ್‌ಫರ್ಡ್ ನಿಘಂಟಿನೊಳಗೆ ಅನೇಕ ಭಾರತೀಯ ಪದಗಳು ಕೀಲಿಸಿಕೊಂಡಿರುವುದು ಎಲ್ಲರೂ ಬಲ್ಲ ಸಂಗತಿ. ಈಚಿನ ವರ್ಷಗಳಲ್ಲಿ, ಬೆಳೆಯುತ್ತಿರುವ ವೈಜ್ಞಾನಿಕ-ತಾಂತ್ರಿಕ ಸಂದರ್ಭದಲ್ಲಿ ಇಂಗ್ಲಿಷ್‌ನೊಳಗೆ ಸಾವಿರಾರು ಪದಗಳು ಸೇರಿಕೊಂಡಿವೆಯಂತೆ. ಇಂತಹ ಪದಗಳ ಅನುವಾದ ಮಾಡಿಕೊಂಡು ನಮ್ಮ ಭಾಷೆಯೊಳಗೆ ತರುವುದಂತೂ ಅಸಾಧ್ಯ. ಅವುಗಳನ್ನು ನೇರವಾಗಿ ನಮ್ಮೊಳಗೆ ತುಂಬಿಕೊಂಡು ನಮ್ಮ ಭಾಷೆಯ ಅಭಿವ್ಯಕ್ತಿಸಾಮರ್ಥ್ಯದ ಮಾನಕವನ್ನು ಹೆಚ್ಚಿಸಿಕೊಳ್ಳಬೇಕು. ಹೀಗೆ ನಮ್ಮ ಭಾಷೆಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದೇ ಜಾಗತೀಕರಣಕ್ಕೆ ನಾವೊಡ್ಡಬಹುದಾದ ಸವಾಲು. ಕುವೆಂಪು ಅವರು ಎಂದಂತೆ ಭಾವೋಪಯೋಗಿಯಾದ ಭಾಷೆಯನ್ನು ಶಾಸ್ತ್ರೋಪ-

ಯೋಗ್ಯವಾಗಿ ಬಳಸಲು ಪ್ರಯತ್ನಿಸಬೇಕು. ನಮ್ಮ ಭಾಷೆಯನ್ನು ಬದುಕಿನ ಎಲ್ಲ ವಲಯಗಳಲ್ಲಿ ಬಳಸಲು ತೊಡಗಿದಾಗ ಭಾಷೆ ಶಕ್ತಿಶಾಲಿಯಾಗುತ್ತದೆ.

**ನಾಪಡ:** ಸಾರ್, ತಾವು ಭಾಷಾಂತರವಲಯದಲ್ಲೂ ಕೆಲಸ ಮಾಡಿದವರು. ಭಾಷಾಂತರಕ್ಕೆ ಸಂಬಂಧಿಸಿದಂತೆ ಪತ್ರಪುಸ್ತಕಗಳನ್ನು ರಚಿಸಿದವರು. ಆಯಾ ಕಾಲದ ಅವಶ್ಯಕತೆಗೆ ತಕ್ಕಂತೆ ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರ ಕಾರ್ಯ ನಡೆಸಿದಿರಿ. ಆದರೆ ಇಂದು ನಮಗೆ ದ್ರಾವಿಡ ಭಾಷೆಗಳಿಂದ ಕನ್ನಡಕ್ಕೆ ಭಾಷಾಂತರಗಳಾಗಬೇಕಾಗಿದೆ ಎಂದು ನನ್ನೆಣಿಕೆ. ತಮ್ಮ ಅಭಿಪ್ರಾಯ? ಹಾಗೆಯೇ ಅನುವಾದ ಪ್ರಕ್ರಿಯೆ ಹೇಗೆ ಸಾಗಬೇಕು?

**ಜಿ.ವೆಂ.** : ನೀವೆಂದಂತೆ ಸದ್ಯ ನಮ್ಮ ದ್ರಾವಿಡ ಭಾಷೆಗಳಿಂದ ಕನ್ನಡಕ್ಕೆ ಬರಬೇಕು. ಹಾಗೆಯೇ ಇಲ್ಲಿನ ಕೃತಿಗಳು ಭಾಷಾಂತರಗೊಂಡು ಅಲ್ಲಿ ಸಲುವಳಿಯಾಗಬೇಕಾಗಿವೆ. ಕಾರಣ, ನಮ್ಮಲ್ಲಿನ 'ತಗ್ಗು ನೆಲ'ಗಳಿಗೆ ಅಲ್ಲಿಂದ ನೀರು ಬರಬೇಕು.. ಇಲ್ಲಿನ 'ಏರು ನೆಲ'ಗಳಿಂದ ಅಲ್ಲಿಗೆ ನೀರು ಹರಿಯಬೇಕು. ಆದರೆ ಈ ಭಾಷಾಂತರ ನೇರ ಇತರ ದ್ರಾವಿಡ ಭಾಷೆಗಳಿಂದ ಕನ್ನಡಕ್ಕೆ ಬರಬೇಕು. ಯಾವುದೇ ಮೂಲಕ ಭಾಷೆಯಿಂದಲ್ಲ. ಹಾ. ಮಾ. ನಾಯಕರು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ (ನಾನು ಆ ಕಾಲಕ್ಕೆ ಸದಸ್ಯನಾಗಿದ್ದೆ) ಪ್ರತಿ ವರ್ಷವೂ ಇಬ್ಬರು ಕನ್ನಡ ಅಧ್ಯಾಪಕರನ್ನು ಬೇರೆ ರಾಜ್ಯಗಳಿಗೆ ಕಳುಹಿಸಿ ಅಲ್ಲಿನ ನೆಲ, ಜಲ, ಜನರನ್ನು ಕಂಡು ಆ ಭಾಷೆಯ ನಾಡಿ ಅರಿತು ಅಲ್ಲಿನ ಸಾಹಿತ್ಯ ಸಂಸ್ಕೃತಿ ಅಧ್ಯಯನ ಮಾಡುವಂತೆ ಸೂಚಿಸಲಾಯಿತು. ಇದರಿಂದ ಒಳ್ಳೆಯ ಕೆಲಸವಾಯಿತು. ಅಂತೆಯೇ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಇತರ ದ್ರಾವಿಡ ಭಾಷೆಗಳ ವಿದ್ವಾಂಸರನ್ನು ಕರೆಸಿ ಭಾಷಾಂತರ ಕಮ್ಮಟಗಳನ್ನು ನಡೆಯಿಸಿ ಭಾಷಾಂತರ ಕಾರ್ಯವನ್ನು ನಡೆಸಿತೆಂದು ಕೇಳಿದ್ದೇನೆ. ಇನ್ನೂ ಈ ಬಗೆಯ ಕೆಲಸಗಳಾಗಬೇಕಾಗಿದೆ.



---

ವರ್ತಮಾನದ ಭಾಷಾವಿಕಾಸದಲ್ಲಿ ಮಾಧ್ಯಮದವರ ಪಾತ್ರ ದೊಡ್ಡದು. ಭಾಷೆಯ ಸಂವಹನ ಮಾನಕವನ್ನು ಹೆಚ್ಚಿಸಿದವರು ಅವರು ಎನ್ನುವುದು ಖಚಿತ. ಹಾಗೆಂದು ಆಯಾ ಭಾಷಾಗುಣ ಧರ್ಮವನ್ನು ಮೀರಿ ಅಪಶಬ್ದಗಳ ನಿರ್ಮಾಣ ಸಲ್ಲದೆಂದು ನನ್ನ ಅಭಿಪ್ರಾಯ. ವಿದ್ಯಾವಂತ ಮಾಧ್ಯಮದವರು ತಪ್ಪೆಸಗಿದರೆ ಅದು ಜನಸಾಮಾನ್ಯರ ಕೈಗೆ ತಲುಪಿ ಭಾಷಾಸ್ವರೂಪ ಕೆಡುವ ಸಾಧ್ಯತೆ ಇದೆ. ಅಂದರೆ ಸಮೂಹಮಾಧ್ಯಮದ ಭಾಷಾನಿಯಮಗಳಿಗೆ ಸಂಬಂಧಪಟ್ಟಂತೆ ಒಂದು ಸ್ವಯಂ ಗುಣನಿಯಂತ್ರಣವ್ಯವಸ್ಥೆ ಇರಬೇಕು. ಅಂದ ಮಾತ್ರಕ್ಕೆ ಭಾಷೆಯಲ್ಲಿ ಆಯಾ ಕಾಲದ ತುರ್ತಿಗನುಸರಿಸಿ ಹೊಸ ಪದಗಳು ಟಂಕಣೆಗೊಳ್ಳಬಾರದೆಂದಲ್ಲ. ನಮ್ಮ ನದಿ ಪಾತ್ರದೊಳಗೆ ಅನ್ಯಭಾಷಾ ಪ್ರವಾಹ ಹರಿದರೆ ತಪ್ಪಲ್ಲ. ಆದರೆ ನಮ್ಮ ನೀರಿನೊಂದಿಗೆ ಬೆರೆಯಬೇಕೇ ಹೊರತು ನಮ್ಮ ನೀರನ್ನು ಕೆಡಿಸಿ ರಾಡಿ ಮಾಡಬಾರದು ಅಷ್ಟೆ.

**– ಪ್ರೊ. ಜಿ. ವೆಂಕಟಸುಬ್ಬಯ್ಯ**

---

ಪ್ರತಿಯೊಂದು ಶಬ್ದದ ವ್ಯುತ್ಪತ್ತಿ, ಅದು ಬದಲಾವಣೆ ಹೊಂದಿದ ಬೇರೆ ಬೇರೆಯ ರೂಪಗಳು, ಸದ್ಯದಲ್ಲಿ ಅದು ಹೊಂದಿರುವ ರೂಪ, ಮಿಕ್ಕ ಶಬ್ದಗಳ ಜೊತೆಯಲ್ಲಿ ಹೋಲಿಸಿದರೆ, ಕಂಡುಬರುವ ಸಾಮ್ಯವೈಷಮ್ಯಗಳು ಮುಂತಾದುವನ್ನೆಲ್ಲ ಅಭ್ಯಾಸ ಮಾಡಬೇಕಾಗುತ್ತದೆ. ಆಗ ಯಾವುದಾದರೂ ಗಾದೆಗಳಲ್ಲಿ, ನುಡಿಗಟ್ಟುಗಳಲ್ಲಿ, ವಾಗ್ರೂಢಿಗಳಲ್ಲಿ ಅದರ ಸುಳಿವು ಕಾಣಬರುತ್ತದೆಯೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಇದೇ ಆಳವಾದ ಸಂಶೋಧನೆಯಾಗಬಹುದು.

– ಪ್ರೊ. ಜಿ. ವೆಂಕಟಸುಬ್ಬಯ್ಯ

ಅನುಬಂಧ ೧ :

# ಶಬ್ದಸಾಗರ : ಅಭಿನಂದನ ಗ್ರಂಥ

ಅರ್ತಿಕಜೆ, ಎ. ಬಿ.

ಪ್ರೊ. ಜಿ. ವೆಂಕಟಸುಬ್ಬಯ್ಯನವರಿಗೆ 2004ರಲ್ಲಿ ಸಲ್ಲಿಸಲಾಗಿದ್ದ ನುಡಿಗೌರವ ಗ್ರಂಥ 'ಶಬ್ದಸಾಗರ'. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶರ ಸಂಪಾದಕತ್ವದಲ್ಲಿ ಸಿದ್ಧಗೊಂಡ ಈ ಪುಸ್ತಕವು ನಾಡಿನ ೬೨ ಮಂದಿ ಹಿರಿಯ-ಕಿರಿಯ ಲೇಖಕರ ಬರೆಹಗಳಿಂದ ಪುಷ್ಟವಾಗಿದ್ದು ಜಿ.ವಿಯವರ ವ್ಯಕ್ತಿತ್ವ, ಸಾಧನೆ ಮತ್ತು ಬೋಧನೆಗಳಿಂದ ಸಮಗ್ರ ಚಿತ್ರಣವನ್ನು ಓದುಗರ ಮುಂದಿಡುತ್ತದೆ.

ಸಂಪಾದಕರು ಗುರುತಿಸಿದಂತೆ 'ಇದರಲ್ಲಿರುವ ಲೇಖನಗಳಲ್ಲಿ ಶ್ರದ್ಧೆ, ಪ್ರೀತಿ, ಗೌರವ, ವಿನಯಗಳು ತುಂಬಿವೆ' ಪ್ರಕಾಶಕ ಗೌರಿಸುಂದರ್ ಹೇಳುವಂತೆ ಪುಸ್ತಕವಲ್ಲಿ 'ಜಿ.ವಿ.ಅವರ ಬಹುಮುಖ ಪ್ರತಿಭೆಯ ಅನಾವರಣ' ನಡೆದಿದೆ. ಸಾಮಾನ್ಯವಾಗಿ ಇಂತಹ ಗ್ರಂಥಗಳಲ್ಲಿ ನುಸುಳುವ ಪುನರಾವರ್ತನೆ ಮತ್ತು ಸ್ತುತಿರೂಪದ ಅತ್ಯುಕ್ತಿ-ಗಳನ್ನು ಇಲ್ಲವಾಗಿಸಿ ಲೇಖನಗಳನ್ನು ಸಂಕಲಿಸಿದ ಮಲ್ಲೇಪುರಂ ಜಿ. ವೆಂಕಟೇಶ ಅವರ ಸಾಹಸ ನಿಜಕ್ಕೂ ಶ್ಲಾಘನೀಯ.

ಶಬ್ದಸಾಗರವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಇವನ್ನು ನುಡಿ ಗೌರವ, ನುಡಿಸಾಹಿತ್ಯ, ನುಡಿಸಂವಾದ ಮತ್ತು ನುಡಿಪೂಜೆ ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

**ನುಡಿಗೌರವ :**

ಜಿ.ವಿ.ಯವರನ್ನು ಹತ್ತಿರದಿಂದ ಕಂಡು ಅವರ ಸಜ್ಜನತೆ, ಸಾತ್ತ್ವಿಕತೆ, ಸಂಭಾವಿತತನ, ಸಂಘಟನಚಾತುರ್ಯ, ಅಧ್ಯಯನಶೀಲತೆ, ವಿನೋದಪ್ರವೃತ್ತಿ, ಶಬ್ದ ಪಾಂಡಿತ್ಯ, ಸಹೃದಯತೆ, ಜೀವನಪ್ರೀತಿ, ಕ್ರಿಯಾಶೀಲತೆ, ಪುಸ್ತಕಪ್ರೀತಿ, ಶಿಷ್ಯವಾತ್ಸಲ್ಯ, ಮಾರ್ದವತೆ, ಬಹುಶ್ರುತತ್ವ ಮುಂತಾದ ಗುಣಗಳನ್ನು ಗುರುತಿಸಿಕೊಂಡ ಇಪ್ಪತ್ತೇಳು ಮಂದಿ ಹಿರಿಯ ವಿದ್ವಾಂಸರು, ಲೇಖಕರು ಮತ್ತು ಪತ್ರಕರ್ತರು 'ನುಡಿಗೌರವ' ವಿಭಾಗದಲ್ಲಿ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ.

ಈ ಬರಹಗಾರರು ಉಪಯೋಗಿಸಿದ 'ಮಾಗಿದ ಜೀವಿ', 'ಸೌಭಾಗ್ಯವಂತ', 'ಚಿರತರುಣ', 'ಶಬ್ದಕಲ್ಪದ್ರುಮ', 'ಗುರುಬ್ರಹ್ಮ', 'ಸರಸಜೀವಿ', 'ನಾಡೋಜ', 'ಹಿರಿಯಣ್ಣ', 'ದಿಗ್ಗಜ', ಮುಂತಾದ ವಿಶೇಷಣಗಳು ಪ್ರೊ. ವೆಂಕಟಸುಬ್ಬಯ್ಯನವರ ಹಿರಿಮೆಗರಿಮೆಗಳಿಗೆ ಸಾಕ್ಷಿಯಾಗಿವೆ.

ಶಾ. ಮಂ. ಕೃಷ್ಣರಾಯರು ಜಿ.ವಿ.ಯವರ ಆರೋಗ್ಯದ ಗುಟ್ಟಿನ ಬಗೆಗೆ ಹೀಗೆ ಬರೆದಿದ್ದಾರೆ: 'ಅವರ ಆಹಾರ, ವ್ಯಾಯಾಮ, ನಿದ್ದೆಗಳಿಗಿಂತ ಅವರ ಧರ್ಮಪತ್ನಿಯ ಪಾತ್ರ ದೊಡ್ಡದು ಎಂದು ನನಗೆ ಅನಿಸುತ್ತದೆ. ಇಂಥ ಅಸಾಧ್ಯ ಸಹನೆ, ಅಧ್ಯಯನದ ಆಳ ಬರಲು ಅವರ ಬಾಳ ಸಂಗಾತಿ ಅವರನ್ನು ಮುಕ್ತವಾಗಿ ಬಿಟ್ಟಿರುವುದೇ ಕಾರಣವೆನಿಸುತ್ತದೆ. ಅಲ್ಲದೆ ಪೂರ್ವಗ್ರಹವಿಲ್ಲದ ನಿರ್ಮಲಮನಸ್ಸು, ಹೃದಯವಂತಿಕೆ, ತನಗಿಂತ ಕಿರಿಯರಿಲ್ಲ ಎಂಬ ಭಾವನೆ, ಅತಿ ಆಸೆ–ಆಕಾಂಕ್ಷೆಗಳಿಲ್ಲದ ಜೀವನದೃಷ್ಟಿ ಅವರ ಗೆಲುವಿನ ಗುಟ್ಟು ಅನಿಸುತ್ತದೆ.'

ನುಡಿಗೌರವ ಸಲ್ಲಿಸುವ ಸಂದರ್ಭದಲ್ಲಿ ಪ್ರೊ. ಸುಮತೀಂದ್ರ ನಾಡಿಗರು 'ಇಗೋ ಕನ್ನಡ' ಸಾಮಾಜಿಕ ನಿಘಂಟುವಿನಲ್ಲಿ ಜಿ.ವಿ.ಯವರ ಪದವಿಶ್ಲೇಷಣೆ ಹುಟ್ಟಿಸಿದ ಅನುಮಾನ ಹಾಗೂ ಭಿನ್ನಾಭಿಪ್ರಾಯಗಳನ್ನು ಉಲ್ಲೇಖಿಸಲು ಮರೆಯಲಿಲ್ಲ. ಶಬ್ದಗಳ ಅರ್ಥಾನ್ವೇಷಣೆಯ ಯಾತ್ರೆಯಲ್ಲಿ ವೆಂಕಟಸುಬ್ಬಯ್ಯನವರು ಹಾಕಿಕೊಟ್ಟ ಮೇಲ್ಪಂಕ್ತಿಗೆ ಇದು ಪೂರಕವಾಗಿದೆ.

**ನುಡಿಸಾಹಿತ್ಯ :**

ಜಿ.ವಿ.ಯವರು ವಿದ್ವತ್ತೆ ಮತ್ತು ಸಾಹಿತ್ಯಕ್ಷೇತ್ರಗಳಿಗೆ ಸಲ್ಲಿಸಿದ ಕೊಡುಗೆಗಳ ವಿಶ್ಲೇಷಣೆಗೆ 'ನುಡಿಸಾಹಿತ್ಯ' ಭಾಗವು ಮೀಸಲಾಗಿದೆ. ನಿಘಂಟುರಚನೆ ಮತ್ತು ನಿಘಂಟು ಶಾಸ್ತ್ರಸಂಬಂಧಿ ಕೊಡುಗೆಗಳನ್ನು ನಾಲ್ವರು ವಿದ್ವಾಂಸರು ವಿಮರ್ಶಿಸಿದ್ದಾರೆ. ಪರಾಮರ್ಶನ, ಭಾಷಾಂತರಸಾಹಿತ್ಯ, ಕನ್ನಡ ಶಾಸನಶಾಸ್ತ್ರ, ಮುದ್ದಣಭಂಡಾರ, ಇಣುಕುನೋಟ, ಕನ್ನಡವನ್ನು ಉಳಿಸಿ ಬೆಳೆಸಿದವರು, ವ್ಯಕ್ತಿಚಿತ್ರ, ಅನುಕಲ್ಪನೆ, ನಾಯಕಮಣಿಗಳು, ಶೈಕ್ಷಣಿಕ ಬರೆಹಗಳು ಹಾಗೂ ಮಕ್ಕಳ ಸಾಹಿತ್ಯದ ಬಗೆಗೆ ಹನ್ನೆರಡು ಮಂದಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಇವರೆಲ್ಲಾ ಆಯಾ ಕ್ಷೇತ್ರಗಳಲ್ಲಿ ಪರಿಣತರಾಗಿರುವುದರಿಂದ ಜಿ.ವಿಯವರ ಕೊಡುಗೆಗಳ ವೈಶಿಷ್ಟ್ಯ ಹಾಗೂ ಮೌಲ್ಯಗಳನ್ನು ಕಂಡರಿಯುವಲ್ಲಿ ಯಶಸ್ವಿಯಾಗಿದ್ದಾರೆ. ಉದಾಹರಣೆಗೆ 'ಇಗೋ ಕನ್ನಡ'ದ ಕುರಿತು ಡಾ. ಎಸ್. ಎಸ್. ಅಂಗಡಿಯವರು ಹೀಗೆ ಹೇಳಿದ್ದಾರೆ – 'ಸಾಮಾಜಿಕ ನಿಘಂಟು ಎಂಬ ಪದ ಅರ್ಥಪೂರ್ಣವಾಗಿದೆ. ಶಬ್ದಕ್ಕೆ ಅರ್ಥ ಕೊಡುವುದು ಮಾತ್ರ ಜಿ. ವೆಂ. ಅವರ ಉದ್ದೇಶವಲ್ಲ, ಪ್ರತಿಯೊಬ್ಬ ಭಾಷಿಕನೂ ತಾನು ವಾಸಿಸುವ ಭಾಷಾಸಮುದಾಯದ ಅಂಗವಾಗಿ ಆ ಭಾಷಾಸಮುದಾಯದ ಪ್ರಭೇದವನ್ನು ಬಳಸುತ್ತಿರುತ್ತಾನೆ. ಆಗ ಅಭಿವ್ಯಕ್ತವಾಗುವ ಪದ, ಪದಪುಂಜ, ವಾಕ್ಯ, ಗಾದೆ, ನುಡಿಗಟ್ಟು, ಇವುಗಳ ಮೂಲವನ್ನು ಶೋಧಿಸಿ, ಅವು ಬಳಕೆಯಲ್ಲಿ ಹೇಗೆಲ್ಲ ಬದಲಾವಣೆಗೆ ಒಳಗಾದುವು ಹಾಗೂ ಅವುಗಳ ಅರ್ಥವಿಶೇಷತೆಯನ್ನು ವಿವರಿಸುವುದು ಈ ನಿಘಂಟಿನ ಉದ್ದೇಶವಾಗಿದೆ. ಓದುಗರ ಶಬ್ದಶಕ್ತಿಯನ್ನು ಬೆಳೆಸುವಲ್ಲಿ, ಶಬ್ದಗಳ ಅರ್ಥಸ್ವರೂಪ ತಿಳಿಯುವಲ್ಲಿ ಶಬ್ದಾರ್ಥವನ್ನು ಕುರಿತು ಜಿಜ್ಞಾಸೆ ಬೆಳೆಸುವಲ್ಲಿ 'ಇಗೋ ಕನ್ನಡ' ನೆರವಾಗುತ್ತದೆ.'

**ನುಡಿ ಸಂವಾದ :**

ಮೂರನೆಯ ಭಾಗದಲ್ಲಿ ವೆಂಕಟಸುಬ್ಬಯ್ಯನವರೊಂದಿಗೆ ಹಿರಿಯ ಸಾಹಿತಿಗಳು - ವಿದ್ವಾಂಸರು, ನಡೆಸಿದ ಐದು ಸಂದರ್ಶನಗಳಿವೆ. ನಿಘಂಟುರಚನೆ, ಶಿಕ್ಷಣ, ಭಾಷಾ ಬೋಧನೆ, ಏಕೀಕರಣ, ಸಂಸ್ಕೃತಿ, ಜಾಗತೀಕರಣ, ಕನ್ನಡ ಬರವಣಿಗೆ, ಅಭಿಮಾನ ಶೂನ್ಯತೆ, ಕನ್ನಡದ ಸ್ಥಿತಿ-ಗತಿ-ಭವಿಷ್ಯ, ವಿದ್ವತ್ಕೃಷಿ, ಶಾಸ್ತ್ರಾರ್ಥಚಿಂತನೆ, ಸಾಹಿತ್ಯ ಪರಿಷತ್ತು, ಅಂಕಣಬರೆಹ ಮುಂತಾದ ಹಲವಾರು ವಿಷಯಗಳ ಕುರಿತು ಜಿ.ವಿ. ಯವರ ಅನಿಸಿಕೆಗಳನ್ನು ಅವರದೇ ಮಾತುಗಳಲ್ಲಿ ತಿಳಿಸಿಕೊಡುವ ಪ್ರಯತ್ನ ಇಲ್ಲಿದೆ.

ಬಿ.ಎಸ್. ವೆಂಕಟಲಕ್ಷ್ಮಿಯವರು ಲಕ್ಷ್ಮೀ ವೆಂಕಟಸುಬ್ಬಯ್ಯನವರೊಂದಿಗೆ ನಡೆಸಿದ ಸಂದರ್ಶನ ತುಂಬ ಸ್ವಾರಸ್ಯಕರವಾಗಿದೆ. 'ನಾನು ಸಂಸಾರ ಹೂಡಿದ ಮೊದಲನೆಯ ದಿನದಿಂದಲೂ ಇವರ ಓದು ಬರಹಕ್ಕೆ ತೊಂದರೆಯಾಗದಿರಲೆಂದು ಪ್ರಯತ್ನಿಸುತ್ತಲೇ ಬಂದಿದ್ದೇನೆ. ಮನೆಯ ತಾಪತ್ರಯಗಳನ್ನು ಹೇಳಿ ಇವರನ್ನು ಬೇಸರ ಪಡಿಸಕೂಡದು ಅನ್ನೋದೇ ನನ್ನ ಜೀವನದ ಧ್ಯೇಯ. ಇವರ ಸಹನೆ, ಸಂಯಮ, ಉದಾರಬುದ್ಧಿ, ನನ್ನ ಮೇಲೂ ಪ್ರಭಾವ ಬೀರಿವೆ. ನಾವಿಬ್ಬರೂ ಇಷ್ಟು ವರ್ಷಗಳಲ್ಲಿ ಜಗಳ ಆಡಿರುವುದು, ಒಬ್ಬರ ಮೇಲೊಬ್ಬರು ಕೋಪ ಮಾಡಿಕೊಂಡಿರುವುದು ಇಲ್ಲವೇ ಇಲ್ಲ' ಎನ್ನುವ ಲಕ್ಷ್ಮಿಯವರ ಮಾತುಗಳು ಆದರ್ಶದಾಂಪತ್ಯದ ಧ್ಯೇಯವಾಕ್ಯಗಳೇ ಆಗಿವೆ.

'ಹಿಂದೆಯೂ ನಾವಿಬ್ಬರು ಎಂದೂ ದುರಾಸೆಪಟ್ಟವರಲ್ಲ. ಈಗಲೂ ಹೆಚ್ಚಿನ ಆಸೆಯಿಲ್ಲ. ಮಕ್ಕಳು ಮುಂದೆ ಬಂದಿದ್ದಾರೆ. ಮೊಮ್ಮಕ್ಕಳೂ ಮರಿಮಕ್ಕಳೂ ನಮ್ಮ ವಿಚಾರದಲ್ಲಿ ತುಂಬಾ ವಿಶ್ವಾಸ, ಗೌರವವನ್ನು ಇಟ್ಟುಕೊಂಡಿದ್ದಾರೆ. ನಾವು ಹಲವಾರು ವರ್ಷಗಳು ಪಟ್ಟ ಕಷ್ಟಕ್ಕೆ ಈಗ ಪ್ರತಿಫಲ ದೊರಕಿದೆ.' ಸಂತೃಪ್ತಗೃಹಿಣಿಯ ಬಾಯಿಂದ ಮಾತ್ರ ಇಂತಹ ಮಾತು ಬರುವುದಕ್ಕೆ ಸಾಧ್ಯ.

**ನುಡಿಪೂಜೆ :**

ನಾಲ್ಕನೆಯ ಭಾಗ 'ನುಡಿಪೂಜೆ'. ಇದರಲ್ಲಿ ನಲುವತ್ತೊಂದು ಲೇಖಕರು ಕನ್ನಡದಲ್ಲೂ, ಇಬ್ಬರು ಇಂಗ್ಲಿಷಿನಲ್ಲೂ ಜಿ. ವಿ.ಯವರ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ವಿವಿಧ ಮಗ್ಗುಲುಗಳಿಂದ ಪರಿಚಯಿಸಿಕೊಟ್ಟಿದ್ದಾರೆ. ವಿಶೇಷವೆಂದರೆ ಅನ್ಯತ್ರ ಉಲ್ಲೇಖಿಸಲ್ಪಡದ ಅವರ ಜೀವನದ ಸ್ವಾರಸ್ಯಕರ ಪ್ರಸಂಗಗಳಲ್ಲಿ ಹಲವನ್ನು ಈ ಲೇಖಕರು ನೆನಪಿಸಿಕೊಟ್ಟಿದ್ದಾರೆ.

'ಗಂಜಾಮಿನಲ್ಲಿ ಜನಿಸಿದ ಜಿ. ವಿ. ಅವರು ಗಂಜಿ ಗುಟುಕರಿಸಿಕೊಂಡು ಬೆಳೆದವರು. ಬಡತನದ ಬೇಗೆಯಲ್ಲಿ ಬೆಂದು ಬದುಕಿದವರು. ಹೊಟ್ಟೆ ತುಂಬ ಉಂಡವರಲ್ಲ. ಮೆತ್ತನೆಯ ಹಾಸಿಗೆಯನ್ನು ಕಂಡವರಲ್ಲ - ವಿದ್ಯಾರ್ಥಿಜೀವನ ಮುಗಿಯುವವರೆಗೆ' (ಬಿ. ಎಸ್. ಕೇಶವ ರಾವ್).

'ಜಿ. ವಿ. ಅರುವತ್ತರ ಶಾಂತಿ ಆಚರಿಸಿಕೊಳ್ಳುವುದಿಲ್ಲವೇ ಎಂದು ಕೇಳಿದಾಗ ಲಕ್ಷ್ಮಮ್ಮ ಹೇಳಿದರಂತೆ - ನಮಗೆ ಅದರ ಅವಶ್ಯಕತೆ ಕಾಣಿಸಲಿಲ್ಲ. ಇಷ್ಟೆಲ್ಲ ದಿವಸ.

ವರ್ಷ, ಅತಿಥಿಸತ್ಕಾರ ನಡೆಸಿ ಅದರಲ್ಲಿ ಸುಖ ಕಂಡಿದ್ದೇವೆ. ಅದಕ್ಕಿಂತ ಹೆಚ್ಚಿನ ಶಾಂತಿ ಏನಿದೆ? (ಎಚ್. ಎಸ್. ಪಾರ್ವತಿ).

'ಕ್ರಮೇಣ ಹುಡುಗನ ತಲೆಯ ಜುಟ್ಟು ಮಾಯವಾಗಿ ಕ್ರಾಪ್ ಬಂದಿತ್ತು. ಹುದುಗಿಸಿಕೊಳ್ಳಲು ಕೂದಲು ಇಲ್ಲವಾದ್ದರಿಂದ ಟೋಪಿಯೂ ಮಾಯವಾಗಿತ್ತು. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎಂಬಂತೆ ಇತರ ಮಿತ್ರರೂ ಕ್ರಾಪ್ ಬಿಡುವಂತೆ ಮಾಡುವಲ್ಲಿ ಈ ತರುಣ ಯಶಸ್ವಿಯಾಗಿದ್ದ..... ಈ ಹುಡುಗನ ಚೇಷ್ಟೆ ತಾಳಲಾರದೆ ತೀನಂಶ್ರೀಯವರೂ ಜುಟ್ಟಿಗೆ ತಿಲಾಂಜಲಿ ಹಾಡಿದರು' (ಡಾ. ವಿಜಯಾ).

ಜಿ. ವಿ. ಮಾನಸ ಮತ್ತು ಜಿ. ಎ. ರೋಹಿಣಿ ಅವರಂತೂ 'ಮನೆಯೊಳಗಿನ ಜಿ. ವಿ.'ಯವರನ್ನು ತುಂಬ ರೋಚಕವಾಗಿ ವರ್ಣಿಸಿದ್ದಾರೆ. ಶಬ್ದಬ್ರಹ್ಮನ ಗಂಭೀರ ಕೆಲಸ ಕಾರ್ಯಗಳ ನಡುವೆ ಇಂತಹ ನಗು, ತುಂಟಾಟ, ಮುಗ್ಧತೆಗಳು ಇರುವುದಕ್ಕೆ ಸಾಧ್ಯವೆ? ನುಡಿಪೂಜೆಯನ್ನು ಓದಿದಾಗ ಇದು ಮನವರಿಕೆಯಾಗುತ್ತದೆ.



ಅನುಬಂಧ ೨ :

# ಶಬ್ದಸಾಗರದ ಲೇಖನಗಳು

ಶಬ್ದಸಾಗರ, ಪ್ರೊ. ಜಿ. ವೆಂಕಟಸುಬ್ಬಯ್ಯ ನುಡಿಗೌರವ, ಸಂ. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ (ಸುಂದರ ಪ್ರಕಾಶನ, ಚಿತ್ರಶ್ರೀ ಕಲಾಮಂದಿರ ೫ನೇ ತಿರುವು, ಅ. ನ. ಸುಬ್ಬರಾವ್ ರಸ್ತೆ, ಹನುಮಂತನಗರ, ಬೆಂಗಳೂರು – 560019) ಈ ಕೃತಿಯ ಲೇಖನಗಳ ಅನುಕ್ರಮವನ್ನು ಮುಂದೆ ನೀಡಲಾಗಿದೆ.

## ಭಾಗ ೨ – ನುಡಿಸಾಹಿತ್ಯ



## ಭಾಗ ೩ – ನುಡಿಸಂವಾದ

ರಾಮಮೂರ್ತಿ
೪೮. ಸಾಹಿತ್ಯ 'ಜಿ. ವಿ.'ಯೊಡನೆ / ಎಸ್. ಎಲ್. ಶ್ರೀನಿವಾಸ ಮೂರ್ತಿ
೪೯. ಲಕ್ಷ್ಮೀ ವೆಂಕಟಸುಬ್ಬಯ್ಯ / ಬಿ. ಎಸ್. ವೆಂಕಟಲಕ್ಷ್ಮಿ

## ಭಾಗ – ೪ ನುಡಿಪೂಜೆ

೫೦. ನಿಘಂಟು ವಿದ್ವಾಂಸ / ದೊ. ಶ್ರೀ. ಶೇಷರಾಘವಾಚಾರ್
೫೧. ಶಬ್ದಾರ್ಥಸಾಧಕ / ಡಾ. ವಿ. ಗೋಪಾಲಕೃಷ್ಣ
೫೨. ಕನ್ನಡಸಾಹಿತ್ಯ ಪರಿಷತ್ತು ಮತ್ತು ಜಿ. ವಿ. / ಬಾಬು ಕೃಷ್ಣಮೂರ್ತಿ
೫೩. ಪ್ರೊ. ಜಿ.ವಿ. ಮತ್ತು ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ / ಡಿ.ಎಸ್. ಸುಧೀಂದ್ರ
೫೪. ಜಿ.ವಿ. ಜೀವಕ್ಕೆ ಆಯ್ತು ತೊಂಬತ್ತು / ಬಿ. ಎಸ್. ಕೇಶವರಾವ್
೫೫. ಸಾಹಿತ್ಯಜೀವಿ / ಎಚ್. ಎಸ್. ಪಾರ್ವತಿ
೫೬. ನಾ ಕಂಡ ಆತ್ಮೀಯ / ಪ್ರೇಮಾ ಭಟ್
೫೭. ಮಾರ್ಗದರ್ಶಿ / ಕನಕಾ ಮೂರ್ತಿ
೫೮. ಪ್ರೊ. ಜಿ. ವೆಂಕಟಸುಬ್ಬಯ್ಯನವರು / ಜಯಾ ರಾಜಶೇಖರ್
೫೯. ಸಲುಗೆ ಬಿನ್ನಪವು.... / ಡಾ. ವಿಜಯಾ
೬೦. ಪೂಜ್ಯ ಜಿ. ವೆಂಕಟಸುಬ್ಬಯ್ಯ / ನುಗ್ಗೆಹಳ್ಳಿ ಪಂಕಜ
೬೧. ಸುಸಂಸ್ಕೃತ ಕುಟುಂಬ / ಎ. ಪಂಕಜ
೬೨. ನಾ ಕಂಡ 'ಜಿ.ವಿ' / ಡಾ. ವರದಾ ಶ್ರೀನಿವಾಸ್
೬೩. ತುಂಬಿದ ಕೊಡ / ಪ್ರೊ. ದೊಡ್ಡ ರಂಗೇಗೌಡ
೬೪. ಉತ್ಸಾಹದ ಚಿಲುಮೆ ಪ್ರೊ. ಜಿ. ವಿ. / ಕೆ. ಉಷಾ ಪಿ ರೈ
೬೫. ನಿಘಂಟುಬ್ರಹ್ಮ / ಇಂದಿರಾ ಹೆಗಡೆ
೬೬. ಶಬ್ದಜೀವಿ / ಅರ್ಜುನ ಕೊರಟಿಕರ
೬೭. ಪ್ರೊ. ಜಿ. ವಿ., ಪರ್ವತವಾಣಿ ಮತ್ತು ನಾನು / ಕೆ. ಎಂ. ವಿಜಯಲಕ್ಷ್ಮಿ
೬೮. 'ಇಗೋ' ಕನ್ನಡದ ಶಬ್ದರ್ಷಿ / ಅನಂತ ಕಲ್ಲೋಳ
೬೯. ಕಿರಿಯನು ಕಂಡದ್ದು / ಆರ್. ವೈದ್ಯನಾಥ್
೭೦. ನನಗೊದಗಿದವಕಾಶ / ರಾಜ್ಯಶ್ರೀ ಸತೀಶ್
೭೧. ಇಗೋ ನಮ್ಮ ನಮನ / ಶಶಿಕಲಾ ವೀರಯ್ಯ ಸ್ವಾಮಿ
೭೨. ಇಗೋ ಎಲ್ಲೆಲ್ಲೋ ನಂ 'ಜೀವಿ' / ಡಾ. ಪಾ. ನ. ಮಯ್ಯ
೭೩. ಪ್ರೊ. ಜಿ. ವಿ. 'ಸ್ನೇಹಜೀವಿ' / ಡಾ. ಟಿ. ಸಿ. ಪೂರ್ಣಿಮಾ
೭೪. ಕೊಂಕಣ ಸುತ್ತಿ ಮೈಲಾರ / ಡಾ. ಸಿ. ಆರ್. ಎ. ರಾವ್
೭೫. ಪ್ರೊ. ಜಿ. ವಿ. ನಾನು ಕಂಡಂತೆ / ಡಾ. ಕೆ. ಎಸ್. ಪವಿತ್ರ
೭೬. ಉದಯೋನ್ಮುಖರ ಬಗ್ಗೆ ಪ್ರೊ. ಜಿ. ವೆಂ. ಕಾಳಜಿ /
ದಿವಾಕರ ರಾವ್ ನಾಡಿಗೇರ
೭೭. ಜಿ. ವಿ.ಯವರ ಬೋಧನಮಾರ್ಗ / ಡಿ. ಎಸ್. ಹನುಮಂತರಾವ್
೭೮. ಜಿ. ವಿ. ಮತ್ತು ನಾನು / ಕೆ. ನಾಗೇಶರಾವ್

ಅನುಬಂಧ ೩ :

# ಜೀವನ ಪರಿಚಯ

## ಜನನ : 23–8–1913

**ಮನೆತನ :**

ತಂದೆ ಗಂಜಾಂ ತಿಮ್ಮಣ್ಣಯ್ಯ (ಅರಮನೆಯ ವಿದ್ವಾಂಸರು) ಸಂಸ್ಕೃತ ಕನ್ನಡಗಳಲ್ಲಿ ದೊಡ್ಡ ವಿದ್ವಾಂಸರು ಮತ್ತು ವೇದೋಪನಿಷತ್ತುಗಳಲ್ಲಿ ಪಾರಂಗತರು. 'ಪುರಾಣ ಕಥಾವಳಿ' ಮಾಸಪತ್ರಿಕೆಯನ್ನು ಸ್ಥಾಪಿಸಿ ಅದರಲ್ಲಿ ಶಿವಮಹಾಪುರಾಣ, ವಿಷ್ಣುಪುರಾಣ ಮುಂತಾದ ಪುರಾಣಗಳನ್ನು ಅನುವಾದ ಮಾಡಿ ಪ್ರಕಟಿಸಿದರು. 'ರಘುವೀರ ಚರಿತೆ' ಎಂಬ ನಾಟಕವನ್ನು ರಚಿಸಿದ್ದರು. 'ಮಾಲತೀ ಮಾಧವ' ನಾಟಕವನ್ನು ಅನುವಾದ ಮಾಡಿದ್ದರು.

**ವಿದ್ಯಾಭ್ಯಾಸ**

ಕನ್ನಡ ಎಂ. ಎ. ಪದವಿ (1937) : ಮೈಸೂರಿನ ಮಹಾರಾಜ ಕಾಲೇಜಿನಿಂದ ಪ್ರಥಮ ಸ್ಥಾನಕ್ಕಾಗಿ ಕೇಣಿ ಸಿದ್ದಪ್ಪ ಸುವರ್ಣ ಪದಕ ಮತ್ತು ಹೊನ್ನ ಶೆಟ್ಟಿ ಬಹುಮಾನ : ಬಳಿಕ ಬಿ.ಟಿ ಪದವಿ (1939)

**ಕಾರ್ಯಕ್ಷೇತ್ರಗಳು** : ಶಿಕ್ಷಣ, ಸಂಶೋಧನೆ, ಅನುವಾದ, ವಿಮರ್ಶೆ, ನಿಘಂಟುಗಳ ನಿರ್ಮಾಣ ಮತ್ತು ಶಿಕ್ಷಣ–ಸಾಹಿತ್ಯ ಸಂಸ್ಥೆಗಳ ನಿರ್ವಹಣೆ.

**ಅ) ಶಿಕ್ಷಣಕ್ಷೇತ್ರ :**

| | |
|---|---|
| 1939–43 | ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕ |
| 1943–72 | ಬೆಂಗಳೂರು ವಿಜಯ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ |
| 1972–73 | ವಿಜಯಾ ಸಂಜೆ ಕಾಲೇಜಿನ ಪ್ರಿನ್ಸಿಪಲ್ 23–8–73ರಂದು ನಿವೃತ್ತಿ |
| 1968–73 | ರಾಷ್ಟ್ರೀಯ ವಿದ್ಯಾಲಯ ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯದಲ್ಲಿ ಬೋಧನಮಾರ್ಗಗಳ ವಿಶೇಷಪ್ರಾಧ್ಯಾಪಕ |
| 1971–80 | ಭಾರತ ಶಿಕ್ಷಣ ಸಂಸ್ಥೆಯ (ಬಿ.ಇ.ಎಸ್) ಶಿಕ್ಷಣ ಮಹಾವಿದ್ಯಾಲಯದಲ್ಲಿ ಬೋಧನಮಾರ್ಗಗಳ ವಿಶೇಷಪ್ರಾಧ್ಯಾಪಕ |
| 1960–64 | ಮೈಸೂರು ವಿಶ್ವವಿದ್ಯಾನಿಲಯದ ಅಕಾಡಮಿಕ್ ಕೌನ್ಸಿಲಿನ ಸದಸ್ಯ |
| 1964–69 | ಬೆಂಗಳೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯ |
| 1964–69 | ಬೆಂಗಳೂರು ವಿಶ್ವವಿದ್ಯಾಲಯದ ಅಕೆಡೆಮಿಕ್ ಕೌನ್ಸಿಲ್ ಸದಸ್ಯ |
| 1964–67 | ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಪರೀಕ್ಷಾ ಸಮಿತಿಯ ಅಧ್ಯಕ್ಷ |

**ಆ) ನಿಘಂಟು ಕ್ಷೇತ್ರ :**

1973ರಿಂದ 1992ರ ವರೆಗೆ ಕನ್ನಡ-ಕನ್ನಡ ಬೃಹತ್ ಕೋಶದ ಪ್ರಧಾನ ಸಂಪಾದಕ. ಕರ್ನಾಟಕ ಸರಕಾರವು ಒಂದುಕೋಟಿ ರೂಪಾಯಿಗಳ ಅನುದಾನವನ್ನು ನೀಡಿರುವ ಈ ಯೋಜನೆಯ ಅಧಿಕಾರವನ್ನು ವಹಿಸಿಕೊಂಡ ಮೇಲೆ ತಡವಾಗಿದ್ದ ಕೋಶದ ಪ್ರಕಟಣೆಗೆ ವೇಗವನ್ನು ತಂದು 1992ರ ವೇಳೆಗೆ ೭ ಸಂಪುಟಗಳನ್ನು ಸಿದ್ಧಮಾಡಿ ಕೊಟ್ಟಿದ್ದಾರೆ. ೯೦೦೦ ಪುಟಗಳ ೮ ಸಂಪುಟಗಳ ನಿಘಂಟು ಇತ್ತೀಚೆಗೆ ಪುನರ್ಮುದ್ರಿತವಾಗಿದೆ.

**ಇ) ಸಾಹಿತ್ಯ ಕ್ಷೇತ್ರ :**

| | |
|---|---|
| 1954–56 | ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ |
| 1964–69 | ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ |
| 1964–69 | ಕನ್ನಡ ನುಡಿಯ ಸಂಪಾದಕ |
| 1965–67 | ಕನ್ನಡ ವಿಶ್ವಕೋಶ ಸಮಿತಿಯ ಸದಸ್ಯ |
| 1954–95 | ಕನ್ನಡ-ಕನ್ನಡ ಕೋಶ ಸಮಿತಿಯ ಸದಸ್ಯ |
| 1973–80 | ಕನ್ನಡ-ಕನ್ನಡ ಕೋಶದ ಪ್ರಧಾನ ಸಂಪದಾಕ |
| 1980–82 | ಕನ್ನಡ-ಕನ್ನಡ ಕೋಶ ಸಮಿತಿಯ ಅಧ್ಯಕ್ಷ ಹಾಗೂ ಪ್ರಧಾನ ಸಂಪಾದಕ |
| 1965–70 | ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯ |
| 1965–70 | ಕೇಂದ್ರ ಸರಕಾರದ ಭಾರತೀಯ ಭಾಷಾ ಸಮಿತಿಯಲ್ಲಿ ಕನ್ನಡದ ಪ್ರತಿನಿಧಿ |
| 1968 | ಕನ್ನಡ ಸಾಹಿತ್ಯ ಪರಿಷತ್ತಿಗೆ ನೂತನ ಅಂಗರಚನೆಯನ್ನು ಒದಗಿಸಿ ಅದಕ್ಕೆ ಅಖಿಲಕರ್ನಾಟಕ ಪ್ರಾತಿನಿಧ್ಯವನ್ನು ಒದಗಿಸಿದುದು |
| 1970–85 | ಆಂಧ್ರಪ್ರದೇಶದ ತೆಲುಗು ಅಕಾಡೆಮಿಯ 'ಶಬ್ದಸಾಗರ'ದ ಸಮಾಲೋಚನೆ ಸಮಿತಿಯ ಸದಸ್ಯ |
| 1972 | ಚಿಕ್ಕಮಗಳೂರು ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ |
| 1972 | ಬೀದರ್ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ |
| 1973–90 | ಭಾರತೀಯ ನಿಘಂಟುಕಾರರ ಸಂಘದ ಉಪಾಧ್ಯಕ್ಷ |
| 1979–89 | ಕರ್ನಾಟಕ ಜಾನಪದ ಟ್ರಸ್ಟಿನ ಆಡಳಿತ ಮಂಡಳಿಯ ಸದಸ್ಯ |
| 1982 | ಮುದ್ದಣ ಭಂಡಾರ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ |
| 1990ರಿಂದ | ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನ ಕೇಂದ್ರದ ಆಡಳಿತ ಮಂಡಳಿಯ ಸದಸ್ಯ |
| 1991 | 1991ನೇ ವರ್ಷದ ಕರ್ನಾಟಕ ರಾಜ್ಯೋತ್ಸವಪ್ರಶಸ್ತಿ |
| 1992ರಿಂದ | ಇನ್ಸ್ಟಿಟ್ಯೂಟ್ ಆಫ್ ಏಷ್ಯನ್ ಸ್ಟಡೀಸ್, ಚೆನ್ನೈ ಇವರ ಬಹುಭಾಷಾ ನಿಘಂಟಿಗೆ (ಕನ್ನಡ ಇಂಗ್ಲಿಷ್-ತಮಿಳು-ಜಾಪನೀಸ್) ಸಲಹೆಗಾರ. |
| " | 'ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವ ಸದಸ್ಯರು, 'ಕರ್ನಾಟಕಾಲೋಚನ' ಪ್ರಧಾನ ಸಂಪಾದಕರು. |

| | |
|---|---|
| 1991ರಿಂದ | ಅಧ್ಯಕ್ಷ, ಜನಪ್ರಿಯ ಸಾಹಿತ್ಯ ಪ್ರಕಟಣಾ ಸಮಿತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ರಾಜ್ಯ ಸರಕಾರ |
| 1992–1994 | ಅಧ್ಯಕ್ಷ – 'ಪಂಪಪ್ರಶಸ್ತಿ' ಆಯ್ಕೆ ಸಮಿತಿ |
| 1992 | ಮಾಂಟ್ರಿಯಲ್, ಕೆನಡದಲ್ಲಿ ನಡೆದ 'ಕನ್-ಅಮ್' ಕನ್ನಡ ಸಮ್ಮೇಳನದಲ್ಲಿ ಮುಖ್ಯ ಅತಿಥಿ |
| 1992 | ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ 'ಪ್ರೊ. ಬಿ. ಶಿ. ಬಸವನಾಳ ಮೂಲಭೂತ ವಿಚಾರೋಪನ್ಯಾಸ ಮಾಲೆ'ಯ ಮೊದಲ ಉಪನ್ಯಾಸ |
| 1992 | 1992ನೇ ಸಾಲಿನಲ್ಲಿ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ |
| 1994 | ಅಂತಾರಾಷ್ಟ್ರೀಯ ನಿಘಂಟು ಸಮ್ಮೇಳನದಲ್ಲಿ ಮುಖ್ಯ ಅತಿಥಿ (ಧಾರವಾಡ) |
| 1994 | ಧರ್ಮಸ್ಥಳ ಶ್ರೀಕ್ಷೇತ್ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ |
| 1995 | 'ಸೇಡಿಯಾಪು ಪ್ರಶಸ್ತಿ' ಸೇಡಿಯಾಪು ಕೃಷ್ಣ ಭಟ್ಟರ ಹೆಸರಿನಲ್ಲಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರ, ಉಡುಪಿ. |
| 1996 | ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಪ್ರೊ. ಮರಿಯಪ್ಪ ಭಟ್ಟ ಸ್ಮಾರಕ ಉಪನ್ಯಾಸಗಳು |
| 1998 | 'ಶಂಬಾ ಪ್ರಶಸ್ತಿ', ಶಂ. ಬಾ. ಜೋಷಿಯವರ ಹೆಸರಿನಲ್ಲಿ ಕರ್ನಾಟಕ ಸಂಘ, ಶಿವಮೊಗ್ಗ ಅವರು ನೀಡುವ ಪ್ರಶಸ್ತಿ – ಪ್ರೊ. ಎ. ಸಿ. ದೇವೇಗೌಡರ ಸ್ಮಾರಕ ಉಪನ್ಯಾಸ |
| 1999 | 'ಶಿವರಾಮ ಕಾರಂತ ಪ್ರಶಸ್ತಿ', ಶಿವರಾಮ ಕಾರಂತ ಪ್ರತಿಷ್ಠಾನ ಮೂಡುಬಿದರೆ |
| 2000 | 'ವಿಶೇಷ ಪ್ರಶಸ್ತಿ', ಕರ್ನಾಟಕ ಪತ್ರಿಕಾ ಅಕಡೆಮಿ |
| 2002 | 'ಮುದ್ದಣ ಪುರಸ್ಕಾರ', ಕವಿ ಮುದ್ದಣ ಶತಸ್ಮೃತಿ ಸಮಿತಿ, ನಂದಳಿಕೆ |
| 2002 | 'ಅಂಕಣಶ್ರೀ' ಪ್ರಶಸ್ತಿ ಕಲಾಚೇತನ ಸಾಂಸ್ಕೃತಿಕ ಅಕಾಡೆಮಿ, ಗದಗ ('ಇಗೋ ಕನ್ನಡ' ಅಂಕಣಕ್ಕಾಗಿ) |
| 2003 | ಮೊದಲನೇ ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಶ್ರೀರಂಗಪಟ್ಟಣ |
| 2007 | ಮೂಡಬಿದರೆಯಲ್ಲಿ 'ಆಳ್ವಾಸ್ ನುಡಿಸಿರಿ – ಕನ್ನಡ ನಾಡು ನುಡಿ ಸಮ್ಮೇಳನ'ದ ಅಧ್ಯಕ್ಷತೆ |
| 2010 | 'ಕೇಶವ ಪ್ರಶಸ್ತಿ' – ಪ್ರೊ. ಟಿ. ಕೇಶವ ಭಟ್ಟರ ಹೆಸರಿನಲ್ಲಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ – ಇವರಿಂದ ನೀಡಲಾಗುವ ಪುರಸ್ಕಾರ. |

2011 ಕನ್ನಡ ಸಾಹಿತ್ಯ ಪರಿಷತ್ತಿನ 77ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಬೆಂಗಳೂರು

**ಇತರ :**

ಕನ್ನಡ ಸಾಹಿತ್ಯ ಪರಿಷತ್ತಿನ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಿದುದು.

ಕಾರವಾರ ಸಾಹಿತ್ಯ ಸಮ್ಮೇಳನದಲ್ಲಿ ಪರಿಷತ್ತಿನ ಸಮ್ಮೇಳನಗಳ ಸ್ವರೂಪವನ್ನು ಬದಲಾಯಿಸಿ ಆಧುನಿಕ ಸಾಹಿತ್ಯವಿಮರ್ಶೆಗೆ ಪ್ರಾಧಾನ್ಯವಿತ್ತುದು.

ಶೃಂಗೇರಿ ಶ್ರೀ ಶಂಕರಮಠದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ

ನಿಘಂಟು ಕಮ್ಮಟವನ್ನು ನಡೆಸಿ ಅದರ ಬಗ್ಗೆ ಯುವಕರಿಗೆ ಮಾರ್ಗದರ್ಶನ ಮಾಡಿದುದು.

ಶ್ರವಣಬೆಳಗೊಳದ ಶ್ರೀ ಶ್ರೀ ಚಾರುಕೀರ್ತಿ ಸ್ವಾಮಿಗಳಿಂದ ಸಾಹಿತ್ಯಸೇವೆಗಾಗಿ ಸುವರ್ಣಪದಕದೊಡನೆ 'ವಿದ್ಯಾಲಂಕಾರ' ಎಂಬ ಬಿರುದಿನ ಸನ್ಮಾನ.

ಕನ್ನಡ ನಾಡಿನಲ್ಲಿ ವಿದ್ವತ್‌ಪ್ರಪಂಚದಲ್ಲಿ ತುಂಬ ಗಣ್ಯರೆಂಬ ಪ್ರಸಿದ್ಧಿ ಮತ್ತು ಜನಪ್ರಿಯತೆಗಳನ್ನು ಸಂಪಾದಿಸಿರುವುದು. ಅವರ ವಿದ್ಯಾರ್ಥಿಗಳೂ ಮಿತ್ರರೂ ಅವರಿಗೆ ಅಪೂರ್ವವಾದ ಸನ್ಮಾನವನ್ನು ಏರ್ಪಡಿಸಿ 'ಸಾಹಿತ್ಯಜೀವಿ' ಎಂಬ ಒಂದು ಸಂಭಾವನ ಗ್ರಂಥವನ್ನು ಅರ್ಪಿಸಿ, ಅವರ ಹೆಸರಿನಲ್ಲಿ ಬೆಂಗಳೂರು ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಸುವರ್ಣಪದಕಗಳನ್ನು ಸ್ಥಾಪಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅವರ ಪತ್ನಿಯ ಹೆಸರಿನಲ್ಲಿ ಒಂದು ದತ್ತಿನಿಧಿಯನ್ನು ಸ್ಥಾಪಿಸಿದ್ದಾರೆ.

ನಿಘಂಟು ರಚನೆಗೆ ಸಂಬಂಧಿಸಿದಂತೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮತ್ತು ಬೇರೆಡೆಗಳಲ್ಲಿ ಕಮ್ಮಟಗಳನ್ನು ನಡೆಸಿ ಈ ಕ್ಷೇತ್ರದಲ್ಲಿ ಹಲವರಿಗೆ ಆಸಕ್ತಿ ಮೂಡಿಸಿ ತಜ್ಞತೆಯನ್ನು ಬೆಳೆಸಿದ್ದಾರೆ.

**ಸಮಾಜಸೇವೆ :**

ಬಡ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಸುಮಾರು ೫೦ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟವಸತಿಗಳನ್ನು ಒದಗಿಸುವ 'ಶ್ರೀ ರಾಮಕೃಷ್ಣ ಸ್ಟೂಡೆಂಟ್ಸ್ ಹೋಮ್' ಎಂಬ ಸಂಸ್ಥೆಯ ಅಧ್ಯಕ್ಷರಾಗಿ ಅನೇಕ ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಈಚೆಗೆ ೧೦ ಲಕ್ಷ ರೂಪಾಯಿಗಳ ಸಭಾಭವನವನ್ನೂ ೨೫ ಲಕ್ಷರೂ.ಗಳ ಹೊಸ ಸಾಯಿ ಪ್ರಾರ್ಥನಾಮಂದಿರವನ್ನೂ ನೂತನ ಅಡುಗೆಮನೆಯ ಏರ್ಪಾಡನ್ನೂ ಮಾಡಿ ವಿದ್ಯಾರ್ಥಿಗಳಿಗೆ ಸಕಲ ಅನುಕೂಲಗಳನ್ನೂ ಏರ್ಪಡಿಸಲಾಗಿದೆ.



# ಪ್ರೊ. ಜಿ. ವೆಂಕಟಸುಬ್ಬಯ್ಯ – ಗ್ರಂಥಲೋಕ

ಅ) **ನಿಘಂಟು ಕ್ಷೇತ್ರ :**

೧. ಐಬಿಎಚ್ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು (ಇತರರೊಡನೆ)
೨. ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು (ಇತರರೊಡನೆ)
೩. ಮುದ್ದಣ ಪದಪ್ರಯೋಗ ಕೋಶ
೪. ಇಗೋ ಕನ್ನಡ – ಸಾಮಾಜಿಕ ನಿಘಂಟು (ಭಾಗ ೧)
ಶಬ್ದಗಳಿಗೆ ಅರ್ಥವಿವರಣೆ ನೀಡುತ್ತಲೇ ಕನ್ನಡ ಭಾಷೆ ಹಾಗೂ ಸಂಸ್ಕೃತಿಗಳ ಅನುಸಂಧಾನ ಕುರಿತ ಸಾಮಾಜಿಕ ಚಿಂತನೆಗಳಿಗೆ ಹೊಸ ಆಯಾಮವನ್ನು ತಂದುಕೊಟ್ಟ ಹೊಸ ಪ್ರಯತ್ನ. ಇತರ ಭಾರತೀಯ ಭಾಷೆಗಳಿಗೂ ಮಾದರಿಯಾಗಬಲ್ಲ ಚಿಂತನಶೀಲ ಮಾರ್ಗದರ್ಶಿ ಕೃತಿ.
೫. ಪತ್ರಿಕಾ ಪದಕೋಶ (ಪ್ರಧಾನ ಸಂಪದಾಕ)
೬. ಎರವಲು ಪದಕೋಶ – ಕನ್ನಡಕ್ಕೆ ಇತರ ಭಾಷೆಗಳಿಂದ ಬಂದಿರುವ ಶಬ್ದಗಳ ಪ್ರಥಮ ನಿಘಂಟು.
೭. ಇಗೋ ಕನ್ನಡ – ಸಾಮಾಜಿಕ ನಿಘಂಟು (ಭಾಗ – ೨)
೮. ಪ್ರಿಸಮ್ ಇಂಗ್ಲಿಷ್ ಕನ್ನಡ ನಿಘಂಟು
ಕಳೆದ ಶತಮಾನದ ಕೊನೆಯಲ್ಲಿ ಇಂಗ್ಲಿಷ್ ಭಾಷೆಯ ಶೈಲಿ ಮತ್ತು ಶಬ್ದ ಪ್ರಯೋಗಗಳು ಹೊಸತನ ಪಡೆದವು. ಅವುಗಳನ್ನು ಗಮನಿಸಿ. ನಿರ್ಮಿಸಿದ ಆಧುನಿಕ ಇಂಗ್ಲಿಷ್ ಕನ್ನಡ ನಿಘಂಟು
೯. ಇಗೋ ಕನ್ನಡ – ಸಾಮಾಜಿಕ ನಿಘಂಟು (ಭಾಗ ೩)
೧೦. ಕ್ಲಿಷ್ಟಪದಕೋಶ
೧೧. ಕನ್ನಡ ನಿಘಂಟುಶಾಸ್ತ್ರ ಪರಿಚಯ
(ನಿಘಂಟುಶಾಸ್ತ್ರದ ಬಗ್ಗೆ ಹೊಸಗನ್ನಡದ ಮೊತ್ತಮೊದಲ ಪುಸ್ತಕ)
೧೨. ಕನ್ನಡ ನಿಘಂಟು ಪರಿವಾರ (ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಕಟನೆ)

ಆ) **ವಿಮರ್ಶೆ, ಸಾಹಿತ್ಯಚರಿತ್ರೆ, ಶಾಸ್ತ್ರ ಸಾಹಿತ್ಯ ಇತ್ಯಾದಿ :**

೧೩. ನಯಸೇನ (ವಿಮರ್ಶೆ)
೧೪. ಅನುಕಲ್ಪನೆ (ವಿಮರ್ಶೆ)
೧೫. ಭಾಷಾಂತರ ಪಾಠಗಳು (ಭಾಗ ೧)
೧೬. ಭಾಷಾಂತರ ಪಾಠಗಳು (ಭಾಗ ೨)

೧೭. ಭಾಷಾಂತರ ಪಾಠಗಳು (ಭಾಗ ೩)
೧೮. ಕಾಲೇಜ್ ಭಾಷಾಂತರ
೧೯. ವಿಕಾಸ (ಇತರರೊಡನೆ)
೨೦. ಕನ್ನಡ ಶಾಸನ ಪರಿಚಯ
೨೧. ಸಾಹಿತ್ಯ ಮತ್ತು ಶಿಕ್ಷಣ
೨೨. ಕನ್ನಡ ಸಾಹಿತ್ಯ ನಡೆದು ಬಂದ ದಾರಿ (ಸಾಹಿತ್ಯ ಚರಿತ್ರೆ)
೨೩. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು
೨೪. ಡಿ. ವಿ. ಗುಂಡಪ್ಪ (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟನೆ)
೨೫. ಕನ್ನಡವನ್ನು ಉಳಿಸಿ ಬೆಳೆಸಿದವರು
೨೬. ಕನ್ನಡದ ನಾಯಕಮಣಿಗಳು
೨೭. ಇಣುಕುನೋಟ
೨೮. ಸೀಳುನೋಟ
೨೯. ಕರ್ನಾಟಕ ವೈಭವ ಮತ್ತು ಇತರ ಶಬ್ದಚಿತ್ರಗಳು (ಮುದ್ರಣದಲ್ಲಿ)



**ಇ) ಗ್ರಂಥಸಂಪಾದನೆ ಮೊದಲಾದವು**

೩೦. ನಳಚಂಪು ಸಂಗ್ರಹ
೩೧. ಅಕ್ರೂರ ಚರಿತ್ರೆಯ ಸಂಗ್ರಹ
೩೨. ಕರ್ಣಕರ್ಣಾಮೃತ (ಸಂಕಲನ)
೩೩. ಕಾವ್ಯಲಹರಿ (ಇತರರೊಡನೆ)
೩೪. ಕಾವ್ಯಸಂಪುಟ (ಇತರರೊಡನೆ)
೩೫. ನಾಗರಸನ ಕನ್ನಡ ಭಗವದ್ಗೀತೆ
೩೬. ಹೊಯ್ಸಳ ಕರ್ನಾಟಕ ಸಂಘದ ರಜತೋತ್ಸವ ಸಂಪುಟ
೩೭. ಮುದ್ದಣ ಭಂಡಾರ ಭಾಗ – ೧
೩೮. ಮುದ್ದಣ ಭಂಡಾರ ಭಾಗ – ೨
೩೯. ಶ್ರೀರಾಮಸಂಭವ
೪೦. ಬಾಳಿಗೊಂದು ಬೆಳಕು : ರಾಮಾಯಣ ದೃಷ್ಟಿ
೪೧. ಸಂಸ್ಕೃತ ರಾಮಾಯಣ ನಾಟಕಗಳಲ್ಲಿ ಪಾತ್ರ ವೈವಿಧ್ಯ
೪೨. ಕರ್ನಾಟಕ ಏಕೀಕರಣದ ಅನುಭವಗಳು

**ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ನಡೆದ ಕಮ್ಮಟದಲ್ಲಿ ಸಂಪಾದಿಸಿದ್ದು :**

೪೩. ತಮಿಳು ಕತೆಗಳು (೨೦) ಅನುವಾದ
೪೪. ತೆಲುಗು ಕತೆಗಳು (೨೦) ಅನುವಾದ
೪೫. ಮಲಯಾಳಂ ಕತೆಗಳು (೨೦) ಅನುವಾದ
೪೬. ಕನ್ನಡ ಕತೆಗಳು (೨೦) ಸಂಕಲನ

ಐಬಿಎಚ್ ಪ್ರಕಾಶನದಲ್ಲಿ ಸಂಪಾದಿತ ಗ್ರಂಥಗಳು :

೪೭. ರತ್ನಾಕರವರ್ಣಿ
೪೮. ದಾಸಸಾಹಿತ್ಯ
೪೯. ವಚನಸಾಹಿತ್ಯ
೫೦. ಶಾಸನಸಾಹಿತ್ಯ
೫೧. ಷಡಕ್ಷರದೇವ
೫೨. ಸರ್ವಜ್ಞ
೫೩. ಪುರಂದರದಾಸ
೫೪. ಕನಕದಾಸ
೫೫. ಶ್ರೀ ಬಸವೇಶ್ವರ

ಈ) ಅನುವಾದ:

೫೬. ಲಿಂಡನ್ ಜಾನ್‌ಸನ್ ಕಥೆ
೫೭. ಸಂಯುಕ್ತ ಸಂಸ್ಥಾನಗಳನ್ನು ಪರಿಚಯ ಮಾಡಿಕೊಳ್ಳಿ
೫೮. ಶಂಕರಾಚಾರ್ಯ (ನ್ಯಾಷನಲ್ ಬುಕ್ ಟ್ರಸ್ಟ್)
೫೯. ಕಬೀರ (ಕೇಂದ್ರ ಸಾಹಿತ್ಯ ಅಕಾಡೆಮಿ)
೬೦. ಸರಳಾ ದಾಸ (ಕೇಂದ್ರ ಸಾಹಿತ್ಯ ಅಕಾಡೆಮಿ)
೬೧. ಇದು ನಮ್ಮ ಭಾರತ (ಭಾಗ ೧೫ ರಿಂದ ಭಾಗ ೨೫)
೬೨. ತಿಳಿದುದೆಲ್ಲವ ಬಿಟ್ಟು

ಉ) ಮಕ್ಕಳ ಪುಸ್ತಕ:

೬೩. ರಾಬಿನ್ ಸನ್ ಕ್ರೂಸೋ
೬೪. ಕವಿ ಜನ್ನ
೬೫. ಚಾವುಂಡರಾಯ

**ಸಂಶೋಧನೆ :**

ರಾ. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತೆಗೆ ಪೂರಕ ಸಾಮಗ್ರಿಗಳನ್ನು ಸಂಗ್ರಹಿಸಿ ಸಂಶೋಧನೆ ಮಾಡಿ ಅನೇಕ ಹೊಸ ಅಂಶಗಳನ್ನು ಸೇರಿಸಿರುವುದು.

ಅನೇಕ ಪತ್ರಿಕೆಗಳಲ್ಲಿ, ವಿಶ್ವಕೋಶದಲ್ಲಿ, ತೌಲನಿಕ ಸಾಹಿತ್ಯ ವಿಮರ್ಶೆಯ ಸಂಕಲನಗಳಲ್ಲಿ ಲೇಖನಗಳು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಪ್ರಕಟವಾಗಿರುವ ಸಂಶೋಧನ ಲೇಖನಗಳು. ಸಾಹಿತ್ಯ ವಿಮರ್ಶೆ. ಮತ್ತು ನಿಘಂಟುವಿಚಾರವನ್ನು ಕುರಿತ ಲೇಖನಗಳು.



ಅನುಬಂಧ ೫ :

# ಲೇಖಕರ ವಿಳಾಸ

✧ ಪ್ರೊ. ಪಿ. ಶ್ರೀಕೃಷ್ಣ ಭಟ್, ಫ್ಲಾಟ್ ನಂ. 701, ಪೆಟ್‌ಮಾರ್ಕ್ ಅಪಾರ್ಟ್‌ಮೆಂಟ್ಸ್, ಕೊಟ್ಟಾರ ಕ್ರಾಸ್ ರಸ್ತೆ, ಬಿಜೈ-ಕಾಪಿಕಾಡ್, ಮಂಗಳೂರು-575004

✧ ಅಮೃತ ಸೋಮೇಶ್ವರ, 'ಒಲುಮೆ', ಕೋಟೆಕಾರು, ಮಂಗಳೂರು ತಾಲೂಕು

✧ ಡಾ. ಮಹಾಬಲೇಶ್ವರ ರಾವ್, ಪ್ರಾಂಶುಪಾಲರು, ಟಿ. ಎಂ. ಎ. ಪೈ ಶಿಕ್ಷಣ ಮಹಾ ವಿದ್ಯಾಲಯ, ಕುಂಜಿಬೆಟ್ಟು, ಉಡುಪಿ.

✧ ಡಾ. ಮಹೇಶ್ವರಿ ಯು., ಕನ್ನಡ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನ ವಿಭಾಗ, ಸರಕಾರಿ ಕಾಲೇಜು, ಕಾಸರಗೋಡು

✧ ಡಾ. ವರದರಾಜ ಚಂದ್ರಗಿರಿ, 'ಸಮರಸ', ಮಿಶನ್ ಗುಡ್ಡೆ, ಬೊಳುವಾರು, ಪುತ್ತೂರು 574 201 ದ.ಕ.

✧ ಡಾ. ರಾಧಾಕೃಷ್ಣ ಬೆಳ್ಳೂರು, ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಕನ್ನಡ ಅಧ್ಯಯನ ಮತ್ತು ಸಂಶೋಧನ ವಿಭಾಗ, ಸರಕಾರಿ ಕಾಲೇಜು, ಕಾಸರಗೋಡು

✧ ಡಾ. ನಿಕೇತನ, ಸಂಯೋಜಕರು, ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ, ಸರಕಾರಿ ಪ್ರಥಮದರ್ಜೆ ಕಾಲೇಜು, ತೆಂಕನಿಡಿಯೂರು, ಉಡುಪಿ ಜಿಲ್ಲೆ

✧ ಪ್ರೊ. ಎಮ್. ರಾಮಚಂದ್ರ, 'ಅಕ್ಷರ', ತೆಳ್ಳಾರು ರಸ್ತೆ, ಕಾರ್ಕಳ – 574104

✧ ಅಂಬಾತನಯ, ಮುದ್ರಾಡಿ, 'ಅಕ್ಷರ', ಮುದ್ರಾಡಿ, ಕಾರ್ಕಳ ತಾಲೂಕು – 576112

✧ ಡಾ. ತಾಳ್ತಜೆ ವಸಂತಕುಮಾರ, 'ಸುಧಾಮ', ಪಂಜಳ, ಉಪ್ಪಿನಂಗಡಿ, ದಕ್ಷಿಣ ಕನ್ನಡ 574241

✧ ಅರುಣಕುಮಾರ, ಎಸ್. ಆರ್. ಮುಖ್ಯಸ್ಥರು, ಕನ್ನಡ ವಿಭಾಗ, ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ – 574104

✧ ಡಾ. ಧನಂಜಯ ಕುಂಬ್ಳೆ, ಕನ್ನಡ ವಿಭಾಗ, ಆಳ್ವಾಸ್ ಪದವಿಪೂರ್ವ ಕಾಲೇಜು, ಮೂಡುಬಿದಿರೆ – 574227

✧ ಡಾ. ಉಪ್ಪಂಗಳ ರಾಮ ಭಟ್ಟ, 'ಪರಾಶರ', ಸುಧೀಂದ್ರತೀರ್ಥ ರಸ್ತೆ, ಕುಂಜಿಬೆಟ್ಟು, ಉಡುಪಿ – 576102

✧ ಡಾ. ಕೆ. ಪದ್ಮನಾಭ ಕೇಕುಣ್ಣಾಯ, 'ನವದುರ್ಗಾ', ಇಎಂಎಚ್‌ಎಸ್ ಹಿಂಭಾಗ, ಕುಂಜಿಬೆಟ್ಟು, ಉಡುಪಿ – 576102

- ✧ **ಡಾ. ಯು. ಪಿ. ಉಪಾಧ್ಯಾಯ,** ಉಳಿಯಾರು, ಅಂಚೆ: ಮಜೂರು, ಕಾಪು, ಉಡುಪಿ ತಾಲೂಕು
- ✧ **ಡಾ. ಎನ್. ಟಿ. ಭಟ್,** 'ಮಕರಂದ', ಮಾರುತಿ ನಗರ, ಅಂಚೆ : ಪರ್ಕಳ, ಉಡುಪಿ ತಾಲೂಕು – 576 107
- ✧ **ಪಾದೆಕಲ್ಲು ನರಸಿಂಹ ಭಟ್ಟ,** ಅಂಚೆ – ಕರೋಪಾಡಿ, ಬಂಟ್ವಾಳ ತಾಲೂಕು, ದ. ಕ. – 574 279
- ✧ **ಪ್ರೊ. ಮುರಳೀಧರ ಉಪಾಧ್ಯ ಹಿರಿಯಡಕ,** 'ಸಖೀಗೀತ', ದೊಡ್ಡಣಗುಡ್ಡೆ, ಅಂಚೆ ಕುಂಜಿಬೆಟ್ಟು, ಉಡುಪಿ – 576 102
- ✧ **ಡಾ. ಬಿ. ಜನಾರ್ದನ ಭಟ್,** ಅಕ್ಷರ, ದೇವಸ್ಥಾನದ ರಸ್ತೆ, ಬೆಳ್ಮಣ್ಣು. 576111. ಉಡುಪಿ ಜಿಲ್ಲೆ.
- ✧ **ಪ್ರೊ. ಎ. ವಿ ನಾವಡ,** ವಿಶ್ರಾಂತ ಕನ್ನಡ ಪ್ರಾಧ್ಯಾಪಕ, # 301, ಎಬೋಡ್, ಅಪಾರ್ಟ್‌–ಮೆಂಟ್ಸ್. ಕಲ್ಪನಾ ರಸ್ತೆ, ವಾಸ್‌ಲೇನ್, ಮಂಗಳೂರು–575002
- ✧ **ಪ್ರೊ. ಎನ್. ಜಿ. ಪಟವರ್ಧನ್,** ವಿಶ್ರಾಂತ ಕನ್ನಡ ಪ್ರಾಧ್ಯಾಪಕರು, ಶಿವಾಜಿನಗರ, ಉಜಿರೆ, ಬೆಳ್ತಂಗಡಿ – 574240
- ✧ **ಡಾ. ಶ್ರೀಧರ ಹೆಚ್. ಜಿ,** ಕನ್ನಡ ಪ್ರಾಧ್ಯಾಪಕರು, ವಿವೇಕಾನಂದ ಕಾಲೇಜು, ಅಂಚೆ : ನೆಹರೂ ನಗರ, ಪುತ್ತೂರು
- ✧ **ಡಾ. ಅಜಕ್ಕಳ ಗಿರೀಶ ಭಟ್,** 15–109, 'ಅನಿಕೇತನ', ಮೊಡಂಕಾಪು ಅಂಚೆ, ಜೋಡುಮಾರ್ಗ, ದ.ಕ – 574219
- ✧ **ಡಾ. ಪಾದೇಕಲ್ಲು ವಿಷ್ಣು ಭಟ್ಟ,** ಧಾತ್ರಿ, ಆತ್ರಾಡಿ, 576107, ಉಡುಪಿ ಜಿಲ್ಲೆ
- ✧ **ಡಾ. ಕಬ್ಬಿನಾಲೆ ವಸಂತ ಭಾರದ್ವಾಜ,** ಮನೆ ನಂ. 9, ಎರಡನೆ ಮಹಡಿ, ಮಾರುತಿ ದೇವಸ್ಥಾನದ ರಸ್ತೆ, ಕುವೆಂಪುನಗರ, ಮೈಸೂರು – 570009.
- ✧ **ಡಾ. ಡಿ. ಆರ್. ಪಾಂಡುರಂಗ,** ಕೊಡ್ಗಿ ಅಪಾರ್ಟ್‌ಮೆಂಟ್ಸ್, ಇಂದ್ರಾಳಿ, ಕುಂಜಿಬೆಟ್ಟು, ಉಡುಪಿ – 576102
- ✧ **ಡಾ. ನಾ. ಮೊಗಸಾಲೆ,** 'ಕವಿತಾ', ಕಾಂತಾವರ, ಕಾರ್ಕಳ ತಾಲೂಕು
- ✧ **ಡಾ. ಎಂ. ಪ್ರಭಾಕರ ಜೋಶಿ,** ಪೀಸ್ ಲ್ಯಾಂಡ್ ಅಪಾರ್ಟ್‌ಮೆಂಟ್ಸ್, ಪಿಂಟೋಲೇನ್, ಮಂಗಳೂರು – 4
- ✧ **ದ್ವಿವೇದಿ ವಿದ್ವಾನ್ ಕೊರ್ಗಿ ವೇಂಕಟೇಶ್ವರ ಉಪಾಧ್ಯಾಯ,** ಪ್ರಜ್ಞಾದೀಪ್ತಿ, ಕಟೀಲು – 574148 ಮಂಗಳೂರು
- ✧ **ಡಾ. ವಸಂತ ಕುಮಾರ್,** ಕನ್ನಡ ಉಪನ್ಯಾಸಕರು, ಉಪೇಂದ್ರ ಪೈ ಮೆಮೋರಿಯಲ್ ಕಾಲೇಜು, ಕುಂಜಿಬೆಟ್ಟು, ಉಡುಪಿ – 576 102
- ✧ **ಡಾ. ಕೆ. ಎಂ. ರಾಘವ ನಂಬಿಯಾರ್,** ಪಂಚಮೂಲ, ಪತ್ರಕರ್ತರ ಕಾಲೊನಿ, ಇಂದ್ರಾಣೀ ಅಂಚೆ : ಕುಂಜಿಬೆಟ್ಟು, ಉಡುಪಿ – 576 102

✧ ಜಿ. ಪಿ. ಪ್ರಭಾಕರ, ಸಂಸ್ಕೃತ ಅಧ್ಯಾಪಕರು, ಪೆರ್ಡೂರು ಹೈಸ್ಕೂಲು, ಪೆರ್ಡೂರು, ಉಡುಪಿ ಜಿಲ್ಲೆ.

✧ ಡಾ. ಎಚ್. ವಿ. ನರಸಿಂಹ ಮೂರ್ತಿ, ವಿಶ್ರಾಂತ ಸಂಸ್ಕೃತ ಪ್ರಾಧ್ಯಾಪಕರು, ನೇರಂಬಳ್ಳಿ ರಸ್ತೆ, ಕೋಟೇಶ್ವರ, ಕುಂದಾಪುರ ತಾಲೂಕು

✧ ಎ. ಈಶ್ವರಯ್ಯ, ಇಂದ್ರಾಣಿ 2ನೇ ಮೇನ್, ವಿಬುಧಪ್ರಿಯನಗರ, ಉಡುಪಿ - 576 102

✧ ಕಾತ್ಯಾಯಿನಿ ಕುಂಜಿಬೆಟ್ಟು, ಛಾಯಾನೆಟ್, ಬುಡ್ನಾರು ರಸ್ತೆ, ಕುಂಜಿಬೆಟ್ಟು, ಉಡುಪಿ - 576102

✧ ಅರ್ತಿಕಜೆ, ವಿ. ಬಿ., ಶ್ರೀನಿಲಯ, ಶಿವಪೇಟೆ, ಪುತ್ತೂರು - 574 201



ಕನ್ನಡದ ಹಿರಿಯ ವಿದ್ವಾಂಸರೂ ವಿಶ್ರಾಂತ ಕನ್ನಡ ಪ್ರಾಧ್ಯಾಪಕರೂ ನಿಘಂಟುಕಾರರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಶತಮಾನದ ಸಮೀಪಕ್ಕೆ ಬಂದಿರುವ ಸಂದರ್ಭದಲ್ಲಿ ಸಮಸ್ತ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಅವರಿಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆಯ ಗೌರವವನ್ನು ನೀಡಿ ಪುರಸ್ಕರಿಸುತ್ತಿರುವ ಸಂತೋಷದ ಸಂದರ್ಭದಲ್ಲಿ ಈ ಗೌರವಗ್ರಂಥವು ಅವರಿಗೆ ಕರಾವಳಿಕರ್ನಾಟಕದ ಪರವಾಗಿ ಸಮರ್ಪಿಸಲ್ಪಡುತ್ತಿದೆ. ವಿದ್ವತ್ತೆಯ ಕ್ಷೇತ್ರದಲ್ಲಿ ಅವರ ಸಾಧನೆಯನ್ನು ಈ ಕೃತಿ ದಾಖಲಿಸಿದೆ.

– ಪ್ರಕಾಶಕರು



ISBN 81-86668-69-1

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂಜಿಎಂ ಕಾಲೇಜು, ಉಡುಪಿ – 576 102